ಮನೋಹರ ಗ್ರಂಥಮಾಲೆಯ ೮೫-೮೬-೮೭-೮೮-೮೯ನೆಯ ಕುಸುಮ

# ರಾಷ್ಟ್ರಪುರುಷ

ಭಾರತಸ್ವಾತಂತ್ರ್ಯದ ಹೋರಾಟವನ್ನು ಚಿತ್ರಿಸುವ

ರಮ್ಯ ಕಾದಂಬರಿ

ಬರೆದವರು :

**ಮಿರ್ಜಿ ಅಣ್ಣಾರಾಯರು**

ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :

ಶ್ರೀ. ದ. ರಾ. ಬೇಂದ್ರೆ, ಎಂ. ಎ.
ಶ್ರೀ. ವಿ. ಕೃ. ಗೋಕಾಕ, ಬಿ. ಎ. ( ಆಕ್ಸಫರ್ಡ
ಶ್ರೀ. ರಂ. ಶ್ರೀ. ಮುಗಳಿ, ಎಂ. ಎ., ಬಿ. ಟಿ.

ಸಂಪಾದಕ :
ಜಿ. ಬಿ. ಜೋಶಿ

ಬೆಲೆ : ೭—೦—೦

೧೯೪೭
ಆಗಸ್ಟ, ಆಕ್ಟೋಬರ, ಡಿಶೆಂಬರ
೧೯೪೮
ಫೆಬ್ರುವರಿ, ಎಪ್ರಿಲ್
ಈ ತಿಂಗಳುಗಳ
ಸಂಯುಕ್ತ ಪ್ರಕಟನೆಯಿದು.

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥ ಮಾಲಾ
ಧಾರವಾಡ

ಮುದ್ರಕರು :
ವಿ ಯು. ಜಠಾರ
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ
ಧಾರವಾಡ

# ಕೃತಿಯ ಹುಟ್ಟು



‘ನಿಸರ್ಗ’ವನ್ನು ಬರೆದು ಮುಗಿಸಿದ ಲೆಕ್ಕಣಿಕೆಯು ಇನ್ನೂ ಆರದಿರುವಾಗಲೇ ಈ ‘ರಾಷ್ಟ್ರಪುರುಷ’ವನ್ನೂ ಬರೆಯಲು ಆರಂಭಿಸಿದೆ. ಈ ಸಾಹಸಕ್ಕೆ ಮುನ್ನುಗ್ಗಿಸಿದ ಶ್ರೇಯಸ್ಸಿನ ಬಹುಭಾಗವು ಮನೋಹರ ಗ್ರಂಥ ಮಾಲೆಯ ಶತಗ್ರಂಥೋತ್ಸವದ ಕಲ್ಪಕರಿಗೇ ಸಲ್ಲತಕ್ಕುದು.

ಸಾಹಿತ್ಯರಂಗದಲ್ಲಿ ಈ ದುಡುಕುತನವೂ ಒಂದು ಸಾಹಸವೆಂದೇ ನಾನು ಭಾವಿಸುವೆ. ಯಾಕಂದರೆ ಸಾಹಿತಿಯ ಅಂತರಂಗ ಅರಳಿದಷ್ಟು— ಅನುಭವಪ್ರಪಂಚ ವಿಸ್ತಾರಗೊಂಡಷ್ಟು— ಕೃತಿರಚನೆಯಾಗಬೇಕು. ಬರಹಗಾರನ ಭಾವಸೃಷ್ಟಿಯ ಬೆನ್ನು ಹತ್ತಿ ಸಾಹಿತ್ಯನಿರ್ಮಿತಿಯಾಗುವುದು ಒಳಿತು. ಕೃತಿಯು ಕರ್ತೃವಿನ ಮುಂದೆ ಮುಂದೆ ನಡೆಯುವ ಸೇವಕನೆಂದೂ ಆಗಕೂಡದು.

ಸಾಹಿತಿಯಲ್ಲಿಯ ಭಾವಸೃಷ್ಟಿಯ ಕ್ರಮವೇನು? ಅದರ ಉದ್ದೇಶ ಯಾವುದು?

ಮಾನವನ ಮನಸ್ಸಿನಲ್ಲಿ ಕ್ಷಣಕ್ಕೊಂದು ಭಾವತರಂಗ ಹುಟ್ಟುತ್ತದೆ, ಅಳಿಯುತ್ತದೆ. ಅದಕ್ಕೆ ಆ ವ್ಯಕ್ತಿಯ ಮೇಲೆ ಸುತ್ತಲಿನ ಪ್ರಪಂಚ ಮಾಡಿದ — ಮಾಡುತ್ತಿರುವ — ಆಘಾತ ಕಾರಣವಾಗಿರುತ್ತದೆ. ಈ ಕ್ಷಣಭಂಗುರ ಭಾವತರಂಗಗಳ ಮಧ್ಯದಲ್ಲಿ ಒಂದು ಸೃಷ್ಟಿಯೂ ನಡೆದಿರುತ್ತದೆ. ತುಂಡು ತುಂಡಾದ ಭಾವಗಳ ಪರಿಣಾಮದಿಂದ ರೂಪುಗೊಳ್ಳುತ್ತಿರುವ ಒಂದು ಅಖಂಡ ಮೂರ್ತಿಯು ಕರುವಿಡುವ ಕಾರ್ಯವದು.

ಸಾಹಿತಿಯ ಮನೋಭೂಮಿಯಲ್ಲಿ ವಿವಿಧ ಭಾವಬೀಜಗಳು ಬೀಳಬೇಕು. ಅವು ಅಲ್ಲಿ ಬೆಳೆದು ಹೆಮ್ಮರವಾಗಿ ಫಲ ಬಿಡಬೇಕು. ಆಮೇಲೆ

ಅವು ಸವಿಯುವಂತಹ ರಸಿಕರನ್ನೂ ಹೊಂದಬೇಕು. ಅಂದರೆ ಸಾರ್ಥಕ ವಾಗುವವು.

ನಾಡಿನ ಜನತೆಯಲ್ಲಿ ಇಂಥ ಭಾವಸೃಷ್ಟಿಯು ಯಾವಾಗಲೂ ಒಂದೇ ಪ್ರಮಾಣದಿಂದ ಆಗುತ್ತಿರುವದಿಲ್ಲ; ಒಮ್ಮೆ ತೀವ್ರತರವಾಗಿಯೂ ಇನ್ನೊಮ್ಮೆ ಮಂದಗತಿಯಿಂದಲೂ ನಡೆದಿರುತ್ತದೆ. ಬೇಕಾದ ದೇಶದ ಸಾಹಿತ್ಯಚರಿತ್ರೆಯನ್ನು ನಿರೀಕ್ಷಿಸಿದರೂ ಈ ಮಾತಿನ ಸತ್ಯತೆಯು ಕಂಡು ಬರುವದು. ರಾಷ್ಟ್ರದೊಳಗಿನ ಒಂದೊಂದು ಘಟನೆಯಿಂದ ಸಾಹಿತಿ ಗಳ ಭಾವಸೃಷ್ಟಿಗೆ ಒಮ್ಮೊಮ್ಮೆ ಚಾಲನೆ ದೊರೆಯುತ್ತಿರುತ್ತದೆ ಇತ್ತೀ ಚೆಗೆ ಭಾರತದಲ್ಲಿ ನಡೆದ ಇಂತಹ ಘಟನೆಗಳಲ್ಲಿ ಮುಖ್ಯವಾದವುಗಳೆರಡು. ಅವುಗಳಲ್ಲಿ ಹತ್ತೊಂಭತ್ತನೂರಾ ನಲವತ್ತೆರಡನೆಯ ವರ್ಷದ ಅಗಸ್ಟ ಒಂಭತ್ತರ ಅಮರ ಕ್ರಾಂತಿ ಒಂದು; ಭಾರತದ ಬರಗಾಲ ಇನ್ನೊಂದು. ಈ ಎರಡೂ ಘಟನೆಗಳಿಂದ ಉದ್ಭವಿಸಿದ ಸಾಹಿತ್ಯ ಎಲ್ಲ ಭಾಷೆಗಳಲ್ಲಿಯೂ ವಿಪುಲವಾಗಿ ಬಂದಿದೆ, ಬರತೊಡಗಿದೆ.

ದೇಶದಲ್ಲಿಯ ಒಂದು ಘಟನೆ—ಕ್ರಾಂತಿ—ಯು ಸಾಹಿತ್ಯದ ವಸ್ತು ವಾಗಬೇಕಾದರೆ ಅದು ಆದ ಮೇಲೆ ಕೆಲವು ಕಾಲ ಕಳೆಯಲಿಕ್ಕೆ ಬೇಕು. ಇನ್ನೂ ಆ ಘಟನೆ ನಡೆಯುತ್ತಿರುವಾಗಲೇ ಸಾಹಿತ್ಯನಿರ್ಮಾಣವು ಆಗು ತ್ತಿರುವದಿಲ್ಲ. ಕ್ರಾಂತಿಯ ಕಾಲಕ್ಕೆ ಜನಸಿದ ಕ್ಷಣಿಕ ಭಾವಗಳು ಅಳಿದು ಅದರ ನಿಜವಾದ ಒಂದು ಸತ್ವದ ಸ್ವರೂಪ ಸೃಷ್ಟಿಯಾಗಬೇಕು ಅಂದರೆ ಅದನ್ನು ಸಾಹಿತಿಯು ತನ್ನ ಕೃತಿಯ ವಸ್ತುವನ್ನಾಗಿ ಆಯ್ದುಕೊಳ್ಳು ತ್ತಾನೆ. ಈ ಆಯ್ಕೆಯಲ್ಲಿ ಆ ಕ್ರಾಂತಿಯೊಳಗೆ ಮುನ್ನುಗ್ಗಿದ ವ್ಯಕ್ತಿಗಳ ಅನುಭವ, ಜನತೆಯಲ್ಲಿ ಆ ಕ್ರಾಂತಿಯ ಬಗ್ಗೆ ಪ್ರಚಲಿತವಿರುವ ಕಥೆ, ಅದೇ ಕಾಲಕ್ಕೆ ಹೊರಬಿದ್ದ ಸಾಮಯಿಕ ಸಾಹಿತ್ಯ ಇವೆಲ್ಲವುಗಳು ಸೇರಿ ಒಬ್ಬ ಲೇಖಕನ ಚಿತ್ತಭಿತ್ತಿಯ ಮೇಲೆ ಮೂಡಿ ನಿಲ್ಲುತ್ತವೆ.

ಈ 'ರಾಷ್ಟ್ರಪುರುಷ'ನಲ್ಲಿ ಶ್ರೀಯುತರುಗಳಾದ ಅಪ್ಪಾಜಿಗೌಡ ಪಾಟೀಲ, ಮಾಂಜರಿ; ಕುಲಕರ್ಣಿ ದತ್ತಮೂರ್ತಿ, ಮುಂಬಯಿ; ಶಂಕರ ಗೌಡ ಪಾಟೀಲ, ಪಡಗಾನೂರ; ಹಾಗೂ ಅಜಾದ ಸೈನ್ಯದ ಗೆಳೆಯ

ರೊಬ್ಬರು ಈ ನಾಲ್ವರ ಜೀವನ ಕಥೆಯು ಕಲ್ಪನೆಯೊಡಗೂಡಿ ಅಸ್ಥಿಪಂಜರ ವಾಗಿ ನಿಂತಿದೆ. ಅದರಲ್ಲಿ ರಕ್ತ ಮಾಂಸಗಳನ್ನು ತುಂಬಲಿಕ್ಕೆ ಕನ್ನಡ ದಲ್ಲಿಯ 'ಸೆರೆಯ ಮರೆಯಲ್ಲಿ', 'ಬಿಡುಗಡೆಯ ಬೆಲೆ'ಗಳೂ ಗುಜರಾಥಿ ಯಲ್ಲಿಯ 'ಛಾಯಾನಟ'ವೂ ಮರಾಠಿಯಲ್ಲಿಯ 'ರಾಷ್ಟ್ರಸಭೆಯ ಇತಿಹಾಸ', 'ಗುನ್ಹೆಗಾರ' ಎಂಬ ಗ್ರಂಥಗಳೂ ಅಲ್ಲದೆ ಅನೇಕ ಸಾಮಯಿಕ ಸಾಹಿತ್ಯವೂ ನೆರವಾಗಿದೆ ಹೀಗೆ ವಿವಿಧ ಕಡೆಯಿಂದ ಭಾವದ ಗಾಳಿಯು ಹರಿದು ಬಂದಿದ್ದರೂ ಅವೆಲ್ಲವುಗಳ ಪರಿಣಾಮವನ್ನು ಅನು ಭವಿಸಿ, ನನ್ನವುಗಳನ್ನಾಗಿ ಮಾಡಿಕೊಂಡು ಜೀವ ತುಂಬುವ ಕಾರ್ಯ ವನ್ನು ಮಾಡಿದವನು ನಾನು. ಈ ಅರ್ಥದಿಂದಲೇ ಈ ಕೃತಿ ನನ್ನದೆಂದು ಹೇಳುತ್ತೇನೆ ಅದರಂತೆ ವಿಸ್ತಾರವಾದ ಜನಜೀವನದ ಚಿತ್ರವನ್ನೊಳ ಗೊಂಡುದರಿಂದ ಇದು ಅಖಂಡ ಭಾರತದ ಕೃತಿಯೆಂದು ಹೇಳಲೂ ಹಿಂಜರಿಯುವದಿಲ್ಲ.

ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಭಾರತವು ಸ್ವಾತಂತ್ರ್ಯ ಸಂಪಾದಿ ಸಲು ಹೂಡಿದ ಹೋರಾಟದ ಚಿತ್ರವನ್ನು ಈ ಕಾದಂಬರಿಯಲ್ಲಿ ಬರೆಯಲು ಯತ್ನಿಸಿದ್ದೇನೆ ಅದರಿಂದ ಇದು ನಮ್ಮ ಜೀವನ—ವಿಚಾರಗಳ ಪಡಿ ನೆಳಲಾಗಿದೆ. ಅದಕ್ಕಾಗಿ ಕೆಲವೆಡೆ ಮಾತು ಕಟುವಾಗಿ ಬರುವದು ಸ್ವಾಭಾವಿಕ. ಆದರೆ ಅವು ಯಾವ ವ್ಯಕ್ತಿ, ಸಮಾಜ, ವರ್ಗಗಳ ಮನ ಸ್ಸನ್ನು ನೋಯಿಸಲೆಂದು ಬರೆದವುಗಳಲ್ಲ. ಅದರಂತೆ ಇಲ್ಲಿಯ ಘಟನೆ ಗಳನ್ನು ತಮಗೂ ಹೋಲಿಸಿಕೊಂಡು ತಮ್ಮನ್ನುದ್ದೇಶಿಸಿಯೇ ಹೀಗೆ ಬರೆಯಲಾಗಿದೆಯೆಂದು ಭಾವಿಸಿದರೆ ಅದು ಕೃತಿಯ ಸಾರ್ವತ್ರಿಕತೆ ಯನ್ನೇ ಪ್ರದರ್ಶಿಸುವದಲ್ಲದೆ ಬೇರೆಯಾಗಿರದು.

'ನಿಸರ್ಗ'ದಂತೆಯೇ ಈ ಕಾದಂಬರಿಯನ್ನೂ ಬರೆಯುತ್ತಿರು ವಾಗಲೇ ದುಂಬಾಲು ಬಿದ್ದು ಓದಿಸಿ ಕೇಳಿ ಸಂತಸಪಟ್ಟೂ ಸ್ತ್ರೀ ಪಾತ್ರ ಸೃಷ್ಟಿಯಲ್ಲಿಯ ಕೆಲವು ವಿಚಾರಗಳನ್ನು ಸೂಚಿಸಿಯೂ ಚೈತನ್ಯವಿತ್ತ ಸೌಭಾಗ್ಯವತಿಗೂ ಹಸ್ತಪ್ರತಿಯನ್ನೆಲ್ಲ ಆಸ್ಥೆಯಿಂದ ಓದಿ ನೋಡಿ ಅನೇಕ ಸಲಹೆಗಳನ್ನಿತ್ತ ಗೆಳೆಯ ಟಿ. ಕೆ. ಪಾಟೀಲ ಅವರಿಗೂ ನನ್ನ ಕೃತಜ್ಞತೆ

ಸಲ್ಲಬೇಕು. ನನ್ನ ಮೇಲಿನ ವಾತ್ಸಲ್ಯದಿಂದ ಈ ಬೃಹತ್ ಕಥೆಯನ್ನು ಪ್ರಕಟಿಸಲು ಮುಂದೆ ಬಂದಿದ್ದ ಶ್ರೀಮಾನ್ ಪ್ರೇಮಚಂದ ಭಾಯಿಚಂದ ಶಹಾ* ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಕೊನೆಗೆ ಇಂತಹ ಸುದೀರ್ಘ ಬರವಣಿಗೆಗೆ ತಮ್ಮ ಗ್ರಂಥಮಾಲೆಯಲ್ಲಿ ಪ್ರಕಾಶನಕ್ಕೆಡೆ ಗೊಟ್ಟು—ಇದೇ ಆಗಸ್ಟ ಒಂಭತ್ತಕ್ಕೆ ಪ್ರಕಟಿಸುವ ಹೊಣೆ ಹೊತ್ತು—ಸಹಕರಿಸಿದ ಶ್ರೀಮಾನ್ ಜಿ. ಬಿ. ಜೋಶಿ ಅವರಿಗೆ ನಾನು ಇಲ್ಲಿ ವಂದಿಸದೆ ಇರಲಾರೆ.

ಧಾರವಾಡ
೩೦-೬-೧೯೪೭

—ಮಿರ್ಜಿ ಅಣ್ಣಾರಾಯ

---

* ಈ ಮಹನೀಯರು 'ರಾಷ್ಟ್ರಕೂಟ'ದ ಮುದ್ರಣವಾದ ಪ್ರತಿಯನ್ನು ಕಂಡು ಸಂತೋಷಪಡಲಿಕ್ಕೆ ನಮ್ಮ ಜೊತೆಗೆ ಈಗ ಇಲ್ಲದುದು ವಿಷಾದದ ಸಂಗತಿ.

# ಅರ್ಪಣ

ನನ್ನ

ಸಾಹಿತ್ಯಗುರುಗಳೂ

ರಾಷ್ಟ್ರಪುರುಷ ನಿರ್ಮಿತಿಗೆ ಕಾರಣಪುರುಷರೂ

ಆದ

**ಶ್ರೀ. ರಂಗನಾಥ ಶ್ರೀನಿವಾಸ ಮುಗಳಿ**

ಅವರಿಗೆ ಪ್ರೇಮಪೂರ್ವಕವಾಗಿ ಅರ್ಪಿಸಿದ್ದೇನೆ.

# ನಮ್ಮ ಮಾತು

ಈ 'ರಾಷ್ಟ್ರಪುರುಷ' ಹೊಸ ವರ್ಷದ ಗ್ರಂಥ. ಇದನ್ನು ಬಿಡಿ ಬಿಡಿಯಾಗಿ ೧೫೦ ಪುಟಗಳಂತೆ ೫ ಭಾಗ ಮಾಡಿಯೆ ನಮ್ಮ ಗ್ರಾಹಕರಿಗೆ ಸಲ್ಲಿಸಬೇಕೆಂದು ಮೊದಲು ಗೊತ್ತುಮಾಡಿಕೊಂಡಿದ್ದೆವು. ಆದರೆ ಅನೇಕ ಗ್ರಾಹಕರ ಸೂಚನೆಯಂತೆ, ಮತ್ತು ಹಿಂದಿನ ನಮ್ಮ ಕಟು ಅನುಭವದಿಂದ ಹಾಗೆ ಮಾಡದೆ ಒಂದೇ ಸಂಪುಟದಲ್ಲಿ ಕೊಡುವುದೇ ಇಬ್ಬರಿಗೂ ಅನುಕೂಲವೆಂದು ತಿಳಿದು ಈ ೭೨೦ ಪುಟದ ಕಾದಂಬರಿಯನ್ನು ಒಡೆಯದೆ ಇಡಿಯಾಗಿ ಕೊಟ್ಟಿದ್ದೇವೆ.

ಈ ಕೃತಿಯು ಹುಟ್ಟಿನ ಬಗ್ಗೆ ಒಂದು ತಾತ್ವಿಕ ತಳಹದಿಯನ್ನೇ ಲೇಖಕರು ಹಾಕಿಕೊಂಡಿದ್ದಾರೆ. ನಿಸರ್ಗದಲ್ಲಿಯ ಭಾವದ ಏಕೀಕೃತ ಪರಿಣಾಮವು ಇದರಲ್ಲಿ ಕಂಡುಬರದಿದ್ದರೂ ಇದರ ಪಾತ್ರಪ್ರಪಂಚ ಅದಕ್ಕೂ ವಿಸ್ತಾರವಾದುದು, ವೈವಿಧ್ಯಪೂರ್ಣವಾದುದು. ಭಾಷೆಯೂ ಕೂಡ ನಿಸರ್ಗಕ್ಕಿಂತ ಬೇರೆ ಮಾದರಿಯದಾಗಿದೆ. ಕಾದಂಬರಿ ಭಾವೋದ್ದೀಪಕವಾಗಿದೆ. ಇದನ್ನು ಮಾಲೆಯಲ್ಲಿ ಪ್ರಕಟಿಸಲು ಕೊನೆಗೆ ಒಪ್ಪಿದ ಶ್ರೀಮಾನ್ ಮಿರ್ಜಿ ಅಣ್ಣಾರಾಯರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಸುಂದರವಾದ ಹೊದಿಕೆ ಚಿತ್ರ ಬರೆದುಕೊಟ್ಟ ಶ್ರೀಮಾನ್ ರಾಘವೇಂದ್ರರಿಗೂ ಅದನ್ನು ಪಡಿಯಚ್ಚು ಮಾಡಿ ಮುದ್ರಿಸಿ ಕೊಟ್ಟ 'ನೇಶನಲ್ ಆರ್ಟ ಸರ್ವಿಸಿನ'ವರಿಗೂ ನಮ್ಮ ಕೃತಜ್ಞತೆಯ ವಂದನೆಗಳು.

—ಸಂಪಾದಕ

# ರಾಷ್ಟ್ರಪುರುಷ

## ೧

ಎಂದಿನಂತಲ್ಲ ಆ ಕಾಲ! ಎಲ್ಲೆಲ್ಲೂ ಉತ್ಸಾಹ, ಉದ್ವೇಗ, ಉಜ್ವಲತೆಗಳು ತುಂಬಿವೆ. ಮನಸ್ಸು ಸಹಜವಾಗಿಯೇ ಬಂಧನವನ್ನು ಹರಿದೊಗೆಯಲು ಹಾತೊರೆಯುತ್ತಿದೆ; ಸ್ವಾತಂತ್ರ್ಯದ ಕಡೆಗೆ ಓಡುತ್ತಿದೆ.

ಸುತ್ತಲೂ ಉತ್ಸಾಹಪೂರ್ಣವಾದ ನೋಟ; ಬಂಧನವನ್ನು ಬದಿಗಿರಿಸಿದ ದೃಶ್ಯ. ಪಂಜರವನ್ನುಳಿದ ಹಕ್ಕಿಯಂತೆ ತರುಣರು ಸಾಲೆ ಕಾಲೇಜುಗಳನ್ನು ಬಿಟ್ಟು ಸ್ವಾತಂತ್ರ್ಯಾಕಾಶದಲ್ಲಿ ವಿಹರಿಸುತ್ತಿದ್ದಾರೆ.

ಮನೆಮನೆಯಲ್ಲೂ ಅದೇ ಹಾಡು! ಅದೇ ರಾಗ! ' ಈ ರಾಟಿಯನೆ ತಿರುಹಿ, ಮೂರ್ಕೋಟಿಯನುಳುಹಿ, ಭಾರತದ ಪರದಾಸ್ಯವನು ಹರಿಪನಯ್ಯ'. ಹಾಡಿನಂತೆ ಧ್ಯೇಯ! ಧ್ಯೇಯದತ್ತ ನಡೆ!

ಇದೊ ಇತ್ತ ನೋಡು! ಎಲ್ಲಕ್ಕೂ ಮೀರಿದ ಉದಾತ್ತ ದೃಶ್ಯ!—

" ತಮ್ಮಾ, ಇಲ್ನೋಡು ನನಗೆ ನೂಲಲಿಕ್ಕೆ ಬಂತು!"

ಹತ್ತು ವರ್ಷದ ಬಾಲಕ—ರಾವಸಾಹೇಬ—ಹೊರಳಿ ನೋಡುವಷ್ಟರಲ್ಲಿ ಅಜಿತನ ಕೈಯೊಳಗಿನ ಬಿಂಗರಿ ಎಳೆಹರಿದು ನೆಲಕ್ಕೆ ಬಿತ್ತು. ಅಜಿತ ಮೊದಲಿನ ಹುರುಪಿನಿಂದಲೇ ಬಿಂಗರಿಯನ್ನು ತಕ್ಕೊಂಡು, ಮತ್ತೆ ಎಳೆ ತೆಗೆದು ತಮ್ಮನಿಗೆ ತೋರಿಸಹತ್ತಿದ. ಚಂದ್ರಬಿಂಬದಿಂದ ಕಿರಣವೊಂದು ಭುವಿಗೆ ಅವತರಿಸುತ್ತಿರುವಂತೆ, ಅಜಿತನ ಕೈಯೊಳಗಿನ ಅರಳೆಯಿಂದ ಎಳೆ ಸರಾಗವಾಗಿ ಹೊರಡುತ್ತಿದೆ. ಒಂದು, ಎರಡು, ಮೂರು ಸಲವಾಯಿತು; ಅಜಿತ ನೂಲು ತೆಗೆದ; ಸುತ್ತಿದ. ನಾಲ್ಕನೆಯ ಸಲಕ್ಕೂ ಬಿಂಗರಿ ತಿರುಗಿಸಲು ಆರಂಭಿಸುವವನಿದ್ದ. ಇಲ್ಲಿಯ ವರೆಗೆ ಕಣ್ಣು ಮಿಟುಕಿಸದೆ ನೋಡುತ್ತ ನಿಂತಿದ್ದ ರಾವಸಾಹೇಬನಿಗೆ ಅಣ್ಣನಿಗೆ ನೂಲಲಿಕ್ಕೆ ಬರುತ್ತದೆಂಬ ಸಂಗತಿ ಮನದಟ್ಟಾಯಿತೋ ಏನೋ " ನಾಳೆ ಅಣ್ಣನಿಗೇ ಬಕ್ಷೀಸ!" ಎಂದು ಕೇಕೆ ಹೊಡೆದು ಕುಣಿಯತೊಡಗಿದ.

ಷಡಸಾಲೆ ಸಾಲದಾಯಿತು. ಅಜಿತನ ಮನಸ್ಸೂ ಚಲಿಸಿತ್ತು, ತಮ್ಮನ ಮಾತಿನಿಂದ. ಹೃದಯದಿಂದ ಉಲ್ಲಾಸ ಉಕ್ಕಿತು. ಆದರೊಡನೆಯೆ ಎಳೆ ಹರಿಯಿತು.

ಚಾವಡಿಗೆ ಹೊರಟ ಆದಗೌಡ ತಲೆಬಾಗಿಲಲ್ಲೇ ತಿರುಗಿ ನಿಂತ. ಗೌಡನೆಂದರೆ ಊರ ಅರಸ. ಭಾರತದಲ್ಲಿ ಬ್ರಿಟಿಷ ಸತ್ತೆಯ ತಳಹದಿ ಅಂದರೆ ಅವನೇ. ಅವನ ಮೇಲೆಯೇ ಊರ ಸುಖ ದುಃಖ ಅವಲಂಬಿಸಿ ರುತ್ತದೆ. ಗೌಡ ಸವ್ಯಸಾಚಿ. ಅವನಿಗೆ ಮುಲಕೀ ಪೋಲೀಸ ಅಧಿಕಾರ ಗಳೆರಡೂ ಇರುತ್ತವೆ. ತಪ್ಪು ಮಾಡಿಸುವವನೂ ಅವನೇ, ಶಿಕ್ಷೆ ಕೊಡಿಸು ವವನೂ ಅವನೇ. ಗೌಡನು ಮನಸ್ಸುಮಾಡಿದರೆ ಊರನ್ನು ಸುಖಿಯಾಗಿ ಡಬಹುದು; ಸ್ವಾವಲಂಬಿಯನ್ನಾಗಿ ಮಾಡಬಹುದು.

ಆದಗೌಡನು ಎಲ್ಲ ಗೌಡರಂತಲ್ಲ. ಸಿದ್ಧಾಂತ ಶಾಸ್ತ್ರಗಳಲ್ಲಿ ಅವನಿಗೆ ಅಪಾರ ವಿಶ್ವಾಸ ಅದರಲ್ಲಿ ಎಲ್ಲಿಯೋ ಒಂದು ಕಡೆಗೆ 'ಪಂಚಮ ಕಾಲದಲ್ಲಿ ಮ್ಲೇಂಛರೇ ರಾಜ್ಯವಾಳುವರೆ'ಂದು ಹೇಳಿದೆಯಂತೆ. ಅಂದ ಮೇಲೆ ಭಾರತ ಸ್ವಾತಂತ್ರ್ಯ ಸಂಪಾದಿಸುವುದು ಸಾಧ್ಯವೇ? 'ಕೇವಲಿ ವಾಣಿ' ಸುಳ್ಳಾಗುವುದೇ? ಇಲ್ಲ. ಅಂದಮೇಲೆ ಬ್ರಿಟಿಷ ಸತ್ತೆಯ ಸೂತ್ರ ಧಾರನಾಗಿರುವುದೇ ಹಿತಕರ, ಲಾಭದಾಯಕ. ಶಾಸ್ತ್ರ-ಧರ್ಮ-ಸಮ್ಮತವೂ ಅದೇ. ಅಂದಮೇಲೆ ಆದಗೌಡನು ಈ ಅಸಂಬದ್ಧ ಸ್ವಾತಂತ್ರ್ಯ ಚಳವಳಿಯ ಪ್ರತೀಕವಾದ ನೂಲುವ ಪರಿಪಾಠವನ್ನು ತನ್ನ ಮನೆಯಲ್ಲಿ ಪ್ರವೇಶ ಮಾಡಗೊಟ್ಟಾನೆ? ಹೊರಳಿ ನಿಂತಲ್ಲಿಯೇ ರೇಗಿದ, ಹಲ್ಲುಕಡಿದ, ಗುಡುಗಿದ.

"ಸಾಕು, ಒಗೆ ಅದನ್ನ; ಪುಸ್ತಕ ತಕ್ಕೊಂಡು ಓದು, ಬುದ್ಧಿ ಬಂದೀತು."

ಅಜಿತ ಹರಿದ ಎಳೆಯನ್ನು ಜೋಡಿಸುವುದರಲ್ಲಿ ಮಗ್ನನಾಗಿದ್ದ. ಕಕ್ಕನ ಮಾತಿಗೆ ಕದಲಲಿಲ್ಲ.

ಆದಗೌಡನು ಒಂದೆರಡು ಹೆಜ್ಜೆ ಮುಂದೆ ಬಂದ. ಇದನ್ನು ಕಂಡ ವನೇ ರಾವಸಾಹೇಬ ನಡುಮನೆಗೆ ಓಡಿದ. ಅಜಿತನೂ ಹೊರಳಿ ನೋಡಿದ. ಬಿಂಗರಿ ಹಂಜಿಗಳನ್ನು ಗಟ್ಟಿಯಾಗಿ ಕೈಯಲ್ಲಿ ಹಿಡಿಸಿ

-ಮಾತ್ರ. ಓಡಿ ಹೋಗಲು ಹವಣಿಸಲಿಲ್ಲ. ಇವನೂ ಓಡಿ ಒಳಗೆ ಹೋಗಿದ್ದರೆ ಪ್ರಸಂಗ ಇಷ್ಟು ಅತಿರೇಕಕ್ಕೆ ಹೋಗುತ್ತಿರಲಿಲ್ಲವೇನೊ !

"ಬಿಂಗರಿ ತಕ್ಕೊಂಡು ನೂತರೆ ರಾಜ್ಯ ಸಿಗತದೆ, ಎಲ್ಲಿಯಾದರ..? ಕತ್ತಿ ತಕ್ಕೊಂಡ ಯುದ್ಧ ಮಾಡಿರಿ ಇನ್ನೂss...."

ಕೆರಳಿ ಕಿರುಚಿದ ಗೌಡ. ಮಿಶ್ರವರ್ಣದ ಮೀಸೆ ಕುಣಿದುವು.

"ನೆಟ್ಟಗೆ ನೂಲಲಿಕ್ಕೆ ಕೊಡೂದಿಲ್ಲ; ಯುದ್ಧಕ್ಕೆ ಕಳಸುವಿ ಇನ್ನ..!"

"ನನಗೆ ಎದುರು ಆಡತೀನೋ....ಭೋ....ಮಗನೆ..?" ಎಂದವನೇ ಕೆರಳಿದ ಕೇಸರಿಯಂತೆ ಹರಿಹಾಯ್ದ, ಗೌಡ. ಕೈಯೊಳಗಿನ ಬಡಿಗೆ ಎತ್ತಿದ. ಅವನ ಕೋಪ ಅವನ ಆಧೀನದಲ್ಲಿ ಉಳಿಯಲಿಲ್ಲ. ಕಣ್ಣು ಕೆಂಪೇರಿದುವು. ಮೈ ನಡುಗುತ್ತಿದ್ದಿತು. ಏನು ಮಾಡುವೆನೆಂಬ ಕಲ್ಪನೆಯೂ ಕೂಡ ಅವನ ತಲೆಯಲ್ಲಿ ಸುಳಿಯಲಿಲ್ಲ. ಎತ್ತಿದ ಬಡಿಗೆಯನ್ನು ಹುಡುಗನ ಮೇಲೆ ಬೀಸಿ ಒಗೆದ!

"ಅವ್ವಾss!" ಎಂದು ನೆಲಕ್ಕುರುಳಿದ ಅಜಿತ.

ಅವನೊಡನೆಯೇ "ಖಳ್" ಎಂದು ಸಪ್ಪಳ ಮಾಡಿ, ಎದುರಿಗಿನ ಗೋಡೆಗೆ ತೂಗು ಹಾಕಿದ ಪಂಚಮ ಜಾರ್ಜ ಬಾದಶಹರ ಭಾವಚಿತ್ರವೂ ನೆಲಕ್ಕಿಳಿಯಿತು!

ಅಡಗಿಯ ಮನೆಯಿಂದ ಎರಡು ಮೂರು ಜನ ಹೆಂಗಸರು ಧಾವಿಸಿ ಪಡಸಾಲೆಗೆ ಬಂದರು. ಮಡಿಯುಟ್ಟಿರುವೆನೆಂಬ ನೆನಹು ಉಳಿಯದಲೇ ನಡುಹರೆಯದ, ವಿಧವೆ— ಸರಸ್ವತಿ— ಮಗನನ್ನು ಎತ್ತಿ ಎದೆಗವಚಿಕೊಂಡಳು; ಪೆಟ್ಟು ಎಲ್ಲಿ ತಗುಲಿದೆ ಎಂದು ನೋಡಹತ್ತಿದಳು. ಹುಡುಗ ಹೆದರಿ ನಡುಗಹತ್ತಿದೆ. ಸರಸ್ವತಿಯು ಅಲ್ಲೇ ನಿಂತ ಭಾವನ ಕಡೆಗೊಮ್ಮೆ ನೋಡಿದಳು. ಸಿಟ್ಟು ಬಂತೇನೊ, ತುಟಿಗಳು ಅದುರಿದುವು. ಕಣ್ಣಲ್ಲಿ ನೀರಾಡಿದುವು.

ಇಷ್ಟರಲ್ಲಿ ಮುದುಕಿ ಮುರದೇವಿ ಮುಂದುವರಿದು ಬಂದು, ಅಜಿತನ ಹತ್ತಿರ ಕುಳಿತು "ಎಲ್ಲಿ ಹತ್ತಿತು ಬಾಳಾ...?" ಎಂದುಕೇಳಿದ..

ಬಡಿಗೆ ತನಗೆ ಹತ್ತಲಿಲ್ಲವೆಂದು ಅಜಿತ ಸೂಚಿಸಿದ, ಗೋಣಿಂದ.

"ನಿನಗೆ ಹೇಳಿ ಹೇಳಿ ಮುಪ್ಪಾಗಿ ಹೋದೆ, ನೋಡು ನಾ....

ಪರದೇಶಿ ಹುಡುಗನ ಮೇಲೆ ಕೈಯೆತ್ತಬೇಡಾ ಅಂತ" ಮಗನ ಕಡೆಗೆ ನೋಡಿ ಮರದೇವಿ ನುಡಿದಳು. ಧ್ವನಿಯಲ್ಲಿ ಸಿಟ್ಟು ಮರುಕಗಳೆರಡೂ ಇದ್ದುವು.

"ನನಗೆ ತಿರುಗಿ....ಎದುರ...."

"ಹೌದಪ್ಪ! ನೀ ದೊಡ್ಡ ಮನುಷ್ಯ! ಕಣ್ಣು ತೆರೆದರೆ ಊರೆಲ್ಲ ಅಂಜಿ ನಡಗತದ, ಆದರೆ ಮನೆಯೊಳಗೂ ಅವ್ವ, ಮಕ್ಕಳು ಅಂಜು ಅಂದರೆ ಹೇಗೆ ಅಂಜಬೇಕು?" ಸ್ವಲ್ಪ ಸಿಡುಕಿನಿಂದಲೇ ಮರದೇವಿ ಮಗನ ಮಾತನ್ನು ತಡೆದು ನುಡಿದಳು.

"ಹೀಗ ಮಾಡೇ ಅವನನ್ನು ಏರಿಸಿ ತಲೆಮೇಲೆ ಇಟಕೊಂಡೀರಲ್ಲ....ಇಂದ ನೂಲತಾನ, ನಾಳೆ ಚಳವಳಿಯೊಳಗ ಸೇರತಾನ; ಕೂಡರಿ ಆಮೇಲೆ ಇದ್ದ ವತನ ಅಷ್ಟ ಕಳಕೊಂಡ." ಅಪಮಾನದ ಬೆಂಕಿಯಲ್ಲಿ ಪುಟಗೊಂಡ ಬಿರುನುಡಿ, ಆದಗೌಡನ ಬಾಯಿಂದ ತಡೆತಡೆದು ಹೊರ ಬಿದ್ದಿತು.

"ಸಾಕು; ಸುಮ್ಮನಿರು ಇನ್ನ; ನೂತರೆ ಮಾಡಿದರೆ ವತನ ಹೋಗಲಿಕ್ಕೆ ಅದೇನು ಪುಕ್ಕಟ ಸಿಕ್ಕದ? ನಮ್ಮ ಅತ್ತಿ, ಹಗಲೀ ರಾತ್ರಿ ಮನಿಯೊಳಗ ಜಂತರಾ ಇಟ್ಟಕೊಂಡ ನೂಲತಿದ್ದಳು. ನೋಡ ನೋಡತ ಎರಡ ದಿನಕ್ಕ ಒಂದ ಸೀಳ ತಗೀತಿದ್ದಳು. ನಿಮ್ಮ ಅಜ್ಜಾ ಒಯ್ದು ಪಿಂಜಿ ಜಾಡರಿಗೆ ನೂಲ ಕೊಟ್ಟ ಅರಿವಿ ತರತಿದ್ದ. ಅವನ ವತನ ಎಲ್ಲಿ ಹೋಗಲಿಲ್ಲ? ನೀ ಒಬ್ಬ ವತನ ಕಾಯುವವನಾಗೀದಿ, ಗೌಡಕಿ ಮಾಡಿ? ನನಗ ಗೊತ್ತಿಲ್ಲ!"

ಆದಗೌಡ ಸುಮ್ಮನಾದ. ಹೊರಗಿನ ಪರಿಸ್ಥಿತಿಯ ಜ್ಞಾನವಿಲ್ಲದ ಹೆಂಗಸರೊಡನೆ ವಾದಿಸಿ ಉಪಯೋಗವಿಲ್ಲ, ಎಂದುಕೊಂಡನೇನೊ! ಸುಮ್ಮನಿರಬೇಕಾದರೂ ಒಳಗೊಳಗೇ ತಳಮಳಿಸದಿರಲಿಲ್ಲ. ಅವ್ವನ ಅಕ್ಕರತೆಯಿಂದ—ಅಜ್ಞಾನದಿಂದ—ಹುಡುಗ ಅಡ್ಡ ಹಾದೀ ಹಿಡಿದು ಹೀಗೆಯೇ ಸಾಗಿದರೆ....? ಮೊನ್ನೆ ಹರತಾಳ ಅಂತ ಸಾಲೆಗೆ ಹೋಗಲಿಲ್ಲ. ಅಂದು ಮದ್ಯದಂಗಡಿ ಮುಚ್ಚಲು, ಎಲ್ಲರೊಡನೆ ಇವನೂ ಇದ್ದ. ಒಂದು ದಿನ ಪ್ರಭಾತಫೇರಿಯಲ್ಲಿಯೂ ಸೇರಿದಂತೆ ಕಾಣಿಸಿದ. ಇಂಥವನಿಗೆ ಏನು

ಮಾಡಬೇಕು? ಇವನ ಸಂಗತಿಯ ಗುಣದಿಂದ ನಮ್ಮ ರಾವಸಾಹೇಬನೂ ಹೇಗೇ ಮಾಡಿದರೆ.... ?

ಸ್ವಾಭಾವಿಕವಾಗಿ ಆದಗೌಡನ ದೃಷ್ಟಿ ಎದುರಿಗಿನ ಗೋಡೆಯ ಕಡೆಗೆ ಹರಿಯಿತು. ತಂದೆ ಕುರ್ಚಿಯ ಮೇಲೆ ಕುಳಿತಿದ್ದಾನೆ. ಸುತ್ತಲೂ ಇಪ್ಪತ್ತೊಂದು ಪ್ರಮಾಣ ಪತ್ರಿಕೆಗಳು. ಬ್ರಿಟಿಷ ಸಾಮ್ರಾಜ್ಯಕ್ಕೆ ಏಕ ನಿಷ್ಠೆಯಿಂದ ಸೇವೆ ಸಲ್ಲಿಸಿದ್ದಕ್ಕಾಗಿ ಎಂಟುಹತ್ತು ಕಲೆಕ್ಟರರಿಂದ ಸಿಕ್ಕವು ಗಳಾದರೆ ಹಲವು ಕಮಿಶನರರಿಂದಲೂ, ಡಿ. ಎಸ್. ಪಿ. ಗಳಿಂದಲೂ ಸಿಕ್ಕಂತಹುಗಳು. ಇನ್ನೂ ಕೆಲದಿನ ಬಾಳಿದ್ದರೆ, ಅವರಿಗೆ ರಾವಸಾಹೇಬ ಪದವಿಯೂ ಸಿಗುವುದರಲ್ಲಿತ್ತು. ಇಂಥವರ ಮಗನಾಗಿ ನಾನು ಹೀಗೆಲ್ಲ ಪುಂಡಾಟಿಕೆ ಮಾಡಗೊಡಲೇ ?

" ಮಾವನ ಫೋಟೋಕ್ಕೂ ಕಟ್ಟಿಗೆ ತಾಗಿತೇನು ? ".

ನಡುಮನೆಯ ಬಾಗಿಲ ಒಳಮಗ್ಗಲಿಗೆಯೇ ನಿಂತ ಗಂಗವ್ವ, ಗಂಡನ ಚಲಿಸದ ದೃಷ್ಟಿಯನ್ನು ನೋಡಿ, ಸ್ನಿಗ್ಧಸ್ವರದಿಂದ ಕೇಳಿದಳು.

" ಇ....ಲ್ಲ... ! "

" ಯಾರ ಫೋಟೋದ ಪರವಿಯೇನ ಅವನಿಗೆ? .. ಹುಡುಗನ ಜೀವದ ಅರವ ಇಲ್ಲದವನಿಗೆ ಫೋಟೋ ಕೇಳತಾಳ ಇವಳು ! " ಮುದುಕಿ ಕಾಚಿನ ತುಂಡುಗಳನ್ನು ಆರಿಸುತ್ತ ಹೇಳಿದಳು.

" ಅವರೇ ಇಂಥವರ ಕೈಯೊಳಗ ಕೊಟ್ಟ ಸತ್ತ ಹೋಗಿದಾರೆ.... ಇನ್ನ ಜೀವ ತಗೊಂಡರೂ ಯಾರ ಕೇಳವರಿದ್ದಾರೆ, ಹುಡುಗನಿಗೆ ? " ಸರಸ್ವತಿಯ ತುದಿನಾಲಿಗೆಯ ವರೆಗೂ ಬಂದು ತಿರುಗಿತು ಮಾತು.

" ಚಾವಡಿಯೊಳಗ ಹವಾಲದಾರ ಕರ್‍ರಿತಾರೀ.. " ಮುಜುರೆ ಮಾಡಿ ಓಲೇಕಾರ ಗೌಡರಿಗೆ ಹೇಳಿದ.

" ಹೂಂ! ಬಂದೇ ಅಂತ ಹೇಳು.. " ಎಂದು ಗೌಡ ಸನವಿ ಯನ್ನು ಚಾವಡಿಗೆ ಕಳುಹಿದ. ಆಮೇಲೆ ಕೋಣೆಯೊಳಗೆ ಹೋಗಿ ಕನ್ನಡಿ ನೋಡಿಕೊಂಡು, ರುಮಾಲು ಕೋಟು ಸರಿಪಡಿಸಿಕೊಂಡ. ಹಾಗೆಯೇ ಮತ್ತೊಂದು ಕಟ್ಟಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ತಲೆಬಾಗಿಲನ್ನು ದಾಟಿದ. ಹೋಗುವಾಗ " ಬರುಹೋಗುವ ಅಮಲ

ದಾರರ ಕಡೆಗೆ ನೋಡಬೇಕೊ ಏನ ಮನೆಕಡೆಗೆ ನೋಡಬೇಕೋ! ಸುಟ್ಟಿತು ಈ ಹುಡುಗರದ್ದು." ಎಂದು ಬಾಯಲ್ಲಿಯೇ ವಟಗುಡುತ್ತಿದ್ದ.

ತಂದೆ ಹೋದುದನ್ನು ಕಂಡು, ತಾಯಿಯ ಮರೆಗೆ ಅವಿತು ನಿಂತ ರಾವಸಾಹೇಬನು ಮೆಲ್ಲಗೆ ಹೊರಗೆ ಬಂದ. ಅಲ್ಲೇ ಬಿದ್ದ ಬಿಂಗರಿ ಅರಳೆಗಳನ್ನು ಅಂಜುತ್ತಂಜುತ್ತ ಕೈಯಲ್ಲಿ ತಕ್ಕೊಂಡಿದ್ದನೋ ಇಲ್ಲವೋ ಅಷ್ಟರಲ್ಲಿ,—

"ಈಗ ಅಜಿತನ ಗತಿ ಏನ ಆಗಿತ್ತ ನೋಡಲಿಲ್ಲಾ...? ಮತ್ತ ಹಿಡಿಯುವಿ, ಅದನ್ನ ಕೈಯೊಳಗ.... ?" ಗಂಗಾಬಾಯಿ ಬೆದರಿಸಿದಳು, ಕಟ್ಟೆಚ್ಚರಿಕೆಯ ಸ್ವರದಲ್ಲಿ.

ರಾವಸಾಹೇಬ ಗಂಗವ್ವನ ಹಿರಿಯ ಮಗ. ನಾಳೆ ಗೌಡನಾಗುವವ. ಗೌಡಕಿ ಮಾಡಿ ಮಾವ ದೊರಕಿಸದೆ ಹೋದ ರಾವಸಾಹೇಬ ಪದವಿಯನ್ನು ಈತ ತೊಟ್ಟಲಿನಲ್ಲಿರುವಾಗಲೆ ಸಂಪಾದಿಸಿಬಿಟ್ಟಿದ್ದಾನೆ. ಮಗನಿಗೆ ಈ ಹೆಸರಿಡುವುದರ ಜಾಣ್ಮೆಯಲ್ಲಿ ಗಂಗವ್ವನಿಗೊಂದಿಷ್ಟು ಸಲ್ಲಲೇಬೇಕು. ಯಾಕೆಂದರೆ ಸಾಲೆಯಲ್ಲಿ ಶಿಕ್ಷಕರು ಮಗನ ಹೆಸರನ್ನು 'ರಾವಸಾಹೇಬ ಆದಗೌಡಾ ಪಾಟೀಲ' ಎಂದು ಓದಿದ್ದನ್ನು ಸ್ವತಃ ಆದಗೌಡನೇ ಕೇಳಿ ಆನಂದಪಟ್ಟಿದ್ದ, ರಹಸ್ಯದ ನಗೆ ಬೀರಿದ್ದ. ಅವನು ಕಲ್ಪನಾಲೋಕದಲ್ಲಿ ನಿಜವಾಗಿ ರಾವಸಾಹೇಬ ಪದವಿಯನ್ನು ಸಂಪಾದಿಸಿರುವೆನೆಂದು ಆ ಕ್ಷಣಕ್ಕೆ ಭಾವಿಸುತ್ತಿದ್ದುದೇ ಆ ನಗೆಗೆ ಕಾರಣ.

ಈ ಕಲ್ಪನೆಯನ್ನು ಆದಗೌಡ ಹೆಂಡತಿಗೆ ಹೇಳದೆ ಇರಲಿಲ್ಲ. ಅಂತಲೇ ಅವಳು ಮಗನನ್ನು ಹೆಸರುಗೊಂಡು ಕರೆಯುವಾಗೊಮ್ಮೆ ಹೆಮ್ಮೆಪಡುವಳು. ಇಂಥವಳು ಮಗನು ಕೈಯಲ್ಲಿ ಬಿಂಗರಿ ಹಿಡಿದರೆ ಸಹಿಸಿಯಾಳೇ?

ಅಜಿತ ಕೂಡಲೆ ರಾವಸಾಹೇಬನ ಕೈಯೊಳಗಿಂದ ಹಂಜಿ ಬಿಂಗರಿಗಳನ್ನು ಕಸಿದುಕೊಂಡ.

"ಇರಲಿ ಹೋಗು, ನಿನ್ನ ಗಂಡನ ಸಲುವಾಗಿ ಸರಸ್ವತಿಗೆ ವೈಲಿಗೆ ಆಯ್ತು. ಮಡಿ ಉಟ್ಟುಕೊಂಡು ಅಡಿಗೆಗೆ ಕೂಡೋಗು ನೀ." ಎಂದು ಮುರದೇವಿ ಹಿರಿಸೊಸೆಗೆ ಆಜ್ಞಾಪಿಸಿದಳು. ಧ್ವನಿ ಬಿರುಸಾಗಿದ್ದಿತು.

ಗಂಗವ್ವ ಒಳಗೆ ಹೋದನಂತರ ಸರಸ್ವತಿ ಬಿಕ್ಕಿಬಿಕ್ಕಿ ಅಳಹತ್ತಿದಳು. ಅಜಿತನ ಕಣ್ಣುಗಳಲ್ಲಿಯೂ ನೀರೂರಿದುವು. ಮುದುಕಿಯೂ ಉಟ್ಟ ದೋತರ ಅಂಚಿನಿಂದ ಮುಖ ಒರಸಿಕೊಂಡಳು. ಸರಸ್ವತಿಯನ್ನು ತೆಕ್ಕೆ ಯಲ್ಲಿ ಹಿಡಿದು ರಮಿಸುತ್ತ,—

" ಸುಮ್ಮನಾಗು ತಾಯೀ! ಸರಿದೊಡ್ಡ ಮಗನಾಗಿದಾನೆ. ಮಗಳು ಮೈನೆರೆದು ಗಂಡನ ಮನೆಯೊಳಗ ಜನಮಾ ಮಾಡಲಿಕ್ಕ ಹತ್ತೀದಾಳು. ಇನ್ನೂ ಆವನ ನೆನದ ಅಳೋದ ಅಂದರs..? " ಸ್ವಲ್ಪ ತಡೆದು—

" ಹೀಗೆ ಏನಾರೆ ಆದರ ದುಃಖ ಕೇಳೂದಿಲ್ಲ, ಏನ ಮಾಡೋದು ಅದ? ಹುಲೀ ಅಂತಹ ಮಗಾ ಹೋದಂತ..ಎದೀ ಮೇಲೆ ಕಲ್ಲ ಹಾಕಿ ಕೊಂಡ ಕೂತಿಲ್ಲ ನಾ? ಆದಗೌಡ ಸಿಟ್ಟಿನವ ಇದ್ದಾನ ಅನ್ನೂದು ಗೊತ್ತ ಇಲ್ಲ ನಿನಗ..? ಇವರ ಕೂಡ ಹೊಂದದಿದ್ದರ ನಾಳೆ ಮಗನ ತಗೊಂಡ ಬೇರೆ ನಿಲ್ಲುವಿಯಂತ. ಇನ್ನs ನಾ ಇದೇನ ಅಲ್ಲ, ನಿನ್ನ ಜೆನ್ನ ಮೇಲೆ " ಎಂದು ಸಮಾಧಾನ ಪಡಿಸಿದಳು.

ಸಿದ್ದಾಪುರ ಒಂದು ಹಿರಿಹಳ್ಳಿ. ಸುಮಾರು ಆರು ಸಾವಿರ ಜನ ವಸತಿಯುಳ್ಳ ಗ್ರಾಮ. ಉಳಿದ ಹಳ್ಳಿಗಳಿಗಿಂತ ಸ್ವಲ್ಪ ಸುಧಾರಣೆಯ ಪಥದಲ್ಲಿ ಮುಂದುವರಿದಿದೆ. ಹತ್ತು ಹದಿನೈದು ವರ್ಷಗಳ ಹಿಂದೆ ದೇಶ ಪಾಂಡೆಯೆಂಬೊಂದು ಮನೆತನದವರು ಪರಸ್ಥಳದಿಂದ ಬಂದು, ಒಂದು ಚಿಕ್ಕ ಇಂಗ್ಲೀಷ ಸ್ಕೂಲನ್ನು ಆರಂಭಿಸಿದರು. ಆದು ಈಗ ಊರ ಜನರ ಸಹಾನುಭೂತಿ ಸಹಕಾರಗಳಿಂದ ಹಾಯ್‌ಸ್ಕೂಲು— ಸರಕಾರದವರಿಂದ ಮನ್ನಣೆ ಪಡೆದದ್ದು—ಆಗಿದೆ. ಅದರಿಂದ ಊರಲ್ಲಿ ಸ್ವಾಭಾವಿಕವಾಗಿ ಮ್ಯಾಟ್ರಿಕ್ಕಿನ ವರೆಗೆ ಓದಿದ ತರುಣರ ಸಂಖ್ಯೆಯೂ ಹೆಚ್ಚು. ಆದರ ಪರಿ ಣಾಮವಾಗಿ ಭಾರತೀಯರು ಹತ್ತೊಂಬತ್ತನೂರಾ ಇಪ್ಪತ್ತೊಂದನೆಯ ಇಸವಿಯಲ್ಲಿ ಹೂಡಿದ ಸ್ವಾತಂತ್ರ್ಯ ಚಳವಳಿಯ ಸುಳಿಗಾಳಿಯೂ ಸುಳಿ ಯುತ್ತಿದೆ. ಆ ಸಂದರ್ಭದಲ್ಲಿ ಗೌಡರ ಮನೆಯಲ್ಲಿ ನಡೆದ ಸಂಗತಿಯಿದು.

ಅದೇ ದಿನ ಮಧ್ಯಾಹ್ನ. ಅಜಿತ ನಡುಮನೆಯಲ್ಲಿ ಒಬ್ಬನೇ ಇದ್ದ. ಸಮೀಪದಲ್ಲಿ ಕಕ್ಕ ಇಲ್ಲದ್ದನ್ನು ಕಂಡು, ಮೆಲ್ಲನೆ ಜೇಬಿನೊಳಗಿಂದ ಬಿಂಗರಿ, ಆರಳೆ ಹೊರಗೆ ತೆಗೆದ. ಈಗ ಎಳೆ ಹೊಂದಿಸುವುದರಲ್ಲಿದ್ದ.

ಅಷ್ಟರಲ್ಲಿ—

"ಇಲ್ಲಿ ಒಬ್ಬನೇ ಏನ ನಡಸಿದಿಯೋ ಅಜಿತಾ..?" ಎನ್ನುತ್ತ ಅವನ ತಾಯಿ ಒಳಗೆ ಬಂದಳು.

ಅಜಿತ ಏನೂ ಹೇಳಲಿಲ್ಲ. ಆದರೂ ಹೆದರಲಿಲ್ಲ ಸುಮ್ಮನೆ ಹಾಗೇ ಎಳೆ ಹೊಂದಿಸಿ ನೂಲತೊಡಗಿದ. ಸರಿಯಾಗಿ ಎಳೆ ಹೊರಡುತಲಿದ್ದಿತು. ಬಾಯಲ್ಲಿ 'ಜನವುನಗಣ ಅಧಿನಾಯಕ ಜಯ ಹೇ! ಭಾರತ ಭಾಗ್ಯ ವಿಧಾತಾ' ಎಂದು ಏನೋ ಹಾಡು ಗುಣಗುಣಿಸುತಲಿದ್ದ. ಸರಸ್ವತಿಯು ಮಗನ ನೂಲುವ ರೀತಿಯನ್ನು ನೋಡುತ್ತ ನಿಂತಿದ್ದಳು, ಹಾಗೇ ನಿಂತಿದ್ದಳು! ಇಂದು ಅಜಿತನ ನಿಲುವು ದಿನದಕಿಂತ ಸುಂದರ ಕಂಡಿತವಳಿಗೆ. ಅವನುಟ್ಟದ್ದು ಅರ್ಧ ಚೊಣ್ಣ, ತೊಟ್ಟದ್ದು ಅರ್ಧ ತೋಳಿನ ಶರ್ಟು; ತಲೆಯ ಮೇಲೆ ಏನೂ ಹಾಕಿರಲಿಲ್ಲ. ಸ್ವಲ್ಪ ಬೆಳೆದ ಕೂದಲು ಕತ್ತರಿಸದುದರಿಂದ ನಸು ಹಿಂದೆ ಬಾಗಿವೆ. ವಿಶಾಲವಾದ ಹಣೆ, ಹರವಾದ ಹೃದಯ. ಮಗನನ್ನು ಕಂಡು ಸಂತಸವಾಗಿರಬೇಕವಳಿಗೆ. ಒಂದು ಕ್ಷಣ ತನ್ನ ವೈಧವ್ಯದ ದುಃಖವನ್ನೂ ಮರೆತಳಾಕೆ. ಮಗನ ನೂಲುವ ಬಗೆಯನ್ನು ಕಂಡು ಕೌತುಕವೂ ಆಯಿತು. ಆ ಕೌತುಕದ ಭರದಲ್ಲಿಯೇ ಕುತೂಹಲದಿಂದ ಅಂದಳು:

"ಇನ್ನೇನು, ಕುಪ್ಪಸ ಹೊಲಿಯಲಿಕ್ಕೆ ನೂಲು ಕೊಂಡು ತರಬೇಕಾಗಿಲ್ಲಲಾ? ನೀ ಹೀಗೆ ಮನೆಯವನೇ ನೂಲುವವನಾದ ಮೇಲೆ.."

ಸರಸ್ವತಿಯು ಮುಂಜಾನೆಯ ಸಂಗತಿಯನ್ನು ಸಂಪೂರ್ಣವಾಗಿ ಮರೆತಿದ್ದಳಾಕ್ಷಣ.

"ಕುಪ್ಪಸ ಹೊಲಿಯಲಿಕ್ಕೆ ಅಷ್ಟೇ ಏಕೆ? ಮನಿಯೊಳಗಿನ ಜನರ ಅರಿವಿನೂ ಆಗುವವು. ಗಾಂಧಿಜಿ.."

"ಆ ಛೀಃ! ಆ ಛೀಃ?" ಮಗ್ಗುಲಿನ ಕೋಣೆಯಲ್ಲಿ ಕಕ್ಕ ಸೀನಿದ ಸದ್ದಾಯಿತು.

ಆ ಸದ್ದು, ಸರಸ್ವತಿಯ ವಿಚಾರಸರಣಿಗೊಂದು ಬೇರೆ ದಿಸೆಯನ್ನೇ ತೋರಿಸಿತು. ಅವಳು ಅಜಿತನ ಕೈಹಿಡಿದು, ಜಳಕದ ಮನೆಯತ್ತ ದೂರ ಕರೆದೊಯ್ದು ಮೆಲ್ಲನೆ ಕೇಳಿದಳು:

" ಬಾಳಾ, ನಾ ಕೇಳತೇನಂತ ಸಿಟ್ಟಿಗೆ ಬರಬೇಡ ಅಂ? ಮನೆಯೊಳಗಿನವರು ಎಲ್ಲರೂ ಸಿಟ್ಟಿಗೆ ಬರೂತನಕಾ.. ಈ ನೂಲೋದು ಏತಕ್ಕ ಬೇಕು ನಿನಗ? ಇದರಿಂದ ಆಗೋದರs ಏನ? ಇದರಿಂದ ನಾಳೆ ಹೊಟ್ಟೆ ಏನಾದರ ತುಂಬತದ? ಸುಮ್ನ ಇನ್ನೊಂದ ನಾಲ್ಕ ವರ್ಷದೊಳಗೇ ಇಲ್ಲಿ ಇಂಗ್ಲೀಷ ಸಾಲಿ ಅಷ್ಟ ಮುಗಿಸು; ಅಂದರೆ ಅಲ್ಲೇ ಅಕ್ಕನ ಹತ್ತ ರಾನೇ ಮುಂಬಯಿಗೆ ಹೋಗುವಿಯಂತ. ಗಿರಣಿಯೊಳಗ ಕೆಲಸಕ್ಕ ಹಚ್ಚತಾನಂತ ನಿಮ್ಮ ಮಾವ.. ನೀ ಏನ ರಾವಸಾಹೇಬನ ಹಾಗೆ ಗೌಡ ಆಗೋದ ಅದ..? ಎಲ್ಲಿಯಾದರೂ ಹೊರಗೇ ನೌಕರಿ ಮಾಡಲಿಕ್ಕೆ ಹೋಗಬೇಕಲ್ಲ. ಅದೆಲ್ಲ ಬಿಟ್ಟು, ಹಗಲೀ ರಾತ್ರಿ ಈ ಬಿಂಗರಿ ತಿರಗಿಸಿದರೆ ಏನ ಬಂತು?" ಸರಸ್ವತಿಯ ಸ್ವರ ಎಷ್ಟು ಶಾಂತವಾಗಿದ್ದಿತೋ ಅಷ್ಟೇ ಕಳವಳದಿಂದ ಕೂಡಿದ್ದಿತು.

ಅಜಿತ ತಾಯಿಯ ಮಾತು ಮುಗಿಯುವ ವರೆಗೆ ಸುಮ್ಮನಿದ್ದ. ಮನದಲ್ಲಿ ಭಾವನಾತರಂಗಗಳು ಏಳುತ್ತಿದ್ದುವು. ಕೊಂಚ ಕಾಲ ತಡೆಹಿಡಿದ ಅವ್ವನ ಮಾತು ಮುಗಿಯಿತೆಂದು ತಿಳಿದೊಡನೆಯೇ ಕೈಯೊಳಗಿನ ಬಿಂಗರಿಯನ್ನು ತಾಯಿಗೆ ತೋರಿಸಿ,—

' ಈ ಬಿಂಗರಿ ಹಿಡಿದು ನಾವೆಲ್ಲಾ ನೂತರೆ ಬಡವರ ಹೊಟ್ಟೆಗೆ ತುತ್ತ ರೊಟ್ಟಿ ಸಿಗತದ. ಪರದೇಶಕ್ಕೆ ಹೋಗುವ ದುಡ್ಡು ನಮ್ಮ ದೇಶದೊಳಗ ಉಳಿತದ. ನಮ್ಮ ದೇಶಬಾಂಧವರ ಹಿತ ಆಗತದ." ಆವೇಶದಿಂದ ಹೇಳಿದ ಅಜಿತ, ಎಲ್ಲೋ ಕೇಳಿದ ಮಾತನ್ನು

" ಅದ ಏನೋಪಾ..! ನಿನ್ನ ಹೊಟ್ಟೆಗೇ ಗತಿಯಿಲ್ಲ. ಮಂದಿ ಹೊಟ್ಟೆ ಹ್ಯಾಗೆ ತುಂಬಲಿಕ್ಕೆ ಹೊರಟಿದಿ ಏನೋಪಾ..! ಬಡವರ ಹೊಟ್ಟೆ ತುಂಬಿದರೆ ನಿನಗ ಏನ ಬಂತು?"

" ಅಲ್ಲs ಅವ್ವಾ! ಎಲ್ಲರ ಹೊಟ್ಟೆ ತುಂಬಿದ ಮೇಲೆ ಅದರೊಳಗ ನಾನೂ ನೀನೂ ಬರೂದಿಲ್ಲಾ?" ತಿಳಿಸಿ ಕೊಡುವವರ ರೀತಿಯಿಂದ ಕೇಳಿದ ಅಜಿತ.

" ನಿನ್ನ ಮಾತೇ ನನಗೇನ ತಿಳಿದುಲ್ಲಪ್ಪ! ನಾಲ್ಕು ಎಳಿ ನೂತು

ಎಲ್ಲರ ಹೊಟ್ಟೆಗೆ ಹೇಗೆ ಹಾಕುವಿ ಅನ್ನೂದ..!" ನಿರಾಶೆಯು ನಿಟ್ಟುಸುರಿನೊಡನೆ ನುಡಿದಳು, ಸರಸ್ವತಿ.

"ಹೊಟ್ಟೆಗೆ ಹಾಕೋದು ಏನ ದೊಡ್ಡ ಕೆಲಸ ಬಿಡು; ಇದರಿಂದ ನಮಗೆ ಸ್ವರಾಜ್ಯನೂ ಸಿಗೋದ ಅದ." ಮತ್ತೂ ಕೈಮಾಡಿ ಹೇಳಿದ, ಅಜಿತ.

"ಕಲಿಯುಗದೊಳಗ ನೂತ ರಾಜ್ಯ ಗಳಿಸುವವನ ನೀ ಒಬ್ಬ ಬಂಟ.." ತಾಯಿಯ ಮಾತನ್ನು ಅಷ್ಟಕ್ಕೇ ತಡೆದು "ವ್ಹಾಯಿಸರಾಯನೂ ಮಹಾತ್ಮಾ ಗಾಂಧೀಗೆ ಹೀಗೆ ಅಂದಂತ..ಅದಕ್ಕ ಅವರು ಏನ ಹೇಳಿದರು ಗೊತ್ತs ಅವ್ವಾ..! 'ಹಿಂದುಸ್ತಾನದೊಳಗ ವ್ಯಾಪಾರಕ್ಕಂತ ಬಂದಾಗ ನೀವೂ ತಕ್ಕಡಿ ದಂಡಿಗಿಗೆ ಕಟ್ಟಿದ ನಾಲ್ಕ ಚೆರಳ ನೂಲ ಹಿಡಿದೇ ಇಷ್ಟ ರಾಜ್ಯ ಗಳಸಿದಿರಿ. ನಾ ಅಂತೂ ಅಖಂಡ ನೂಲನ್ನೇ ಹಿಡಿದಿದೇನೆ. ಅಂದ ಮೇಲೆ ಸ್ವರಾಜ್ಯ ಸಿಗಲಿಕ್ಕಿಲ್ಲ ನನಗ?' ಅಂತ ಕೇಳಿದರು ತಿಳಿತೂ?" ಎಂದು ನುಡಿದ ಅಜಿತ.

"ಇದೆಲ್ಲ ಯಾರ ಕಿವಿ ತುಂಬತಾರ ಏನೋ ನಿಮಗ.." ಎಂದು ಸರಸ್ವತಿ ನಡುಮನೆಯತ್ತ ನಡೆದಳು, ಭಾರವಾದ ಹೆಜ್ಜೆಗಳಿಂದ.

ಮಗನ ಮುದ್ದು ಮಾತನ್ನು ಕೇಳಿ ಸಂತಸ, ಅದರಿಂದ ಮುಂದೊದಗಬಹುದಾದ ಸಂಕಟಗಳ ತೂಗಾಟದಲ್ಲಿತ್ತವಳ ಮನಸ್ಸು.

"ನಮಗೆಲ್ಲಾ.. ನಮ್ಮ ಜಾಧವ ಮಾಸ್ತರರು ಹೇಳತಾರ ದಿನಾ.." ಎಂದು ಗೋಣು ಹಾಕಿ, ಅಜಿತ ಮತ್ತೆ ನೂಲುತ್ತ ಹಿತ್ತಲ ಬಾಗಿಲಿನಿಂದ ಹೊರಗೆ ಸಾಗಿದ.

ಸರಸ್ವತಿಯು ಬಾಯಲ್ಲಿ ಏನೋ ಪುಟಪುಟಿಸುತ್ತಿದ್ದಳು. ಅದೇನೋ ಅವಳಿಗೇ ಗೊತ್ತು!

---

ವಂದೆ ! ಮಾತರಂ ! ವಂದೆ ! ಮಾತರಂ !

ಭಾರತ ಮಾತಾಕಿ ಜೈ ! ಗಾಂಧಿ ಮಹಾರಾಜಕಿ ಜೈ !!

ವಂದೆ ! ಮಾತರಂ !! ವಂದೆ ! ಮಾತರಂ !!

ಅಂತಃಕರಣವನ್ನು ಕಲಕುವ ಈ ಜಯಘೋಷವನ್ನು ಕೇಳಿ, ಹಾಯ್‌ಸ್ಕೂಲಿನ ಹುಡುಗರೆಲ್ಲ ಬಯಲಿಗೆ ಧುಮುಕಿದರು ಮೂರನೆಯ ತಾಸಿನ ಗಂಟೆಯಾದರೂ ತಿರುಗಿ ಒಳಗೆ ಹೋಗಲೇ ಇಲ್ಲ. ದಾರಿಗೆ ಬಂದು ನೋಡುತ್ತಾರೆ ! ಎದುರಿನಲ್ಲಿಯೇ ಹಿರಿಯರು, ತರುಣರು, ಹುಡುಗರು ಎಲ್ಲರೂ ಗುಂಪಾಗಿ ಬರುತ್ತಿರುವ ಮೆರವಣಿಗೆ! ಅದ್ಭುತ ಆವೇಶದಾಯಕ ದೃಶ್ಯವದು! ಸರಿ; ಗೊತ್ತಾಯಿತು. ಇಂದು ದತ್ತ ಮಂದಿರದಲ್ಲಿ ನೂಲುವ ಸ್ಪರ್ಧೆ. ಅದಕ್ಕಿಷ್ಟು ಉತ್ಸಾಹ! ಜನಸಮ್ಮರ್ದ !

ನೋಡುನೋಡುವಷ್ಟರಲ್ಲಿ ಹುಡುಗರು ಮೆರವಣಿಗೆಯಲ್ಲಿ ಸೇರಿದರು. ಆ ಜಯಘೋಷದಲ್ಲಿ ದನಿಗೂಡಿಸಿದರು. ಆಗ ಜಯಧ್ವನಿಯ ತೆರೆಗಳು ದಿಗಂತದಲ್ಲಿ ಪ್ರತಿಧ್ವನಿಯನ್ನು ಎಬ್ಬಿಸುತ್ತಿವೆ. ಮೆರವಣಿಗೆಯಲ್ಲಿ ತಾನೇ ತಾನಾಗಿ ಒಂದು ತರದ ಶಿಸ್ತು ಸಂಘಟನೆಗಳು ಮೈಗೂಡಿವೆ. ಮುಂದೆ ರಾಷ್ಟ್ರಧ್ವಜ ಹಾರಾಡುತ್ತಲಿವೆ. ಹಿಂದೆ ಸಿಂಗರಿಸಿದ ಎತ್ತಿನ ಬಂಡಿಯಲ್ಲಿ, ರಾಷ್ಟ್ರಧ್ವಜಗಳಿಂದ ಅಲಂಕರಿಸಿದ ಕುರ್ಚಿಯ ಮೇಲೆ ಭಾರತಮಾತೆ! ಅವಳಡಿಯಲ್ಲಿ ಮಹಾತ್ಮರು! ಮುಂದಿನ ಮಗ್ಗಲು ಒಂದು ರಾಟೆ. ಕೈನೂಲಿನ ಒಟ್ಟೆ ಧರಿಸಿದ ಒಬ್ಬ ತರುಣ ನೂಲುತ್ತ ಕುಳಿತಿರುವನು. ನಡೆದಿದೆ ಮೆರವಣಿಗೆ, ಉತ್ಸಾಹಗೀತೆಯ ನಿನಾದದಲ್ಲಿ !

ಮೆರವಣಿಗೆ ಬಂತು, ಸಮೀಪಕ್ಕೆ ಬಂತು; ಹಾಯ್‌ಸ್ಕೂಲಿನ ತೀರ ಸಮೀಪಕ್ಕೆ ಬಂತು. ವಿದ್ಯಾರ್ಥಿಗಳೆಲ್ಲ ಒಳ್ಳೇ ಹುರುಪಿನಿಂದ ಜಯಘೋಷ ಮಾಡಿದರು! ಬಂಧನದಿಂದ ಹೇಗೆ ಬಿಡುಗಡೆ ಹೊಂದಿದೆವೆಂಬ ಹುಮ್ಮಸ್ಸು ತುಂಬಿತ್ತೇನೋ ಅದರಲ್ಲಿ. ಶಾಲೆಯ ಶಿಕ್ಷಕರೂ ಹೊರಗೆ ಬಂದರು, ನೋಡಿದರು. ಪ್ರಚಂಡ ಮೆರವಣಿಗೆ. ತಮ್ಮ ಶಾಲೆಯ ವಿದ್ಯಾರ್ಥಿಗಳೆಲ್ಲ ಅದರಲ್ಲಿ. ಮೆರವಣಿಗೆ ನಿಧಾನವಾಗಿ ಸಾಗಿದೆ; ಇವರು

ನೋಡುತ್ತ ನಿಂತಿದ್ದಾರೆ. ಹುಡುಗರಾರೂ ಕದಲಲಿಲ್ಲ; ಹೊರಳಿ ಹಾಯ್ ಸ್ಕೂಲಿನ ಕಡೆಗೆ ನೋಡಲಿಲ್ಲ ಕೂಡ. ಅದೊಂದು, ಅವರಿಗೆ ಕಾರಾಗ್ರುಹವೆನಿಸಿತ್ತೇನೊ! ಅನಿಸದೇನು ಮಾಡೀತು? ನಿರುಪಯೋಗಿ ಶಿಕ್ಷಣ; ಬ್ರಿಟಿಷ ಸಾಮ್ರಾಜ್ಯದ ಕಾರಕೂನರನ್ನು ತಯಾರಿಸುವ ಪಡಿಯಚ್ಚು! ಅದೇನು ಶಿಕ್ಷಣಸಂಸ್ಥೆಯೇ? ತಮ್ಮ ಕರದ ಸಂಕೋಲೆಗಳನ್ನು ತಾವೇ ಬೆಸೆದುಕೊಳ್ಳುವದನ್ನು ಕಲಿಸುವ ಮಾಟದ ಮನೆ! ಮೆರವಣಿಗೆ ಸಾಗಿತು, ಮುಂದೆ ಸಾಗಿತು; ದೂರ ಸಾಗಿತು. ಆದರೂ ಆ 'ಸುಜಲಾಂ ಸುಫಲಾಂ ಮಲಯಜ ಶೀತಲಾಂ' ಎಂಬ ಹಾಡು ಗಾಳಿಯಲ್ಲಿ ಅಲೆಯಲೆಯಾಗಿ ಇನ್ನೂ ಕೇಳಬರುತ್ತಲಿದೆ.

"ನಾಳೆ ಸ್ಕೂಲಿಗೆ ಬರಲಿ ಅವರಿಗೆ ಹೇಳ್ತೇನು?" ಎಂದು ಸಿಟ್ಟು ಆವರಿಸುತ್ತ ಹೆಡ್‌ಮಾಸ್ತರರು ನುಡಿದರು. ಮುಖ ಕೆಂಪಾಗಿತ್ತು.

"ಏನು ಮಾಡ್ತೀರಿ?" ಕೆಣಕುವ ಸ್ವರದಲ್ಲಿ ತರುಣ ಜಾಧವ ಮಾಸ್ತರರು ಕೇಳಿದರು, ಹಾಯ್‌ಸ್ಕೂಲಿನಲ್ಲಿ ಮರಳುತ್ತ.

"ಏನು ಮಾಡ್ತೀರಿ!.. ನೋಡ್ತೀರೇನು, ಮಾಸ್ತರ್ ನೀವು? ವಿಷದ ಪರೀಕ್ಷೆ ಮಾಡಬಾರದು. ಅದು ಸುಖಕರವಲ್ಲ.."

"ವಿಷವೇನೋ ಹೌದು; ಆದರೆ ಅದು ಯಾರಿಗೆ? ನಮಗೆ ನಿಮಗೆ. ಶಿವನಿಗೇನದರ ಹೆದರಿಕೆ?"

"ಎಲ್ಲಾ ಗೊತ್ತ ಅದ, ಇವರು ಎಲ್ಲಿತನಕ ಹೆದರುವದಿಲ್ಲ ಅಂಬೋದು." ಧ್ವನಿಯನ್ನು ಸ್ವಲ್ಪ ತಗ್ಗಿಸಿ "ನೋಡಿರಿ, ಮಾಸ್ತರs, ಈ ಗೌಡರ ಹುಡುಗ ಅಜಿತ ಇದ್ದಾನಿಲ್ಲೋ, ಅವನ ಜನ್ಮದ ಹಾನಿ ಮಾಡಲಿಕ್ಕೆ ಏನ ಬಹಳ ಹೊತ್ತ ಹಿಡಿಯೂದುಲ್ಲ. ಮುಂದ ಮುಂದ ಹೋಗಿ ಚಳವಳಿಯೊಳಗ ಸೇರುವಾಗೇನೋ ಮೋಜ ಅನಸ್ತದ. ಅದೇ ನಾಳೆ ಕಕ್ಕನ ಮುಕಳಿಗೆ ಬಿಸಿ ತಗಲಿತೆಂದರೆ ತಿಳಿದೀತು." ಎಂದು ಹಣೆ ಏರಿಸಿ ಹೇಳಿದರು.

"ಅಬ್ಬಬ್ಬ ಬಿಡಿರಿ! ನನಗೂ ಅವನಿಗೂ ಸಂಬಂಧಃ ಇಲ್ಲಂತ ಹೇಳಿಬಿಡತಾನೆ, ಗೌಡ. ಅವನ ಮಗ–ರಾವಸಾಹೇಬ–ನಂತೂ ಸಾಲಿಯೊಳಗೇ ಕೂತಿದ್ದಾನೆ. ನೋಡರಿ ಬೇಕಾದರೆ.." ನಗೆಯಲ್ಲಿ ಹಗು

ರಾಗಿಯೇ ಮಾತು ತೇಲಿಸಿಬಿಟ್ಟರು, ಜಾಧವ ಮಾಸ್ತರರು.

"ನಿಮಗೆ ಇನ್ನೂ ಹುಡುಗಾಟಿಕೆ ಅನಸ್ತದ ಮಾಸ್ತರ್‍ರ; ಸರಕಾರದ ಕೈಯೇನು ಕಿರಿದು ಇಲ್ಲ!"

"ಉದ್ದ ಆಗಿವೆಯಂತೇ ಇದೆಲ್ಲ ನಡೆದಿದೆಯಲ್ಲ!"

"ಮೊನ್ನೆ ನೌಕರಿ ಮೇಲೆ ಬಂದಿರುವಿರಿ, ನಿಮಗೇನು ಗೊತ್ತು? ನಾಲ್ಕು ಮಕ್ಕಳು ಆಗಲಿ, ಸಂಸಾರ ಬೆನ್ನಿಗೆ ಹತ್ತಲಿ, ಆಂದರ ಗೊತ್ತಾಗ ತದ. ಆಮೇಲೆ ಬರಲಿ, ನೋಡೋಣ ಈ ಮಾತೆಲ್ಲ! ಹೊಣೆಗಾರಿಕೆ ಹೊತ್ತು ಕೆಲಸ ಮಾಡೋದು ಬಹಳ ಕಠಿಣ ಅದ; ಬಣ ವೇದಾಂತ ಹೇಳೋದು ಸುಲಭ" ಮಾತು ಸ್ವಲ್ಪ ಬಿಸಿಯಾಗಿಯೇ ಬಂದಿತು ಮುಖ್ಯಾಧ್ಯಾಪಕರ ಬಾಯಿಂದ.

ಉಳಿದ ಶಿಕ್ಷಕರೆಲ್ಲರು ಮೌನವಾಗಿಯೇ ಇದ್ದರು. ಪರಯದ ಜಾಧವ ಮಾಸ್ತರರಿಗೂ, ಇಳಿವಯಸ್ಸಿನ ಮುಖ್ಯಾಧ್ಯಾಪಕರಿಗೂ ನಡೆದ ವಾಗ್ವಾದ ಕೇಳುತ್ತ ನಡೆದಿರುವರು. ಮುಖದಲ್ಲಿ ಮುಗುಳು ನಗೆ ಮೂಡುವುದು. ಕೆಲವರಂತೂ 'ಏನು ಧೈರ್ಯ ಇವನದು. ಹೆಡ್ ಮಾಸ್ತರರ ಗೂಡ ಹೀಗೇಕೆ ವಾದಿಸುವ!' ಎಂಬರ್ಥದ ದೃಷ್ಟಿಯಿಂದ ಜಾಧವ ಮಾಸ್ತರರನ್ನು ನೋಡುವರು. ಹಲವರು ಜಾಧವ ಮಾಸ್ತರರು 'ಹುಚ್ಚ! ಅಧಿಕಪ್ರಸಂಗಿ!' ಎಂದೂ ಭಾವಿಸಿದ್ದರು.

"ಹೊಣೆಗಾರಿಕೆ ಹೊಣೆಗಾರಿಕೆ ಅನ್ನಲಿಕ್ಕೆ ನಮ್ಮದೇನು ಮೂವತ್ತು ರೂಪಾಯಿನ ನೌಕರಿ, ಅದೂ ಮಾಡುವತನಕ. ಇದೇನು ಇನಾಮೂ ಅಲ್ಲ, ವತನೂ ಅಲ್ಲ, ಮಕ್ಕಳ ಮೊಮ್ಮಕ್ಕಳ ಕಾಲಕ್ಕೂ ಇದ್ದೀತು, ಕಳ ಕೊಂಡ ಹೇಗೆ ಮಾಡೋದು, ಅನ್ನುವಂತೇನೂ ಇಲ್ಲ." ಎಂದು ಸ್ವಲ್ಪ ತಡೆದು "ಒಳ್ಳೆ ಒಳ್ಳೇ ವತನದಾರ ಗೌಡ ಕುಲಕರ್ಣಿಯರೂ ಕೂಡ ಕೆಲಸಕ್ಕೆ ರಾಜೀನಾಮೆ ಕೊಡಲಿಕ್ಕೆ ಹತ್ತಿದಾರೆ.." ಎಂದು ತುಚ್ಛತೆ ಯಿಂದ ನುಡಿದರು, ಬಿಸಿನೆತ್ತರಿನ ತರುಣ ಶಿಕ್ಷಕರು.

"ರಾಜಕಾರಣ ನನಗೆ ಗೊತ್ತಿಲ್ಲ ಅನಬೇಡಿ ಮಾಸ್ತರರេ! ಎಲ್ಲಾ ಗೊತ್ತದ.... ಮುಲಕಿ ಅಧಿಕಾರಿಗಳೆಲ್ಲ ನೌಕರಿ ಬಿಡಬೇಕಂತ ನಾವು ಹೇಳುವದಿಲ್ಲ. ಅವರ ಉದರನಿರ್ವಾಹದ ಭಾರ ಕಾಂಗ್ರೆಸು ಹೊರ

ಕೂಡದು. ಯಾರಿಗೆ ಹೊಟ್ಟೆ ಬಟ್ಟೆಯ ವ್ಯವಸ್ಥೆ ಇದೆಯೋ ಅವರೇ ಬಿಡ ಬೇಕು' ಎಂದು ಕಾಂಗ್ರೆಸು ಠರಾವು ಮಾಡಿಕೊಂಡಿದೆ. ಎಲ್ಲಿದ್ದೀರಿ ನೀವಿನ್ನೂ?'' ಎಂದು ಹಿರಿಯ ಶಿಕ್ಷಕರು ಎಲ್ಲರ ಕಡೆಗೂ ಆಢ್ಯತೆಯಿಂದ ನೋಡಿ, ಗೆಲುವಿನ ನಗೆ ಬೀರಿದರು.

"ದೇಶಸೇವೆ ಅಂದರೆ ಅದೂ ಒಂದು ಹೊಟ್ಟೇ ತುಂಬಕೊಳ್ಳೊ ಉದ್ಯೋಗಂತ ತಿಳದೀದಿರೋ ಏನೊ?''

ಅತ್ತ ಮೆರವಣಿಗೆ ಮುಂದೆ ಸಾಗಿತು. ಅದೆಲ್ಲಿಗೆ? ದತ್ತಮಂದಿರದ ಕಡೆಗೆ. ಮಂದಿರದ ಮುಮ್ಮಗ್ಗಲು ವಿಸ್ತಾರವಾದ ಬಯಲು; ಅದರ ಮಧ್ಯದಲ್ಲಿ ರಾಷ್ಟ್ರಧ್ವಜ ಹಾರಾಡುತ್ತಲಿದೆ. ಅದರ ಸುತ್ತಲೂ ಅರ್ಧ ವರ್ತುಲಾಕಾರದಲ್ಲಿ, ಇನ್ನೂರಾ ಐವತ್ತು ಹುಡುಗರು, ನೂಲುವ ಸ್ಪರ್ಧೆ ಯಲ್ಲಿ ಭಾಗವಹಿಸಲು ಸಿದ್ಧರಾಗಿ ನಿಂತಿದ್ದಾರೆ. ಮೆರವಣಿಗೆಯೊಡನೆ ಬಂದ ಹತ್ತೆಂಟು ಹುಡುಗರೂ ಮುಂದುವರಿದು ಅದರಲ್ಲಿ ಹೆಸರು ಕೊಟ್ಟರು. ಅವರಲ್ಲಿ ಅಜಿತನೊಬ್ಬ.

ಅಜಿತ ಹೆಸರು ಕೊಡಲಿಕ್ಕೆ ಹೋದಾಗ ವ್ಯವಸ್ಥಾಪಕರು ಕೇಳಿದರು.

"ಮಧ್ಯಾಹ್ನದಿಂದಲೂ ಎಲ್ಲಿ ಕಾಣಿಸಲಿಲ್ಲ.. ಇಲ್ಲಿ?''

"ಸಾಲೆಗೆ ಹೋಗಿದ್ದೆ'' ಏನೋ ತಪ್ಪುಮಾಡಿದವನಂತೆ ನುಡಿದ ಅಜಿತ.

"ಸಾಲೆಗೆ ಹೋಗಿದ್ದಿ ನೀ? ಯಾವ ಕಡೆಗೆ ಸೂರ್ಯೋದಯ ವಾಯ್ತು?'' ಅಜಿತನ ಬಗ್ಗೆ ಅಷ್ಟು ಆತ್ಮವಿಶ್ವಾಸ ಅವರಿಗೆ.

"ಕಕ್ಕ ಸೀಪಾಯಿಯನ್ನು ಕೊಟ್ಟು ಕಳಿಸಿದರು!''

"ನೂಲಲು ತಕಲಿ ಇದೆಯೋ?''

"ಇದೆ; ಕಿಸೆಯಲ್ಲಿಯೇ ಇತ್ತು!''

'ಹತ್ತು ನಿಮಿಷ ಅವಕಾಶ, ಪ್ರತಿಯೊಬ್ಬರೂ ಬಿಂಗರಿಯ ಮೇಲೆ ನೂಲಬೇಕು. ಯಾರು ಚೆನ್ನಾಗಿ ನೂಲುವರೋ ಅವರಿಗೆ—ಒಂದನೆ ಎರಡನೆಯ ನಂಬರು ಬಂದವರಿಗೆ—ಮೆಚ್ಚು ಕೊಡಲಾಗುವದು.'

ಹೀಗೆ ಸಂಚಾಲಕರ ಸೂಚನೆಯಾಯಿತು. ಅಜಿತ ಓಡಿಹೋಗಿ ಅವರಲ್ಲಿ ಸೇರಿದ.

ಇದೇನು, ಇಲ್ಲಿ ಯೋಗಸಾಧನೆ? ಗಾಂಭೀರ್ಯವನ್ನು ಬೀರುತ್ತ

ಹೃದಯಕ್ಕೆ ಹುರುಪನ್ನು ಕೊಡುತ್ತ, ಜನತೆಯಲ್ಲಿ ನವಚೇತನ ಬೀರುತ್ತ ಗಗನಾಂಗಣದಲ್ಲಿ ಹಾರಾಡುತ್ತಿರುವದದೇನು? ತನ್ನ ಅಡಿಯಲ್ಲಿ ಧವಳ ವಸ್ತ್ರಧಾರಿಗಳಾದ—ತುದಿ ಮೂಗಿನ ಮೇಲೆ ದೃಷ್ಟಿಯನ್ನಿಟ್ಟು, ನಸು ತಲೆ ವಾಗಿ ನೂಲುತ್ತ ನಿಂತ—ಬಾಲಕರನ್ನು ತೋರಿಸಿ ಏನು ಹೇಳುತ್ತಿದೆ? ಇದೋ ಇಲ್ಲಿ ಬನ್ನಿ, ಭಾರತದ ಬಡತನ ಕಳೆಯಲು ಬಾಲಕರು ಹೇಗೆ ಸ್ಪರ್ಧಿಸುತ್ತಿದ್ದಾರೆ, ನೋಡಿ! ಎಂದು ಜನತೆಯನ್ನು ಕರೆಯುತ್ತಿದೆಯೋ? ಹೌದು; ಅಂತೇ ಸಾವಿರಾರು ಕಣ್ಣುಗಳು ಬಾಲವಟುಗಳ ಮೇಲೆ ನಿಶ್ಚಲ ವಾಗಿ ನಿಂತಿವೆ.

ಅದೋ ಅಲ್ಲಿ ನೋಡಿ! ಬಾಲರ ಕರಕಮಲದಿಂದ ಸುರಿಯುವ ಮಕರಂದ ಧಾರೆಯನ್ನು ನೋಡಿ! ಬಾಲಗೋಪಾಲರೆಲ್ಲ ತಮ್ಮ ಧ್ಯೇಯ ಕ್ಕಾಗಿ ಹೇಗೆ ನಿಶ್ಚಲರಾಗಿ ಸಾಧನೆ ನಡೆಯಿಸಿದ್ದಾರೆ. ನೋಡಿ!

ತಿರುಗುವ ಬಿಂಗರಿಗಳೋ! ಆಕಾಶದಿಂದ ಭುವಿಗಿಳಿಯುವ ನಂದನ ವನದ ಮಲ್ಲಿಗೆಗಳೋ! ದೇವತೆಗಳಿಗೂ ಎದೆತುಂಬುವ ನೋಟವಿದು ಇದೇನು ಮರಳಿ ಸತ್ಯಯುಗ ಆರಂಭವಾಯಿತೇ!

ಮುಗಿಯಿತು. ಹತ್ತು ನಿಮಿಷಗಳು ಮುಗಿದುವು. ಎಲ್ಲರ ಕೈ ಯೊಳಗಿನ ಬಿಂಗರಿಗಳೂ ನಿಂತುವು. ಪರೀಕ್ಷಕರು ಒಂದು ಬದಿಯಿಂದ ಬಂದರು. ಎಲ್ಲರ ನೂಲನ್ನು ಪರೀಕ್ಷಿಸತೊಡಗಿದರು.

ಸ್ವಲ್ಪ ಕಾಲ ಜನ ಶಾಂತವಾಗಿದ್ದಿತು. ಸಂಚಾಲಕರು ಪೀಠದ ಮೇಲೆ ಎದ್ದು ನಿಂತು ಹೇಳಿದರು :

' ಈ ಹೊತ್ತು ಇನ್ನೂರಾ ಅರವತ್ತು ಜನ ಬಾಲಕರು ಈ ನೂಲುವ ಸ್ಪರ್ಧೆಯಲ್ಲಿ ಭಾಗ ವಹಿಸಿದ್ದು ತುಂಬ ಸಂತೋಷಕರ. ಇಷ್ಟು ಸ್ವಲ್ಪಾ ವಧಿಯಲ್ಲಿ ಇಷ್ಟು ಪ್ರಗತಿಯಾದದ್ದನ್ನು ಕಂಡು, ನಮ್ಮೆಲ್ಲರಿಗೆ ಮಹ ದಾನಂದ! ಇಂದಿನ ಮೇಲಾಟದಲ್ಲಿ ಒಂದನೆಯ ನಂಬರಿನ ಮೆಚ್ಚು ರಮಾನಂದ ಮುತಾಲಿಕರಿಗೆ ಸಿಕ್ಕಿದೆ. ಅವರು ಬಂದು ಅದನ್ನು ಸ್ವೀಕರಿಸಬೇಕು. '

ಮುತಾಲಿಕನು ಓಡಿ ಹೋಗಿ, ಅಧ್ಯಕ್ಷರ ಹಸ್ತದಿಂದ ಬೆಳ್ಳಿಯ

ಪದಕವೊಂದನ್ನು ಧರಿಸಿ, ಗೆಲುವಿನ ಮುಖದಿಂದ ಬಂದನು. ಸಂಚಾಲಕರು ಮುಂದೆ ಹೇಳಹತ್ತಿದರು :

' ಎರಡನೆಯ ನಂಬರಿನ ಬಹುಮಾನ ಅಜಿತ ಗೌಡರಿಗೆ ದೊರೆತಿದೆ. ಅವರು ಬಂದು, ಪುಸ್ತಕವನ್ನು ಸ್ವೀಕರಿಸುವುದು. '

ಅಜಿತ ಹರುಷದಿಂದ ಹೋಗಿ, ಪುಸ್ತಕ ಸ್ವೀಕರಿಸಿದ. ಅದೇಕೋ ಅಲ್ಲಿಯೇ ಸ್ವಲ್ಪ ಹೊತ್ತು ನಿಂತ. ಸುತ್ತಲೂ ನೋಡಿದ. ಎದೆ ಅದುರಿತೇನೋ! ಏನೋ ಹೇಳಬೇಕೆಂದಿದ್ದನೆಂಬುದು ಅವನ ಮುಖಭಾವ ಸೂಚಿಸುತ್ತಲಿತ್ತು. ಆದರೂ ಹಿಂಜರಿಯುತಲಿದ್ದ. ಅದನ್ನರಿತು ಅಧ್ಯಕ್ಷರು, ' ಹೆದರಬೇಡ ಹೇಳು ' ಎಂದು ಅಜಿತನ ಬೆನ್ನಮೇಲೆ ಕೈತಿರುವಿ ಪ್ರೋತ್ಸಾಹನ ಕೊಟ್ಟರು. ಆಮೇಲೆ ಅಜಿತ ಮೆಲ್ಲನೆ ಹೀಗೆ ಹೇಳಿದ:

' ಅಧ್ಯಕ್ಷರೆ, ಹಾಗೂ ಹಿರಿಯರೆ,

ನೂಲುವ ಕಲೆ ಕಲಿತದ್ದಾಯಿತು ಅದಕ್ಕೆ ತಕ್ಕ ಉತ್ಸಾಹವೂ ಸಿಕ್ಕಿತು. ಏನೋ ನಾವು ಅಲ್ಪಸ್ವಲ್ಪ ಪ್ರಯತ್ನಿಸಿದ್ದನ್ನು ದೊಡ್ಡವರು ದೊಡ್ಡದನ್ನಾಗಿ ಮಾಡಿ, ಬಹುಮಾನವನ್ನು ಕೊಟ್ಟರು. ಈ ಬಹುಮಾನ ನನಗೊಬ್ಬನಿಗಲ್ಲ, ಇಡೀ ಬಾಲವರ್ಗಕ್ಕೆ ದೊರೆತಂತೆ. ಮೇಲಾಗಿ ಬಹುಮಾನ ಪಡೆಯುವದೇ ನಮ್ಮ ಗುರಿಯಲ್ಲ. ಇನ್ನೂ ಮುಂದೆ ಸಾಗಿ, ನೂತು, ಬಡವರ ಕಲ್ಯಾಣ ಮಾಡಬೇಕಾಗಿದೆ. ಭಾರತಾಂಬೆಯನು ಬಂಧನದಿಂದ ಬಿಡಿಸಬೇಕಾಗಿದೆ. '

ಜನರ ಚಪ್ಪಾಳೆಯ ಸಪ್ಪಳದೊಡನೆ ಅಜಿತ ಮಾತು ಹೇಳಿ ಮುಗಿಸಿದ. ಅವನು ಇಷ್ಟು ಜನರಲ್ಲಿ, ಇದೇ ಮೊದಲನೆಯ ಸಲ ಮಾತನಾಡಿದ್ದಾದರೂ ಒಳ್ಳೇ ಭಾವಪೂರ್ಣವಾಗಿದ್ದಿತಾ ಚಿಕ್ಕ ಭಾಷಣ.

ಅನಂತರ ನೂಲಲು ನಿಂತ ಎಲ್ಲ ಹುಡುಗರಿಗೂ ಮಿಠಾಯಿ ಹಂಚಲಾಯಿತು. ಆಮೇಲೆ ಅಧ್ಯಕ್ಷರು :

' ಈ ಹೊತ್ತು ನೂಲಲಿಕ್ಕೆ ಬಂದವರಿಗೆಲ್ಲರಿಗೂ ಬಹುಮಾನ ದೊರೆತಿದೆ. ಪದಕ ಪುಸ್ತಕವಲ್ಲದಿದ್ದರೂ ಸವಿಯಾದ ತಿನಿಸಾದರೂ ಎಲ್ಲರಿಗೂ ಸಿಕ್ಕಿದೆ. ಇದೇ ರೀತಿ ಇನ್ನು ಮುಂದೆಯೂ ನೀವೆಲ್ಲ ಪ್ರಯತ್ನ ಮಾಡಿದ್ದಾದರೆ ಇದಕ್ಕೂ ಮಿಗಿಲಾದ ಮೆಚ್ಚುಗೆಗಳು ನಿಮಗೂ ಸಿಕ್ಕುವವು.

ಇನ್ನು ಮುಂದೆ ಈ ಮೆರವಣಿಗೆ ಪೇಟಿಯೊಳಗಿನ ಹನುಮನ ದೇವಾಲಯಕ್ಕೆ ಹೋಗುವುದು. ಅಲ್ಲಿ ಚಿಕ್ಕಮಕ್ಕಳ ಕೆಲವು ಕಾರ್ಯಕ್ರಮಗಳಾದನಂತರ ಇಂದಿನ ಕಾರ್ಯಕ್ರಮವು ಕೊನೆಗೊಳ್ಳುವುದು. ಎಂದು ಹೇಳಿ ತಮ್ಮ ಮಾತು ಮುಗಿಸಿದರು.

* * * *

ಹನುಮಂತದೇವರ ಗುಡಿಯ ಎದುರಿಗೆ ಜನ ಕಿಕ್ಕಿರಿದು ನೆರೆದಿದೆ. ಈಗಾಗಲೇ ಕೂಡಿದ ಪರದೇಶಿ ಅರಿವೆಗಳಿಗೆ ಕೊಳ್ಳಿ ಕೊಟ್ಟಾಗಿದೆ. ಎದುರುಗಿನ ಗುಡಿಯ ಕಟ್ಟೆಯ ಮೇಲೆ ಸಾಲೆಯ ಬಾಲಕರ ಗಲಾಟೆ ಏನದು? ಅದೋ ಯಾವನೋ ಒಬ್ಬ ಹುಡಗ ಅರಿವೆಗಳ ಗಂಟೊಂದನ್ನು ಹೊತ್ತುಕೊಂಡು ಬರುತ್ತಿದ್ದಾನೆ. ಅವನು ಧರಿಸಿದ್ದೇನು? ಶುಭ್ರ ಖಾದಿ. ಕೈಯಲ್ಲಿ ರಾಷ್ಟ್ರಧ್ವಜ. ಎದುರಿಗಿನವನಾರು? ರೈತನೋ? ಅವರೇನು ಮಾತಾಡುವರು ಕೇಳಿ!

ಕೃಷ್ಣ :- ಅರಿವೆಗಳ ಗಂಟನ್ನು ಹೊತ್ತುಕೊಂಡು, ಎಲ್ಲಿನಡೆದಿರುವೆಯೋ ರಾಮಣ್ಣ?

ರಾಮು :- ಸುಡಲಿಕ್ಕೆ; ಇಂದು ಪರದೇಶೀ ಅರಿವೆಗಳ ಹೋಳಿಯಿದೆ, ಗೊತ್ತಿಲ್ಲವೋ ನಿನಗೆ..?

ಕೃಷ್ಣ:- ಪರದೇಶೀ ಅರಿವಿ? ಅರಿವೆಗೆ ಎಂದಾದರೂ ಅವ್ವಾ ಅಪ್ಪಾ ಇರತಾರೇನೋ ಹುಚ್ಚಾ! ಏನರ ಒಂದ ಹೇಳಲಿಕ್ಕ ಹತ್ತೀದಿ.

ರಾಮು:-ಹಾಗಲ್ಲಪ್ಪ ಕೃಷ್ಣಾ! (ಅವನ ಭುಜದ ಮೇಲೆ ಕೈಯಿಟ್ಟು) ಪರದೇಶೀ ಅರಿವೆ ಅಂದರೆ ಹಿಂದುಸ್ಥಾನದೊಳಗ ತಯಾರ ಆಗದ ಅರಿವೆ ತಿಳಿತೂ? ಅವುಗಳನ್ನ ಇಂದು ಸುಟ್ಟಬಿಡಬೇಕಾಗೇದ.

ಕೃಷ್ಣ:— ಆಂ! ಅರಿವೆ ಸುಡುತ್ತೀರಿ? ಅದೇಕಪ್ಪ! ಎಂಥಾ ಹುಚ್ಚ ಹುಚ್ಚ ಕೆಲಸ ಮಾಡತೀರೊ ನೀವು! ಹಿಂದೆಂದ ಆಗದ ಸಂಗತೀನೇ ಕೇಳಿದೆನಲ್ಲ ನಾ. ಬಡವರ ಬಗ್ಗರಿಗೆ ಕೊಟ್ಟರ ಅವರಾದರೂ ನಿಮ್ಮ ಹೆಸರ ಹೇಳಿ ತೊಟ್ಟಾರು ನಾಲ್ಕ ದಿನಾ!'

ರಾಮು:— ಇಂಥಾ ಅರಿವಿ ಕೊಂಡೇ ಜನರು ಬಡವರಾಗಿದ್ದಾರೆ! ಮತ್ತೇಕೆ ಅವರಿಗೆ ಈ ಅರಿವೆ ಕೊಡುವುದು.? ಇಂಥ ಅರಿವೆ ಸುಟ್ಟು

ಹಾಕಿಬಿಡೋದs ನೆಟ್ಟಗ

ಕೃಷ್ಣ:— (ಗೋಣು ಹಾಕಿ) ಒಳ್ಳೇ ಬುದ್ಧಿವಂತ ಕಾಣತಿ ಯಲ್ಲ! (ಅಣಕದ ಸ್ವರದಲ್ಲಿ) ವ್ಮೈಮೇಲಿನ ಅರಿವೆ ಸುಟ್ಟು ಬತ್ತಲೆ ತಿರುಗು ಅನ್ನು ವಿ.. ಹೌದs..?

ರಾಮು:— ಬತ್ತಲೆ ಏಕೆ ತಿರುಗಬೇಕು? ಮನೆಯಲ್ಲಿ ನೂಲಬೇಕು; ಜಾಡರ ಮನಿಗೆ ಕೊಟ್ಟು ಅರಿವೆ ಮಾಡಿಸಿಕೊಳ್ಳಬೇಕು.. ತಾವೂ ಕೆಲಸ ಮಾಡಿದಂತೆ ಆಯ್ತು, ದುಡ್ಡೂ ಉಳಿಯಿತು, ದೇಶದಲ್ಲಿ.

ಕೃಷ್ಣ:— ವಹವ್ವಾ! ಏನ ಹೇಳತಾನ ಈತ..! ನೂಲಬೇಕಂತೆ. ನೇಯಿಸಬೇಕಂತೆ, ಯಾರ ಹೇಳಿದಾರಪ್ಪ ಇದನ್ನು? ಇದು ನಿಮ್ಮಂಥ ಕೆಲಸ ಇಲ್ಲದವರಿಗೆ ಆಗೋ ಕೆಲಸ ಬಿಡಪ್ಪಾ ಇದು..!

ರಾಮು:— ಅದೇಕಪ್ಪ! ಒಕ್ಕಲಿಗರಿಗೇನ ಹನ್ನೆರಡೂ ತಿಂಗಳ ಕೆಲಸs ಇರತದೆ? ಬೇಸಿಗೆಯೊಳಗೆ, ಮಳೆಗಾಲದೊಳಗ ಸುಮ್ಮನೆ ಕೈಕಟ್ಟಿ ಕೊಂಡು ಮನಿಯೊಳಗ ಕೂಡತಾರಲ್ಲ. ಆಗ ನೂತರೆ ಬರೂದುಲ್ಲಾ? ಇದೊಂದು ಒಕ್ಕಲಿಗರಿಗೆ ಪೂರಕ ಉದ್ಯೋಗ ಆಗ್ತದೆ..

ಕೃಷ್ಣ:— ಸಾಕ ಬಿಡಪ್ಪ, ನಿನ್ನ ಪುರಾಣ! ಕೆಲಸ ಇಲ್ಲದಾಗ ನೂಲಬೇಕಂತೆ. ಕೊಡೀಅರಿವೆ ತೊಡಬೇಕಂತೆ.. ಯಾತಕ್ಕ ಬೇಕಪ್ಪ ನಮಗ ಈ ಒಣಾ ಕುಸ್ತಿ..? ಮೂರು ರೂಪಾಯಿ ಕೊಟ್ಟರೆ ಎಂಥಾ ತಿಳವ–ರೇಶಿಮಿ ಅಂಥಾವ–ಮ್ಯಾಂಚೆಸ್ಟರ ಧೋತರ ಬರುತ್ತವೆ.

ರಾಮು:— ಹೌದಪ್ಪ; (ಗೋಣು ಹಾಕಿ) ನಿನ್ನ ಮೂರ ರೂಪಾಯಿ ಎಲ್ಲಿ ಹೋಗುತ್ತವೆ, ನಿನಗೇನಾದರೂ ಗೊತ್ತ ಅದ?

ಕೃಷ್ಣ:— (ಸಹಜ ಸ್ವರದಲ್ಲಿ) ಗೊತ್ತಿರಲಿಕ್ಕೇನು? ನಾನೂ ಏನ ಬಾಯೊಳಗ ಬೊಟ್ಟ ಇಟ್ಟರ ಕಡಿಯುವೆ ಅಂತ ತಿಳಕೊಂಡಿದೀನೋ ಏನ ಮತ್ತ! ಅರಿವೆ ಅಂಗಡಿಕಾರ ತಗೋತಾನ, ಇಷ್ಟು ತಿಳಿಯೂದಿಲ್ಲೀ ನನಗ?

ರಾಮು:— ಹೋಗೋ ಹುಚ್ಚಾ! ಆ ನಿನ್ನ ಮೂರು ರೂಪಾಯಿ ಯೊಳಗೆ ಎಲ್ಲಿಯೋ ಒಂದೆರಡಾಣೆ ಅಂಗಡಿಯವನಿಗೆ ಸಿಕ್ಕಾವು.. ಉಳಿದ ರೊಕ್ಕ ಎಲ್ಲಾ ಪರದೇಶಕ್ಕೆ ಹೆಗೇಗುವವು ತಿಳೀತ..? ಆ

ಎರಡನೇ ದೇಶಕ್ಕೆ ಹೋಗುವ ದುಡ್ಡು ನಮ್ಮಲ್ಲಿ ಉಳಿಯಬೇಕಾದರೆ.. ನಾವು ಖಾದಿ ತೊಡಬೇಕು ಖಾದಿ..' (ತಾನು ತೊಟ್ಟ ಶರಟಿನ ತುದಿ ಹಿಡಿದು ತೋರಿಸುವನು)

ಕೃಷ್ಣ:— ಎಲ್ಲಿ ಯಾಕೆ ಹೋಗವಲ್ಲವು.! ನಮಗ ಕಡಿಮೆ ಬೆಲೆಗೆ ಸಿಗತದನೋ ಇಲ್ಲೊ..? ಮೇಲಾಗಿ ಕಷ್ಟವೊಂದ ಇಲ್ಲ..!

ರಾಮು:— (ಕೆರಳಿದ ಸ್ವರದಲ್ಲಿ) ಆಸ್ಟ್ರೇಲಿಯಾ ದೇಶದಿಂದ ಗೋದಿ ತಂದು ಕೊಡುವರು. ಕೊಂಡ ತಿನ್ನಿರಿ. ಹೊಲದೊಳಗ ಬಿತ್ತಿ ಕಷ್ಟ ಪಟ್ಟು ಯಾಕೆ ಬೆಳಸತೀರಿ?

ಕೃಷ್ಣ:— ಅದೇಕಪ್ಪ, ಇಂಥಾ ಮಾತ ಆಡ್ತೀ? ನಮ್ಮಲ್ಲೇ ಎಂತಹ ಒಳ್ಳೆಯ ಗೋದಿ ಬೆಳೀತದೆ....

ರಾಮು:— (ನಡುವೆಯೇ ಮಾತು ಸೇರಿಸಿ) ಬೆಳೆದರೆ ಏನಾಯ್ತು? ಎಷ್ಟ ದುಡಿಯಲಿಕ್ಕೆ ಬೇಕದಕ್ಕೆ. ಅದನ್ನ ಬಿಟ್ಟ ಸುಖದೊಳ ಕುಳಿತು, ಅಗ್ಗದ ಧಾರಣೆಯಿಂದ ಸಿಗುವ ಪರದೇಶದ ಗೋದಿ ಕೊಂಡು ತಿಂದ ರಾಯಿತು. ಬರುದಿಲ್ಲಾ?

ಕೃಷ್ಣ:— ಹೊಲದೊಳಗ ದುಡಿಯದಿದ್ದರೆ ರೊಕ್ಕ ಎಲ್ಲಿಂದ ಬಂದಾವು, ಗೋದಿ ಕೊಳ್ಳಲಿಕ್ಕೆ? ಅಗ್ಗದಿಂದ ಕೊಡತಾರು ಅಂದರ ಪುಕ್ಕಟ ಕೊಡತಾರು? ಎಷ್ಟ ಆದರೆ ಕೊಂಡ ಧಾನ್ಯ ಮನೆಯ ಧಾನ್ಯ ದಂತೆ ಬಂದೀತೋ..?

ರಾಮು:— (ಬೇಟೆ ಬಲೆಯಲ್ಲಿ ಸಿಕ್ಕ ಗೆಲುವಿನ ದನಿಯಿಂದ) ಅದೇ ರೀತಿ ನೋಡಪ್ಪ, ಈ ಅರಿವೇದೂ. ಅವರು ಎಷ್ಟು ಸೋಯಿ ಕೊಟ್ಟರೇ ನಾಯ್ತು? ಮನೆಯ ಅರಿವೆಯಂತೆ ಒಗ್ತದೇನು..? ಅಲ್ಲದೆ ಕೊಳ್ಳ ಲಿಕ್ಕೆ ರೊಕ್ಕ ಬೇರೆ ತರಬೇಕಲ್ಲ.

ಕೃಷ್ಣ:— ಎಲಾ ನಿನ್ನ ಬೆರಕಿ! ಯಾನ ಜಾಣ ಇದೀನೋ ನೀ! ರಾಮೂ: ಹೌದ ನೋಡಪ್ಪ; ನೀ ಹೇಳೋದು ಸತ್ಯ. ನಾಳಿನಿಂದ ನಾ ಖಾದಿ ಅರಿವೆ ತೊಡತೇನು; ಆಯ್ತಿಲ್ಲೋ?

ರಾಮು:— ನಾಳಿ ಅನ್ನುವವರ ಮನೆ ಹಾಳೊ....

ಕೃಷ್ಣ:— ಹೀಗೋ? ಇಗೋ ಈ ನನ್ನ ಮೈಮೇಲಿನ ಅರಿವೆಯನ್ನೇ ಇಂದ ಮೊದಲ ಸುಟ್ಟುಹಾಕಿ ಬಿಡು! ತಗೋ (ಎಂದು ಪಟಕೆ ಶರಟುಗಳನ್ನು ತೆಗೆದು ರಾಮನ ಕೈಯಲ್ಲಿ ಕೊಡುವನು.)

* * * *

ವಿದ್ಯಾರ್ಥಿಗಳ ಈ ಚಿಕ್ಕ ಸಂಭಾಷಣೆಯನ್ನು ಕೇಳಿ, ಹಲವರು ತಮ್ಮ ತಮ್ಮ ಅರಿವೆಗಳನ್ನು ಉರಿಯುತ್ತಿರುವ ಹೋಳಿಯಲ್ಲಿ ಹಾಕಿದರು! ಜನರೊಳಗೆ ಕುಳಿತ ಒಬ್ಬ ಸಿರಿವಂತ ದೂರದಲ್ಲಿ ಯಾರಾದರೂ ಗೌಡ ಕುಲಕರ್ಣಿಯವರು ಇರಬಹುದೇನೋ.. ಎಂದು ಶಂಕಿಸಿ,.. ಸುತ್ತಲೂ ಟಕಮಕ ನೋಡುತ್ತ ಹತ್ತರ ಕುಳಿತವನ ಕೈಯಲ್ಲಿ ಜರದ ರುಮಾಲು ಕೊಟ್ಟು ಕಳಿಸಿದ, ಹೋಳಿಯಲ್ಲಿ ಹಾಕಲು. ಹೋಳಿ ಮುಂದಮುಂದವಾಗಿ ಉರಿಯುತ್ತಿದೆ, ಅರಿವೆಗಳ ಹೋಳಿ. ಹೊಗೆ ರಾಶಿರಾಶಿಯಾಗಿ ಮೇಲೇಳುತ್ತಲಿದೆ! ಸಾವಿರಾರು ರೂಪಾಯಿ ಬೆಲೆಬಾಳುವ ಅರಿವೆಗಳು ನೋಡುನೋಡುವಷ್ಟರಲ್ಲಿ ಸುಟ್ಟು ಬೂದಿಯಾಗಿ ಹೋದುವು! ಮುಳುಗುವ ಸೂರ್ಯನು, ಇವನೊಬ್ಬ ಸೂರ್ಯನು ತನಗೆ ಪ್ರತಿಸ್ಪರ್ಧಿಯಾಗಿ ಮೂಡಿದನೆಂದು ಭಾವಿಸಿ ಕೆರಳಿದನೆಂಬಂತೆ ಕೆಂಪಾಗಿದ್ದನು. ಗುಡಿಯೊಳಗಿನ ಹನುಮನ ಮುಖವೇಕೋ ಕಪ್ಪಾಗಿದೆ, ಇದು ತನ್ನ ಲಂಕಾದಹನವನ್ನೂ ಮೀರಿಸಿತೆಂದು, ತಿಳಕೊಂಡನೋ ಏನೋ ಆತ!

“ಗೌಡರ ಹುಡುಗ ನೆಟ್ಟಗ ತಿಳಿಸಿ ಹೇಳಿದ ಅಣ್ಣಾ? ಆ ಕುಂಬಾರ ಹುಡುಗ ತಲೆ ಮ್ಯಾಲಿನ ಪಟಕೆ ತಗದ ಕೊಡುವ ಹಾಗೆ... ಅವನ ಮನಸ್ಸ ತಿರಗಿಸಿದ ನೋಡವ್ವ.., ಆ ಅಜಿತ!”

ನೋಡಲಿಕ್ಕೆ ಬಂದ ಹಳ್ಳಿಯ ಹೆಂಗಸರಲ್ಲಿ ಒಬ್ಬಳು ಹೇಳುತ್ತಿದ್ದಳು, ಉಳಿದ ಹೆಂಗಸರಿಗೆ, ಅದು ನಟಿಸಿದ ಚಿಕ್ಕ ಸಂಭಾಷಣೆಯೆಂದರಿಯದೆ

ಅಜಿತ ಮಾತ್ರ ಮನೆಗೆ ಹೋದನಂತರ ಕಕ್ಕ ಏನನ್ನುವನೋ ಎಂಬ ಚಿಂತೆಯಿಂದ ಜಡವಾದ ಹೃದಯದಿಂದ ಮನೆಯ ಕಡೆಗೆ ಸಾಗಿದ್ದ. ನಡುನಡುವೆ ಮನದಾಳದಲ್ಲಿಂದ—ಇಂದು ತಾನು ಸಂಭಾಷಣೆಯಲ್ಲಿ

ಷನ್ನಾಗಿ ನಟನೆ ಮಾಡಿದ್ದಕ್ಕೆ, ಹಿರಿಯರು ಮೆಚ್ಚಿ ನುಡಿದ ನುಡಿಯ ನೆನೆ ಹಿನನಲಿಕೆಯಿಂದ ಹರುಷದ ಚಿಲುಮೆ ಚಿಮ್ಮಿ ಚಿಂತೆಯ ದಾಹ ಆರಿಸುತ್ತ ನಡೆದಿದ್ದನು.

೩

ಊಟ ಮಾಡುತ್ತ ಕುಳಿತ ಅವನಿಗೆ ಹೊರಗೆ ಏನು ನಡೆದಿದೆಯೋ ನೋಡಬೇಕೆಂಬ ಕುತೂಹಲ. ಊಟ ಅರ್ಧಕ್ಕೆಯೇ ಬಿಟ್ಟು ಎದ್ದ. 'ಯಾಕೋ ಅಜಿತಾ, ನೆಟ್ಟಗ ಉಣಲಿಲ್ಲ ?' ತಾಯಿ ಕೇಳುತ್ತ ಕುಳಿತಿದ್ದಳು, ಅಲ್ಲೇ. ಏನೂ ಹೇಳದೆ ಹೊರಗೆ ಬಂದ. ಮೆರವಣಿಗೆಯ ಉತ್ಸಾಹ ಇವನ ಹೃದಯದ ತಂತಿಯನ್ನು ಮೀಟುತ್ತಲಿದೆ. ಸುಂಟರ ಗಾಳಿಗೆ ಸಿಲುಕಿದ ರವದೆಯಂತೆ ಹಾರಿ ಮೆರವಣಿಗೆಯಲ್ಲಿ ಸೇರಲು ಓಡು ತ್ತಿದ್ದಾನೆ. ಕಕ್ಕ ಮನೆಯ ಮೆಟ್ಟುಗಲ್ಲಿನ ಮೇಲೆಯೇ ನಿಂತು, ಬಾಯಿ ಮಾಡುತ್ತಿದ್ದಾನೆ; ಬುದ್ಧಿ ಹೇಳುತ್ತಿದ್ದಾನೆ.

ಆದರೂ ಅವನು ಕೇಳಲಿಲ್ಲ; ಹುರುಪಿನಿಂದ ಮುಂದೆ ನಡೆದ. ಜನರ ಗುಂಪು ಹಿಡಿತಕ್ಕೆ ಮೀರಿ ಬೆಳೆದು ಬಿಟ್ಟಿದೆ. ಯಾರೋ ಹೃದಯ ಸ್ಪರ್ಶಿಯಾದ ಹಾಡನ್ನು ಹೇಳುತ್ತಿದ್ದಾರೆ. ಉಳಿದವರೆಲ್ಲ ಅದನ್ನು ಅನು ಸರಿಸಿ ಹಾಡುತ್ತಿದ್ದಾರೆ. ಬೀದಿಯ ಮಗ್ಗುಲಿಗೆ ಒಂದು ಶಾಲೆ. ಸಾಲೆಯ ಹುಡುಗರು ಹೊರಗೆ ಬಂದರು; ಮೆರವಣಿಗೆಯಲ್ಲಿ ಸೇರಿದರು. ಅಲ್ಲಿಂದ ಇನ್ನೊಂದು ಸಾಲೆಗೆ ದಾಳಿ. ಕಿಡಕಿಯೊಳಗಿಂದ ಕೆಲವು ಮುಖಗಳು ಕಾಣುತ್ತಿವೆ. ಹೊರಗಿನ ಹುಡುಗರ ತಂಡ ಅವರಿಗೆ ಕೈಸನ್ನೆ ಮಾಡಿತು. ಒಳಗಿದ್ದವರಿಗೆ ಅದರ ಅರ್ಥವಾಯಿತು. ಹೀಗೆಯೇ ಉತ್ಸಾಹದ ಪ್ರವಾಹ ಹೆಚ್ಚಿ, ಮಹಾಪೂರ ಬಂದು, ಜಯಘೋಷ ಹರ್ಷಧ್ವನಿಗಳಿಂದ ಗಗನ ವನ್ನೇ ಸೀಳುತ್ತಲಿದೆ ಮೆರವಣಿಗೆ !

ಮೆರವಣಿಗೆಯ ಸ್ವರೂಪ ಪೂರ್ಣವಾಗಿ ತುಂಬಿ ಬಂತು. ಅಲ್ಲಲ್ಲಿ ಪೋಲೀಸು ಚೌಕಿಗಳಿಂದ ಪೋಲೀಸರು ಮುಂದಾಗಿ ಓಡುತ್ತಿದ್ದಾರೆ. ಕೋವಿ ಬಡಿಗೆಗಳ ಬಂಡಿಗಳು ಬೀದಿಗಳಲ್ಲೆಲ್ಲ ಸಜ್ಜಾಗಿ ನಿಂತಿವೆ. ಆದರೂ

ಮೆರವಣಿಗೆ ನಗರದ ಮುಖ್ಯ ಬೀದಿಗಳಲ್ಲೆಲ್ಲ ಸುತ್ತಿ ಮದ್ಯದಂಗಡಿಗೆ ಬಂದಿತು. ನಾಲ್ಕಾರು ಜನ ಮುಖಂಡರು ಮದ್ಯಬಂದಿಯ ವಿಷಯ ವಿವರಿಸಿದರು. ಅಂಗಡಿಯವನಿಗೆ ತಿಳಿಸಿ ಹೇಳಿದರು. ಪೋಲೀಸರು ವಿರೋಧಿಸಲು ನಡುವೆ ಬಂದರು. ಜನತೆಯ ಹೃದಯದ ಉತ್ಸಾಹ ಉಕ್ಕಿತು. ಸ್ಫೂರ್ತಿ ಸಂಚರಿಸಿತು. ಕ್ಷಣದಲ್ಲಿ ಗಲಭೆ..

'ದನ್..ದನ್..ದನ್..ದನ್..' ಪೋಲೀಸರ ಕೈಯೊಳಗಿನ ಕೋವಿಗಳು ಸದ್ದನ್ನೆಸಗಿದುವು!

ಅಜಿತ ಹೆದರಿ ಕಣ್ದೆರೆದ. ಮುಂಜಾನೆಯ ಮೃದು ಬಿಸಿಲು ಕಿಡಕಿಯೊಳಗಿಂದ ಹಾಯ್ದು ಒಂದು ಮುಖದ ಮೇಲೆ ಬಿದ್ದಿದ್ದಿತು. ಕನಸನ್ನೇ ನೆನೆದು ನೆನೆದು ಹೃದಯ ಇನ್ನೂ ಹಾರುತ್ತಲಿದೆ. ಸ್ವಲ್ಪ ಹೊತ್ತು ಸ್ತಬ್ಧನಾದ. ವಿಚಾರಿಸಿದ. ಕನಸನ್ನು ಮರಳಿ ಮರಳಿ ನೆನೆಸಿದ. ಸೀಳಿದ ಕಾಜಿನ ಗುಂಡನ್ನು ಹೊರಳಿಸಿ ಹೊರಳಿಸಿ ನಿರೀಕ್ಷಿಸುವವನಂತೆ ಅವನ ಮನಸ್ಥಿತಿಯಾಗಿದ್ದಿತು. ಕೊನೆಗೆ ಮುಂಚಿನ ದಿನ ಗುರುಗಳು ಧಾರವಾಡದಲ್ಲಿ ಮದ್ಯಬಂದಿಯ ಕಾಲಕ್ಕೆ ಆದ ಗೋಳೀಬಾರಿನ ಸಂಗತಿಯನ್ನು ವರ್ಣಿಸಿ ಹೇಳಿದ ಸಂಗತಿ ಸ್ಮೃತಿಪಾತ್ರಕ್ಕೆ ಬಂತು. ಮುಖ ತಾನಾಗಿಯೇ ಅರಳಿತು. ಅದರೊಡನೆಯೇ ನಿನ್ನೆ ನಡುರಾತ್ರಿಯ ವರೆಗೆ ಮನೆಯವರೆಲ್ಲ ಬೈದು, ನಿಂದಿಸಿ, ಬುದ್ಧಿಗಲಿಸಿದ ಸಂಗತಿ ನೆನಪಾಗಿ ಹೃದಯದ ಹಿಗ್ಗಳಿಯಿತು. ಜಡವಾದ ಹೃದಯದಿಂದ ಹಾಗೇ ಹಾಸಿಗೆಯಲ್ಲಿ ಹೊರಳುತ್ತಿದ್ದಾನೆ.

ತಾಯಿಯು ಅಲ್ಲಿಂದಲೇ ಎರಡು ಸಲ ಹಾಯ್ದು ಹೋದಳು. ತನ್ನ ಕಡೆಗೆ ಹೊರಳಿ ನೋಡಿದಳು. ಎಚ್ಚತ್ತಿರುವೆನೆಂಬುದನ್ನು ಅರಿತೂ ಕೂಡ ಮಾತಾಡಿಸಲಿಲ್ಲ. 'ಮನೆಯವರೆಲ್ಲರಿಂದ ಬೈಸಿಕೊಂಡ ನನ್ನೊಡನೆ ಅವಳಾದರೂ ಸಲಿಗೆಯಿಂದ ಹೇಗೆ ಮಾತಾಡಿಸಬೇಕು? ಕಕ್ಕ 'ನಿನ್ನದೇ ಅವನಿಗೆ ಸಲಿಗೆಯಿದೆ' ಎಂದು ಅವಳಿಗೆ ಅನ್ನಲಿಕ್ಕಿಲ್ಲವೆ?—' ಎಂದು ಮೊದಲಾದ ವಿಚಾರಗಳಿಂದ ಉರುಳಾಡುತ್ತಿದ್ದಾನೆ, ಅದೆಷ್ಟೋ ಕಾಲ. ಗಡಿಯಾರದ ಗಂಟೆಯಾಯಿತು. ಹೊರಳಿ ನೋಡ್ತಾನೆ. ಹತ್ತು ಅರ್ಧ ಹೊಡೆದಿದ್ದಿತು. ಸಾಲೆಗೆ ಹೋಗಲು ಹೊತ್ತಾಗುವದೆಂದು ಚಟ್ಟನೆ ಎದ್ದು ಹೊರಗೆ ಬಂದ. ಮುಖ ತೊಳೆದುಕೊಂಡ.

ತಂಬಿಗೆ ತಕ್ಕೊಂಡು ಹೊರಗೆ ನಡೆದ. ಮನೆಯವರ್‍ಯಾರೂ ಅವನೊಡನೆ ಆಗ ಮಾತಾಡಲಿಲ್ಲ. ಎಲ್ಲರೂ ಬಿಗುಮಾನದಿಂದಲೇ ಇದ್ದರು. ಯಾಕೋ ಅಜಿತನಿಗೆ ಮನೆಯೆಲ್ಲ ಭಣ ಭಣವೆನಿಸಿತು. ಮನಸ್ಸು ವನ ವನ ಆಗಿತ್ತೆಂದೋ! ಶೌಚಕ್ಕೆ ಹೋಗಿ ಬಂದ. ಒಳುವಾಗ ಹೊರಗಿನ ಚೌಕದ ಅಟ್ಟದ ಮೇಲೆ ಕುಳಿತು, ಯಾರೋ ಗುಜುಗುಜು ಮಾತಾಡುತ್ತಿರುವಂತೆ ಕೇಳಿಸಿತು.

"ರಾತ್ರಿ, ಯಾರಿಗೂ ಗೊತ್ತಾಗದಂತೆ ಹಚ್ಚಿ ಹೋಗಿದ್ದರೆ.. ಇನ್ನೂ ಯಾರೂ ನೋಡಿಲ್ಲ ಅನ್ನುವಷ್ಟರಲ್ಲಿ ತೆಗೆದು ಇಡಲಿಕ್ಕಾದರೂ ಬರುತಿತ್ತು.... ?

"ತೆಗೆದು ಹೇಗೆ ಇಡಲಿಕ್ಕೆ ಬಂದೀತು..? ನಮ್ಮ ಕೋಳಿ ಮುಚ್ಚಿಟ್ಟರೆ ಬೆಳಗ ಆಗೋದೇನು ನಿಲ್ಲುತದೆ? ಸರಳ ರಿಪೋರ್ಟ ಮಾಡಿ ಬಿಡುವುದೇ.. ರಾಜಮಾರ್ಗ.."

"ಅದೆಲ್ಲ ಆಯ್ತು; ನಾವು ಯಾರ ಹೆಸರು ಹೇಳಬೇಕು, ಯಾರ ಹೆಸರ ಬಿಡಬೇಕು..? ಎಲ್ಲಾನೂ ಕಠಿಣ..ಽ ನಾವು ಪರವೂರವರು.. ಆಗ್ತೆವೆ.. ನಾಳೆ ನೀವೇ.."

ಅಜಿತನಿಗೆ ಇನ್ನೊಬ್ಬರ ದನಿಯು ಗುರುತು ಹತ್ತಿದಂತಾಯಿತು. ತಮ್ಮ ಶಾಲೆಯ ಹೆಡ್ ಮಾಸ್ತರರು.. ಏನೋ ಹೇಳುತ್ತಿದ್ದಾರೆ.. ಗೌಡರಿಗೆ. ಎಂದ ಮೇಲೆ ಎರಡು ನಿಮಿಷ ನಿಂತು ಕೇಳೋಣ ಎಂದುಕೊಂಡ.

ಮಾಸ್ತರರ ಮಾತನ್ನು ನಡುವೆಯೇ ತಡೆದು, ಆದಗೌಡ ಹೇಳಿದ:

"ನಮ್ಮದೇನ ಇಲ್ಲ. ಸ್ಪಷ್ಟ ಎಲ್ಲರ ಹೆಸರು ಹೇಳಿಬಿಡಿರಿ..! ಹೋಗಲಿ ಒಮ್ಮೇ ಹಾಳಾಗಿ..! ನಾನೂ ರಿಪೋರ್ಟ ಕೊಡತೇನ ಬೇಕಾದರೆ.." ಕಾವಿಸಿದ ಸ್ವರದಲ್ಲಿತ್ತು, ಈ ಮಾತು.

"ಹಾಗೇ ಮಾಡಿರಿ ನೀವು; ಅಲ್ಲೇ ಚಾವಡಿಯೊಳಗೆ ನಿಮ್ಮ ಹಳಬರೂ ಇದ್ದರು. ಅವರೂ ನೋಡಿದ್ದಾರೆ, ಎಷ್ಟು ಜನ..! ಏನು ಗೊಂದಲ! ಎಂಥ ಧಿಟ್ಟತನ! ಅಯ್ಯೋ..ಸ್ಕೂಲು, ಸರಕಾರೀ ಗ್ರ್ಯಾಂಟಿಗೆ..ನೀರು ಬಿದ್ದೀತು.. ಎಂದು ಹೇಳಿದರೂ ಕೇಳಬಾರದೇ..?"

' ತಲೆಯಲ್ಲಿ ಹುಳ ಬಿದ್ದಂತಾಗಿದೆ, ಅವರಿಗೆ ಏನ ಕೇಳತಾರೆ ನಿಮ್ಮ ಮಾತನ್ನವರು? ಹೀಗೆ ತಲೆತುಂಬ ಜುಟ್ಟ ಕಾಯ್ದು, ಎಲ್ಲಿ ಬೇಕಾದಲ್ಲಿ ಧ್ವಜ ಹಚ್ಚುತ ತಿರಗಿದರ ರಾಜ್ಯ ಸಿಗತದ ಇವರಿಗೆ? ಬ್ರಿಟಿಷ ರಾಜ್ಯ ಎಂಥಾದು, ವ್ಯವಸ್ಥೆಯೇನು, ಬಿಗುಹೇನು? ಹುಕುಂ ಇಲ್ಲದ ಒಂದ ಕಡ್ಡಿ ಕೂಡ ಕದಲುವಂತಿಲ್ಲ. ಕಳವಿನ ಅಂಜಿಕೆಯೋ ಕೊಲೆಯ ಹೆದರಿಕೆಯೋ ಎಳ್ಳಷ್ಟೂ ಇಲ್ಲ. ರಾಜ್ಯ ಆಳಬೇಕು ಅವರೆ, ಹಿಂದುಸ್ತಾನದೊಳಗ ಎಲ್ಲಿ ಬೇಕಾದಲ್ಲಿ ಕೋಲಿನ ತುದಿಗೆ ಬಂಗಾರ ಕಟ್ಟಿಕೊಂಡ ತಿರಗಾಡಿರಿ, ಸುಲಿದುಕೊಂಡಾರೆಂಬೂ ಹೆದರಿಕೀ ಇಲ್ಲ, ಮೊಲೆಗೂಸಿಗೂ.."

" ಬ್ರಿಟಿಷರು, ಭಾರತದಲ್ಲಿ ಬಂಗಾರ ಇಟ್ಟಿದ್ದರೆ ತಕ್ಕೊಂಡ ತಿರಗೀರಿ? ತಿರಗಲಿಕ್ಕೆ ನಿಮ್ಮ ಹತ್ತಿರ ಬಂಗಾರ ಇರುಗೊಟ್ಟಿದಾರೆಯೇ ಅವರು?" ಕೆಳಗೆ ನಿಂತಲ್ಲಿಯೇ ಅಜಿತ ಮನದಲ್ಲಿ ಅಂದುಕೊಂಡ, ತಿರುಗಿ.

ಇನ್ನೂ ಗೌಡರ ಪ್ರವಚನ ಎಷ್ಟು ಉದ್ದ ಹರಿಯುತ್ತಿದ್ದಿತೋ ಏನೋ. ಆದರೆ ಹೆಡ್‌ಮಾಸ್ತರರು ಅದಕ್ಕೆ ತಡೆಹಾಕಿ, ಕೇಳಿದರು. " ಚಾವಡಿಯ ಕಡೆಗೆ ನೀವೂ ಬರುತ್ತೀರಾ?"

" ಈಗ ಊಟ ತೀರಿಸಿ ಬರತೇನಲ್ಲ!" ಎಂದು ಎದ್ದರು.

ಅಜಿತ ಒಳಗೆ ಹೋದ. ಅವನಿಗೆ ಈ ಮಾತಿಗೆ ಕಾರಣವಾದ ಸಂಗತಿಯು ಏನಿರಬೇಕೆಂಬುದು ಸ್ಪಷ್ಟವಾಗಿ ಗೊತ್ತಾಗಲಿಲ್ಲ. ಏನೋ ಧೇನಿಸುತ್ತಲೇ ಸ್ನಾನ ಮಾಡಿ ಊಟಕ್ಕೆ ಎದ್ದ. ಸಾಲೆಗೆ ಹೋದಾಗಲೇ ಎಲ್ಲ ಸಂಗತಿ ಗೊತ್ತಾಗುವದೆಂದು ಆತುರದಿಂದ ಉಣ್ಣುತ್ತಿದ್ದ.

ಆದಗೌಡನೂ ಮಣೆಯ ಮೇಲೆ ಕೂಡುತ್ತ..'ನೋಡಿರಿ? ನಿಮ್ಮ ಸಾಲೆಯ ಮೇಲೆ ಧ್ವಜ ಹಚ್ಚಿದ್ದಾರೆ! ಎಲ್ಲರು ತುರಂಗದ ಮನೆ ಒಮ್ಮೆ ಕಾಣತೀರಿ ಆಯ್ತು! ಹಾಯ್‌ಸ್ಕೂಲ ಅಂದರೆ ಆದೇನು ಗುಡಿ ಗುಂಡಾರ ಅಂತ ತಿಳದಿದ್ದೀರಿ? ಸರಕಾರಿ ಗ್ರ್ಯಾಂಟ ಸಿಗತದೆ ಅದಕ್ಕೆ; ತಿಳೀತು? ಆದೇನ ಹುಡುಗಾಟಿಕೆ? ಮಾಸ್ತರರು ಯಾರ ಯಾರ ಹೆಸರ ಹೇಳುವರೋ ಯಾರಿಗೆ ಗೊತ್ತು ಇನ್ನ?'.. ಮುಖದ ಮೇಲೆ ಚಿಂತೆ ಸಿಟ್ಟು ಬೆರಸಿದ ಭಾವ ತೋರಿಸುತ್ತ ನುಡಿದರು.

"ನಾ ಅಂತೂ ಮನಿಯೊಳಗೇ ಇದ್ದೇನೆ." ರಾವಸಾಹೇಬ ತಂದೆಯ ಮುಖದ ಕಡೆಗೆ ನೋಡುತ್ತ ಹೇಳಿದ, ತಾನು ಉಳಿದುಕೊಂಡೆನೆಂಬ ಭಾವವನ್ನು ಬೀರುತ್ತ.

"ಇಂದ ಮನಿಯೊಳಗೆ ಇದ್ದರೆ ಏನಾಯ್ತು? ಮೊದಲ ಅವರ ಮಾತನ್ನ ಕೇಳದೆ, ಬೇಕಾದಂತೆ ನಡದವರ ಹೆಸರ ಹೇಳದೆ ಬಿಡುವರೆ?" ಅಜಿತನನ್ನು ಹೆದರಿಸುವ ಉದ್ದೇಶದಿಂದ ಮಾತನಾಡಿದ, ಆದಗೌಡ.

"ಹೇಳಿದರೆ ಏನಾಗ್ತದೆ," ಅಜಿತ ಉಣ್ಣುತ್ತಲೇ ಪ್ರಶ್ನೆ ಮಾಡಿದ. ಸ್ವರದಲ್ಲಿ ನಸು ಹೆದರಿಕೆಯೂ ಒಡಮೂಡುತಲಿತ್ತು.

"ಪೊಲೀಸರು ಬಂದು ಹಿಡಿದು ಒಯ್ದ ಮೇಲೆ ತಿಳೀತದೆ, ನಿಮಗೆ. ಈಗಽ ಏನ ತಿಳಿಯೂದಿಲ್ಲ. ಶಾಂತಸ್ವಭಾವದ ಮಾಸ್ತರರಂತ ನಿಮಗೆಲ್ಲ ಚಲ್ಲಾಟ ಆಗೇದ. ಹೀಗೆ ಮಾಡಿ ಹುಡಗರಿಗೆ ಹುರಿದುಂಬಿಸಿ— ಆ ಜಾಧವ ಮಾಸ್ತರ ಅಷ್ಟ ಕೆಲಸ ಕಳಕೊಂಡ ಬಿಕ್ಕಿಪಾಟಿ ಹಿಡಿದ ಮನೆಗೆ ಹೋಗ್ತಾನ ಆಯ್ತು!" ಎನ್ನುತ್ತ ಊಟಮಾಡತೊಡಗಿದರು.

ಸಂಜೆ, ಪೊಲೀಸ ಠಾಣೆಯ ಕಡೆಯ ಸುದ್ದಿಗಾಗಿ ಹಾತೊರೆದು ಗೌಡ ಚಾವಡಿಯ ಕಟ್ಟೆಯ ಮೇಲೆ ನಿಂತಿದ್ದಾನೆ ಮೂರೇ ಮೈಲಿನ ಮೇಲೆ ಪೊಲೀಸ ಠಾಣೆ. ಇಷ್ಟರಲ್ಲಿ ಓಲೇಕಾರನು ರಿಪೋರ್ಟ ತಲುಪಿಸಿ ಬರಬಹುದಾಗಿತ್ತು. ಇನ್ನೂ ಯಾಕೆ ಬರಲಿಲ್ಲವೊ? ಸಂಗಡ ಸಬ್‌ಇನಸ್ಪೆಕ್ಟರರೂ ಬರುವರೇನೋ? ಬಂದರೂ ಒಳಿತೇ ಆಯಿತು. ಪ್ರತ್ಯಕ್ಷ ನೋಡಿ, ಧ್ವಜದ ಪಂಚನಾಮೆಯನ್ನಾದರೂ ಮಾಡಿಕೊಳ್ಳುತ್ತಾರೆ. ನಾಳೆ ನಮ್ಮ ಹೆಸರಿನಿಂದ ಊರ ಜನರು, ಹಾಗೆ ಬರೆದರು ಹೀಗೆ ಬರೆದರು, ಎಂದು ಒದರಾಡುವದು ಬೇಡ; ಊರ ಕೆಲಸ, ಯಾರಿಗೆ ಯಾರು ಕೆಟ್ಟಾಗಬೇಕು? ಎಂದು ಮೊದಲಾಗಿ ವಿಚಾರಿಸುತ್ತಿದ್ದ.

ಭರ್‍ರೆಂದು ಪಡುವಣ ಗಾಳಿ ಬೀಸಿತು ಚಾವಡಿಯ ಮುಂದಿನ ಬೇವಿನ ಮರವೆಲ್ಲ ಹೊಯ್ದಾಡಿತು. ಕೆಲ ಹಣ್ಣೆಲೆಗಳುದುರಿದವು. ಇದೀಗ ಬಂದು ಕೂಡಬೇಕೆಂದಿದ್ದ ಹಕ್ಕಿಗಳು ಗಾಬರಿಗೊಂಡು ಹಾರಿದುವು. ಹೊಯ್ದಾಡಿದುವು, ಸುತ್ತುವರಿದುವು. ಗೌಡ ಶೂನ್ಯದೃಷ್ಟಿಯಿಂದ ಅತ್ತ ನೋಡುತ್ತ ನಿಂತಿದ್ದ. ಇತ್ತ ಸೂರ್ಯ ಇಳಿಯುತ್ತಿದ್ದಾನೆ ಪಶ್ಚಿಮ

ದಿಗಂತದಲ್ಲಿ.

ಆಗ ಓಲೇಕಾರನೊಬ್ಬ ಧಾವಿಸಿ ಓಡಿ ಬಂದು ಹೇಳಿದ,—

“ಅವರs ಬಂದರು!”

“ಹೌದs? ನಾ ಅಂದಂತೆ ಆಯ್ತಲ್ಲ!” ಸ್ವರದಲ್ಲಿ ಸಮಾಧಾನವಿತ್ತಾದರೂ ಕೊಂಚ ಗಾಬರಿಯ ಚಿನ್ಹವೂ ಮುಖದ ಮೇಲಿತ್ತು. ಕೈಯು ಕೋಟಿನ ಗುಂಡಿಗಳನ್ನು ಹಾಕುತ್ತಲಿತ್ತು. ಒಂದು ಕೈಯು ರುಮಾಲಿನ ಮೇಲೆಯೂ ಆಡಿತು. ದೋತರ ನಿರಿಗೆ ತೀಡುತ್ತಲೇ, “ಇನ್ನೂ ಎಷ್ಟು ದೂರ ಇದ್ದಾರೆ?” ಎಂದು ಕೇಳಿದರು.

“ಇಲ್ಲೇ, ಅಗಸೆಯ ಬಾಗಿಲಿಗೇ ಬಂದಾರರೀ, ನಾನs ಓಡಿ ಮುಂದ ಬಂದ ಹೇಳಿದೆ..” ತಾನು ಎಷ್ಟು ಒಳ್ಳೆಯ ಕೆಲಸ ಮಾಡಿದೆನೆಂಬ ಭಾವವನ್ನು ಪ್ರದರ್ಶಿಸುತ್ತ ಓಲೆಕಾರ ನುಡಿದ.

“ಏಲೋ ರಾಯಾ, ಕಂಬಳಿಯನ್ನು ನೆಟ್ಟಗೆ ಹಾಸು” ಚಾವಡಿಯೊಳಗೆ ಕುಳಿತ ಹಳಬನ ಕಡೆಗೆ ನೋಡಿ ಹೇಳಿದ ಗೌಡ. ಕೊಂಚ ಕಾಲ ಅವನು ಹಾಗೇ ಕೂಡಲು “ಹೊತ್ತಿಲ್ಲ, ಗೊತ್ತಿಲ್ಲ; ಎಂಥಾ ಅಡ್ನಾಡಲೇ ನೀ. ಬತ್ತೀಕಟ್ಟಿತ ತಂಬಾಕ ಸೇದಬೇಕಂತ ಕುಳಿತಿದಿ. ಫೌಜದಾರ ಬರತಾರ ಅಂದರ ಊರಿಗೆ ಊರೇ ಅಂಜಿ ನಡಗತದೆ.. ನೀ, ಮಗನೆ ವತನದಾರ ನೌಕರ ಆಗಿ..” ಎಂದು ತಾನೇ ಹೋಗಿ ಕಂಬಳಿ ಹಾಸತೊಡಗಿದ.

“ಇರಲಿ ಬಿಡರೀ; ನಾ ಉಡಗಿ ಹಾಸತೇನು. ಇನ್ನೂ ಅವರ ಅಗಸಿಯಿಂದ ಬರಲಿಕ್ಕ ವೇಳೆ ಅದೆ..” ಎಂದು ರಾಯಾ ಎದ್ದ.

“ಹೂಂ! ಸಾಕ ಹೋಗ ನೀ. ಅವರು ಬಂದ ಮೇಲೆ ಹಾಸುತ್ತ ನಿಲ್ಲುವವ.” ಸ್ವಲ್ಪ ಸಿಡುಕಿನಿಂದ ಹೇಳಿ “ನಾ ಸತ್ತ್ಯಾ ಹಾಸತೇವೆ, ನೀ ಹೋಗು, ಭೀಮ್ಯಾನ ಹಟೇಲದೊಳಗ ನಾಲ್ಕೈದು ಕಪ್ಪು ಚಹಾ ಹೇಳಿ ಬಾ.. ನಾ ಹೇಳಿದೇನಂತ ಹೇಳು.”

ರಾಯಪ್ಪ ದೋತರ ಸಾವರಿಸಿಕೊಳ್ಳುತ್ತ, ತಲೆಯ ಮೇಲಿನ ರುಮಾಲದ ಕಟ್ಟು ತಿದ್ದುತ್ತ ಪೇಟೆಯ ಕಡೆಗೆ ನಡೆದ. ತುಸು ಹೊತ್ತಿನಲ್ಲಿ,—

"ಏ ರಾಯಾ, ಇಲ್ನೋಡು," ಎಂದು ಗೌಡ ಕೂಗಿದ.

"ಯಾಕರೀ..?" ಎಂದು ರಾಯಪ್ಪ ಮತ್ತೆ ಚಾವಡಿ ಕಟ್ಟೆಯನ್ನು ಹತ್ತಹತ್ತಿದ.

"ಯಾಕಿಲ್ಲ; ರಾವಸಾಹೇಬರಿಗಂತ ಹೇಳು, ಚಹಾ. ಹಾಗೇ ನಾಲ್ಕು ಸಿಗಾರೇಟೂ ತಗೋ ತಿಳೀತು?..

"ಹೂಂ!"

"ಉಳಿದವರೆಲ್ಲ ಎಲ್ಲಿ ಹೋದರೋ... ಸೂ— ಮಕ್ಕಳ! ಇನಾಮು ಜಮೀನ ಉಣಲಿಕ್ಕೆ ಹದಿನೆಂಟು ಜನ, ಕೆಲಸಕ್ಕ ಒಬ್ಬರೂ ಇಲ್ಲ; ಹನ್ನೆರಡ ಸಲ ಹೇಳಿದೆ. 'ಹಗಲಿ ರಾತ್ರಿ ಚಾವಡಿಯೊಳಗೆ ಕಾಲ ಕಟ್ಟಿಕೊಂಡ ಕೂಡರಿ' ಅಂತ. ಆದರೂ ಎಲ್ಲೀರೆ ತಿರಗತ ಹೋಗೇ ತೀರತಾರೆ. ಇಂತಹ ಹೊತ್ತಿನೊಳಗ ಇಲ್ಲದ ಏನ ಮಾಡೋದಾ? ಮನೆಯ ಕೆಲಸ ಉಳಿದ ವೇಳೆಕ್ಕೆ ಮಾಡಕೋಬೇಕು. ಅಮಲದಾರರು ಬರ್ತಾರೆ ಅಂದರೆ ಹಜರ ಇರಬೇಕು. ಸುಮ್ಮನಿರು, ಇವರ ಒಬ್ಬೊಬ್ಬರ ಮೇಲೆ ರಿಪೋರ್ಟ ಮಾಡಿ, ಗೈರ ಹಾಜರಿ ಹಾಕಿ, ಕೆಲಸದ ಮೇಲಿಂದ ತೆಗೆದು ಹಾಕಸ್ತೇನು. ಅಂದರ ತಿಳಿತದ, ಸರಕಾರೀ ಕೆಲಸ ಹೇಗೆ ಮಾಡಬೇಕನ್ನೋದು.." ಎಂದು ಏನೇನೋ ಒದರಾಡುತಿದ್ದ, ಗೌಡ.

"ಮನೀ ಕೆಲಸ ಏನ ಮಾಡ್ತಾರ ಮಕ್ಕಳ..! ಚಾವಡಿ ಕೆಲಸನೂ ಆಗವಲ್ತು? ಆಗ ವಾರಕ್ಕೊಮ್ಮೆ ತಾಲೂಕಿಗೆ ಟಪಾಲ ಒಯ್ಯತಿದ್ದೇವು. 'ಈಗ ಚಳವಳಿ ಆದೆ. ಎರಡ ದಿನಕ್ಕೊಮ್ಮೆ ರಿಪೋರ್ಟ ತಾ ಅಂತಾರೆ. ಒಬ್ಬ ತಾಲೂಕಿಗೆ ಕಟ್ಟಿ ಟಪಾಲು ತಕ್ಕೊಂಡು ಹೋಗಿದಾನೆ, ಇನ್ನೊಬ್ಬನಿಗೆ ಸ್ಟೇಶನ ಪಾಳಿ ಇರಬೇಕು. ಭರಮಪ್ಪನನ್ನ ಕುಲಕರ್ಣೇರು ಎಲ್ಲಿಯೋ ಕಾಗದ ಕೊಟ್ಟ ಕಳಿಸಿದಾರು. ಇನ್ನ ಯಾರು ಉಳಿದರು? ಇದ್ದರ ಒಬ್ಬ ಸಿದ್ದ್ಯಾ ಇರಬೇಕು. ಅವನ ಕಾಲಿಗೆ ನಾರು ಆಗೇದ, ಚಾವಡಿಯೊಳಗ ಬೀಳೋದೂ ನೆರಳಲಿಕ್ಕೆ ಆದರೂ ಸ್ವತಂತ್ರ ಸಿಗ್ತದೆ ಅಂತ ಮನೆಯೊಳಗ ಬಿದ್ದಾನು. ಇನ್ಯಾರು ಉಳಿದರು, ಕೆಲಸ ತಪ್ಪಿಸಲಿಕ್ಕೆ?"

ಗೌಡ ಆ ವಿಷಯವನ್ನೇ ಬದಲಿಸಿ, "ಅವರು ಬಂದು ಚಹಾ ತಕ್ಕೊಂಡ ಕೂಡಲೇ ಎಲ್ಲಾ ಮಾಸ್ತರ ಜನರನ್ನ ಕೂಡಿಸು. ನಿನಗೇ

ಇಂದೊಂದ ದಿವಸ ಎಷ್ಟ ಕಷ್ಟ ಆಗತದೆ ಆಗಲಿ, ಮುಂದ ಮೂರು ನಾಲ್ಕು ದಿನಾ ಹೋಗುವೆಯಂತ.. ನಿನ್ನ ಹೊಲ ಹರಗೋದು ಮಾಡೋದು ಅಂತ.." ಸಧ್ಯದ ಕೆಲಸ ಚೆನ್ನಾಗಿ ಆಗುವದಕ್ಕಾಗಿ, ಮುಂದಿನ ಸವಲತ್ತಿನ ಬಲೆ ಬೀಸಿದರು.

"ನಾಳೆ ಏನೇ ಆಗಲಿ, ಇಂದ ಕಣ್ಣೀರ ಕಪ್ಪಾಳಿಗೆ ಬರ್ತಾವಲ್ಲ.." ಎಂದು ಕೃತಘ್ನನಾಗಿ ನುಡಿದ ಓಲೇಕಾರ.

ಅಷ್ಟರಲ್ಲಿ ನಾಲ್ಕೈದು ಜನ ಪೋಲೀಸರೂ ಫೌಜುದಾರರೂ ಬಂದರು. ಅವರು ಇನ್ನೂ ದೂರದಲ್ಲಿರುವಾಗಲೇ ಗೌಡನು ಇನ್ನೊಮ್ಮೆ ಕೋಟಿನ ಗುಂಡಿ ರುಮಾಲುಗಳನ್ನು ಸರಿಪಡಿಸಿಕೊಂಡು, ತ್ಕೋರಿಕೆಯ ನಗೆ ನಗುತ್ತ "ನಮಸ್ಕಾರರೀ!" ಎಂದು ಕೈಜೋಡಿಸಿದ, ಚಾವಡಿಯ ಕಟ್ಟೆಯ ತುದಿಗೆ ಬಂದು.

ಕೈಯೊಳಗಿನ ಬೆತ್ತವನ್ನು ಮೇಲೆತ್ತುವದರಿಂದ ಪ್ರತಿ ನಮಸ್ಕಾರ ವನ್ನು ಸೂಚಿಸುತ್ತ "ಹೂಂ" ಎಂದ ಫೌಜದಾರ ಬಿಗುಹಿನಿಂದ,

ಫೌಜದಾರ ಸಾಹೇಬರ ಬಿಗುಹನ್ನು ಕಂಡು, ಗೌಡ ಸ್ವಲ್ಪ ನಿರುತ್ಸಾಹಿಯಾದ. ಹಾಗೇ ಓಲೇಕಾರನ ಕಡೆಗೆ ಹೋಗಿ, ಮೆಲ್ಲಗೆ.. "ನೋಡೋ, ರಾಯಾ ಇನ್ನೂ ಏಕೆ ಬರಲಿಲ್ಲ..? ಚಹಾ ಲಗೂನೆ ತಾ ಅನ್ನು."

"ಗೌಡರೇ ಈಗೇನ ಚಹ ಬೇಡ. ಸುಮ್ಮನೆ ಕೂಡಿರಿ..!" ಫೌಜದಾರ ಗದರಿಸುವ ಸ್ವರದಲ್ಲಿಯೇ ನುಡಿದ.

ಆದರೂ ಓಲೇಕಾರ ಚಹಾಕಾರನಾಗದೆ ಇರಲಿಲ್ಲ!

"ಗೌಡಾ, ಊರೊಳಗೆ ಕುಳಿತು, ಇದೇನ ಗದ್ದಲ ನಡಿಸೀದಿ? ನಿನ್ನ ವತನ ಹೋದೀತು, ಲಕ್ಷವಿರಲಿ. ಬಹಳ ದಿನಾ ಕೆಲಸ ಮಾಡಿದ್ದಕ್ಕೆ ಕಣ್ಣ ನೆತ್ತಿಗೆ ಏರಿದ್ವು ಹೌದ..?" ಗೌಡನನ್ನೇ ಮೊದಲು ಬೆದರಿಸಲು ಯತ್ನಿಸಿದ ಫೌಜದಾರ.

ರಾವಸಾಹೇಬರು ಅದೇಕೋ ಸಿಟ್ಟಿಗೆ ಬಂದಿರುವರೆಂದು ಗೌಡ ಸುಮ್ಮನೆ ನಿಂತ. ಮುಖದಲ್ಲಿ ಹೆದರಿಕೆ ಒಡಮೂಡುತಲಿತ್ತು. ಅವರಿಗೆ ತಿರುಗಿ ಏನೂ ಹೇಳದಾದ, ಎದೆ ಹಾರಹತ್ತಿತು. ಮನದಲ್ಲಿ ಹಲವು

ಚಾರಗಳಿದ್ದು ಕುಣಿಯತೊಡಗಿದವು. ಅವುಗಳಲ್ಲಿ 'ನಮ್ಮ ಅಜಿತನೂ ಳವಳಿಯೊಳಗೆ ಇದ್ದಾನೆಂಬುವ ಸುದ್ದಿಯನ್ನು ಯಾರಾದರೂ ಹೇಳಿರಬೇಕೆ ?' ಎಂಬ ವಿಚಾರವೂ ಏಳದಿರಲಿಲ್ಲ. ಹಾಸುಗಂಬಳಿಯ ಂಚಿಗೆ ನಿಂತಲ್ಲಿಯೇ ಕಾಲಿನ ಹೆಬ್ಬೆರಳಿನಿಂದ ನೆಲವನ್ನು ಗೀರುತ್ತ, ಕೈ ಟ್ಟಿಕೊಂಡು ನಿಂತ. ಕಳ್ಳನ ಮುಂದೆ ಅವನೇ ಕದ್ದ ಒಡವೆಯನ್ನು ವನ ಮನೆಯಿಂದ ತಂದಿಡಲು, ಆ ಕಳ್ಳನ ಸ್ಥಿತಿ ಹೇಗಾಗುವದೋ ಾಗೆಯೇ ಗೌಡನ ಸ್ಥಿತಿಯಾಗಿದ್ದಿತು.

ಫಲಾಹಾರವಾಯಿತು. ಬೇಡವೆಂದಿದ್ದರೂ ಎರಡೆರಡು ಉಂಡಿ ಗಳನ್ನು ನೋಡು ನೋಡುವಷ್ಟರಲ್ಲಿ ಇಳಿಸಿಬಿಟ್ಟರು. ಆಮೇಲೆ ಫೌಜ ಾರ ಗೌಡನಿಗೆ ಕೇಳಿದ.

"ನಿಮ್ಮ ತೋಟದ ಬಾವಿಯಲ್ಲಿ ಪಾರಿವಾಳ ಇರಬೇಕಲ್ಲ..?"

"ಅಃ! ಹಃ! ಹಃ!" ಇಲ್ಲದ ಹರ್ಷ ಪ್ರದರ್ಶಿಸುತ್ತ "ಅವರಿ. ಎಲ್ಲಾ ತಯಾರ ಮಾಡತೇವರಿ..!"

ತಾನು ಜೈನ. ಅಹಿಂಸಾಧರ್ಮಿ. ಮಾಡಬಾರದ ಕೃತ್ಯ ಎಂದು ಮನಸ್ಸು ಒಳಗೊಳಗೇ ಹಿಂಜರಿಯುತ್ತಿದ್ದರೂ ಗೌಡ ಮೇಲೆ ಉತ್ಸಾಹ ದಿಂದಲೇ ಕೇಳಬೇಕಾಯ್ತು.

"ಹೂಂ! ಹೋಗೋಣ ನಡೆಯಿರಿ. ಇಲ್ಲಿ ಈಗ ಕುಳಿತುಕೊಂಡು ಏನು ಮಾಡುವದಿದೆ? ರಾತ್ರಿ ಅವರಿಗೆಲ್ಲ ಬರಲಿಕ್ಕೆ ಹೇಳಿರಿ" ಎಂದು ಫೌಜದಾರ ಎದ್ದು ನಡೆದ.

ಗೌಡನು ಸ್ವಲ್ಪ ಹಿಂದುಳಿದು ರಾತ್ರಿ ಮಾಸ್ತರರೆಲ್ಲರನ್ನೂ ಕರೆ ಯಲು ಸೂಚಿಸಿದ. ಹಾಗೆಯೇ ಹುಸೇನನ ಮನೆಯಲ್ಲಿ ನಾಲ್ಕೈದು ಜನರ ಊಟದ ಸಿದ್ಧತೆಯಿಡಲು ಹೇಳಿದ. ಮತ್ತೂ 'ಮಸಾಲೆಯ ಸಾಮಾನು ರಾಮನ ಅಂಗಡಿಯಿಂದ ಒಯ್ದು ಕೊಡು. ಮೊನ್ನೆ ಗಸ್ತಿಗೆ ಹೋದಾಗ ಸಿಕ್ಕಿದ್ದಲ್ಲ, ಹೊಲಗೇರಿಯಿಂದ ಬರತಿದ್ದ. ಸೂ— ಮಗನಿಗೆ ಧರ್ಮಕರ್ಮ ಇಲ್ಲ. ಹೊಲಗೇರಿ ಸೇರಿದ್ದಕ್ಕ ಅಷ್ಟರ ದಂಡ ಬೀಳಲಿ ಅವನ ಮೇಲೆ. ಆ ಮೇಲೆ ಲಗೂನೆ ತೋಟದ ಕಡೆಗೆ ಬಾ; ತಗೊಂಡ ಬರುವಿಯಂತ ಜೀನಸಾ.." ಎಂದು ಸ್ಪಷ್ಟವಾಗಿಯೇ ಹೇಳಿ,

ತೋಟದ ಕಡೆಗೆ ಓಡಿದ.

ಎಲೆದೋಟದ ಮೇಲೆಲ್ಲ ಶರತ್‌ಕಾಲದ ಸಂಜೆಯ ಪ್ರಭೆಯು ಅಪರಂಜಿಯಂತೆ ಹಬ್ಬಿತ್ತು. ಬಿಸಿಲಿನ ಈ ರಾಗ ಇನ್ನಾವ ಕಾಲದಲ್ಲಿಯೂ ಕಾಣಲು ಸಾಧ್ಯವಿಲ್ಲ. ಬಾವಿಯ ಮೆಟ್ಟಲುಗಳ ಮೇಲೂ ನೀರಿನ ಮೇಲೂ ತಿಳಿಗತ್ತಲೆ ಹರಡುವದರಲ್ಲಿತ್ತು. ಬಾವಿಯೊಳಗಿನ ಎಲ್ಲ ಪಾರಿವಾಳಗಳೂ ಇನ್ನೂ ಒಳಗೆ ಬಂದು ಕುಳಿತಿರಲಿಲ್ಲ. ಇದೀಗ ಅಲ್ಲೊಂದು ಇಲ್ಲೊಂದು ಕುಳಿತುಕೊಳ್ಳಲು ಆರಂಭ ಮಾಡಿದ್ದುವು. ಫಡ ಫಡ ರೆಕ್ಕೆಗಳನ್ನು ಬಡಿಯುತ್ತ ಬಾವಿಯಲ್ಲಿ ಇಳಿಯುವ ಪಾರಿವಾಳಗಳು ಸುವರ್ಣಪಕ್ಷಿಯಂತೆ ಕಾಣುತ್ತಿದ್ದುವು.

ಒಕ್ಕಲಿಗನು ಹಾಡು ಹೇಳುತ್ತ ಇನ್ನೂ ಯಾತ ಹೊಡೆಯುತ್ತಲಿದ್ದ. ಸಂಜೆಯ ಸ್ವರ್ಣಸ್ವರ್ಣದಲ್ಲಿ ಎತ್ತುಗಳೂ ಬಾವಿಯೂ ಒಂದು ಅಲೌಕಿಕ ಸೌಂದರ್ಯದಿಂದ ಒಪ್ಪುತ್ತಿದ್ದುವು.

ನಾಲ್ಕೈದು ಎಳೆಮಕ್ಕಳು ಅಲ್ಲೇ ಬಯಲಲ್ಲಿ ಆಡುತ್ತಿದ್ದಾರೆ, ಹಕ್ಕಿಗಳಂತೆ ಆನಂದವೃತ್ತಿಯಿಂದ. ಗೆದ್ದಾಗ, ಜಿಗಿಯುತ್ತ ಕೇಕೆ ಹಾಕುತ್ತಿದ್ದಾರೆ. ಪೋಲೀಸರು ಬರುವದನ್ನು ನೋಡಿದ ಒಬ್ಬ ಹುಡುಗನು, ಚಟ್ಟನೆ ಇನ್ನೊಬ್ಬನ ಮೈ ತಟ್ಟಿ, "ಅದೋ ಪೋಲೀಸರು!" ಎಂದ, ಹೆದರಿಕೆಯಿಂದ.

ಮತ್ತೊಬ್ಬ ಹಿರಿಯ ಹುಡುಗ ಹೊರಳಿ ನೋಡಿ "ಹೌದು; ಬಾವಿಯಲ್ಲಿಯ ಪಾರಿವಾಳ ಹೊಡೆಯಲಿಕ್ಕೆ ಯಾರಾದರೂ ಬಂದಿರಬೇಕು, ಬಿಡು.." ಎಂದ.

"ಅಲ್ಲ, ಎಳೋ, ಅಪ್ಪಾನೂ ಇದ್ದಾನಲ್ಲ, ಅವರ ಹಿಂದ ? ರಾವಸಾಹೇಬ ಅಂದ, ಅಜಿತನ ಕಡೆಗೆ ಪ್ರಶ್ನಾತುರ ದೃಷ್ಟಿಯಿಂದ ನೋಡುತ್ತ. ಅವನ ಆ ದೃಷಿಯಲ್ಲಿ ಏನೋ ಒಂದು ರಹಸ್ಯ ಅಡಗಿದಂತಿತ್ತು.

"ಕೈಯೊಳಗೆ ಬಂದೂಕ ಅವೆ, ಅಲ್ಲಾ?" ಎಂದ ಎರಡನೆಯ ಹುಡುಗ.

"ನನಗ ಆಟ ಸಾಕು.." ಎಂದವನೇ ರಾವಸಾಹೇಬ ಅಲ್ಲಿಂದ ಕಾಲ್ದೆಗೆದ.

"ಅವನು ಹೋಗಲಿ ಬಿಡು! ಪೋಲೀಸರು ಬಂದರೆ ನಮಗೇನು ಮಾಡುವರು? ಮುಂದ ಆಡೋಣ ಬರ್ರಿ! ಚಂಡ ತಾ ಇತ್ತ.." ಎಂದು ಅಜಿತ ಏನೋ ಅರಿತವನಂತೆ ನುಡಿದ.

ಆದರೂ ಅವನ ಎದೆ ಹಾರುತ್ತಿದ್ದಿತು. ಮುಂಜಾನೆ ಊಟಕ್ಕೆ ಕುಳಿತಾಗ ಕಕ್ಕ ಆಡಿದ ಮಾತುಗಳು ನೆನಪಿಗೆ ಬಂದು, ಮುಖ ಮ್ಲಾನ ವಾಯಿತು. 'ಮುಖ್ಯಾಧ್ಯಾಪಕರಿಗೆ ನನ್ನ ಮೇಲೆ ಮೊದಲಿನಿಂದಲೂ ಕಣ್ಣು, ಏನು ಬರೆದಿರುವರೋ ನನ್ನ ವಿಷಯಕ್ಕೆ!' ಎಂದು ಧೇನಿಸುತ್ತ ಕೈಯೊಳಗೆ ಚೆಂಡು ಬಂದರೂ ಹಿಡಿಯದೆ ಹೋದ, ಅಜಿತ.

ಪೋಲೀಸರು ಬಾವಿಯ ಮೇಲೆ ಹೋದರು. ಗೌಡನ ಸೂಚನೆ ಯಂತೆ ಈಗಾಗಲೆ ಒಕ್ಕಲಿಗನು ಯಾತ ಬಿಚ್ಚಿಕೊಂಡು ಹೋಗಿದ್ದ. ಬಾವಿ ಯಲ್ಲಿ ಕಪ್ಪೆಗಳು ಚೀರುತ್ತಿದ್ದುವು. ದಾರಿಯಿಂದ ಹೋಗುವ ದನಗಳ ಕೊರಳೊಳಗಿನ ಗಂಟೆಯ ನಿನಾದವು ಮೆಲ್ಲ ಮೆಲ್ಲನೆ ಕ್ಷಯಿಸಿ, ತೋಟದ ಗಿಡಗಳ ಗುಂಪಿನಲ್ಲಿ ಎಲ್ಲಿಯೋ ಅಡಗಿ ಹೋಗುತ್ತಿದ್ದಿತು. ಹುಡುಗರಲ್ಲಿ ಕೆಲವರು ಗಲಾಟೆ ನಿಲ್ಲಿಸಿ, ಯಾತದ ಕಟ್ಟೆಯ ಮೇಲೆ ಬಂದು ನಿಂತರು. ಗಾಳಿಯು ವಿಶೇಷವಾಗಿರಲಿಲ್ಲ. ಗಿಡಮರಗಳು ಮೌನವಾಗಿದ್ದುವು. ಫೌಜದಾರನು ಕೋವಿಯನ್ನು ಕೈಯಲ್ಲಿ ಹಿಡಿದು, ಬಾವಿಯಲ್ಲಿ ಕುಳಿತ ಪಾರಿವಾಳಗಳಿಗೆ ಗುರಿಯಿಟ್ಟ; ಅವನ ಅಕ್ಕಪಕ್ಕದಲ್ಲಿ, ಗುಂಪುಗುಂಪಾದ ಗಿಡಗಳಲ್ಲಿ, ಗುಡಸಲಿನ ನೆರಳಲ್ಲಿ, ಬಾವಿಯ ಮೆಟ್ಟಲುಗಳ ಮೇಲೆ, ಎಲೆ ದೋಟದ ಬದಿಗುಂಟ, ಕತ್ತಲೆಯು ಮೈಮುಚ್ಚಿಕೊಂಡು, ಮುಖಕ್ಕೆ ಮುಸುಕು ಹಾಕಿಕೊಂಡು ಹೊರಬರಲು ಹಾತೊರೆಯುತ್ತಿರುವಂತೆ ಕುಳಿ ತಿದ್ದಿತು. ನುಗ್ಗಿಯ ಗಿಡದ ಟೊಂಗೆಯೊಂದಕ್ಕೆ ತೊಗಲಬಾಹುಲಿಯೊಂದು ನೇತಾಡುತ್ತಿದ್ದಿತು. ಎಲ್ಲಿಯೋ ದೂರದಲ್ಲಿ ಗೂಗೆಯೊಂದು 'ಗ್ಘುಃ! ಗ್ಘುಃ!!' ಎಂದು ಗುರುಕು ಹಾಕಿತು!

ಫೌಜದಾರನು ನಾಲ್ಕಾರು ಪಾರಿವಾಳಗಳನ್ನು ಹೊಡೆದ. ಒಬ್ಬ ಹಳಬ ಬಟ್ಟೆಗಳನ್ನು ತೆಗೆದಿಟ್ಟು, ನೀರಿನಲ್ಲಿ ಈಸುಬಿದ್ದು, ನೀರಲ್ಲಿ ಬಿದ್ದ ಪಾರಿವಾಳ ಗಳನ್ನು ತೆಗೆಯುತಲಿದ್ದ. ಪಾರಿವಾಳಗಳು ಗುಂಡಿನ ಸಪ್ಪಳಕ್ಕೆ ಧಡಪಡಿಸಿ ಏಳುವವು, ಮೇಲೆ ಹಾರುವವು, ಮಬ್ಬಾದುದರಿಂದ ಕಣ್ಣು ಕಾಣದೆ

ತಿರುಗಿ ಸ್ಥಳದಲ್ಲಿ ಬಂದು ಕೂಡುವವು. ಅಷ್ಟರಲ್ಲಿ ಮತ್ತೊಂದು ಗುಂಡು ಸಿದ್ಧ!

ಇದನ್ನೆಲ್ಲ ಕಂಡು ಅಜಿತನ ಮನದಲ್ಲಿ ಅನೇಕ ವಿಚಾರತರಂಗಗಳೆದ್ದುವು. ಬೇಟೆಗಾರನ ಉತ್ಸಾಹ ಹೆಚ್ಚಿದಷ್ಟು ಇವನಿಗೆ ಮರುಕ ಹೆಚ್ಚುವದು. ಅವನ ಮೇಲೆ ಸಿಟ್ಟು ಹುಟ್ಟುವುದು. ಅದು ಒಳಗೊಳಗೇ ಹೊತ್ತುವುದು, ಹೊಗೆಯಾಡುವುದು. ಹೊರಗೆ ತೋರಿಸಲು ಶಕ್ಯವಿಲ್ಲೆಂದು ಕಣ್ಣು ತೇವಾಗುವವು. ಕೊನೆಗೆ ತಾಳಲಾರದೆ ಅಂದ:

"ಹುಲಿ ಸಿಂಹಗಳ ಬೇಟೆಯಾಡಬೇಕು; ಪಾಪ ಪಾರಿವಾಳಗಳನ್ನು ಹೊಡೆದರೆ ಏನು ಬಂತು?"

ಪಾರಿವಾಳ ಹೊಡೆದು ವಿಜಯಿಯಾದ ಫೌಜದಾರ ಹೊರಳಿ "ಯಾರವನು?" ಎಂದ.

ಆದ ಗೌಡನು ಅಜಿತನ ಕಡೆಗೆ ಹೊರಳಿ ಸುಮ್ಮನಿರಲು ಕಣ್ಸನ್ನೆ ಮಾಡಿದ. ಅಲ್ಲಿಂದ ಹೋಗಲೂ ಸೂಚಿಸಿದ. ಉಳಿದ ಹುಡುಗರಿಗೆ ಆ ಭಾವ ತಿಳಿಯಲಿಲ್ಲ. ಅಜಿತನಿಗೆ ತಿಳಿದರೂ ಹೋಗಲಿಲ್ಲ. ಕೊನೆಗೆ "ಹಾಯ್ ಸ್ಕೂಲಿನ ಹುಡುಗರು ಆಡಲಿಕ್ಕೆ ಬಂದಿರಬೇಕು." ಎಂದು ಫೌಜದಾರನಿಗೆ ಗೌಡನು ತಾನೇ ಉತ್ತರ ಹೇಳಿದ.

"ಯಂಗ ಫ್ರೇಂಡ್ಸ ಕಂ ಆನ್!" ಎಂದು ಫೌಜದಾರ ಹುಡುಗರನ್ನು ಹತ್ತಿರ ಕರೆದ. ಈಗ ಸ್ವರ ಮೃದುವಾಗಿದ್ದಿತು, ಮುಂಥೋರಣೆಯಿಂದ ಕೂಡಿದ್ದಿತು.

ಹುಡುಗರು ಹಿಂಜರಿದರು. ಅಜಿತನೊಬ್ಬ ಮಾತ್ರ ಮುಂದೆ ಬಂದ. ಅದೂ ಸ್ವಲ್ಪ.

"ನಿಮ್ಮ ಸಾಲೆಯ ಮೇಲೆ ಧ್ವಜ ಯಾರು ಹಚ್ಚಿದರು?" ಫೌಜದಾರನು ತಪಾಸು ನಡೆಯಿಸಿದ, ಸಲಿಗೆಯಿಂದ.

"ಊರವರು!" ಎಂದು ಅಜಿತ ನುಡಿದ, ತುಂಟತನದಿಂದ.

"ಊರವರೆಂದರೆ ಹೆಸರು ಇಲ್ಲೇನು?"

"ಎಲ್ಲರೂ ಇದ್ದರಲ್ಲ; ಹೆಸರು ಎಷ್ಟು ಜನರದಂತ ಹೇಳೋದು?" ತಿರುಗಿ ಕೇಳಿದ ಅಜಿತ.

ಈ ಮಾತಿನ ಹಿನ್ನೆಲೆಯನ್ನರಿಯಲು ಫೌಜದಾರನಿಗೆ ಅವಕಾಶ ಹತ್ತಲಿಲ್ಲ. ಮೊದಲನೆಯ ತುತ್ತಿಗೇ ಹರಳು ಹತ್ತಿದಂತಾಯಿತು. ಆದಗೌಡನ ಕಡೆಗೆ ಹೊರಳಿ,— "ಯಾರ ಹುಡುಗ ಈತ?" ಎಂದ, ಬಿರುಸು ಸ್ವರದಲ್ಲಿ.

ಗೌಡನ ಹಣೆಯ ಮೇಲೆ ಬೆವರೊಡೆಯಿತು. ಕಾಲುಗಳು ನಡುಗ ಹತ್ತಿದವು. ಮನಸ್ಸು ಎಲ್ಲಿಯೋ ಸುಳಿದಾಡುತ್ತಿತ್ತು. ಫೌಜದಾರನ ಪ್ರಶ್ನೆ ಅವನ ಕಿವಿಯನ್ನು ಸೇರಿಯೂ ಸೇರದಂತಾಯಿತು. ಸುಮ್ಮನಿದ್ದ.

"ಯಾರೋ ನೀ?"

ಇಷ್ಟರಲ್ಲಿ ಬಾವಿಯೊಳಗಿನ ಹಳಬ ಅರಿವೆ ತೊಟ್ಟುಕೊಂಡು, ಮೇಲೆ ಬಂದ. ಕೈಯಲ್ಲಿ ಏಳೆಂಟು ಪಾರಿವಾಳಗಳಿದ್ದುವು. ಫೌಜದಾರನ ಮಾತಿಗೆ,

"ಗೌಡರ ಹುಡುಗ, ಅಜಿತ ಅಲ್ಲೇನರಿ?" ಎಂದ.

ಫೌಜದಾರನ ಲಕ್ಷ್ಯ ಪಾರಿವಾಳಗಳ ಕಡೆಗೆ ಹರಿಯಿತು. ಕೊಂಚ ಯೋಚಿಸಿ ಹೇಳಿದ, "ಅವುಗಳನ್ನ ಒಯ್ದು ನಮ್ಮ ಠಾಣಾಕ್ಕ ಮುಟ್ಟಿಸಿ ಬಾ; ನಾ ಬರುವಾಗ ಹೇಳಿ, ಬಂದೇನಿ ಅಲ್ಲಿ." ಎಂದು ಆಜ್ಞಾಪಿಸಿದ.

ಅಲ್ಲಿಯೇ ನಿಂತ ಪೋಲೀಸರು ಸ್ವಲ್ಪ ಮುಖ ಕಿವುಚಿದರು. ನಸುಕತ್ತಲೆಯಲ್ಲಿ ಫೌಜದಾರ ಸಾಹೇಬರ ಲಕ್ಷ್ಯಕ್ಕೆ ಅದು ಬರಲಿಲ್ಲವೇನೋ! ಆದಗೌಡನಂತೂ ಮತ್ತೊಂದು ಗೊಂದಲದಲ್ಲಿ ಬಿದ್ದಂತಾಯಿತು, ಸಂಜೆಯ ಊಟದ ವ್ಯವಸ್ಥೆಯ ವಿಚಾರವಾಗಿ. ಮನಸ್ಸಿನ ಮತ್ತೊಂದು ಮೂಲೆಯಲ್ಲಿ ಅಜಿತನ ವಿಷಯವನ್ನು ಇದರಲ್ಲಿ ಮರೆತರಂತೂ ಒಳ್ಳೆಯದೇ ಆಯಿತು, ಎಂಬ ಧ್ವನಿಯೂ ಏಳದಿರಲಿಲ್ಲ. ಓಲೇಕಾರ ಮರುಮಾತಿಲ್ಲದೆ ಇನ್ನೊಮ್ಮೆ ಠಾಣೆಗೆ ಸಾಗಬೇಕಾಗಿ ಬಂತು.

ಅಷ್ಟರಲ್ಲಿ ಫೌಜದಾರನು ಮರಳಿ ವಿಷಯಕ್ಕೆ ಬಂದ, "ನಿಮ್ಮ ಮಗನೇ ಏನ, ಇವನು?" ಎಂದ, ಹಣೆಯೇರಿಸಿ.

"ಅಲ್ಲ; ನನ್ನ ತಮ್ಮನ ಮಗ!"

"ಸಾಲೆಗೆ ಹೋಗ್ತಾನೇನು?"

"ಹೋಗ್ತಾನ ಕಾಣಸ್ತದ."

"ಏಕೆ, ನಿಮಗ ಗೊತ್ತಿಲ್ಲೇನು?"

"ನಮಗೆ ಅವನಿಗೆ ಏನ ಸಂಬಂಧ? ಬೇರೆ ಬೇರೆನೇ ಇದ್ದೇವೆ." ತನಗೂ ಅವರಿಗೂ ಮನಸ್ಸೂ ನೆಟ್ಟಗಿಲ್ಲವೆಂಬವರಂತೆ ನಟಿಸುತ್ತ ಆದ ಗೌಡ ಹೇಳಿದ.

"ಮನಿಯೊಳಗ ನಿಮ್ಮ ತಮ್ಮ ಇದ್ದಾನಲ್ಲ?"

"ಇಲ್ಲ; ಅವನು ತೀರಿಕೊಂಡ ಮೂರನಾಲ್ಕು ವರ್ಷ ಆಯ್ತು!"

ಹೀಗೆ ಈ ವಿಷಯ ಒಂದು ರೀತಿಯಿಂದ ಕೊನೆಗೊಂಡಿತು.

* * * *

"ಯಾಕೆ ಊಟಕ್ಕೆ ಬರಲಿಕ್ಕೆ ವೇಳೆ ಆಯ್ತು, ಬಾಳಾ?" ಕಟ್ಟೆಗೆ ಕುಳಿತ ಮುರದೇವಿ ಆದಗೌಡನನ್ನು ಸ್ವಾಗತಿಸುತ್ತ ಕೇಳಿದಳು. ಊರಿಗೆ ಗೌಡನಾದರೂ ತಾಯಿಗೆ ಮಗನಲ್ಲವೇ?

"ಹೂಂ! ಎಲ್ಲಾನೂ ತೀರಿಸಿ ಬರಬೇಕಲ್ಲ! ಕೊರಳಿಗೆ ಹಾಕಿಕೊಂಡಿದ್ದೇವೆ ಅಂದ ಮೇಲೆ. ವೇಳೆಗೆ ಹೊಟ್ಟೆಗೆ ಕೂಳು ಬೀಳು ಅಂದರೆ ಹೇಗೆ ಬಿದ್ದೀತು?" ಎಂದು ಸಿಡುಕಿನಿಂದಲೇ ನುಡಿದು, ರಪ್‌ರಪ್ ಎಂದು ಹೆಜ್ಜೆ ಬಡಿಯುತ್ತ ಒಳಗೆ ಹೋದ, ಆದಗೌಡ.

ಮುರದೇವಿಯೂ ಮಗನ ಹಿಂದಿನಿಂದಲೇ ಮೆಲ್ಲನೆ ಎದ್ದು ಒಳಗೆ ಬಂದಳು. ಚಾವಡಿಯಿಂದ ಯಾತಕ್ಕೋ ಕಾವಿಸಿ ಬಂದಿದ್ದಾನೆ. ಸ್ವಲ್ಪ ಸಮಾಧಾನವಾಗಲಿ, ಅಂದುಕೊಂಡು, ಸುಮ್ಮನೆ ಪಡಸಾಲೆಯ ಕಂಬಕ್ಕೆ ಆನಿಸಿ ಕುಳಿತುಕೊಂಡಳು.

ಗೌಡನು ಪಡಸಾಲೆಗೆ ಬಂದವನೇ ರುಮಾಲು ತೆಗೆದು ಗೂಟಿಗೆ ಹಾಕಿದ. ಕೋಟು ಕಳೆದ. ಹೊತ್ತುಕೊಳ್ಳುವ ದೋತರಿನಿಂದ ಕಾಲಿನ ಧೂಳು ಝಾಡಿಸಿಕೊಂಡ. ಆಮೇಲೆ ಉಸ್ಸೆಂದು ನಡುಮನೆಯ ಬಾಗಿಲ ಬಳಿ ಬಂದು ಕುಳಿತ. ಸುತ್ತಲೂ ದೃಷ್ಟಿ ಹೊರಳಿಸಿದ. ತಾಯಿಯನ್ನು ಉಳಿದು ಪಡಸಾಲೆಯಲ್ಲಿ ಇನ್ಯಾರೂ ಇರಲಿಲ್ಲ. ಮನೆಯಲ್ಲಿ ಈಗಾಗಲೇ ಮುಂಗತ್ತಲೆ ಕವಿಯುತ್ತಲಿದ್ದಿತು. ಹೊರಗೆ ಕೊಟ್ಟಿಗೆಯಲ್ಲಿ ದನಗಳಿಗೆ ಆಳು ಬಾಯಿ ಮಾಡುತ್ತಲಿದ್ದ.

"ರಾವಸಾಹೇಬ!" ಎಂದು ಗೌಡ ನಡುಮನೆಯತ್ತ ಹೊರಳಿ

ಕೂಗಿದ

"ಓ.." ಎನ್ನುತ್ತ ಹುಡುಗ ಹೊರಗೆ ಓಡಿ ಬಂದ. ಗಂಗವ್ವ ಒಳಗೆ ಏನೋ ಕೆಲಸದಲ್ಲಿ ತೊಡಗಿದ್ದಳು. ಕೈ ತೆರವಿರಲಿಲ್ಲ. ಆದರಿಂದ ಸರಸ್ವತಿಯೇ ಹುಡುಗನ ಹಿಂದಿನಿಂದ ನಡುಮನೆಯ ಬಾಗಿಲಿಗೆ ಬಂದಳು, ಏನಾದರೂ ಕೆಲಸವಿಬೇರಕೆಂದು.

"ಮೂರುಸಂಜೆ ಆಯ್ತು, ಲಾಟನು ತಂದು ಹೊರಗೆ ತೂಗ ಹಾಕೋದಿಲ್ಲೇನು? ಜನ ಬರುಹೋಗುವ ಮನೆ, ಹೊರಗೆ ಬೆಳಕು ಬೇಡಾ..? ದನಗಳು ಬರ್ತಾವ.. ಮಾಡ್ತಾವ.. ಸಂಜೆಯ ಹೊತ್ತಿನೊಳಗ. ಇಷ್ಟೂ ತಿಳಿಯಬಾರದು..?"

"ಇನ್ನೂ ಸ್ವಲ್ಪ ಬೆಳಕು ಇತ್ತಂತ ನಾನೇ ಬೇಡ ಅಂದಿನ್ನು. ಅಂತೇ ನಾ ಕಟ್ಟೆಯ ಮೇಲ ಕೂತಿದ್ದೆನಲ್ಲ. ಈಗಿನಿಂದೂ ದೀಪಾ ಉರಿಸಿದರೆ ಎಣ್ಣೆ ಎಷ್ಟಂತ ತರೋದು..?" ಸ್ವಲ್ಪ ತಡೆದು ಮುರದೇವಿ ಮುಂದೆ ನುಡಿದಳು. "ದೊಡ್ಡವರನ್ನ ಬಿಟ್ಟು ಸಣ್ಣ ಹುಡುಗನ ಮೇಲೇಕೆ ಹೀಗೆ ಹರಿಹಾಯುವಿ..? ಅವನು ದೀಪಾ ಹಚ್ಚತಾನೋ ಬಿಡತಾನೋ.. ಎಂದಾದರೂ..?"

"ಹಚ್ಚುವವರ ಮೇಲೆ ಹರಿಹಾಯಲಿಕ್ಕೆ ಏನು ಸ್ವತಂತ್ರ ಇದೇನು? ಯಾರ ಮೇಲೆ ನಡತದ ಅವರಿಗೇ ಹೇಳೋದಲ್ಲ!" ಎಂದು ಚಂಡಿಕೆಗೆ ಗಂಟು ಹಾಕುತ್ತ ನುಡಿದ ಗೌಡ.

"ಏನೋಪ್ಪ! ನಿನ್ನ ಮಾತೇ ತಿಳಿಯುದಿಲ್ಲ ನನಗ. ನೆಟ್ಟಗ ಇರತ ಇರತ..ಹೀಗೇಕೆ ಮಾಡುವಿ ಏನೋ..!"

"ನಿನ್ನ ಮೊಮ್ಮಗ ಫೌಜದಾರನ ಗೂಡ ಹೇಗೆ ಮಾತಾಡಿದ ಗೊತ್ತ ಅದ? ಮನೆಯೊಳಗ ಕೂತ 'ನಿನ್ನ ಮಾತೇ ತಿಳಿಯೂದಿಲ್ಲ' ಅನ್ನಲಿಕ್ಕಷ್ಟೇ ಬಲ್ಲಿರಿ ನೀವು." ಮುಖ್ಯ ವಿಷಯಕ್ಕೆ ಬಂದ ಆದಗೌಡ.

"ಫೌಜದಾರನ ಗೂಡ ಮಾತಾಡಿದ..?" ಆಶ್ಚರ್ಯದಿಂದ ಸ್ವಲ್ಪ ಹೊತ್ತು ಸುಮ್ಮನಿದ್ದು, ಆಮೇಲೆ ರಾವಸಾಹೇಬನ ಕಡೆಗೆ ಹೊರಳಿ "ಏನೇನ ಮಾತಾಡಿದಿ..? ಏನ ಕೇಳಿದ ಫೌಜದಾರ..? ಇಂದಿಲ್ಲ ನಾಳೆ ಗೌಡನಾಗುವವ ಅಂದಮೇಲೆ ಮಾತಾಡಲಿಕ್ಕೆ ಬೇಕಲ್ಲ..!"

ಎಂದು ಉತ್ಸುಕತೆಯಿಂದ ನುಡಿದಳು, ಮುರದೇವಿ.

"ಇವ ಅಲ್ಲ; ಅಜಿತ."

ಒಳಮುಗ್ಗಲಿಗೆ ನಿಂತಲ್ಲಿಯೇ ಸರಸ್ವತಿಯ ಹೃದಯ ಸಂತಸ ಸಾಗರದಲ್ಲಿ ಮುಳುಗಿತು. ಮಗನಿಗೆ ಹೀಗೇ ಚಲೋ ಬುದ್ಧಿ ಬರುತ್ತ ಹೋಗಲಿ, ಎಂದುಕೊಂಡಳು. ಮಗನು ದೊಡ್ಡವರ ಕೂಡ ಮಾತಾಡುವದು, ಅವರ ಸಂಗತಿಯಲ್ಲಿ ಇರುವದು, ನೆಟ್ಟಗೆ. ಈಗೀಗ ಇಂಗ್ಲೀಷ ಕಲಿಯಲಿಕ್ಕೆ ಹತ್ತಿದಾಗಿನಿಂದೂ ಇಂಗ್ಲಿಷ ಎಂತಹ ಚೆಂದ ಮಾತಾಡತಾನು, ಅಜಿತ. ಎಂದೆನೇನೋ ತುದಿ ಮೊದಲಿಲ್ಲದ ವಿಚಾರದಲ್ಲಿ ಮಗ್ನನಾಗಿದ್ದಳು.

"ಅವನ ಸಂಗಡ ಮಾತಾಡಲಿಕ್ಕೆ ಅವನಿಗೆಲ್ಲಿ ಫೌಜದಾರ ದೊರಕಿದ್ದ?" ಎಂದು ಕೇಳಿದಳು, ಮುರದೇವಿ.

"ಇವರು ತೋಟದೊಳಗೇ ಇದ್ದರು, ಅಲ್ಲಿ ಅವರೂ ಹೋಗಿದ್ದರು." ಕೊಂಚ ತಡೆದು.. "ಎಲ್ಲಿ ಇದ್ದಾನ ಅಜಿತ?" ಎಂದು ಕೇಳಿದ. ದನಿ ವಿಕೃತವಾಗಿತ್ತು. ಆದರೆ ಅದು ಆ ಹೆಂಗಸರ ಲಕ್ಷ್ಯಕ್ಕೆ ಬರಲಿಲ್ಲ. ಎಲ್ಲರ ಸಮಕ್ಷಮ ಹುಡುಗನಿಗೆ ಬುದ್ಧಿ ಕಲಿಸಬೇಕಾಗಿತ್ತವನಿಗೆ.

"ಬಾವಿಯೊಳಗಿನ ಪಾರಿವಾಳ ಬಡಿಯಲಿಕ್ಕೆ ಹೋಗಿದ್ದರು ಕಾಣ್ತದ, ಪಾಪಿಷ್ಟರು! ಮೊನ್ನೇ ಸ್ವಾಮಿಗಳ ಬಂದಾಗ ಹಿಂಸಾ ಮಾಡಬಾರದನ್ನೋದ.. ಮುಂದ ಕೂತೇ ಕೇಳಿದಿ.., ಪುರಾಣ ಹೇಳೂ ಕಾಲಕ್ಕ. ಮತ್ತು ಅವರನ್ನ ಕರಕೊಂಡ ಹೋಗೀದಿ? ಇನ್ನೊಮ್ಮೆ ನಮ್ಮ ಬಾವಿಯ ಪಾರಿವಾಳ ಹೊಡಿಲಿಕ್ಕೆ ಒಯ್ಯಬೇಡ ನೋಡು ಯಾರನ್ನ. ಫೌಜದಾರ ಇರಲಿ, ಮಾಮಲೇದಾರ ಇರಲಿ." ಎಂದಳು ಮುರದೇವಿ ತಿರಸ್ಕೃತ ಸ್ವರದಲ್ಲಿ.

ಇಷ್ಟರಲ್ಲಿ ಸರಸ್ವತಿಯು ಮಗನನ್ನು ಹಿತ್ತಲಿನಿಂದ ನೂಲುವದನ್ನು ಬಿಡಿಸಿ, ಕರೆದುಕೊಂಡು ಬಂದು, ಪಡಸಾಲೆಗೆ ಕಳಿಸಿದಳು. ಅಜಿತ ಹಿಂಜರಿಯುತ್ತಲೇ ಪಡಸಾಲೆಯಲ್ಲಿ ಕಾಲಿಡುವುದರಲ್ಲಿದ್ದ. ಅಷ್ಟರಲ್ಲಿ,

"ಹೌದಪ್ಪ, ಯಾರಗೂಡ ಹೇಗೆ ಮಾತಾಡಬೇಕು, ಅನ್ನೋದು ತಿಳೀಬಾರದು ನಿನಗ? ಇಂಗ್ಲಿಷ ಐದನೆಯ ಯತ್ತೆ ಕಲೀತಿ ಅಲ್ಲ.." ಗುಡುಗಿದರು, ಗೌಡರು.

"ಇನ್ನೂ ಸಣ್ಣ ಹುಡುಗ, ಅವನಿಗೇನು ಗೊತ್ತು..? ಇನ್ನೂ ಹತ್ತೆಂಟು ಸಲ ನಿನ್ನ ಗೂಡ ಬಂದೂ ಹೋಗಿ ರೂಢಿಯಾಯ್ತಂದರೆ... ಎಲ್ಲಾನೂ ಕಲೀತಾನ." ಎಂದಳು ಮುರದೇವಿ.

ಸರಸ್ವತಿಯು ಸಂತಸದ ಭರತಿ ಸರ್‍ರನೆ ಇಳಿಯುತ್ತಿದ್ದುದು, ಅತ್ತೆಯ ಮಾತನ್ನು ಕೇಳಿ ಸ್ವಲ್ಪ ಸಾವಕಾಶವಾಗಿ ಇಳಿಯತೊಡಗಿತು.

"ಇವನನ್ನ ಸಂಗಡ ಒಯ್ದು ನಾ ಯಾವ ಹೊಳೀ ಕೂಡಲಿ..? ಸ್ಪಷ್ಟ ರಾವಸಾಹೇಬರಿಗೆ ಕೇಳತಾನು, 'ಹುಲೀ ಸಿಂಹಗಳ ಬೇಟೆ ಆಡಿರಿ, ಪಾರಿವಾಳ ಯಾಕೆ ಕೊಲ್ಲುವಿರಿ..?' ಅಂತ. ಇವನ ಯೋಗ್ಯತೆ ಎಲ್ಲಿ, ಅವರ ಯೋಗ್ಯತೆ ಎಲ್ಲಿ?"

"ಅವರ ಯೋಗ್ಯತೆ ಎಷ್ಟೇ ಇರಲಿ; ನಮ್ಮ ಬಾವಿಯೊಳಗಿನ ಪಾರಿವಾಳ, ಏಕೆ ಕೊಲ್ಲಬೇಕು?" ಎಂದ ಅಜಿತ. ಆದರೂ ಮಾತು ಮುಗಿಯುವ ಮೊದಲೇ ಅಜ್ಜಿಯು ಮುಗ್ಗುಲಲ್ಲಿ ಸೇರಿದ್ದ ಮಾತ್ರ.

"ಹೌದಪ್ಪ, ನಿಮ್ಮ ಅಪ್ಪ ತೋಡಿದ ಬಾವಿ ಅದ? ಅದಕ್ಕs ಬೇಡಂತ ಹೇಳ್ತಿದಿ ಹೌದ? ಹೀಗೇ ನೋಡ ಆಡ್ಬಾಡ..."

"ಅವರಪ್ಪನೂ ಕಟ್ಟಿಲ್ಲ, ನಿಮ್ಮಪ್ಪನೂ ಕಟ್ಟಿಲ್ಲ. ಹಿರಿಯರ ತೋಡಿಸಿದ ಬಾವಿ ಅದ. ಸುಮ್ಮನಿರಿ." ಮುರದೇವಿ ನಡುವೆಯೇ ಮಾತು ನಿಲ್ಲಿಸಲು ಯತ್ನಿಸಿದಳು.

"ನಾಯೇನೋ ಸುಮ್ಮನಾಗತೇನಿ. ಆದರ" ದನಿ ತಗ್ಗಿಸಿ "ಅವರಿಗೆ ಇವ ಚಳವಳಿಯೊಳಗ ಇದ್ದಾನಂತ ಗೊತ್ತಾಗೇದ. ತಿಳಿತು? ನಾವು ಬೇರೆ ಬೇರೆ ಇದ್ದೇವಂತ ಹೇಳಿ ಸಾಹೆಬರ ತಲಿಯೊಳಗಿನ ಕಲ್ಪನಾ ತಗಿಯೂ ತನಕ ನನ್ನ ಜನ್ಮ ಸಾಕಾಗಿ ಹೊಯ್ತವ್ವ! ಊರೊಳಗಿನ ಚಳವಳಿ ಅಡಗಿಸುವವರು ನಾವೇ. ನಮ್ಮ ಹುಡುಗನೇ ಹೀಗಂದರೆ..?" ದನಿ ಇಳಿದಿದ್ದರೂ ಕೋಪ ಏರಿಯೇ ಇದ್ದಿತು. ತುಟಿಗಳು ನಡುಗುತ್ತಿದ್ದುವು. ಬಾಯಿಂದ ಮಾತು ತಡೆತಡೆದು ಬರುತಲಿತ್ತು. ಬಾಗಿಲ ಕಡೆಗೆ ಏನೋ ಸ್ವಲ್ಪ ಸದ್ದಾಗಲು "ಯಾರವ? ರಾಯಾ ಏನು?" ಎಂದು ಕೇಳುತ್ತ, ಎದ್ದು ಪಡಸಾಲೆಯ ತುದಿಗೆ ಬಂದರು.

"ಹೌದರೀ, ಅಡಿಗಿಯ ವ್ಯವಸ್ಥೆ ಎಲ್ಲಾ ಆಯ್ತು; ಬೇಡರ ಮನೆಯಿಂದ ಕೋಳೀನೂ ಒಂದು ತಂದ ಕೊಟ್ಟಿನು...."

"ಏನಾದರೂ ಮಾಡಲಿಕ್ಕೇ ಬೇಕಲ್ಲ? ನಾವೊಂದ ಎಣಿಸಿದರೆ ಅದೊಂದು ಆಯ್ತು. ಇರಲಿ; ಅವರ ಊಟ ಉಡಗೆಯ ವ್ಯವಸ್ಥೆ ಅಷ್ಟ ನೆಟ್ಟಗೆ ಮಾಡು, ಏನೂ ಜೊಬ್ಬಾಟ ಬರದಂತೆ" ತಾಯಿಗೆ ಕೇಳದಂತೆ ದನಿ ತಗ್ಗಿಸಿ "ಕೋಳಿಗೆ ನಾಲ್ಕು ರೂಪಾಯಿ ಹೆಚ್ಚು ಖರ್ಚ ಆದರೂ ಅಡ್ಡಿಯಿಲ್ಲ. ಒಮ್ಮೆ ಸಮಾಧಾನದಿಂದ ಹೋಗಲಿ ಊರು ಬಿಟ್ಟು. ನಾನೂ ಈಗ ಫಲಾಹಾರ ತೀರಿಸಿ, ಬರತೇನ ಅಲ್ಲೇ."

"ಸಾಹೇಬರು, ಎಲ್ಲಿಯೋ ಹೊರಗೆ ತಂಬಿಗಿ ತಕ್ಕೊಂಡು ಹೋಗಿದಾರಂತೆ; ಅಜಿತನ ಕಳಿಸು ಅಂದಿದಾರೆ, ಚಾವಡಿ ಕಡೆಗೆ." ಓಲೇಕಾರ ಹೇಳಿದ.

"ಯಾಕೋ ರಾಯಾ, ಅವನನ್ನು ಯಾಕೆ ಕರೆಯುವರು ಪೊಲೀಸರು?" ಮುರದೇವಿ ಕೇಳಿದಳು.

"ಏನೋರಿ..; ಗೌಡರು...."

ಹಳಬನಿಗೆ ಮುಂದೆ ಮಾತಾಡಗೊಡದೆ ಆದಗೌಡ ನಡುವೆಯೇ ಮಾತು ಸೇರಿಸಿ "ಕರೆದು ಕೇಳುವವರೇ ಅಲ್ಲ; ಇವನು ಬೇಕಾದಂತೆ ಮಾತಾಡಿದ ಮೇಲೆ ಅವರೇಕೆ ಬಿಟ್ಯಾರು? ನಾ ಇದ್ದೆನಂತ ಆಗ ಸುಮ್ಮನೆ ಬಿಟ್ಟರು" ಅಜಿತನ ಕಡೆಗೆ ಹೊರಳಿ "ಹೋಗು, ಚಾವಡಿಯೊಳಗೆ ಯಾಕೆ ಕರೆಯುವರು ನೋಡು" ಎಂದು ಆಜ್ಞಾಪಿಸಿದ.

ಅಜಿತಸ್ವಲ್ಪ ಹೆದರಿದ, ಚಾವಡಿಗೆ ಹೋಗಬೇಕಾದರೆ. ಅವನಿಗೆ ಸಂಕಟವಾಗತೊಡಗಿತು. ಮುಖ ಬಿಳುಪೊಡೆಯಿತು. ಏನೇನೋ ಧೇನಿಸಿದ. ಏಕೆ ಕರೆದಿರಬೇಕು? ಏನು ಕೇಳಬಹುದು? ಎಂಬ ಅನೇಕ ಪ್ರಶ್ನೆಗಳು ಮನದೆದುರು ಬಂದು ನಿಂತವು. ಕೊನೆಗೆ ಪೋಲೀಸರಿಗೆ ಹೆದರಬಾರದು. ನಮ್ಮ ಕಾರ್ಯ ಬಿಡಬಾರದು, ಸ್ವಾತಂತ್ರ್ಯ ಬೇಡುವದು ಪ್ರತಿಯೊಬ್ಬ ಭಾರತೀಯನ ಜನ್ಮಸಿದ್ಧ ಹಕ್ಕು. ನಮ್ಮ ಹಕ್ಕಿಗೆ ಯಾರು ಬಾಧೆ ತಂದರೂ ನಾವು ಸುಮ್ಮನಿರಕೂಡದು, ಹೆದರಿ ಹಿಂಜರಿಯಕೂಡದು, ಎಂದು ಮೊದಲಾಗಿ ಹೇಳಿದ ಜಾಧವ ಮಾಸ್ತರರ ಮಾತುಗಳು ನೆನಪಿಗೆ ಬಂದವು. ಎದ್ದು

ಟೊಪ್ಪಿಗೆ ಹಾಕಿಕೊಂಡು ಹೊರಟ.

"ನೀವೂ ಸಂಗಡ ಹೋಗಿರಿ; ಎಲ್ಲಿಯಾದರೂ ಹುಡುಗನಿಗೆ ಹೊಡೆದಾರು, ಬಡದಾರು. ಹಿಂದಿನಿಂದ ಏನ ಮಾಡಿದರೂ ಬಿದ್ದ ಪೆಟ್ಟು ಏನ ಹೋಗ್ತಾವು!" ಕಣ್ಣೀರು ಒರಿಸಿಕೊಳ್ಳುತ್ತ ಸರಸ್ವತಿ ಪಡಸಾಲೆಗೆ ಬಂದು, ಬಿಗಿದು ಬಂದ ಕಂಠದಿಂದ ಹೇಳಿದಳು.

"ಬಡಿಯುಲಿಕ್ಕೆ ಅವರಿಗೇನ ಹುಚ್ಚ ಹತ್ತಿದೆಯೇನು? ಹೋಗು. ಏನಾದರೂ ಚಳವಳಿಯ ಸುದ್ದೀ ಕೇಳತಿರಬೇಕು. ಯಾರ ಮನೆಯ ಹುಡುಗ ಇದ್ದಾನ ಇಷ್ಟ ತಿಳಿಯೂದಿಲ್ಲೇನು ಅವರಿಗೆ? ನಮ್ಮ ಹುಡುಗನ ಮೈಗೆ ಕೈ ಹಚ್ಚಿದರ ಊರೊಳಗಿಂದ ಜೀವದಿಂದ ಉಳಿದ ಹೋದಾರೇನು?" ಮುರದೇವಿ ಸೊಸೆಗೆ ಸಮಾಧಾನ ಹೇಳಿದಳು. ಧ್ವನಿಯಲ್ಲಿ ಹೆಮ್ಮೆಯೂ ಇತ್ತು. ಇರದೆ ಏನು? ನಾಡ ಗೌಡರ ರಕ್ತ ಹೇಗೆ ತಣ್ಣಗಿದ್ದೀತು?

"ನಿಮ್ಮ ಊರಿಗೆ ಅಷ್ಟೇ ನೀವು ಗೌಡರು. ಪೋಲೀಸ ಸಾಹೇಬರ ಮುಂದೆ ನಿಮ್ಮದೇನು ನಡೆಯುವದು...?" ಗೌಡ ಕೇಳಿದ ತಾಯಿಗೆ.

ಸರಸ್ವತಿಗೆ ಗಂಡನ ನೆನಪಾಯಿತು. ಅವರು ಬದುಕಿದ್ದರೆ ಹೀಗೆ ಹುಡುಗನೊಬ್ಬನನ್ನೇ ಚಾವಡಿಗೆ ಕಳಿಸುತ್ತಿದ್ದರೇ..? ತಾವೇ ಹೋಗಿ ಕೇಳದಿರುತ್ತಿದ್ದರೇ? ಎಂಬೆಲ್ಲ ಪ್ರಶ್ನೆಗಳು ಅವಳ ಒಗೆಗೊಳದಲ್ಲಿ ಅಲ್ಲೋಲ ಕಲ್ಲೋಲವನ್ನುಂಟುಮಾಡಿದುವು. ಕಣ್ಣುಗಳಿಂದ ದಳದಳ ನೀರು ಸುರಿಯತೊಡಗಿದುವು ಮಗನನ್ನು ಏಕೆ ಕರೆದರೋ? ಏನು ಮಾಡುವರೋ? ಇದ್ದೊಬ್ಬ ಮಗನ ಗತಿ ಹೀಗೇಕಾಯಿತು? ಎಂಬ ಪ್ರಶ್ನೆಗಳಿಗೆ ಸಮಾಧಾನಕರ ಉತ್ತರ ದೊರೆಯದೆ ತುಂಬ ಹೆದರಿದಳು. ನಡುಗಿದಳು. ಕಣ್ಣಿಗೆ ಕತ್ತಲೆಗವಿದು, ನಿಂತಲ್ಲಿಯೇ ನೆಲಕ್ಕುರುಳಿದಳು.

೪

ಆದಗೌಡನ ಚಾಣಕ್ಯತಂತ್ರದ ಪರಿಣಾಮವಾಗಿ, ಅಂದು ರಾತ್ರಿ ಪೋಲೀಸರು ಚಾವಡಿಯಲ್ಲಿ ಕರೆದು ಬೆದರಿಸಿದುದಕ್ಕೆ ಅಜಿತ ಕೆಲವು

ದಿನ ಸುಮ್ಮನಿದ್ದ. ಹೊತ್ತಿಗೆ ಸಾಲೆಗೆ ಹೋಗಿ ಮನೆಗೆ ಬರುತ್ತಿದ್ದ. ಮನೆಯಲ್ಲಿರುವಾಗಲೂ ಏನಾದರೂ ಓದಿಕೊಳ್ಳುತ್ತಲೇ ಇರುವ. ಯಾವದೋ ವಿಚಾರದಲ್ಲಿ ಮಗ್ನನಾಗಿಯೇ ಇರುವ ಇತ್ತಿತ್ತಲಾಗಿ ಊರಲ್ಲಿ ಪೋಲೀಸರು ಬಂದು ಹೋದಾಗಿನಿಂದ—ಹಾಯ್‌ಸ್ಕೂಲಿನ ಮೇಲೆ ಧ್ವಜ ಹಚ್ಚಿದ ಪ್ರಕರಣದಲ್ಲಿ ಹಲವರು ಪೆಟ್ಟು ತಿಂದುದರಿಂದ—ಪ್ರಭಾತ ಫೇರಿಯ ಜನಬಲವೂ ಕುಂದಿದ್ದಿತು. ಅದರಲ್ಲಿ ಮೊದಲಿನಷ್ಟು ಹುಡುಗರೂ ಇರುತ್ತಿರಲಿಲ್ಲ. ಎಲ್ಲಿಯೋ ಹತ್ತೆಂಟು ಜನ ಹಿರಿಯ ಕಾರ್ಯಕರ್ತರಷ್ಟೇ ತಿರುಗುವರು. ಅವರಿಂದ ಅಜಿತನೂ ಹೋಗುತ್ತಿರಲಿಲ್ಲ. ಆದರೆ ಅವನ ಮನಸ್ಸಿಗೆ ನೆಮ್ಮದಿಯಿಲ್ಲ. ಮದುವೆಯ ಗೊಂದಲದಲ್ಲಿ ನಾಲ್ಕು ದಿನಗಳು ಹೇಗೆ ಹೋದುವೆಂಬುದು ಗೊತ್ತಾಗದೆ, ಎಲ್ಲರೂ ಆಪ್ತೇಷ್ಟರು ತಮ್ಮ ತಮ್ಮ ಊರುಗಳಿಗೆ ಹೋದನಂತರ ಮನೆಯ ಮಕ್ಕಳಿಗೆ ಹೇಗೆ ಮನಸ್ಸು ಭಾರವಾಗಿರುವದೋ ಹಾಗೆಯೇ ಅಜಿತನ ಮನಸ್ಥಿತಿಯಾಗಿದ್ದಿತು. ಮೊದಲಿನಂತೆ ಓದುಮನೆಗೆ ಹೋಗುವ. ಸುದ್ದಿ ಪತ್ರಿಕೆಗಳನ್ನು ಓದುವ. ತರಗತಿಯಲ್ಲಿಯೂ ಜಾಧವ ಮಾಸ್ತರರು ಎಂದಿನಂತೆಯೇ ದೇಶದಲ್ಲಿಯ ಚಳವಳಿಯ ಸುದ್ದಿಯನ್ನು ವಿವರಿಸುವರು. ಧ್ಯೇಯವಾದದ ಕಡೆಗೆ ಬಾಲಕರ ಗಮನವನ್ನು ಸೆಳೆಯುವರು. ಆದರೂ ಅಜಿತನಿಗೆ ಈಗೀಗ ಅದೇಕೋ ಊರ ವಾತಾವರಣ ನಿಸ್ಸಾರವಾದಂತೆನಿಸುವುದು. ಚಳವಳಿಯಿಲ್ಲದ ಜನತೆಯ ಬಾಳು ಭಣಭಣವೆನಿಸುವುದು.

ಒಂದಿನ ನಾಲ್ಕಾರು ಜನ ಗೆಳೆಯರು ಕೆರೆಯ ಒಡ್ಡಿನ ಮೇಲೆ ಕುಳಿತು, ಭಾರತಕ್ಕೆ ಸ್ವಾತಂತ್ರ್ಯ ದೊರೆಯಬೇಕಾದರೆ ಏನೇನು ಮಾಡಬೇಕೆಂಬುದನ್ನು ಕುರಿತು ಚರ್ಚೆಯನ್ನಾರಂಬಿಸಿದ್ದರು. ಅಜಿತ ಭಾವನೆಯ ಕಾವಿನಲ್ಲಿ ತಟ್ಟನೆ ನುಡಿದ. "ಒಕ್ಕಲ್ಲೇ ಇಂಗ್ಲೀಷರನ್ನು ಹೊಡೆದು ಹಾಕಬೇಕು.."

"ಅದು ದುಷ್ಕರ ಕೆಲಸ; ಅದಕ್ಕೆ ಮಹಾತ್ಮರು ಒಪ್ಪುವದಿಲ್ಲ," ಎಂದ, ಸ್ವಲ್ಪ ಹಿರಿಯ ಹುಡುಗನೊಬ್ಬ.

"ಅವರನ್ನು ಹೊಡೆಯಲಿಕ್ಕೆ ಯಾತಕ್ಕೆ ಬೇಕು? ನಮ್ಮ ಜನರಲ್ಲೇ ಒಕ್ಕಟ್ಟು ಇಲ್ಲ. ಮೊನ್ನೆ ನಮಗೆ ಬೆದರಿಕೆ ಹಾಕಿದವರು ಯಾರು?

ಯುರೋಪಿಯನ್ನರೊ? ನಮ್ಮ ದೇಶದವರೇ ಅಲ್ಲ! ಹೆಡ್‌ಮಾಸ್ತರರು ಯಾರವರು? ಅವರಿಗೇಕೆ ಬೇಕಪ್ಪಾ, ಈ ಪೊಲೀಸರನ್ನು ಕರೆಸುವ ಉದ್ಯೋಗ?" ಎಂದ ಇನ್ನೊಬ್ಬ.

"ಕರೆಸದಿದ್ದರೆ ಅವರ ನೌಕರಿ ಹೋಗ್ತದ.."

"ಅದೇ ನೋಡು; ಇವರು ನೌಕರಿಗಾಗಿ ಬೇಕಾದದ್ದನ್ನು ಮಾಡ್ತಾರೆ. ಸ್ವರಾಜ್ಯ ಸಿಗು ಅಂದರೆ ಹ್ಯಾಗೆ ಸಿಕ್ಕೀತು? ಈ ಹೊತ್ತು ಎಲ್ಲರೂ ಕೆಲಸ ಬಿಡಲಿ, ನಾಳೆ ಯಾತಕ್ಕೆ ಇಲ್ಲಿ ನಿಲ್ಲತಾರೆ ನೋಡೋಣು, ಬ್ರಿಟಿಷರು."

"ಅದು ಅಶಕ್ಯ ಮಾತು...." ಎಂದ ಅಜಿತ.

"ಎಲ್ಲರೂ ನಿಮ್ಮ ಕಕ್ಕನ ಅಂಥವರೇ ಇರತಾರೇನು?" ಚುಚ್ಚಿ ಆಡಿದ ಇನ್ನೊಬ್ಬ.

"ಇರಲಿ ಬಿಡು; ಅದನ್ನೇನು ಹೇಳುವಿ? ನಮ್ಮ ಊರಲ್ಲಿ ಒಬ್ಬ ಮಾದಿಗರ ಮುದುಕ ಇದ್ದಾನೆ. ಆತ ಮಂತ್ರ ಮಾಡ್ತಾನೆ. ಆ ಮಂತ್ರ ದಿಂದ ಮಾತ್ರ ಯಾರಿಗೂ ಗೊತ್ತಾಗದಂತೆ ಇಲ್ಲಿಂದ ಇಂಗ್ಲೀಷರನ್ನು ಓಡಿಸಲಿಕ್ಕೆ ಬರ್ತದೆ, ನೋಡು." ಇಲ್ಲಿಯ ವರೆಗೆ ಸುಮ್ಮನಿದ್ದ ನೆರೆ ಹಳ್ಳಿಯ ಹುಡುಗನೊಬ್ಬ ನುಡಿದ, ಆ ವಿಷಯದ ಮೇಲಿರುವ ತನ್ನ ವಿಶ್ವಾಸವನ್ನು ಪ್ರದರ್ಶಿಸುತ್ತ.

"ಅವನಿಗೆ ಓಡಿಸು ಅಂತ ಹೇಳಬೇಕು?"

"ಅವರಿಗೆ ಇಂಥ ವಿಚಾರಗಳೇ ಬರುವದಿಲ್ಲ!"

ಸ್ವಲ್ಪ ಹೊತ್ತು ಎಲ್ಲರೂ ಮೌನವಾಗಿ ಕುಳಿತರು. ಕೆರೆಯ ಆಚೆಯ ದಡದಲ್ಲಿ ಜನರು ನೀರಿಗೆ ಬಂದು ಹೋಗುತ್ತಿದ್ದರು. ಅವರ ಸಮೀಪ ದಲ್ಲಿಯೇ ನಾಯಿಯೊಂದು ಬಂದು ನೀರು ಕುಡಿಯಲು ಹವಣಿಸಿತು. ದಂಡೆಯೊಳಗೆ ಅವಿತು ಕುಳಿತ ಕಪ್ಪೆಗಳು ನೀರೊಳಗೆ ಹಾರಿದುವು. ನೀರಿ ನಲ್ಲಿ ಮೆಲ್ಲನೆ ತರಂಗಗಳು ಏಳಲಾರಂಭಿಸಿದುವು. ಗಿಡಗಳ ಸಂದಿಯೊಳ ಗಿಂದ ಸಂಜೆಯ ಹೊಂಬಿಸಿಲು ಕೆರೆಯ ಮೇಲೆಲ್ಲ ಹರಡಿದ್ದಿತು.

"ಊರಿಗೆ ಹೋದಾಗ, ಆ ಮಂತ್ರ ನನಗೆ ಕಲಿಸುವನೇನು ಕೇಳಿ ಕೊಂಡು ಬಾ." ಅಜಿತ ಮೌನ ಮುರಿದ. ಸ್ವರದಲ್ಲಿ ನಿರ್ಧಾರವಿತ್ತು.

" ಮಂತ್ರ ಕಲಿಯುವದು ಬಹಳ ಕಷ್ಟಕರ; ನಮ್ಮಂಥವರಿಗೆ ಸಾಧ್ಯ ಮಾಡಿಕೊಳ್ಳುವದು ಆಗದ ಮಾತು.''

" ಇರಲಿ; ನಾನು ಕಲಿಯುವೆ.. ''

" ನೋಡು, ಆದಿತ್ಯವಾರ ಅಮಾವಾಸ್ಯೆಯ ದಿವಸ ರಾತ್ರಿ ಸ್ಮಶಾನದೊಳಗ ಹೋಗಿ, ಮಂತ್ರ ಪಠಿಸುತ್ತ ಕೂಡಲಿಕ್ಕೆ ಬೇಕು.''

" ಓಹೋ, ಬೇಕಾದದ್ದ ಇರಲಿ; ಮಾಡುವೆ. ಆತ ಕಲಿಸುವನೇನು ಕೇಳಿಕೊಂಡು ಬಾ ನೀ" ಮೊದಲಿನ ಉತ್ಸಾಹದಲ್ಲಿಯೇ ಹೇಳಿದ, ಅಜಿತ.

ಮುಂದೆ ಕೆಲದಿನಗಳಲ್ಲಿ ಮಂತ್ರವನ್ನು ಕಲಿಯಲು ಪ್ರಯತ್ನಿಸಿಯೂ ಆಯಿತು. ಅದರ ಫಲವಾಗಿ ಅಜಿತನು ಮೂರು ವಾರ ಜ್ವರದಿಂದ ಮಲಗಿಕೊಂಡ. ಜ್ವರದಲ್ಲಿ ಅಜಿತ ಇನ್ನೂ ಮಂತ್ರ ಪಠಿಸುತ್ತಲೇ ಇದ್ದ; ಬ್ರಿಟಿಷರನ್ನು ಭಾರತದಿಂದ ಓಡಿಸುತ್ತಲೇ ಇದ್ದ. ನಡುನಡುವೆ ಪೋಲೀಸರಿಗೂ ಬಯ್ಯುವ. ಹತ್ತರ ಕುಳಿತ ಆಡಗೌಡನು ಮಾತ್ರ ಜ್ವರದಲ್ಲಿ ಹುಡುಗ ಏನೇನೋ ಕನವರಿಸುತ್ತಿದ್ದಾನೆ, ಎಂದುಕೊಂಡಿರಬೇಕು. ಆದರೂ ಒಳಮನಸ್ಸಿನಲ್ಲಿ 'ಪೋಲೀಸರಿಗೆ ಹೇಳಿ ಬೆದರಿಕೆ ಹಾಕಿದ್ದೇನೋ ಒಳಿತೇ ಆಯಿತು. ಹೆದರಿ ನಾಲ್ಕು ದಿನ ಜ್ವರದಿಂದ ನೆರಳವಲ್ಲನೇಕೆ? ಹುಡುಗ ಹಾದಿಗೆ ಬಂದ. ಇನ್ನು ಮಾತ್ರ ಎಂದೂ ಇಂಥ ಕೆಲಸಕ್ಕೆ ಹೋಗಲಿಕ್ಕಿಲ್ಲ.' ಎಂದು ಕೊಂಚ ಸಮಾಧಾನವೂ ಆಗುವದು. ಅಲ್ಲೇ ಅಜಿತನ ತಲೆದಿಸೆಗೆ ಕುಳಿತ ಸರಸ್ವತಿಯ ಮುಖವನ್ನು ಕಂಡೊಡನೆ 'ಹುಡುಗ ಒಮ್ಮೆ ಈ ಜ್ವರದೊಳಗಿಂದಲಾದರೂ ಏಳಲಿ' ಎಂದುಕೊಂಡು ನಸು ಚಿಂತೆಯೂ ಚೇತರಿಸುವುದು. ಮತ್ತೊಮ್ಮೆ 'ಪೋಲೀಸರು ಬೆದರಿಕೆ ಹಾಕಿದ ಮೇಲೆ ಎಷ್ಟೋ ದಿನಗಳ ವರೆಗೆ ನೆಟ್ಟಗೆ ಇದ್ದನಲ್ಲ. ಅದಕ್ಕೂ ಈ ಜ್ವರಕ್ಕೂ ಸಂಬಂಧವೇನು?' ಎಂದು ತಾನು ನಿರ್ದೋಷಿಯಾಗಲೂ ಮನದಲ್ಲಿಯೇ ಯೋಚಿಸುವ. ಅದೇ ವಿಚಾರಸರಣಿಯಲ್ಲಿಯೇ ಇನ್ನೊಮ್ಮೆ ಪೋಲೀಸ ಸಾಹೇಬರಿಗೆ ರಿಪೋರ್ಟು ಕೊಟ್ಟು, ಅಜಿತ ನೆಟ್ಟಗಾಗುವುದರಲ್ಲಿ ಈ ಪ್ರಭಾತ ಫೇರಿಯನ್ನಿಷ್ಟು ನಿಲ್ಲಿಸಿಬಿಡುವೆ. ಅಂದರೆ ಊರೊಳಗಿನ ಚಳವಳಿಯೊಮ್ಮೆ ಇಲ್ಲದಂತಾಗುವುದು. ಅಂದಮೇಲೆ ಇವನು ಯಾರಲ್ಲಿ ಸೇರುವ? ನಾನು ಯಾರ ಹೊಟ್ಟೆಯಿಂದ ಹುಟ್ಟಿದವನಿರುವೆ

ಗೊತ್ತಿಲ್ಲವೆ? ನಮ್ಮ ಊರಲ್ಲಿ ಚಳವಳಿ ಮಾಡಿದರೆ ನಡೆದೀತೆ?' ಎಂದು ಹೆಮ್ಮೆಯ ನಗೆಯೊಂದು ಮುಖದಲ್ಲಿ ಮೂಡುವದು.

ಅಜಿತನಿಗೆ ಜ್ವರ ಹೆಚ್ಚಾದುವು. ವಿಷಮ ಸೀತಜ್ವರವೆಂದು ಡಾಕ್ಟರರು ಅಭಿಪ್ರಾಯ ಪಟ್ಟರು. ಮುರದೇವಿಯ ಕಣ್ಣುಗಳಿಂದಂತೂ ಮೊಮ್ಮಗನ ಬೇನೆಯ ಚಿಂತೆಯಿಂದ ಹಗಲಿರುಳೂ ನೀರೇ ನಿಂತಿರಲಿಲ್ಲ. ಮುಂಬಯಿ ಯಿಂದ ಇಂದಿರಕ್ಕನೂ ತಮ್ಮನನ್ನು ನೋಡಬಂದಳು. ಬರುವಾಗ ತಮ್ಮನಿಗೆ ಕೊಡಲು ಮೋಸಂಬಿ ಹಣ್ಣುಗಳನ್ನು ತಂದಿದ್ದಳು. ಮಗಳು ಬಂದಾಗಿ ನಿಂದಲೂ ಅಜಿತನ ಆರೈಕೆಯ ಹೊಣೆಯು ಸರಸ್ವತಿಯ ಮೇಲಿಂದ ಸ್ವಲ್ಪ ಕಡಿಮೆಯಾಗಿದೆ. ಈಗೀಗ ಅಜಿತನಿಗೂ ಗುಣಮುಖವಾಗಿದೆ. ಇನ್ನೂ ಹಾಸಿಗೆಯಲ್ಲಿ ಎದ್ದು ಕೂಡಲು ಶಕ್ತಿ ಸಾಲದೆ ಹೋದರೂ ಮಲಗಿದಲ್ಲಿಯೇ ಚನ್ನಾಗಿ ಮಾತಾಡುತ್ತಿದ್ದ. ಒಂದು ದಿನ ಅವನ ಹಾಸಿಗೆಯ ಹತ್ತರ ಯಾರೂ ಇಲ್ಲದ ಹೊತ್ತನ್ನು ಸಾಧಿಸಿ, ಚಳವಳಿಯ ಕತೆಯನ್ನೂ ಅದ ರಲ್ಲಿ ಅಜಿತ ಸೇರಿದ ಸಂಗತಿಯನ್ನೂ ಪೋಲೀಸರು ಮಗನನ್ನು ಜೆದರಿಸಿದ ಬಗ್ಗೆಯೂ ಸರಸ್ವತಿ ಮಗಳಿಗೆ ವಿವರಿಸಿದಳು. ಕಣ್ಣೀರು ಸುರಿಸಿದಳು.

ಅದಕ್ಕೆ ಇಂದಿರೆಯು "ಬಿಡು, ಸೇರಿದರೆ ಏನಾಯ್ತು? ಈ ಹಳ್ಳಿ ಯಲ್ಲಿ ಅಷ್ಟೇನೂ ಚಳವಳಿ ಇರಲಿಕ್ಕಿಲ್ಲ. ಕೆಲ ದಿನಗಳ ಹಿಂದೆ ನಮ್ಮಲ್ಲಿ ಪ್ರಿನ್ಸ ಆಫ್ ವೇಲ್ಸ ಎಂಬವರು ಬಂದಿದ್ದರು. ಆ ದಿನ ಊರಲ್ಲಿ ಎಲ್ಲ ಕಡೆಗೂ ಕರಿ ನಿಶಾನೆಯ ಹಾರಾಟವೇ. ಅಲ್ಲಲ್ಲಿ ಪರದೇಶೀ ಅರಿವೆಗಳನ್ನೇ ಸುಟ್ಟರು. ನಮ್ಮವರು ಮದಿವೆಯೊಳಗಿನ ರುಮಾಲನ್ನು ಒಯ್ದು ಸುಟ್ಟೇ ಬಿಟ್ಟರು. ಈಗ ಎಲ್ಲಿಂದಲೋ ಆರು ದುಡ್ಡಿನ ಗಾಂಧಿ ಟೊಪ್ಪಿಗೆ ಹಾಕಿ ಕೊಳ್ಳುವರು!" ಎಂದು ತವರ್ರೂರ ಪರಿಸ್ಥಿತಿಯನ್ನು ಆವೇಶದಿಂದ ಹೇಳಿದಳು.

"ನಮ್ಮಲ್ಲಿನೂ ಅರಿವೆ ಸುಟ್ಟರಲ್ಲ!"

"ಅಕ್ಕಾ, ನನ್ನನ್ನೂ ಮುಂಬಯಿಗೆ ಒಯ್ಯುವಿ?" ಅಜಿತ ಅವಳಿಗೆ ಅಂಗಲಾಚಿದ.

ಮತ್ತೆ ಹೊರಡಬಾರದ—ಹುಡುಗನನ್ನು ಕೆಡಿಸಿದ—ವಿಷಯವೇ ಹೊರಟುದರಿಂದ ಸರಸ್ವತಿಯು ಮಾತು ಹೊರಳಿಸಿದಳು. "ಮೊದಲು

ನೆಟ್ಟಗಾಗಿ ಏಳು. ಆಮೇಲೆ ಹೋಗುವಿಯಂತೆ. ಈಗ ಒಂದು ಕಪ್ಪು ಕಾಫೀ ಮಾಡಿ ತರಲಿ.., ಕುಡಿಯುವಿ..?" ಎಂದು ಕೇಳಿದಳು.

"ನೀ ಕೂಡಲ್ಲ ; ನಾನೇ ಒಂದು ಕಪ್ಪು ಮಾಡಿ ತರುವೆ.." ಎಂದು ಇಂದಿರೆ ಚಟ್ಟನೆ ಎದ್ದು ಒಳಗೆ ಹೋದಳು.

ಆಗ ಬಾಯಲ್ಲಿ ಯಾವುದೋ ಒಂದು ಪದವನ್ನು ಗುಣಗಣಿಸುತ್ತಿದ್ದಳು. ತಲೆಯ ಮೇಲಿಂದ ಸೀರೆಯ ಸೆರಗು ಸರಿದು ಹೆಗಲ ಮೇಲೆ ಬಿದ್ದಿದ್ದಿತು. ದೊಡ್ಡ ತುರುಬಿಗೆ ಮುಡಿದ ಮಲ್ಲಿಗೆ ಕೋಣೆಯಲ್ಲಿ ಕುಳಿತ ಕಕ್ಕನ ದೃಷ್ಟಿಗೆ ಬಿತ್ತು. ಹಾಗೆಯೇ ಕಿರುದೋಳಿನ ಕುಪ್ಪುಸವೂ ಅವನ ದೃಷ್ಟಿಯನ್ನು ಸೆಳೆಯಿತು. ಆಗಿನ ಅವಳ ನಡೆಯಲ್ಲಿ ಹೊಮ್ಮುವ ನವ ತಾರುಣ್ಯದ ಝುಳುಕು ಸೆಳೆತಗಳೂ ಲಕ್ಷಕ್ಕೆ ಬಂದುವು. ಇವೆಲ್ಲ ಅವನಿಗೆ ಅಸಹ್ಯವೆನಿಸಿದುವು. ಸಮೀಪದಲ್ಲಿಯೇ ಇದ್ದ ತಾಯಿಗೆ ಅಂದನು.

"ಈಗಿನ ಹೆಂಗಸರ ನಡತೆಯೇನು? ಉಡಿಗೆಯೇನು? ಒಂದೂ ದೊಡ್ಡ ಮನೆತನದವರಿಗೆ ಒಪ್ಪುವಂತೆ ಇಲ್ಲ ನೋಡು."

"ಹೇಗೆ?" ಎಂದಳು ಮುರುದೇವಿ, ಮಗನ ಮನದಿಂಗಿತವನ್ನು ಅರಿಯದೆ.

"ನೋಡಲ್ಲ, ಇಂದಿರೆಯನ್ನ. ಅವಳು ಕೂದಲು ಕಟ್ಟುವ ರೀತಿಯೇನು? ಆ ಬ್ಲಾವುಜೇನ..? ಗೋಣು ಹಾಕಿ ಹಾಡತಾಳೇನು? ಓಡತಾಳೇನು? ಏನಾದರೆ ಸ್ವಲ್ಪ ಮರ್ಯಾದೆ ಇದೆಯೇ?"

"ಮರ್ಯಾದೆ ಇರಲಿಕ್ಕೇನಾಯಿತು? ಈಗ ಜಗತ್ತ ಹೇಗೆ ನಡೆದದೆ ಹಾಗೆ ಇರತಾರ ಅಯ್ಯು!"

ಎಂದೇನೋ ಮಗನಿಗೆ ಸಮಾಧಾನ ಹೇಳಿದಳಾದರೂ ಅವಳ ಮನಸ್ಸಿಗೂ ಇಂದಿರೆಯ ಉಡುವು ತೊಡುವುಗಳು ಸೇರಿಕೆಯಾಗಿರಲಿಲ್ಲ. ಆದರೆ ತಾನೂ ಆದಗೌಡನಿಗೆ ಅನುಕೂಲವಾಗಿಯೇ ನುಡಿದರೆ ಆತ ಮತ್ತಿಷ್ಟು ಮೊಮ್ಮಗಳ ಮೇಲೆ ಸಿಟ್ಟಾಗುವನೆಂಬುದು ಅವಳಿಗೆ ಗೊತ್ತು. ಹೆತ್ತವಳೆಂದ ಮೇಲೆ ಅವನ ಗುಣವನ್ನರಿಯದೆ ಇರುವಳೇ? ತವರುಮಲ ಗಿರುವನೆಂದು ಮನೆಗೆ ಬಂದ ಇಂದಿರೆ ನಾಲ್ಕು ದಿನ ಸಮಾಧಾನದಿಂದ ಕಾಲ ಕಳೆದು ಹೋಗಲಿ, ಅವಳ ಗಂಡನಿಗೇ ಹೀಗಿರುವುದು ಮನಸ್ಸಿಗೆ

ಬರುವದೆಂದ ಮೇಲೆ ನಾವೇಕೆ ಹೇಳಿ ಕೆಡಕು ಅನ್ನಿಸಿಕೊಳ್ಳಬೇಕು? ಎಂದು ಯೋಚಿಸಿಯೇ ಅವಳು ಸುಮ್ಮನಿದ್ದಳು. ಆದರೆ ಇಂದು ಮಗನೂ ಹೀಗಾಡಿದ ಮೇಲೆ ಹಳೆಯ ಸಂಸ್ಕಾರವು ಅವಳಿಗೆ ಸುಮ್ಮನಿರಗೊಡಲಿಲ್ಲ. ಇಂದಿರೆಯನ್ನು ಒತ್ತಟ್ಟಿಗೆ ಕರೆದು ಮೃದು ನುಡಿಯಲ್ಲಿ ಸೂಚನೆಯಿತ್ತಳು. ಅವಳಿಗೆ ಅಜ್ಜಿಯ ಈ ಉಪದೇಶದಲ್ಲಿ ಏನೂ ಅರ್ಥವಿಲ್ಲವೆಂದೆನಿಸಿತು. 'ಶೀಲ, ಸುಗುಣಗಳು ಉಡಿಗೆತೊಡಿಗೆಗಳ ಮೇಲೆ ಅವಲಂಬಿಸಿಲ್ಲ' ಎಂದು ಹೇಳಬೇಕೆಂದು ಎನಿಸಿತಾದರೂ ಹಾಗೆ ಹೇಳಗೊಡಲಿಲ್ಲ ಅವಳ ವಿನಯಗುಣ.

ಅಜಿತ ಬೇನೆಯಿಂದ ಎದ್ದು ನಾಲ್ಕೆಂಟು ದಿನಗಳಾಗಿತ್ತು. ಸಾಲೆಗೆ ಬರುತ್ತಿದ್ದ. ಇನ್ನೂ ಮೈಯಲ್ಲಿ ಅಶಕ್ತತೆಯಿತ್ತು. ಮುಖ ಬಿಳುಪಾಗಿತ್ತು. ಸಾಲೆಯಲ್ಲಿ ಶಿಕ್ಷಕರೂ ಇನ್ನೂ ಅಷ್ಟು ಜೋರಾಗಿ ಓದಬೇಡವೆಂದು ಅವನಿಗೆ ಮೇಲಿಂದ ಮೇಲೆ ಸೂಚಿಸುತ್ತಿದ್ದರು. ಮನೆಯಲ್ಲಿ ಒಬ್ಬನೇ ಕುಳಿತು ಹೊತ್ತು ಹೋಗದೆಂದು ಅಜಿತ ಸಾಲೆಗೆ ಹೋಗುತ್ತಿದ್ದ. ಇಷ್ಟರಲ್ಲಿ ಅಕಸ್ಮಾತ್ತಾಗಿ ಗಾಂಧೀಜಿಯವರಿಗೆ ಅಹಮ್ಮದಾಬಾದ ಕೋರ್ಟು ಆರು ವರ್ಷ ಶಿಕ್ಷೆ ವಿಧಿಸಿತೆಂಬ ಸುದ್ದಿ ಹತ್ತಿತು. ಸರಕಾರದ ಈ ಕಾರ್ಯಕ್ಕೆ ದೇಶವೆಲ್ಲ ನಿಷೇಧ ವ್ಯಕ್ತಪಡಿಸುತ್ತಲಿದೆ ಎಂಬುದೂ ಗೊತ್ತಾಯಿತು. ಇದರಿಂದ ಅಜಿತನ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ತಾವೂ ಸ್ಕೂಲಿಗೆ ಹೋಗದೆ, ಹರತಾಳ ಪಾಲಿಸುವುದೆಂದು ಮನದಲ್ಲಿಯೇ ಗೊತ್ತುಮಾಡಿದ. ಅದರಂತೆ ನಡುವಿನ ವಿರಾಮದ ಕಾಲದಲ್ಲಿ ಸಂಗಡಿಗರೊಡನೆ ಮಾತಾಡಿ ನಿಶ್ಚಯಿಸಿದ. ಆ ಮಾತನ್ನು ತಮ್ಮೊಲವಿನ ಜಾಧವ ಮಾಸ್ತರರ ಕಿವಿಯ ಮೇಲೂ ಇಟ್ಟರು.

ವಿದ್ಯಾರ್ಥಿಗಳೆಲ್ಲ ತಮ್ಮ ತಮ್ಮಲ್ಲಿ ಮಾತಾಡಿಕೊಂಡಂತೆ ಮರುದಿನ ಮುಂಜಾನೆಯೇ ಊರೊಳಗಿನ ಪ್ರಾಥಮಿಕ ಶಾಲೆಯ ಬಾಲಕರಿಗೆ ಹೇಳಿ ಸಾಲೆಗೆ ಬರದಂತೆ ಮಾಡಿದರು. ಆದರಂತೆ ಹೆಣ್ಣುಮಕ್ಕಳನ್ನೂ ತರುಬಿದರು. ಒಂಬತ್ತು ಗಂಟೆಯ ವರೆಗೆ ಮುಖ್ಯ ಮುಖ್ಯ ಬೀದಿಗಳಲ್ಲಿ ತಿರುಗಾಡಿ, 'ಇಂದು ಸಾಲೆಗೆ ಬಿಡುವು, ಗಾಂಧೀಜಿಯವರಿಗೆ ಶಿಕ್ಷೆಯಾಗಿದೆ, ಹೋಗಕೂಡದು, ಮಾಸ್ತರರೇ ಬರಬೇಡೆಂದಿದಾರೆ' ಎಂದು

ಮೊದಲಾಗಿ ಹೇಳಿ, ತಮ್ಮ ಕಾರ್ಯ ಸಾಧಿಸಿಕೊಂಡರು. ಆ ದಿನ ಸಾಲೆಗಳಲ್ಲಿ ಕೇವಲ ಶಿಕ್ಷಕರಷ್ಟೇ ಕುಳಿತಿದ್ದರು.

ಈ ಗುಟ್ಟು ಹತ್ತು ಗಂಟೆಗೆಂದರೆ ಹಾಯಸ್ಕೂಲಿನ ಹೆಡ್‌ಮಾಸ್ತರರಿಗೆ ತಿಳಿಯಿತು. ತಿಳಿದೊಡನೆಯೇ 'ಮತ್ತೇನು ಬಂತಪ್ಪ ಸಂಕಟ!' ಎಂದುಕೊಂಡರು. ಕೆಲ ದಿನಗಳ ಹಿಂದೆ ಸಾಲೆಯ ಮೇಲೆ ಧ್ವಜ ಹಚ್ಚಿದ ಪ್ರಕರಣದಲ್ಲಿ ರಿಪೋರ್ಟ ಮಾಡಿ, ಅಪಮಾನವನ್ನು ಮನೆಗೆ ಕರೆದುಕೊಂಡಂತಾಗಿದ್ದಿತು. ಮನುಷ್ಯತ್ವವಿಲ್ಲದ ಪೋಲಿಸರ ವರ್ತನ ಅವರ ಮನವನ್ನು ಅಲುಕಿಸಿತ್ತು. ಈ ಚಳವಳಿಯುವರಿಗೆ ನಮ್ಮ ಸ್ಕೂಲು ಕಾಲೇಜುಗಳೇ ಮುಳುವು ಆಗಿರುವವೇನು? ಎಂದುಕೊಂಡರು ಮನದಲ್ಲಿ. ಕೆಲವು ಕಾಲ ಏನೂ ತಿಳಿಯದೆ ಸ್ತಬ್ಧರಾಗಿ ಕುಳಿತರು, ಕೊನೆಗೆ ಮುಳ್ಳಿನಿಂದಲೇ ಮುಳ್ಳನ್ನು ತೆಗೆಯುವದೆಂದು ಯೋಚಿಸಿ ಜಾಧವ ಮಾಸ್ತರರನ್ನು ಕರೆಯ ಕಳುಹಿದರು.

ಸ್ವಲ್ಪ ಹೊತ್ತಿನಲ್ಲಿ ಜಾಧವ ಮಾಸ್ತರರು ಬಂದೊಡನೆ "ಬರ್‍ರಿ!" ಎಂದು ಸ್ವಾಗತಿಸಿ, ಎದುರಿನ ಕುರ್ಚಿಯ ಮೇಲೆ ಕೂಡಿಸಿ "ಇಂದೇನೋ ಊರೊಳಗಿನ ಸಾಲೆಯ ಹುಡುಗರೆಲ್ಲ ಹರತಾಳ ಪಾಲಿಸಿರುವರಂತೆ" ಎಂದು ಜಾಧವ ಮಾಸ್ತರರ ಮುಖವನ್ನೇ ನಿರೀಕ್ಷಿಸುತ್ತ ನುಡಿದರು.

ಸ್ವಾಭಾವಿಕವಾದ ಮುಗುಳುನಗೆಯೊಂದನ್ನು ಬೀರಿ "ಈಗ, ಇತ್ತ ಬರುವಾಗ ಯಾರೋ ಅಂದದ್ದು ಕೇಳಿದಂತೆ ಆಯ್ತು; ಯಾವ ಸಾಲೆಯ ಹುಡುಗರು ಮಾಡಿದ್ದಾರೆ?" ಎಂದ ಜಾಧವ ಮಾಸ್ತರ ಬೀಸಿ ಬಲೆಯನ್ನೊಗೆದು ದೂರ ಕುಳಿತ ಜಾಲಗಾರನಂತೆ.

"ನಿಮಗೆ ಗೊತ್ತೇ ಇಲ್ಲ? ಯಾವ ಚಟುವಟಿಕೆಯಾದರೂ ನಮ್ಮ ಸ್ಕೂಲಿನಿಂದಲೇ ಆರಂಭವಾಗುವುದು. ನಮ್ಮ ಹಾಯ್‌ಸ್ಕೂಲಿನ ಹುಡುಗರೇ ಓಣಿಯೋಣಿ ತಿರುಗಿ, ಎಲ್ಲ ಸಾಲೆಯ ವಿದ್ಯಾರ್ಥಿಗಳನ್ನೂ ಮನೆಯ ಕಡೆಗೆ ತಿರುಗಿಸಿದಾರಂತೆ. ನಮ್ಮ ಕಮಲ ತಿರುಗಿ ಮನೆಗೆ ಬಂದಾಗ ನನಗೆ ಗೊತ್ತಾಯಿತು. ಬೆದರಿಸಿ ಈಗ ಆಕೆಯನ್ನು ಹಳಬನಗೂಡ ಸಾಲೆಗೆ ಕಳಿಸಿ ಕೊಟ್ಟೆ.."

"ನಮ್ಮ ಸ್ಕೂಲಿಗೇನ ಬರಲಿಕ್ಕಿಲ್ಲ.. ಬಿಡರಿ.. ಈ ದಾಳಿ..?" ಜಾಧವ ಮಾಸ್ತರರು ಬೇಕಂತಲೇ ಎಂದರು.

"ಏನು ಹುಚ್ಚ ಇದ್ದೀರಿ ನೀವು? ಊರೊಳಗಿನ ಉಳಿದ ಸಾಲಿ ಬಂದ ಮಾಡಿಸಿದವರು ತಾವೇ ಸಾಲೆಗೆ ಬಂದಾರೇ ?" ಹೆಡ್‌ಮಾಸ್ತರರು ಕೇಳಿ ಸುಮ್ಮನಾದರು.

ಜಾಧವ ಮಾಸ್ತರರು ಮುಂದೇನೂ ಹೇಳಲಿಲ್ಲ. ಅವರ ದೃಷ್ಟಿ ಗಡಿಯಾರದ ಮೇಲಿತ್ತು. ಮುಂದಿನ ಹಲ್ಲುಗಳಿಂದ ಎಡಗೈ ನಡು ಬೆರಳಿನ ಬದಿಯನ್ನು ಒತ್ತಿ ಹಿಡಿದಿದ್ದರು. ಯಾವದೋ ಯೋಚನೆಯಲ್ಲಿದ್ದಂತೆ ಅವರ ಮುಖಮುದ್ರೆಯಿತ್ತು. ಮುಂದೆ ಹೆಡ್‌ಮಾಸ್ತರರೇ ಹೇಳತೊಡಗಿದರು.

"ಈಗಂತೂ ಹತ್ತೂವರೆ ಹೊಡೆಯಿತು. ಸ್ಕೂಲಿನ ಮುಂದೆ ಅವರ ಗೊಂದಲ ಇಷ್ಟರಲ್ಲೇ ನಡೆದಿರಬೇಕು. ಅಜಿತನನ್ನೂ ಉಳಿದ ನಾಲ್ಕಾರು ಮುಖ್ಯ ಹುಡುಗರನ್ನೂ ಕರಿಸಿ ಹೇಳಿಬಿಡಿರಿ. ನಿಮ್ಮ ಮಾತನ್ನು ಕೇಳುವರವರು!"

ಎದುರಿಗಿನ ಗೋಡೆಯ ಮೇಲಿನ ಗಡಿಯಾರದ ಎರಡು ಮುಳ್ಳುಗಳಿಗೂ ಜಾಧವ ಮಾಸ್ತರರ ದ್ವಿಧಾ ಚಿತ್ತಕ್ಕೂ ಸಾಮ್ಯವಿತ್ತು. ಮಿನಿಟಿನ ಮುಳ್ಳಿನಂತೆ ದೇಶಭಕ್ತಿಯ ಭಾವನಾತರಂಗವು ಮುನ್ನೋಡಿದರೆ ಮುಖ್ಯಾಧ್ಯಾಪಕರ ಆಜ್ಞಾ ಪಾಲನ ಮಾಡಬೇಕೆಂಬ ಮನೋವೃತ್ತಿಯು ತಾಸಿನ ಮುಳ್ಳಿನಂತೆ ಸಾವಕಾಶವಾಗಿ ತಿರುಗುತ್ತಿದ್ದಿತು. ಆದರೂ ಅದು ಒಮ್ಮೊಮ್ಮೆ ಕೇಳುವುದು:

"ನಾನಿಲ್ಲದೆ ನೀನೆಷ್ಟು ಓಡಿದರೇನು?" ಎಂದು, ಉದರ ಪೋಷಣೆಯ ಸ್ಮೃತಿಯನ್ನು ಕೊಟ್ಟು ಹೆಮ್ಮೆಯಿಂದ.

"ನಾನು ಅರವತ್ತು ಹೆಜ್ಜೆ. ಇಟ್ಟಾಗಲೇ ನೀನೊಂದು ಹೆಜ್ಜೆ ಮುಂದೆ ಬರುವಿಯಲ್ಲವೆ?" ಎಂದು ಮರುಪ್ರಶ್ನೆ.

"ಏಕೆ ಸುಮ್ಮನಾದಿರಿ?" ಮುಖ್ಯಾಧ್ಯಾಪಕರ ಗಂಭೀರವಾದ ಪ್ರಶ್ನೆಯಿದು.

"ನನ್ನ ಮಾತ ಏನ ಕೇಳತಾರ ಅವರು? ಫೌಜದಾರ ಅಂದರೆ ಅವರಿಗೆ ಹೇಗೆ ವಾದ ಹಾಕಿದರು ನೋಡಲಿಲ್ಲ ಹಿಂದಕ್ಕೆ? ಈ ವಿಷಯದಲ್ಲಿ ನಮ್ಮ ಬೆಲೆಯೇನವರಿಗೆ?"

"ನಾವು ಬೆಲೆ ಕಾಯ್ಕೊಂಡರೆ ಇರತದ.. ಇಲ್ಲಾದರೇನು?" ಎಂದು ಚಟ್ಟನೆ ಎದ್ದು, ಕೋಟು ತೊಟ್ಟುಕೊಳ್ಳುವುದರಲ್ಲಿ ತೊಡಗಿದರು, ಸಿಡುಕಿನಿಂದ. ಜಾಧವ ಮಾಸ್ತರರು ಶಾಂತವಾಗಿಯೇ ಕುಳಿತಿದ್ದರು.

"ಎಲೆ ಹಾಕಿದೆ, ಊಟ ಮಾಡಿಕೊಂಡೇ ಹೋಗಿರಲ್ಲ?" ಅಡಿಗಿಯ ಮನೆಯಿಂದ ಮಾತು ಕೇಳಬಂತು.

"ಮಧ್ಯಾಹ್ನದ ಬಿಡುವಿನಲ್ಲಿ ಬರತೇನಂತ...." ಎಂದು ಹೇಳಿ ಹೊರಬಾಗಿಲ ಕಡೆಗೆ ನಡೆದರು. ಅಲ್ಲಿ ಜಾಧವ ಮಾಸ್ತರರೊಬ್ಬರು ಇದ್ದಾರೆಂಬ ಕಲ್ಪನೆಯೂ ಅವರಿಗಿರಲಿಲ್ಲ. ಕೂಡಲೇ ಜಾಧವ ಮಾಸ್ತರರೂ ಎದ್ದರು. ಅವರೂ ಅವರಷ್ಟೇ ಗಾಂಭೀರ್ಯದಿಂದ ಹೊರಹೊರಟರು. ಹೊರಗೆ ಬಂದೊಡನೆ,—

"ಕೂಡಲೆ ಕೋಟು ತೊಟ್ಕೊಂಡು ಸಾಲೆಗೆ ಬರ್ರಿ!" ಹೆಡ್ ಮಾಸ್ತರರು ಅಧಿಕಾರವಾಣಿಯಿಂದ ಆಜ್ಞಾಪಿಸಿದರು, ಜೇಬಿನೊಳಗೆ ಕನ್ನಡಕವಿದೆಯೋ ಇಲ್ಲವೋ ಎಂಬುದನ್ನು ಶೋಧಿಸುತ್ತ.

"ಬರುವೆ; ಇನ್ನೂ ಸ್ನಾನ ಊಟ ಆಗಿಲ್ಲ. ಮುಂಜಾನೆಯಿಂದಲೂ ಇಲ್ಲೇ ಕರೆಸಿರುವಿರಿ. ಎಲ್ಲಾ ವೇಳೆ ಇಲ್ಲೇ ಹೋಯ್ತು. ಊಟ ತೀರಿಸಿ ವೇಳೆಗೆ ಬರುವೆ...." ಅಷ್ಟೇ ಗಂಭೀರವಾಗಿ, ಸ್ವಲ್ಪ ತುಚ್ಛಸ್ವರ ತೆಗೆದು, ನುಡಿದರು ಜಾಧವ ಮಾಸ್ತರರು.

"ಇನ್ನೂ ಪ್ರಪಂಚ ಬೆನ್ನಿಗೆ ಹತ್ತಿಲ್ಲ, ಮಾತಾಡತಾನ ಆಯ್ತು." ಎಂದುಕೊಂಡು ಸಾಲೆಯ ಕಡೆಗೆ ಹೆಜ್ಜೆ ಬೆಳಸಿದರು ಮುಖ್ಯಾಧ್ಯಾಪಕರು.

ಆ ದಿನ ಸ್ಕೂಲಿನಲ್ಲಿ ತರಗತಿಗೆ ಒಂದೆರಡು ಹುಡುಗರು ಮಾತ್ರ ಇದ್ದರು. ಆದರೂ ದಿನದಂತೆ ಕ್ಲಾಸಿನ ಎಲ್ಲ ವಿಷಯುಗಳೂ ಸಾಗಲೇ ಬೇಕೆಂದು ಕಟ್ಟಪ್ಪಣೆ ವಿಧಿಸಿದರು, ಮುಖ್ಯಾಧ್ಯಾಪಕರು. ಆ ದಿನ ಸಾಲೆಯ ಡೆಸ್ಕು ಕರೇ ಹಲಿಗೆಗಳ ಕೂಡ ಪಾಠ ಸಾಗಿಸಿಯಾಯಿತು.

ಮರುದಿನ ಹನ್ನೊಂದು ಗಂಟೆಗೆ ಸ್ಕೂಲು ಆರಂಭವಾದೊಡನೆಯೇ ಹೆಡ್‌ಮಾಸ್ತರರು ಕೆಳಗಿನ ಕ್ಲಾಸುಗಳಿಗೆ ಮೊದಲು ಹೋದರು. ವಿದ್ಯಾರ್ಥಿಗಳಿಗೆಲ್ಲರಿಗೂ ಎದ್ದು ನಿಲ್ಲಲು ಹೇಳಿದರು. ಆಮೇಲೆ "ನಿನ್ನೆ ಸ್ಕೂಲಿಗೆ

ಯಾಕೆ ಬರಲಿಲ್ಲ ?" ಎಂದು ಗಂಭೀರವಾಗಿ ಪ್ರಶ್ನೆ ಮಾಡಿದರು.

ಸ್ವಲ್ಪ ಕಾಲ ಬಾಲಸಮೂಹ ಸ್ತಬ್ಧವಾಗಿ ನಿಂತಿತು. ಕೊನೆಗೆ ಯಾವನೋ ಒಬ್ಬ ಚುರುಕು ಹುಡುಗ ಹೇಳಿದ.

"ನಿನ್ನೆ ಗಾಂಧೀಜಿಯವರಿಗೆ ಶಿಕ್ಷೆಯಾಯಿತು. ಅದರಿಂದ ಬರಲಿಲ್ಲ."

"ಶಿಕ್ಷೆಯಾಗಿ ಮೂರು ದಿನವಾಯ್ತಲ್ಲ ?" ಕನ್ನಡಕ ಹಣೆಗೆ ಏರಿಸುತ್ತ ಕೇಳಿದರು.

"ನಮಗೆ ನಿನ್ನೆ ತಿಳಿಯಿತು!" ಇನ್ನೊಬ್ಬ ವಿದ್ಯಾರ್ಥಿ ದನಿ ಎಳೆದ. ಹಣೆಯ ಕನ್ನಡಕ ಕಣ್ಣಿಗೆ ಇಟ್ಟು, ದನಿ ಬಂದತ್ತ ದಿಟ್ಟಿಸಿ ನೋಡಿದರು, ಹೆಡ್‌ಮಾಸ್ತರರು. ಆಮೇಲೆ ಸ್ವಲ್ಪ ಹೊತ್ತು ಸುಮ್ಮನಾಗಿ ನಿಂತು ಯೋಚಿಸಿ, ಮೆಲ್ಲನೆ ಪ್ರಶ್ನೆ ಮಾಡಿದರು. "ಗಾಂಧೀಜಿಯವರನ್ನು ಹಿಡಿದರೆ ಸಾಲೆಗೆ ಬರಬಾರದಂತ ಯಾರು ಹೇಳಿದರು ?"

"ಆರನೇ ಏಳನೇ ಕ್ಲಾಸಿನವರು." ಎಂದು ಕೆಲ ಹುಡುಗರು ಹೇಳಿದರು. ಅದರಲ್ಲೊಬ್ಬ ಹುಡುಗ ಹೇಳಿದ.. "ನಾ ಸಾಲೆಗೆ ಬರಲಿಕ್ಕೆ ಹತ್ತಿದ್ದೆ. ಗೌಡರ ಅಜಿತ ಬೆದರಿಸಿ ಕಳಿಸಿದ!"

ಸ್ವಲ್ಪ ಹೊತ್ತು ಸುಮ್ಮನಾದರು ಮಾಸ್ತರರು. ಆಮೇಲೆ "ನೀವು ನಮ್ಮ ಸಾಲೆಯಿಂದ ಹೊರಡಿರಿ. ಆ ನಿಮ್ಮ ಅಜಿತ, ಮುತಾಲಿಕ ಏನ ಹೇಳ್ತಾರದನ್ನ ಕೇಳಿಕೊಂಡ ಇರ್ರಿ. ನಮ್ಮ ಸಾಲೆಗೆ ಬರುವುದು ಬೇಡ, ನೀವು!" ಎಂದು ನಿಶ್ಚಲ ಸ್ವರದಲ್ಲಿ ಆಜ್ಞಾಪಿಸಿದರು.

ಹುಡುಗರು ಸ್ತಬ್ಧರಾಗಿ ನಿಂತರು. ಒಬ್ಬರ ಮುಖವನ್ನೊಬ್ಬರು ನಿರೀಕ್ಷಿಸಿದರು. ಸಾಲೆಯೆಲ್ಲ ಶಾಂತವಾಗಿದ್ದಿತು. ಆಫೀಸಿನಲ್ಲಿಯ ಗಡಿಯಾರದ 'ಕಟ್ ಕಟ್' ಶಬ್ದವಷ್ಟೇ ಆ ಮೌನವನ್ನು ಭೇದಿಸುತ್ತಿತ್ತು.

"ಹೂಂ! ಏಳಿರಿನ್ನು! ಹೋಗಿರಿ. ನೀವು ನಮ್ಮ ಸಾಲೆಯಲ್ಲಿ ಬೇಡ!" ಎಂದು ಸಿಪಾಯಿಯನ್ನು ಕರೆಯಿಸಿ ಹೊರಗೆ ಹಾಕಿಸಿಯೇ ಬಿಟ್ಟರು! ಆಮೇಲೆ ಅಧ್ಯಕ್ಷತೆಯ ಹೆಜ್ಜೆಗಳನ್ನಿಡುತ್ತ ಆರನೆಯ ತರಗತಿಗೆ ಹೋದರು. ವಿದ್ಯಾರ್ಥಿಗಳು ಎದ್ದು ನಿಂತು ದಿನದಂತೆ ಮರ್ಯಾದೆ ಸೂಚಿಸಿದರು.

ಇಂದು ಹೆಡ್‌ಮಾಸ್ತರರು ದಿನದಕಿಂತ ಗಂಭೀರ ಮುದ್ರೆಯನ್ನು

ತಳೆದಿದ್ದರು. ಹುಡುಗರಿಗೆ ತಿರುಗಿ ಕೂಡಲಿಕ್ಕೆ ಸೂಚಿಸಲಿಲ್ಲ. ಅದರ ಕಾರಣ ಅವರಿಗೂ ಗೊತ್ತು. ಅವಕ್ಕಂತೇ ಮುಂದಾಲೋಚನೆಯಲ್ಲಿಯೇ ಅವರೂ ಇದ್ದರು. ಅಷ್ಟರಲ್ಲಿ,

"ನಿನ್ನೆ ಸಾಲೆಗೆ ಬಂದವರು ಕೂತುಕೊಳ್ಳಿರಿ!" ಎಂದರು ಹೆಡ್ ಮಾಸ್ತರರು. ಯಾರೂ ಕೂತುಕೊಳ್ಳಲಿಲ್ಲ. ಸಾಲೆಗೆ ಬಂದ ಒಂದಿಬ್ಬರೂ ಕೂತುಕೊಳ್ಳಲು ನಾಚಿದರೇನೋ! ತಿರುಗಿ ಹೆಡ್ ಮಾಸ್ತರರೇ ಕೇಳಿದರು.

"ಯಾರೂ ಬಂದಿರಲಿಲ್ಲ?" ದನಿಯಲ್ಲಿ ಬೆರಗು ಬೆರತಿತ್ತು.

ಮನಸ್ಸಿಲ್ಲದೆ ಒಂದಿಬ್ಬರು ಕುಳಿತರು.

"ನೀವೇಕೆ ಸಾಲೆಗೆ ಬರಲಿಲ್ಲ?"

"ಗಾಂಧೀಜಿಯವರಿಗೆ ಶಿಕ್ಷೆವಿಧಿಸಿದ್ದಾರೆ. ಅದಕ್ಕೆ ಬರಲಿಲ್ಲ!" ಒಂದೇ ಕಂಠದಿಂದ ವಿದ್ಯಾರ್ಥಿಗಳ ಧ್ವನಿ ಹೊರಟಿತು. ಗಚ್ಚಿನ ಅಟ್ಟ ಅದೇ ಧ್ವನಿಯನ್ನು ಮಾರ್ನುಡಿಯಿತು. ಮಾಸ್ತರರ ಹೃದಯವೂ ಕೊಂಚ ನಡುಗಿರಬೇಕು. ಆದರೂ ಕೇಳಿದರು. "ನಿಮಗೆ ಹರತಾಳ ಪಾಲಿಸಲು ಯಾರು ಹೇಳಿದ್ದರು?"

"ಯಾರೂ ಇಲ್ಲ; ನಾವೇ ಪಾಲಿಸಿದ್ದೆವು!"

"ಈಗಾಗಲೇ ಇಷ್ಟು ಜಾಣರಿದಿರಾ!"

ವಿದ್ಯಾರ್ಥಿಗಳು ಸುಮ್ಮನಿದ್ದರು.

"ಇದಕ್ಕೆ ನಿಮ್ಮ ಪಾಲಕರ ಒಪ್ಪಿಗೆ ಇದೆಯೋ?"

ವಿದ್ಯಾರ್ಥಿಗಳು ಈ ಸಲವೂ ಏನೂ ಮಾತಾಡಲಿಲ್ಲ.

ಹೆಡ್‌ಮಾಸ್ತರರು ಸ್ವಲ್ಪ ವಿಚಾರಿಸಿದರು. ಹುಡುಗರ ಮೌನದ ಅರ್ಥವಾಯಿತೇನೋ ಅವರಿಗೆ, "ಹೋಗಿರಿ, ನಿಮ್ಮ ನಿಮ್ಮ ಪಾಲಕರ ಕಡೆಯಿಂದ ಲೇಖೀ ತಂದುಕೊಟ್ಟು, ಸಾಲೆಗೆ ಬನ್ನಿರಿ!" ಎಂದು ಆಜ್ಞಾಪಿಸಿದರು.

"ಹಿರಿಯರಿಗೆ ಬರೆಯಲು ಬರದಿದ್ದರೆ?" ಒಂದು ಮೂಲೆಯಿಂದ ಧ್ವನಿ ಎದ್ದಿತು.

"ಇಲ್ಲಿಗೆ ಕರೆದುಕೊಂಡು ಬಾ, ನಾನು ಬರೆಯಿಸಿಕೊಳ್ಳುವೆನು..." ಎಂದರು ಗೆಲವಿನ ಸ್ವರದಿಂದ.

ಹುಡುಗರೆಲ್ಲ ಹೊರಬಿದ್ದರು. ಏಳನೆಯ ತರಗತಿಯಲ್ಲಿಯೂ ಇದೇ ಸಂಗತಿ ಜರುಗಿತು. ಅವರೂ ಇವರೂ ಬೈಲಿನಲ್ಲಿ ಕೂಡಿದರು. ಆಲದ ಗಿಡದ ನೆರಳಿನಲ್ಲಿ ಕುಳಿತು, ಎರಡು ನಿಮಿಷ ಯೋಚಿಸಿದರು. ಮನೆಯವರ ಹತ್ತಿರ ಲೇಖೀ ಬೇಡುವುದು ಬೇಡ. ಬೇಡಿದರೂ ಸಿಗುವಂತಿಲ್ಲ. ಅದರಿಂದ ಸಾಲೆಗೆ ಹೋಗುವುದೇ ಬೇಡ. ದಿನಾಲು ಸಾಲೆ ಆರಂಭವಾಗುವ ವೇಳೆಗೆ ಸರಿಯಾಗಿ ಮನೆ ಬಿಡುವದು; ಸಾಲೆಯ ಹೊತ್ತನ್ನೆಲ್ಲ ಊರ ಹೊರಗಿನ ಸಿದ್ದೇಶ್ವರ ಮಂದಿರದಲ್ಲಿ ಕಳೆಯುವದು; ಮತ್ತೆ ಸಾಲೆ ಬಿಡುವ ಹೊತ್ತಿಗೆ ತಿರುಗಿ ಮನೆ ಸೇರುವದು; ಎಂದು ಎಲ್ಲರೂ ಕೂಡಿ ನಿರ್ಧರಿಸಿದರು.

ಆ ದಿನ ಸಂಜೆಯಾಗುತ್ತ ಬಂತು. ಕೆಳಗಿನ ಕ್ಲಾಸಿನ ಹುಡುಗರು ಮಾತ್ರ ಒಬ್ಬೊಬ್ಬರು ಕ್ಷಮೆ ಕೇಳಿಕೊಂಡು ಸಾಲೆಯಲ್ಲಿ ಬಂದರು. ಆದರೆ ಮೇಲಿನ ತರಗತಿಗಳ ವಿದ್ಯಾರ್ಥಿಗಳ ಸುಳಿವೇ ಇಲ್ಲ. ಈಗ ಬಂದಾರು, ಇನ್ನೊಂದು ಸ್ವಲ್ಪ ತಡೆದು ಬರಬಹುದು, ಎಂದು ನಿರೀಕ್ಷಿಸಿದ ಮಾಸ್ತರರು ನಿರಾಶೆಗೊಂಡರು. ಸಾಲೆ ಬಿಡುವ ಹೊತ್ತಾದರೂ ಸಾಲೆಯ ಕಡೆಗೆ ಯಾರೂ ಹಾಯಲಿಲ್ಲ.

"ಇವರಿಗೆ ಯಾರ ಬರೆದು ಕೊಡತಾರರೀ? ನಾಳೆ ಬರತಾರೆ ನೋಡಿರಿ ಅಳುತ್ತ ಇಲ್ಲೇ" ಎಂದು ಬಿಂಕದ ಮಾತನ್ನಾಡಿ ಮನೆಯ ಕಡೆಗೆ ನಡೆದರು, ಹೆಡ್‌ಮಾಸ್ತರರು.

ಅದೊಂದು ದಿನ ಕಳೆಯಿತು. ಮರುದಿನ ಹನ್ನೊಂದು ಗಂಟೆಯೂ ಆಯಿತು. ಸಾಲೆ ಆರಂಭವಾಯಿತು. ಹನ್ನೆರಡು, ಒಂದು, ಎರಡು, ಮೂರು ಹೊಡೆದರೂ ಯಾವ ವಿದ್ಯಾರ್ಥಿಯೂ ಬರಲಿಲ್ಲ. ಆಗ ಹೆಡ್‌ಮಾಸ್ತರರ ಮನಸ್ಸಿನ ಗಾಂಭೀರ್ಯ ಇಳಿಯಿತು. ಮೇಲಿನ ಕ್ಲಾಸುಗಳೇ ನಡೆಯದಿದ್ದರೆ ಹೇಗೆ? ಪರೀಕ್ಷೆಯ ದಿನಗಳು ಸಮೀಪಿಸಿದುವು. ಸರಕಾರಿ ಸಹಾಯದ್ರವ್ಯ ಪಡೆಯುವಂಥ ಹಾಯ್‌ಸ್ಕೂಲು, ಎರಡು ಕ್ಲಾಸುಗಳೇ ಇಲ್ಲವಾದರೆ ಗತಿಯೇನು? ಲೇಖೀ ಬೇಡಬಾರದಿತ್ತು. ಸುಮ್ಮನೆ ಬೆದರಿಸಿ ಬಿಟ್ಟಿದ್ದರೆ ಒಳಿತಾಗುತ್ತಿರಲಿಲ್ಲವೆ? ಬಾಲಕರ ಪಾಲಕರು ಏನೆಂದು ಭಾವಿಸಿದರೋ? ಹಿಂದೆ ಧ್ವಜ ಹಚ್ಚಿದಾಗ ರಿಪೋರ್ಟು ಮಾಡಿ

ದ್ದಕ್ಕೆ ಹಲವರು ಗೊಣಗಿದ್ದರು! ಎಂದು ಮೊದಲಾದ ವಿಚಾರತರಂಗ ಗಳು ಎದ್ದಂತೆ ಮನಸ್ಸು ಚಿಂತೆಯಲ್ಲಿ ಮುಳುಗಿತು. ಚಿಂತಾತುರ ರಾಗಿಯೇ ಸಾಲೆಯ ಸಿಪಾಯಿಯನ್ನು ಗುಟ್ಟಾಗಿ ಕರೆದು ಕೇಳಿದರು.

"ಹುಡುಗರ ಸುದ್ದಿ ಏನೋ....?"

"ಯಾವ ಹುಡುಗರು..?" ಸಹಜಸ್ವರದಿಂದ ಕೇಳಿದನಾತ.

"ಎಲ್ಲಿ ಇರುವಿ ನೀ ?" ಕೆರಳಿ ಕೇಳಿದರು ಮಾಸ್ತರರು.

"ಎಲ್ಲಿಯೋ ಊರ ಹೊರಗೆ ಗುಡಿಯೊಳಗೆ ಇರತಾರಂತ ಮಾತಾಡತಿದ್ದರು."

"ಕರೆದುಕೊಂಡು ಬಾ ಹೋಗು ಅವರನ್ನ," ದನಿ ತಗ್ಗಿಸಿ ಹೇಳಿ ದರು. ದೃಷ್ಟಿ ಸುತ್ತಲೂ ಸುಳಿಯುತ್ತಿರಲು, "ಈ ಮಾತು ಯಾರ ಕಿವಿಯ ಮೇಲೂ ಬೀಳಬಾರದು ಅಂ? ನಾನು ಕಳಿಸಿರುವೆನೆಂದು ಹುಡುಗರಿಗೂ ತಿಳಿಗೊಡಬೇಡ." ಎಂದರು.

ಅವನಿಗೂ ಆನಂದ, ಹುಡುಗರನ್ನು ಕರೆದು ತರುವುದೆಂದರೆ. ಸಿಪಾಯಿ ನೆಟ್ಟಗೆ ಊರ ಹೊರಗಿನ ಸಿದ್ದೇಶ್ವರ ಗುಡಿಗೇ ಹೊರಟ. ಈಗಾ ಗಲೇ ಅಲ್ಲಿ ಎಲ್ಲ ಹುಡುಗರೂ ಸೇರಿದ್ದರು. ಅದರಲ್ಲಿ ಹಲವರ ಮುಖ ಗಳು ಮ್ಲಾನವಾಗಿದ್ದುವಾದರೂ ಮಾತುಗಳು ರಭಸದಿಂದಲೇ ಸಾಗಿ ದ್ದುವು. ಸ್ವಾತಂತ್ರ್ಯದ ಗಾಳಿ ತುಂಬಿದ ತರುಣರ ತಲೆಯಲ್ಲಿ ಹಲವು ವಿಚಾರದ ತೆರೆಗಳು ಎದ್ದು ಧ್ವನಿರೂಪದಿಂದ ಹೊರಗೆ ಬರುತ್ತಿದ್ದುವು.

ಕೆಲವರು ಅನ್ನುವರು: "ಸರಕಾರವೇ ಬೇಡ, ಅಂದ ಮೇಲೆ ಸರಕಾರೀ ಹಾಯ್‌ಸ್ಕೂಲಾದರೂ ನಮ್ಮೂರಲ್ಲಿ ಏಕಿರಬೇಕು?"

"ಅಲ್ಲಪಾ, ಈಗ ಸರಕಾರ ಬೇಕೋ ಬೇಡೋ ಅನ್ನುವ ವಿಚಾರ ಎಲ್ಲಿ ಅದ?"

"ಅವರು ಬೇಡ ಅಂದರ ಹೋಗ್ತಾರ ಹೌದ?" ಒಬ್ಬ ಹಿರಿಯ ಹುಡುಗ ನಡುವೆಯೇ ಮಾತು ಸೇರಿಸಿ ಕೇಳಿದ.

"ಅದೇ ಅನ್ನೋದ ನಾನೂ. ಗಾಂಧೀಜಿಯವರನ್ನ ಹಿಡಿದದ್ದಕ್ಕೆ ಒಂದು ದಿವಸ ಹರತಾಳ ಮಾಡಿದರ ಇಷ್ಟಾಯ್ತು. ಇವ ಸರಕಾರದ ವಿಚಾರಕ್ಕ ಹೋಗ್ತಾನ."

"ಹೌದು. ಎಲ್ಲದಕ್ಕೂ ಈ ಸರಕಾರವೇ ಕಾರಣವಲ್ಲ. ಅದಕ್ಕ ಅನ್ನೋದು ನಾನು...."

"ಸರಕಾರ ಕಾರಣವಲ್ಲ, ಹೆಡ್‌ಮಾಸ್ತರ ಅಂಥವರು ಕಾರಣ" ಸ್ವಲ್ಪ ತಡೆದು "ಮಹಾತ್ಮರನ್ನು ಹಿಡಿದದ್ದಕ್ಕೆ ಮಾಸ್ತರರಿಗೆ ಸಿಡಕ ಅನಿಸು ವದಿಲ್ಲೇನೋ?"

"ಅನಸ್ತದಲ್ಲ; ಆದರೆ ಅವರಿಗೆ ತೋರಿಸಲಿಕ್ಕೆ ಬರೂದಿಲ್ಲ ಮೇಲೆ"

"ಬಿಡಪ್ಪ! ಏನ ಹೇಳ್ತಿ, ಅನಿಸಿದರ ನಮ್ಮನ್ನ ಹೊರಗೆ ಹಾಕತಿದ್ದ ರೇನು ?"

ಇನ್ನೂ ಈ ಎಲ್ಲೆಯಿಲ್ಲದ ಮಾತು ಎಲ್ಲಿಯ ವರೆಗೆ ಸಾಗುತ್ತಿದ್ದಿತೋ ಏನೋ! ಅಷ್ಟರಲ್ಲಿ ಸಿಪಾಯಿ ಬಂದುದಕ್ಕೆ ತಡೆಯಾಯಿತು.

"ಯಾಕೋ, ನಿನ್ನನ್ನೂ ಹೊರಗೆ ಹಾಕಿದರೇನ ಮತ್ತ?" ಅಜಿತ ಮುಂದೆ ಬಂದು ಸಿಪಾಯಿಯನ್ನು ಕೇಳಿದ.

"ನೀವು ಹೊರಗೆ ಬಂದ ಮೇಲೆ ನಾನೂ ಬರಲಿಕ್ಕೇ ಬೇಡೇನ್ರಿ!" ಅಂದ ಸಿಪಾಯಿ. ಅಜಿತ ಊರ ಗೌಡರ ಹುಡುಗನಲ್ಲವೇ?

"ನೀವೆಲ್ಲ ಹಾಗೆ ಬರತಿದ್ದರೆ ನಮ್ಮ ಸ್ಥಿತಿ ಹೀಗೇಕಾಗತಿತ್ತು ?"

"ನಿಮ್ಮ ಸ್ಥಿತಿ ಹೀಗೆ ಆಗಿದೆಯೆಂದೇ ಕರೆದು ಒಯ್ಯಲು ಬಂದಿರು ವೆನಲ್ಲ" ಎಣ್ಣೆಗವುಟಿನ ಟೊಪ್ಪಿಗೆಯೊಳಗಿನ ಬೀಡಿ ಕಡ್ಡಿಪೆಟ್ಟಿಗೆಗಳನ್ನು ತೆಗೆದು ಹೊತ್ತಿಸುತ್ತ ಹೇಳಿದ, ಹರುಷದಿಂದ. ಮತ್ತೆ ಮೂರು ನಾಲ್ಕು ಹುಡುಗರು ಆತುರದಿಂದ ಮುಂದೆ ಬಂದು,—

"ಹೆಡ್‌ಮಾಸ್ತರರು ನಮ್ಮನ್ನು ಕರೆಯಲಿಕ್ಕೆ ಕಳಿಸಿರುವರೆ?"

"ಹೌದು."

"ನಾ ಹೇಳಲಿಲ್ಲ ? ಅವರ ಮನಸ್ಸಿನೊಳಗೂ ಹರತಾಳ ಮಾಡಬೇ ಕಂತ ಅದ ಅಂತ."

"ಮನಸಿನೊಳಗ ಇದ್ದವರು ಹೀಗೆ ಮಾಡ್ತಾರೇನು ?"

"ಎಲ್ಲಾ ನೌಕರಿಗಾಗಿ ಮಾಡಬೇಕಾಗ್ತದಪ್ಪ."

"ನೌಕರಿಗಾಗಿ ಮಾಡಲೋ? ನಮ್ಮ ಹತ್ತರ ಲೇಖೀ ಎಕೆ ಬೇಡ ಬೇಕಾಗಿತ್ತು ?"

“ಲೇಖೀ ಇಲ್ಲದೆ ಬಾ ಅಂದರೆ ಬರತೀರಲ್ಲ ?” ಸಿಪಾಯಿ ಕೇಳಿದ, ಹೆಡ್‌ಮಾಸ್ತರರ ಆಜ್ಞೆಯನ್ನು ಮರೆತು.

“ಲೇಖೀ ಇಲ್ಲದೆ ಕರಕೊಳ್ಳುವರೇ ? ಹಾಗಾದರೆ ಸಿದರಾಯನಿಗೆ ನಾನೊಂದು ತೆಂಗಿನ ಕಾಯಿ ಒಡೆಯುವೆ.” ಎಂದು ಮುತಾಲಿಕ ದೇವರಿಗೆ ಹರಕೆ ಹೊತ್ತ.

“ಹತ್ತ ಕಾಯಿ ಒಡೆ ನೀ, ಎಂದೂ ಶಕ್ಯ ಇಲ್ಲ, ಹಾಗೆ ಕರಕೊಳ್ಳಲಿಕ್ಕೆ; ನಾ ಹೇಳ್ತೇನಿ.” ಅಜಿತ ಭವಿಷ್ಯ ನುಡಿದ.

“ಹಾಗೇ ಕರೆದುಕೊಂಡರೆ ನನಗೇನ! ಕೊಡತೀರಿ ಖುಶಾಲಿ ?” ಸಿಪಾಯಿಯ ಮಾತಿದು.

ಕೆಲ ಹೊತ್ತಿನಲ್ಲಿ ವಿದ್ಯಾರ್ಥಿಗಳ ತಂಡ ವಿಜಯಮುದ್ರೆಯಿಂದ ಸಾಲೆಗೆ ಬಂದಿತು. ಸಾಲೆ ಸಮೀಪಿಸಿದೊಡನೆಯೇ ‘ಗಾಂಧಿ ಮಹಾರಾಜಕಿ ಜೈ ! ಭಾರತ ಮಾತಾಕಿ ಜೈ !!’ ಎಂದು ಜಯಘೋಷ ಮಾಡಿದರು. ಆಫೀಸಿನ ರೂಮಿನಲ್ಲಿ ಎಲ್ಲ ಶಿಕ್ಷಕರೊಡನೆ ಕುಳಿತ ಮುಖ್ಯಾಧ್ಯಾಪಕರ ಎದೆ ಅದುರಿತು. ಯಾವದೋ ಒಂದು ರಹಸ್ಯವು ಎಲ್ಲಿ ಹೊರಬೀಳುವುದೋ ಏನೋ ಎಂಬ ಹೆದರಿಕೆಯ ಭಾವವು ಮನದಲ್ಲಿ ಒಡಮೂಡುತಲಿದ್ದಿತು. ಆದರೂ ನುಡಿದರು:

“ಹುಡುಗರ ಸೊಕ್ಕ ಅಡಗಿತು, ಎರಡ ದಿವಸದೊಳಗೆ!”

“ಇನ್ನೂ ಜಯಜಯಕಾರ ಮಾಡತಾರಲ್ಲ!” ಜಾಧವ ಮಾಸ್ತರರು ಮನದಲ್ಲಿಯೇ ಅಂದುಕೊಂಡರು.

ಬಾಲಕರು ಸಾಲೆಯ ಆವಾರದಲ್ಲಿ ಸೇರಿದರು. ಮುಖ್ಯಾಧ್ಯಾಪಕರು ಎಲ್ಲ ಶಿಕ್ಷಕರನ್ನೂ ಅವರವರ ತರಗತಿಗಳಿಗೆ ಕಳಿಸಿದರು. ಆಮೇಲೆ ವಿದ್ಯಾರ್ಥಿಗಳಿಗೆ ಅಲ್ಲಿಯೇ ಬರಹೇಳಿದರು. ಅವರ ಮೊದಲಿನ ಮನಸ್ಥಿತಿ ಈಗ ಉಳಿದಿರಲಿಲ್ಲ. ಬಾಲಕರ ಮುಖಂಡರನ್ನು ಹಣ್ಣಿಗೆ ತರಬೇಕೆಂಬ ವಿಚಾರವೊಂದು ಉದ್ಭವಿಸಿತ್ತು. ಹುಡುಗರು ಒಳಗೆ ಬರುವ ಸಮಯಕ್ಕೆ ಏನೋ ಬರೆಯುತ್ತಿದ್ದರು. ಇವರು ಬಂದದ್ದನ್ನು ಕಂಡೂ ಕಾಣದವರಂತೆ ಹಾಗೇ ಸ್ವಲ್ಪ ಹೊತ್ತು ಗಂಭೀರವಾಗಿ ಬರೆಯುತ್ತಲೇ ಕುಳಿತರು. ಹುಡುಗರ ಕಲ್ಪನೆ ತಲೆ ಕೆಳಗಾಯಿತು. ಸಿಪಾಯಿಯ ಮುಖದ ಕಡೆಗೆ ಹುಳು ಹುಳು

ನೋಡಹತ್ತಿದರು. ಮಾಸ್ತರರು ಕೊಂಚ ವೇಳೆಯಲ್ಲಿ ಬರೆಯುವದನ್ನು ನಿಲ್ಲಿಸಿ, ಮೇಲೆ ನೋಡಿ,—

“ ರಮಾನಂದ, ಅಜಿತ ಇಲ್ಲಿ ಬರ್ರಿ! ” ಎಂದು ಕರೆದರು. ಸ್ವಲ್ಪ ತಡೆದು “ ಸೇನಾಪತಿಗಳೇನು ನೀವು..? ” ಕೊಂಕುನಗೆ ಬೀರಿ ನುಡಿದರು.

ವಿದ್ಯಾರ್ಥಿಗಳಿಬ್ಬರೂ ಮುಂದೆ ಬಂದರು. ಅವರ ಕೈಯಲ್ಲಿ ಹಾಯ್‌ಸ್ಕೂಲಿನ ಮುದ್ರೆಯು ಒಂದೊಂದು ಕಾಗದವನ್ನು ಕೊಡುತ್ತ “ ನೀವಿಬ್ಬರೇ ನಿನ್ನಿನ ಹರತಾಳಕ್ಕೆ ಕಾರಣರೆಂದು ನಮಗೆ ತಿಳಿದು ಬಂದಿದೆ. ಇನ್ನೊಮ್ಮೆ ಇಂಥ ಕೆಲಸಗಳಲ್ಲಿ ಭಾಗ ವಹಿಸಗೊಡಲಿಕ್ಕಿಲ್ಲವೆಂದು ನಿಮ್ಮ ಹಿರಿಯರಿಂದ ಬರೆಯಿಸಿಕೊಂಡು ಬರ್ರಿ, ಹೋಗರಿ! ಉಳಿದವರು ನಿಮ್ಮ ನಿಮ್ಮ ಕ್ಲಾಸಿಗೆ ನಡೆಯಿರಿ ” ಎಂದು ಹೇಳಿದರು.

ಏನು ಮಾಡಬೇಕೆಂಬುದು ಅಜಿತನಿಗೆ ಹೊಳೆಯದಾಯಿತು. ಸ್ವಲ್ಪ ಗೊಂದಲದಲ್ಲಿ ಬಿದ್ದ. ಹೆಡ್‌ಮಾಸ್ತರರು ತಮ್ಮಿಬ್ಬರನ್ನೇ ಹೊರಗೆ ಹಾಕಿ, ಉಳಿದ ಹುಡುಗರನ್ನು ಕರೆದುಕೊಂಡರು. ತಮ್ಮ ಕಕ್ಕನಂತೂ ಬರೆದು ಕೊಡಲು ಶಕ್ಯವಿಲ್ಲ. ಅವನೂ ಸಾಲೆ ಬಿಡಿಸುವ ಹೆದರಿಕೆ ಹಾಕುತ್ತಾನೆ. ಸಾಲೆ ಬಿಟ್ಟರೂ ಅಡ್ಡಿಯಿರಲಿಲ್ಲ. ಇಷ್ಟಕ್ಕೆ ಕಲಿಯುವದನ್ನು ಬಿಟ್ಟರೆ ಏನು ಬಂತು? ಮುಂದೆ ಮಾಡುವದಾದರೂ ಏನು? ತಾಯಿ ಏನೆಂದಾಳು? ಅಕ್ಕ ಮ್ಯಾಟ್ರಿಕ್ ಆದೊಡನೆ ಮುಂಬಯಿಗೆ ಬಾ, ಅಂದಿರುವಳು—ಎಂಬ ವಿಚಾರಗಳು ಸುಂಟರ ಗಾಳಿಯಂತೆ ಅವನ ತಲೆಯಲ್ಲಿ ಸುತ್ತ ಹತ್ತಿದವು. ಆದರೂ ಅವನ ಅಭಿಮಾನಿ ಅಂತರಾತ್ಮ ಅಧ್ಯಾಪಕರ ಹತ್ತರ ಕ್ಷಮೆ ಕೇಳಿಕೊಳ್ಳಲಿಕ್ಕೆ ಬಯಸಲಿಲ್ಲ. ಮೆಲ್ಲನೆ ಅಲ್ಲಿಂದ ಕಾಗದ ಕೈಯಲ್ಲಿ ತಕ್ಕೊಂಡು ಹೊರನಡೆದ. ಮುತಾಲಿಕ ರಮಾನಂದನೂ ಅವನ ಹೆಜ್ಜೆಗಳನ್ನೇ ತುಳಿದ. ಹೆಡ್‌ಮಾಸ್ತರರ ನಿರೀಕ್ಷಣೆ ಮಾತ್ರ ಸುಳ್ಳಾಯಿತು. ಆದರೂ ಸ್ತಬ್ಧರಾಗಿಯೇ ಕುಳಿತಿದ್ದರು.

ಪೂರ್ಣ ವಿಚಾರ ಮಾಡದೆ ಹುರುಪಿನಲ್ಲಿ ‘ ಹೊಯ್ಯ! ’ ಎಂದು ಮುಂದೊರಿಯುವ ವಿದ್ಯಾರ್ಥಿಗಳ ಉತ್ಸಾಹ ಬಹಳ ವೇಳೆ ತಡೆಯುವದಿಲ್ಲ. ಒಂದೆರಡು ದಿನಗಳಲ್ಲಿಯೇ ಅವರಲ್ಲಿಯ ಹುಮ್ಮಸು ಹಳಸುತ್ತ

ಹೋಗುವದು ಆಮೇಲೆ ಪ್ರತಿಯೊಬ್ಬ ತನ್ನಷ್ಟಕ್ಕೆ ತನ್ನ ಹಿತವನ್ನೇ ವಿಚಾರಿಸಹತ್ತಿದ್ದ 'ಯಾರದವರು ನೋಡಿಕೊಳ್ಳಲಿ, ನಮ್ಮದೇನು ?' ಎಂದುಕೊಂಡರು, ಉಳಿದ ವಿದ್ಯಾರ್ಥಿಗಳು. ಭಾವನಾಪ್ರಧಾನ ಬಾಲಕರ ವಿಚಾರ ಪೊಯ್ದಾಡಲು ಬಹಳ ವೇಳೆ ಹಿಡಿಯುವದಿಲ್ಲ. ಒಂದು ಭಾವನೆಗೆ ವಶರಾಗಿ ಎಷ್ಟು ಬೇಗ ಒಂದು ನಿರ್ಣಯಕ್ಕೆ ಬರುವರೋ ಅಷ್ಟೇ ಬೇಗ ಆ ನಿರ್ಣಯವನ್ನು ಬದಲು ಮಾಡಲೂ ಸಿದ್ಧರಾಗುವರು. ಹಾಗೆಯೇ ಆಯಿತು. ಉಳಿದ ಹುಡುಗರೆಲ್ಲ ಮೆಲ್ಲ ಮೆಲ್ಲನೆ ತಮ್ಮ ತಮ್ಮ ತರಗತಿಗಳನ್ನು ಸೇರಿದರು.

ಸಂಜೆ ಸಾಲಿಯಿಂದ ಹೊರಹೊರಡುವಾಗ ಜಾಧವ ಮಾಸ್ತರರ ಮುಖದಲ್ಲಿ ಸಹಜ ಪರಿಹಾಸವಿತ್ತು ಹೆಡ್‌ಮಾಸ್ತರರಿಗೆ ಅದರ ಅರ್ಥ ಏನಾಯಿತೋ ಏನೋ, ಥಟ್ಟನೆ ನುಡಿದರು.

"ಸಿಪಾಯಿ ಕರೆಯಲಿಕ್ಕೆ ಹೋಗಿದ್ದನಂತೆ, ನೋಡರಿ ಹುಡುಗರನ್ನ ?" ಸ್ವಲ್ಪ ತಡೆದು "ಹಿಂದಿನಿಂದ ಗೊತ್ತಾಯಿತು ನನಗ !"

ಆಗ ಅವರ ಕೈಯೊಳಗಿನ ಬೆತ್ತ ತಿರುಗುತಲಿತ್ತು. ಅದು ಅವರ ಮನಸ್ ಚಿತ್ರದ ಪ್ರತೀಕವಾಗಿತ್ತೇನೋ !

## ೫

ಎರಡು ದಿನಗಳುರುಳಿದುವು. ಅಜಿತ ಹೊತ್ತಿಗೆ ಊಟ ಮಾಡಿ, ಸಾಲೆಗೆ ಹೋಗುವವರಂತೆ ಮನೆಯಿಂದ ಹೊರಡುತ್ತಿದ್ದ. ಜನರಲ್ ವಾಚನಾಲಯದಲ್ಲೋ ಊರ ಹೊರಗಿನ ಸಿದ್ಧೇಶ್ವರ ಮಂದಿರದಲ್ಲಿಯೋ ಹೊತ್ತುಗಳೆದು, ಸಾಯಂಕಾಲ ಸಾಲೆ ಬಿಡುವ ಹೊತ್ತಿಗೆ ಮನೆ ಸೇರುವ. ಅವನ ಜೊತೆಗೆ ಮುತಾಲಿಕನೊಬ್ಬನಿರುವ. ಇಬ್ಬರೂ ಯಾವಾಗಲೂ ಜೋಡಿಯಾಗಿಯೇ ಇರುವರು. ಇಬ್ಬರೂ ಕೂಡಿ, ತಮ್ಮನ್ನು ಸಾಲೆಯಿಂದ ಹೊರಹಾಕಿದ್ದಕ್ಕಾಗಿ ಊರಲ್ಲಿಯ ಕಾಂಗ್ರೆಸ ಕಾರ್ಯಕರ್ತರ ಹತ್ತರ ಹೋಗಿ ಹೇಳಿಕೊಂಡರು. ಅವರಾರೂ ಹೆಡ್‌ಮಾಸ್ತರರಿಗೆ ಹೇಳುವಷ್ಟು ಮುಂದರಿಯುವ ಯೋಗ್ಯತೆಯುವರಿರಲಿಲ್ಲ. ಕೆಲವು ಸಹಾನು

ಭೂತಿಪರ ಮಾತನಾಡಿ ಸುಮ್ಮನಾದರು. ಒಂದಿಬ್ಬರು ಹೆಡ್‌ಮಾಸ್ತರನ್ನು ಹಳಿದು, ನಾಲ್ಕೆಂಟು ದಿನ ಕಳೆಯಲಿ ನೋಡೋಣ ಎಂದು ಮುಂದೂಡಿದರು. ಕೊನೆಗೆ ಮ್ಯಾಟ್ರಿಕ್ಕಿನ ಅಭ್ಯಾಸವೆಂದು ಮುತಾಲಿಕನು ತನ್ನ ಮಾವನ ಏರ್ಪಾಡಿನಿಂದ, ಸ್ಕೂಲು ಸೇರಿದ. ಆದರೆ ಅಜಿತ ಕಕ್ಕನಿಂದ ಹೇಳಿಸಲು ಮನಸ್ಸು ಮಾಡಲಿಲ್ಲ. ಮುಂದೆಯೂ ಮಾಡುವಂತಿರಲಿಲ್ಲ. ತನ್ನ ಸ್ವಂತ ಹೊಣೆಗಾರಿಕೆಯ ಮೇಲೆಯೇ ತಾನು ಬಾಳುತ್ತಿದ್ದೇನೆಂದು ಅವನ ಭಾವನೆ, ನಂಬುಗೆ.

ಮನೆಯಲ್ಲಿ ಎಲ್ಲ ಸಂಗತಿ ಗೌಡನಿಗೆ ಗೊತ್ತಾಗುತ್ತಿದ್ದಿತು. ಆದರೂ ಅಜಿತನಿಗೆ ಒಂದು ಮಾತನ್ನೂ ಆಡಲಿಲ್ಲ, ಆದಗೌಡ. 'ಹುಡುಗನ ಸೊಕ್ಕು ತಾನಾಗಿಯೇ ಇಳಿಯುವದು, ಅವನಿಗೆ ಬುದ್ಧಿ ಬರಲಿ, ನನ್ನ ಹತ್ತರ ಹೇಳದೆ ಗತಿಯೇ ಇಲ್ಲ' ಎಂದುಕೊಂಡು ಸುಮ್ಮನೇ ಇರುವ. ಒಮ್ಮೊಮ್ಮೆ 'ಸಾಕು, ಇನ್ನು ಅಜಿತನನ್ನು ಸಾಲೆಯಿಂದಲೇ ತೆಗೆಯಬೇಕು. ಹೊಲ ಮನೆ ವ್ಯವಸ್ಥೆ ನೋಡಿಕೊಳ್ಳಲಿ. ಕಲಿತು ಏನು ಮಾಡಬೇಕಾಗಿದೆ? ಮತ್ತೆ ನಾಳೆ ಪಾಲಿನಲ್ಲಿ ಚಿಕಿತ್ಸೆಯ ಬುದ್ಧಿಯೇ ಬೆಳೆಯಬಹುದಲ್ಲ. ಆದರೆ ಈಗ ಸಾಲೆಯಿಂದ ಬಿಡಿಸಿದರೆ ಜನರೇನು ಅಂದುಕೊಂಡಾರು? 'ತನ್ನ ಮಗನನ್ನು ಮುಂದೆ ಕಲಿಸಿದ. ತಮ್ಮನ ಮಗನನ್ನು ಸಾಲೆ ಬಿಡಿಸಿ ಹೊಲ ಮನೆ ಕೆಲಸಕ್ಕೆ ಹಚ್ಚಿದ.' ಎಂದು ಆಡಿಕೊಳ್ಳದೆ ಇರುವರೇ? ಇದರಲ್ಲಿಯೇ ಕಾರಣ ಸಿಕ್ಕಿದೆ. ಅನಾಯಾಸ ಹೆಡ್‌ಮಾಸ್ತರರಿಗೆ ಒಂದು ಮಾತು ಚುಚ್ಚಿ ಕೊಟ್ಟರಾಯಿತು, ಕೆಲಸವಾಗುವದು. ಜನರ ಮಾತಿಗೆ ಅವಕಾಶವೂ ಉಳಿಯದು. ಅವನಿಗೂ ಬೇಡಾಗಿದ್ದಾನೆ. ಅವರು ನಾನು ಬರೆದು ಕೊಡದ ವಿನಹ ಅವನನ್ನೇನು ಸಾಲೆಗೆ ಸೇರಿಸಿಕೊಳ್ಳುವದಿಲ್ಲ ಬೇರೆ.' ಎಂದೆಲ್ಲ ಯೋಚಿಸಿಯೂ ಇದ್ದ.

ಅಂದು ಆದಗೌಡನು ಯಾವದೋ ಕೆಲಸಕ್ಕಾಗಿ ಮುಂಜಾನೆಯೇ ತಾಲೂಕ ಕಚೇರಿಗೆ ಹೋಗಿದ್ದ. ಮನೆಯಲ್ಲಿ ಮುರದೇವಿಗೆ ರಾವಸಾಹೇಬನಿಂದ ಅಜಿತನ ಎಲ್ಲ ಸುದ್ದಿ ತಿಳಿಯಿತು. ಊಟಕ್ಕೆಂದು ಮನೆಗೆ ಬಂದಾಗ ಮುರದೇವಿಯು ಮೊಮ್ಮಗನನ್ನು "ಬಾಳಾ!" ಎಂದು ಹತ್ತರ ಕರೆದಳು

"ಏಕೆ?" ಎಂದು ಅಜಿತ ಹತ್ತರ ಹೋದ. ಮುಖ ಬಾಡಿದ್ದಿತು, ಕಂಠ ಒಣಗಿದ್ದಿತು.

"ಇಲ್ಲಿ ಕೂಡು." ಎಂದು ಹತ್ತರ ಕೂಡಿಸಿಕೊಂಡಳು. ಕುಳಿತ.

"ಮುಖ ಏಕೆ ಬಾಡಿದೆ? ಮೈಯೊಳಗೆ ನೆಟ್ಟಗಿಲ್ಲ?" ಎಂದು ಕೇಳಿದಳು. ಅವನೇ ತನ್ನ ಬಾಯಿಂದ ಏನು ಹೇಳುವನೋ ನೋಡ ಬೇಕೆಂಬುದು ಅಜ್ಜಿಯ ಆಶೆ.

ಅಜಿತನ ಕಂಠ ಬಿಗಿದುಬಂದಿತು ಬಾಯಿಂದ ಮಾತುಗಳು ಹೊರಡ ದಾದವು. ಕಣ್ಣುಗಳಿಂದ ಎರಡು ಜಲಬಿಂದುಗಳು ಹೊರಬಂದುವು. ಮುದುಕಿಯ ಕಣ್ಣುಗಳೂ ತೇವಾದವು.

"ಅಳಬೇಡ; ನಾ ಕರೆದ ಹೇಳ್ತೇನ ಮಾಸ್ತರನಿಗೆ" ಎಂದು ಮೈ ಸವರಿ "ಯಾಕೆ ಹೊರ ಹಾಕಿದಾರ ನಿನ್ನಾ?" ಎಂದು ಕೇಳಿದಳು.

ಅಜಿತನಿಗೆ ಈಗ ಸ್ವಲ್ಪ ಧೈರ್ಯ ಬಂದಿತು. ಒಂದೊಂದಾಗಿ ಎಲ್ಲ ವನ್ನೂ ವಿವರಿಸಿದ, ಅಜ್ಜಿಯ ಮುಂದೆ.

"ಗೌಡರ ಹುಡುಗರಂದರೆ ಅವರಿಗೆ ಬೆಲೆಯೇ ಇಲ್ಲವೇನು? ನಿಲ್ಲ ನೀ ಈಗ ಮಾಸ್ತರನ್ನ ಕರೆಯಲಿಕ್ಕೆ ಕಳಸ್ತೇನ.." ಎಂದು ಕುಲದಭಿ ಮಾನಿ ಮುದುಕಿ ನುಡಿದಳು.

ಮುರದೇವಿಗೆ ತನ್ನ ಮನೆತನದ, ಮಕ್ಕಳ, ಮೊಮ್ಮಕ್ಕಳ ವಿಷಯಕ್ಕೆ ತುಂಬ ಗೌರವ, ಆದರ. ಅವರಿಗೆ ಸ್ವಲ್ಪ ಕುಂದು, ಕಲಂಕ ತಗಲಿದರೂ ಆವಳು ಸಿಟ್ಟು ಬೆಂಕಿ. ಯಾರಿಂದಲೂ ಅಪಮಾನ ಸಹಿಸುವ ಕುಲವಲ್ಲ, ಅವಳದು. ಕನ್ನಡ ನಾಡಗೌಡರ ರಕ್ತ ಇನ್ನೂ ಅವಳ ಧಮನಿಗಳಲ್ಲಿ ಹರಿಯುತ್ತಿದ್ದಿತು. ಊರ ಹುಡುಗರನ್ನೆಲ್ಲ ಸಾಲೆಯಲ್ಲಿ ಕರೆದುಕೊಂಡು ತನ್ನ ಮೊಮ್ಮಗನನ್ನೇ ಹೊರಗೆ ಹಾಕಿದುದಕ್ಕೆ ಸಿಟ್ಟು ಅವಳ ಸಹನೆ ಮೀರಿತು. ಒಕ್ಕಲಿಗರ ಹುಡುಗರಿಗಿಂತ ತನ್ನ ಮೊಮ್ಮಗನು ಕ್ಷುಲ್ಲ ಕನೇ? ಎಂದು ತನ್ನ ಮನಸ್ಸಿಗೆ ಕೇಳಿಕೊಂಡಳು. ಕುಳಿತಲ್ಲಿಂದಲೇ, —

"ರಾವಸಾಹೇಬ!" ಎಂದು ಕೂಗಿದಳು.

ಓಡಿ ಹೊರಗೆ ಬಂದ ರಾವಸಾಹೇಬ. ಅವಳ ಧ್ವನಿಯ ಗಾಂಭೀ ರ್ಯವೇ ಅವನನ್ನು ಓಡಿಸಿ ತಂದಿರಬೇಕು.

"ಚಾವಡಿಗೆ ಹೋಗಿ, ಸತ್ರ್ಯಾ ಇದ್ದರ ಇಲ್ಲಿಗೆ ಬಂದು ಹೋಗನ್ನು!" ಎಂದು ಅಪ್ಪಣೆಯಿತ್ತಳು. ರಾವಸಾಹೇಬ ಮರುನುಡಿಯದೆ ನಡೆದ.

"ಎಲ್ಲಿದ್ದರೂ ಅವ್ವಾ ಅವರು ಕರೆಯುತ್ತಾರೆಂದು ಹೇಳಿ, ಹುಡುಕಿ ಕರೆದುಕೊಂಡೇ ಬಾ.." ಎಂದು ಮತ್ತೊಮ್ಮೆ ಒದರಿ ಹೇಳಿದಳು. ಹಿರಿಯಳೆಂದು, ಗೌಡನ ತಾಯಿಯೆಂದು—ಊರ ಜನರೆಲ್ಲ 'ಅವ್ವ' ಎಂದೇ ಕರೆಯುತ್ತಿದ್ದರವಳಿಗೆ. ಅದರಂತೆ ಊರ ಬಡಬಗ್ಗರಿಗೆಲ್ಲ ನಿಜವಾಗಿಯೂ ತಾಯಿಯಾಗಿಯೇ ಇದ್ದಳು.

"ಹೋಗು, ನೀ ಊಟ ಮಾಡು; ನಿಮ್ಮ ಮಾಸ್ತರರು ಎಂಥವರಿದ್ದಾರೆ ನೋಡುವೆನೊಮ್ಮೆ. ಮಾನ ಮರ್ಯಾದೆ ಅದೆಯೋ ಇಲ್ಲವೋ ನೋಡೋಣ.. ಅವರಿಗೆ .." ಎಂದು ಅಜಿತನನ್ನು ಊಟಕ್ಕೆ ಕಳಿಸಿದಳು.

ಇದೀಗ ಮಾಸ್ತರರು ಕೋಟು ತೊಟ್ಟು ಸಾಲೆಗೆ ಹೊರಡಲು ಸಿದ್ಧರಾಗಿದ್ದರು. ಓಲೇಕಾರ ಹೋಗಿ ಗೌಡರು ಕರೆಯುವರೆಂದು ಹೇಳಿದ. ಮಾಸ್ತರರು ಅಜಿತನ ವಿಷಯವೇ ಏನಾದರೂ ಇರಬಹುದೆಂದು ಗೌಡರ ಮನೆಯ ಕಡೆಗೆ ಹೆಜ್ಜೆ ಬೆಳಸಿದರು.

"ಬರ್ರಿ!" ಪಡಸಾಲೆಯಲ್ಲಿ ಕುಳಿತ ಮುರದೇವಿ ಹೆಡ್‌ಮಾಸ್ತರರನ್ನು ಸ್ವಾಗತಿಸಿದಳು.

ಗುರುಗಳು ಹಾಸುಗಂಬಳಿಯ ಮೇಲೆ ಕೂಡುತ್ತ "ಗೌಡರು ಎಲ್ಲಿದ್ದಾರೆ?" ಎಂದು ಕೇಳಿದರು.

"ಮುಂಜಾನೆಯೇ ಊರಿಗೆ ಹೋಗಿದ್ದಾರೆ" ಎಂದಳು ಮುರದೇವಿ.

ಮಾಸ್ತರರು ತಬ್ಬಿಬ್ಬಾದರು. ಅಷ್ಟರಲ್ಲಿ ಗೌಡತಿಯೇ ಹೇಳಿದಳು.

"ನಾನೇ ಕರೆಯಿಸಿದ್ದೆ; ಸ್ವಲ್ಪ ಕೆಲಸವಿತ್ತು."

"ಏನದು?" ಎಂಬರ್ಥದ ಆತುರ ದೃಷ್ಟಿಯೊಂದನ್ನು ಬೀರಿದರು, ಮಾಸ್ತರರು.

ಇಷ್ಟರಲ್ಲಿ ಒಳಗಿನಿಂದ ಕೆಲಸ ಬಿಟ್ಟು ಸರಸ್ವತಿಯೂ ನಡುಮನೆಯ ಬಾಗಿಲ ಮರೆಗೆ ಬಂದು ನಿಂತಳು. ಮಗನ ವಿಷಯವೇನೆಂಬುದನ್ನು ಕೇಳಲು ಬಯಸಿದ್ದಳವಳು. ಅವಳ ಮುಖ ಚಿಂತೆಯಿಂದ ಮ್ಲಾನವಾ-

ಗಿದ್ದಿತು. ಸರಸ್ವತಿಯು ಕಡೆಗೆ ದೃಷ್ಟಿಯೊಂದನ್ನು ಬೀರಿ ನುಡಿದಳು.

"ನಮ್ಮ ಅಜಿತನ ಕಡೆಗೆ ಸ್ವಲ್ಪ ಲಕ್ಷ್ಯ ಕೊಡಿರಿ. ಪಾಪ ಪರದೇಶಿ ಹುಡುಗ! ನೀವೇ ಕಲಿಸಿ ಮುಂದೆ ತರುವವರು. ಅವನು ದಿನಾಲು ಸಾಲೆಗೆ ಹೋಗುವನೋ ಇಲ್ಲವೋ ಅಂಬುದೇ ನಮಗೆ ತಿಳಿಯುವದಿಲ್ಲ.." ಎಂದಳು. ಸ್ವರದಲ್ಲಿ ತೋರಿಕೆಯ ಸೌಮ್ಯತನ ತುಂಬಿತ್ತು.

ಮಾಸ್ತರರು ಸುಮ್ಮನೆ ಕುಳಿತರು. ಏನು ಮಾತಾಡಬೇಕೆಂಬುದೂ ತಿಳಿಯದಾಯಿತವರಿಗೆ. ಕುಳಿತಲ್ಲಿಯೇ ಗಡಬಡಿಸದರು. ಆದರೂ ಅದರಲ್ಲಿಯೂ ಒಂದು ಸೂಕ್ಷ್ಮಸಂತಸದ ರೇಖೆಯು ಮುಖದ ಮೇಲೆ ಮೂಡಿ ಮಾಯವಾಗದಿರಲಿಲ್ಲ. ಮೆಲ್ಲನೆ ಉಗುಳು ನುಂಗಿ ನುಡಿದರು.

"ಅವನಿಗೆ 'ಗೌಡರ ಕಡೆಯಿಂದ ಬರೆಯಿಸಿಕೊಂಡು ಬಾ' ಎಂದು ಒಂದು ಕಾಗದ ಕೊಟ್ಟು ಮೊನ್ನೆಯೇ ಕಳಿಸಿದ್ದೆ. ಎರಡು ದಿನ ಆಯ್ತು, ತಿರುಗಿ ಅವನು ಸಾಲೆಯ ಕಡೆಗೇ ಬರಲಿಲ್ಲ.."

"ಗೌಡರೇ ಊರಲ್ಲಿ ಇಲ್ಲ; ಬಂದ ಮೇಲೆ.. ಬಂದಾನು, ಬರೆಯಿಸಿಕೊಂಡು. ಯಾವ ಕಾಗದ ಅದು?" ಸರಳ ಸ್ವರದಲ್ಲಿ ಮಾತು ಹೊರಬಿತ್ತು, ಮುರದೇವಿಯ ಬಾಯಿಂದ.

"ಹರತಾಳ ಪಾಲಿಸಿದ್ದಕ್ಕ ಇತ್ತು!" ಸ್ವಲ್ಪ ಹೆಮ್ಮೆಯಿತ್ತು ಸ್ವರದಲ್ಲಿ.

"ಇದೇನು, ಸಾಲೆಯ ಸುತ್ತ ಮೇಲಿಂದ ಮೇಲೆ ಪೀಡೆ..? ಹಿಂದೆ, ಧ್ವಜ ಹಚ್ಚಿದರಂತ.. ಎರಡು ದಿನ ನೀವೇ ಪೋಲೀಸರ ಠಾಣೆಯಲ್ಲಿ ಕೂಡಬೇಕಾಯಿತು. ಫೌಜದಾರನ ಕೆಟ್ಟ ಮಾತು ಕೇಳಬೇಕಾಯಿತು. ಈಗ ಹುಡುಗರೇ ಸಾಲೆಗೆ ಬಂದಿಲ್ಲ ಅಂತೀರಿ.. ಹೀಗಾದರೆ ಹೇಗೆ?"

"ಹೌದು ಮೊನ್ನೆ ಒಂದೂ ಹುಡುಗ ಸಾಲೆಗೆ ಬಂದಿರಲಿಲ್ಲ." ಎಂದು ರಾವಸಾಹೇಬನ ಕಡೆಗೆ ನೋಡುತ್ತ ಮಾಸ್ತರರು ನುಡಿದರು. ಆದರೆ ಅದೇಕೊ ಮುರದೇವಿಯ ಮಾತಿನಿಂದ ಅವರ ಮನಸ್ಸು ಮುದುರಿಕೊಂಡಿತ್ತು.

"ಎಲ್ಲ ಹುಡುಗರೂ ಬರೆದು ತಂದುಕೊಟ್ಟರೇನು?"

ಮಾತು ಸಹಜವಾಗಿತ್ತಾದರೂ ಅದರಲ್ಲೊಂದು ತರದ ಬಿಗುಹು

ಇದ್ದಿತು ಧ್ವನಿಯಲ್ಲಿ ಒಂದು ರೀತಿಯ ದರ್ಪ, ವ್ಯಂಗ್ಯ ಅಡಕವಾಗಿತ್ತು. ಮಾಸ್ತರರು ಮೊದಲೇ ತಣ್ಣಗಾಗಿದ್ದರು. ಈ ಮಾತಿಗೇನೂ ಹೇಳಲಿಲ್ಲ. ಅವಳೇ ಮತ್ತೆ ಕೇಳಿದಳು.

"ಏನು, ಗೌಡರ ಹುಡುಗರಿಗಷ್ಟೇ ಬರೆಯಿಸಿಕೊಳ್ಳುವದಿರುವುದೇನು? ಹಾಗೇನಾದರೂ ಇದ್ದರೆ ನೋಡಿರಿ ಮತ್ತ..! ನಮಗೇನ ಹೆಂಗಸರಿಗಷ್ಟ ತಿಳಿಯೋದು? ಯಾರ ಮನೆ ಹುಡುಗ, ಹೇಗೆ ಅಂಬುವದನ್ನು ತಿಳಿದವರು ನೀವೇ ನೋಡಿ ನಡೆಯಬೇಕು" ಮುರದೇವಿಗೆ ಮಾಸ್ತರರ ಯೋಗ್ಯತೆಗೆ ಮಾತು ಹೆಚ್ಚಾಯಿತೆನಿಸಿತು. ನಿಜವಾಗಿಯೂ ಹೆಚ್ಚಾಗಿಯೇ ಇತ್ತು. ಅದಕ್ಕಂತೇ ಮಾಸ್ತರರೂ ಒಂದು ಕಾರಣ ಶೋಧಿಸಿ ಸೂಚಿಸಬೇಕಾಯಿತು.

"ನೋಡರಿ; ದೊಡ್ಡವರ ಮಕ್ಕಳು. ಹಗಲು ರಾತ್ರಿ ಕೇವಲ ಗೊಂದಲದೊಳಗೇ ಇರುತ್ತಾರೆ, ಸಾಲೆಯಲ್ಲಿ. ಅವರು ಮಾಡಿದ ಕೃತಿಯನ್ನೆಲ್ಲ ನಾವು ನಿಮ್ಮ ಕಿವಿಯ ವರೆಗೆ ತರಬಾರದು. ಅಂತೇ ಅವರಿಗೆ ಹೀಗೆ, ಹೆದರಿಕೆ ಹಾಕಬೇಕಾಗ್ತದೆ...."

ಮಾಸ್ತರರ ಮಾತನ್ನು ನಡುವೆಯೇ ತಡೆದು, "ಹೆದರಿಕೆ ಹಾಕಿರಲ್ಲ; ಆದರೆ ನಮ್ಮ ಹುಡುಗರು ಹಾಗೇನಾದರೂ ನಡಕೊಂಡಿದ್ದರೆ ನಮಗೂ ಹೇಳ್ತಾ ಇರ್ರಿ. ನಾವೂ ಅವರಿಗೆ ಬುದ್ಧೀ ಕಲಸತೇವು, ಮನೆಯಲ್ಲಿ." ಎಂದಳು

"ಏನ ಹೇಳಬೇಕು ನಿಮಗ..? ಮೊನ್ನೆ ಸಾಲೆಯ ರಿಪೇರಿ ಕಾಲಕ್ಕ ಗಡಿಯಾಳ ತೆಗೆದು ಕೆಳಗೆ ಇಟ್ಟಿದ್ದಿವಿ; ನಿಮ್ಮ ರಾವಸಾಬ ಕಾಜ ಒಡೆದ. ಅಂಥದೆಲ್ಲ ನಾವ ನಿಮಗ ಹೇಳಬೇಕು?" ಮಾಸ್ತರರು ಯಾವುದರ ಕಾರಣವನ್ನು ಎಲ್ಲಿಗೋ ಒಯ್ದು ಮುಟ್ಟಿಸಿ ಮಾತು ಮುಗಿಸಿದರು.

ನಿಜವಾಗಿಯೂ ರಾವಸಾಹೇಬನ ನಡತೆ ಹಾಗಿತ್ತು. ಅವನೇನೋ ಐದನೆಯ ತರಗತಿಯಲ್ಲಿ ಕಲಿಯುತ್ತಿದ್ದುದು ನಿಜ. ಆದರೆ ಅಭ್ಯಾಸ ಅಷ್ಟು ಚನ್ನಾಗಿರಲಿಲ್ಲ. ಪುಸ್ತಕಗಳಿಗೆ ಮೇಲು ಹೊದಿಕೆ ಹಾಕಿ, ಅಚ್ಚುಕಟ್ಟಾಗಿ ಇಟ್ಟುಕೊಳ್ಳುವ ರೀತಿ, ಹೊಸ ಹೊಸ ಪುಸ್ತಕಗಳನ್ನು ತರಿಸುವ

ಗಿದ್ದಿತು. ಸರಸ್ವತಿಯು ಕಡೆಗೆ ದೃಷ್ಟಿಯೊಂದನ್ನು ಬೀರಿ ನುಡಿದಳು.

"ನಮ್ಮ ಅಜಿತನ ಕಡೆಗೆ ಸ್ವಲ್ಪ ಲಕ್ಷ್ಯ ಕೊಡಿರಿ. ಪಾಪ ಪರದೇಶಿ ಹುಡುಗ! ನೀವೇ ಕಲಿಸಿ ಮುಂದೆ ತರುವವರು. ಅವನು ದಿನಾಲು ಸಾಲೆಗೆ ಹೋಗುವನೋ ಇಲ್ಲವೋ ಅಂಬುದೇ ನಮಗೆ ತಿಳಿಯುವ ದಿಲ್ಲ.." ಎಂದಳು. ಸ್ವರದಲ್ಲಿ ತೋರಿಕೆಯ ಸೌಮ್ಯತನ ತುಂಬಿತ್ತು.

ಮಾಸ್ತರರು ಸುಮ್ಮನೆ ಕುಳಿತರು. ಏನು ಮಾತಾಡಬೇಕೆಂಬುದೂ ತಿಳಿಯದಾಯಿತವರಿಗೆ. ಕುಳಿತಲ್ಲಿಯೇ ಗಡಬಡಿಸದರು. ಆದರೂ ಅದರಲ್ಲಿಯೂ ಒಂದು ಸೂಕ್ಷ್ಮಸಂತಸದ ರೇಖೆಯು ಮುಖದ ಮೇಲೆ ಮೂಡಿ ಮಾಯವಾಗದಿರಲಿಲ್ಲ. ಮೆಲ್ಲನೆ ಉಗುಳು ನುಂಗಿ ನುಡಿದರು.

"ಅವನಿಗೆ 'ಗೌಡರ ಕಡೆಯಿಂದ ಬರೆಯಿಸಿಕೊಂಡು ಬಾ' ಎಂದು ಒಂದು ಕಾಗದ ಕೊಟ್ಟು ಮೊನ್ನೆಯೇ ಕಳಿಸಿದ್ದೆ. ಎರಡು ದಿನ ಆಯ್ತು, ತಿರುಗಿ ಅವನು ಸಾಲೆಯ ಕಡೆಗೇ ಬರಲಿಲ್ಲ.."

"ಗೌಡರೇ ಊರಲ್ಲಿ ಇಲ್ಲ; ಬಂದ ಮೇಲೆ.. ಬಂದಾನು, ಬರೆಯಿಸಿಕೊಂಡು. ಯಾವ ಕಾಗದ ಅದು?" ಸರಳ ಸ್ವರದಲ್ಲಿ ಮಾತು ಹೊರಬಿತ್ತು, ಮುರದೇವಿಯ ಬಾಯಿಂದ.

"ಹರತಾಳ ಪಾಲಿಸಿದ್ದಕ್ಕ ಇತ್ತು!" ಸ್ವಲ್ಪ ಹೆಮ್ಮೆಯಿತ್ತು ಸ್ವರದಲ್ಲಿ.

"ಇದೇನು, ಸಾಲೆಯ ಸುತ್ತ ಮೇಲಿಂದ ಮೇಲೆ ಪೀಡೆ..? ಹಿಂದೈ ಧ್ವಜ ಹಚ್ಚಿದರಂತ.. ಎರಡು ದಿನ ನೀವೇ ಪೋಲೀಸರ ಠಾಣೆಯಲ್ಲಿ ಕೂಡಬೇಕಾಯಿತು. ಫೌಜದಾರನ ಕೆಟ್ಟ ಮಾತು ಕೇಳಬೇಕಾಯಿತು. ಈಗ ಹುಡುಗರೇ ಸಾಲೆಗೆ ಬಂದಿಲ್ಲ ಅಂತೀರಿ.. ಹೀಗಾದರೆ ಹೇಗೆ?"

"ಹೌದು ಮೊನ್ನೆ ಒಂದೂ ಹುಡುಗ ಸಾಲೆಗೆ ಬಂದಿರಲಿಲ್ಲ." ಎಂದು ರಾವಸಾಹೇಬನ ಕಡೆಗೆ ನೋಡುತ್ತ ಮಾಸ್ತರರು ನುಡಿದರು. ಆದರೆ ಅದೇಕೊ ಮುರದೇವಿಯ ಮಾತಿನಿಂದ ಅವರ ಮನಸ್ಸು ಮುದುರಿಕೊಂಡಿತ್ತು.

"ಎಲ್ಲ ಹುಡುಗರೂ ಬರೆದು ತಂದುಕೊಟ್ಟರೇನು?"

ಮಾತು ಸಹಜವಾಗಿತ್ತಾದರೂ ಅದರಲ್ಲೊಂದು ತರದ ಬಿಗುಹು

ಇದ್ದಿತು. ಧ್ವನಿಯಲ್ಲಿ ಒಂದು ರೀತಿಯ ದರ್ಪ, ವ್ಯಂಗ್ಯ ಅಡಕವಾಗಿತ್ತು. ಮಾಸ್ತರರು ಮೊದಲೇ ತಣ್ಣಗಾಗಿದ್ದರು. ಈ ಮಾತಿಗೇನೂ ಹೇಳಲಿಲ್ಲ. ಅವಳೇ ಮತ್ತೆ ಕೇಳಿದಳು.

"ಏನು, ಗೌಡರ ಹುಡುಗರಿಗಷ್ಟೇ ಒರೆಯಿಸಿಕೊಳ್ಳುವದಿರುವುದೇನು? ಹಾಗೇನಾದರೂ ಇದ್ದರೆ ನೋಡಿರಿ ಮತ್ತ..! ನಮಗೇನ ಹೆಂಗಸರಿಗಷ್ಟ ತಿಳಿಯೋದು? ಯಾರ ಮನೆ ಹುಡುಗ, ಹೇಗೆ ಅಂಬುವದನ್ನು ತಿಳಿದವರು ನೀವೇ ನೋಡಿ ನಡೆಯಬೇಕು" ಮುರದೇವಿಗೆ ಮಾಸ್ತರರ ಯೋಗ್ಯತೆಗೆ ಮಾತು ಹೆಚ್ಚಾಯಿತೆನಿಸಿತು. ನಿಜವಾಗಿಯೂ ಹೆಚ್ಚಾಗಿಯೇ ಇತ್ತು. ಅದಕ್ಕಂತೇ ಮಾಸ್ತರರೂ ಒಂದು ಕಾರಣ ಶೋಧಿಸಿ ಸೂಚಿಸಬೇಕಾಯಿತು.

"ನೋಡರಿ; ದೊಡ್ಡವರ ಮಕ್ಕಳು. ಹಗಲು ರಾತ್ರಿ ಕೇವಲ ಗೊಂದಲದೊಳಗೇ ಇರುತ್ತಾರೆ, ಸಾಲೆಯಲ್ಲಿ. ಅವರು ಮಾಡಿದ ಕೃತಿಯನ್ನೆಲ್ಲ ನಾವು ನಿಮ್ಮ ಕಿವಿಯ ವರೆಗೆ ತರಬಾರದು. ಅಂತೇ ಅವರಿಗೆ ಹೀಗೆ, ಹೆದರಿಕೆ ಹಾಕಬೇಕಾಗ್ತದೆ...."

ಮಾಸ್ತರರ ಮಾತನ್ನು ನಡುವೆಯೇ ತಡೆದು, "ಹೆದರಿಕೆ ಹಾಕಿರಲ್ಲ; ಆದರೆ ನಮ್ಮ ಹುಡುಗರು ಹಾಗೇನಾದರೂ ನಡಕೊಂಡಿದ್ದರೆ ನಮಗೂ ಹೇಳ್ತಾ ಇರ್ರಿ. ನಾವೂ ಅವರಿಗೆ ಬುದ್ಧೀ ಕಲಸತೇವು, ಮನೆಯಲ್ಲಿ." ಎಂದಳು

"ಏನ ಹೇಳಬೇಕು ನಿಮಗ..? ಮೊನ್ನೆ ಸಾಲೆಯ ರಿಪೇರಿ ಕಾಲಕ್ಕ ಗಡಿಯಾಳ ತೆಗೆದು ಕೆಳಗೆ ಇಟ್ಟಿದ್ದಿವಿ; ನಿಮ್ಮ ರಾವಸಾಬ ಕಾಜ ಒಡೆದ. ಅಂಥದೆಲ್ಲ ನಾವ ನಿಮಗ ಹೇಳಬೇಕು?" ಮಾಸ್ತರರು ಯಾವುದರ ಕಾರಣವನ್ನು ಎಲ್ಲಿಗೋ ಒಯ್ದು ಮುಟ್ಟಿಸಿ ಮಾತು ಮುಗಿಸಿದರು.

ನಿಜವಾಗಿಯೂ ರಾವಸಾಹೇಬನ ನಡತೆ ಹಾಗಿತ್ತು. ಅವನೇನೋ ಐದನೆಯ ತರಗತಿಯಲ್ಲಿ ಕಲಿಯುತ್ತಿದ್ದುದು ನಿಜ. ಆದರೆ ಅಭ್ಯಾಸ ಅಷ್ಟು ಚನ್ನಾಗಿರಲಿಲ್ಲ. ಪುಸ್ತಕಗಳಿಗೆ ಮೇಲು ಹೊದಿಕೆ ಹಾಕಿ, ಅಚ್ಚುಕಟ್ಟಾಗಿ ಇಟ್ಟುಕೊಳ್ಳುವ ರೀತಿ, ಹೊಸ ಹೊಸ ಪುಸ್ತಕಗಳನ್ನು ತರಿಸುವ

ಬಗೆ, ದಸ್ತಗಟ್ಟಲೆ ಕಾಗದ ಕೊಂಡು ತರಿಸುವ ಕ್ರಮ, ಎಲ್ಲದರಲ್ಲಿಯೂ ಒಂದು ತೋರಿಕೆಯ ಆಸ್ಥೆಯಿತ್ತು. ಅದರ ಜೊತೆಗೆ ಸಾಕಷ್ಟು ಸಿಡುಕು ಸೆಡವುತನಗಳೂ ಅವನಲ್ಲಿ ಬೆಳೆದು ಬಂದಿದ್ದುವು. ಈ ಗುಣಗಳನ್ನು ಅವನು ತನ್ನ ತಂದೆಯಿಂದ ಬಳುವಳಿಯಾಗಿ ಪಡೆದನೆಂದರೂ ತಪ್ಪಾಗದು. ಅನ್ಯರ ಮೇಲೆ ಅಧಿಕಾರ ನಡೆಯಿಸುವ ಚಪಲ ಬಹಳ. ಎಂದೂ ಸಂಗಡಿಗ ರಲ್ಲಿ ಕೂಡಿ ಇದ್ದು ಗೊತ್ತಿಲ್ಲ. ತನ್ನಷ್ಟಕ್ಕೆ ತಾನೇ ಇರುವ. ಹೊಗಳು ಭಟ್ಟರ ತಂಡದಲ್ಲಿ ಮಾತ್ರ ಇರುವ. ಈಗಾಗಲೇ ಅವನಲ್ಲಿ 'ನಾನು ಊರ ಗೌಡ; ಈ ಎಲ್ಲ ವಿದ್ಯಾರ್ಥಿಗಳ ಮೇಲೆ ಮುಂದೆ ಅಧಿಕಾರ ನಡೆಯಿಸು ವವ' ಎಂಬ ಭಾವ ತುಂಬಿ ಹೊರಸೂಸುತ್ತಿದ್ದಿತು. ಅದರಂತೆ ಅವನ ನಡತೆಯೂ ಇತ್ತು. ಅದು ಅವನ ತಾಯಿತಂದೆಗಳಿಗೂ ಬೇಕಾದ ಸಂಗತಿಯಾಗಿತ್ತು.

ಅಜಿತನಲ್ಲಿ ತಮ್ಮನ ಈ ಗುಣಗಳಿರಲಿಲ್ಲ. ಮನಸ್ಸು ಮಾಡಿದರೆ ಹದಿನೈದು ದಿನಗಳ ಪಾಠವನ್ನು ಒಂದೇ ದಿನದಲ್ಲಿ ಸಿದ್ಧಮಾಡುವನು. ಮನಸ್ಸಿಲ್ಲದಿದ್ದರೆ ಎಂಟು ಹತ್ತು ದಿನ ಪುಸ್ತಕವನ್ನೇ ಕೈಯಲ್ಲಿ ಹಿಡಿಯು ತ್ತಿರಲಿಲ್ಲ. ಈತ ಸಂಗಪ್ರಿಯ, ಚಪಲ. ಫುಟಬಾಲ್ ಮೈದಾನದ ಮೇಲೆ ಅಜಿತನೇ ಮುಂದಾಳು; ಅವನೇ ಟೀಮಿನ ಕ್ಯಾಪ್ಟನ್. ವಾದವಿವಾದ ಕೂಟದಲ್ಲಿ ಅವನೇ ಶಿರಿಮಣಿ, ಗುರುಗಳ ಮೆಚ್ಚುಗೆಗೆ ಪಾತ್ರ. ಆದರೂ ಅಧಿಕಾರ ನಡೆಯಿಸಲರಿಯ; ಮನಸ್ಸಿನ ಭಾವನೆ ಚಿಂತನೆಗಳನ್ನು ಪ್ರಕಟಿ ಸಲು ಭಾಷೆಯೊಂದು ಸಾಧನವೆಂದು ಗಮನಿಸಿ, ಅನೇಕ ಭಾಷೆಗಳತ್ತ ಮನಸ್ಸು ಹಾಕುವ; ಕಲಿಯಲು ಪ್ರಯತ್ನಿಸುವ; ಯಾವ ಕಾರ್ಯಕ್ಕಾ ದರೂ ಜನಬಲ ಬೇಕು, ಎಂದರಿತುಕೊಂಡು ಜನರಲ್ಲಿ ಹೊಂದಿ ಇರು ವವ; ಸಮಾಜಹಿತದಲ್ಲಿ ತನ್ನ ಹಿತವಿದೆಯೆಂದರಿತವ, ಮಾತಾಳಿ. ಅದ ರಿಂದ ಶಾಲೆಯ ವಿದ್ಯಾರ್ಥಿಗಳೆಲ್ಲ ಅವನ ಗೆಳೆಯರೇ. ಚಾಧವ ಮಾಸ್ತರರ ಸವಿನುಡಿ, ವಿಷಯ ವಿವೇಚನೆಯ ರೀತಿ, ಜ್ಞಾನ ಸಮೃದ್ಧಿಗಳು ಅವನ ಮನವನ್ನು ಸೂರೆಗೊಂಡಿದ್ದುವು. ಅವರಂತೆ ತಾನೂ ಓದಬೇಕು, ಬರೆಯ ಬೇಕು, ತಿಳಿದುಕೊಳ್ಳಬೇಕು, ತಿಳಿಸಿಕೊಡಬೇಕು, ಎಂದು ಹಂಬಲಿಸು ವನು. ಧ್ಯೇಯವಾದಿಯಾಗಿ ಕಲ್ಪನೆಯ ಕುದುರೆಯನ್ನೇರಿ ಬಹುದೂರ

ವಿಹರಿಸುವನು.

ಜಾಧವ ಮಾಸ್ತರರಲ್ಲಿ ಅಮೂಲ್ಯವಾದ ಆಸ್ತಿಯೊಂದಿತ್ತು. ಅದಾವು ದೆಂದರೆ ರಾಜಕೀಯ ವಿಷಯಗಳ ಮೇಲೆ ಹಲವು ಪುಸ್ತಕಗಳಿಂದ ತುಂಬಿದ ಕಪಾಟವೇ ಆ ಆಸ್ತಿ. ಅವರ ಒಲವನ್ನು ನೋಡಿ, ಅವರ ಮಾವ ಮದುವೆಯಲ್ಲಿ ವರದಕ್ಷಿಣೆಯೆಂದು ಅರ್ಪಿಸಿದ್ದು. ಅಲ್ಲಿಂದ ಪುಸ್ತಕಗಳನ್ನೂ ' ಯಂಗ ಇಂಡಿಯ 'ದ ಹಳೆಯ ಫೈಲುಗಳನ್ನೂ ತಂದು ಓದುವ ಅಜಿತ. ಇತ್ತಿತ್ತಲಾಗಿ ಪ್ರಸಂಗ ಬಂದರೆ ಗುರುಗಳ ಕೂಡ ಅನೇಕ ವಿಷಯಗಳ ಮೇಲೆ ಚರ್ಚೆಯನ್ನೂ ಆರಂಭಿಸುವ.

ಜಾಧವ ಮಾಸ್ತರರನ್ನೂ, ಅವರು ತೊಡುವ ಖಾದೀ ಅರಿವೆಗಳನ್ನೂ ಕುರಿತು ರಾವಸಾಹೇಬ ಒಂದೆರಡು ಸಲ ಅಪಹಾಸ್ಯವನ್ನೂ ಮಾಡಿದ್ದ. ಅವರಿಗೆ 'ಮಠದ ಅಯ್ಯ' ಎಂದೂ ಹೆಸರಿಟ್ಟಿದ್ದ. ಒಂದು ಸಲ ಈ ಸಂಗತಿಯನ್ನು ಗುರುಗಳ ಕಿವಿಯ ವರೆಗೂ ಒಯ್ದು ರಾವಸಾಹೇಬನ್ನ ಬಾಯಿಂದ ಕ್ಷಮೆ ಬೇಡಿಸದ ಹೊರತಾಗಿ ಸುಮ್ಮನಿರಲಿಲ್ಲ, ಅಜಿತ. ಇಂಥ ಚಿಕ್ಕಪುಟ್ಟ ಸಂಗತಿಗಳಿಂದ ಅಜಿತ ರಾವಸಾಹೇಬರ ಮನಸ್ಸುಗಳು ದೂರ ವಾಗುತ್ತ ಬರುತ್ತಿದ್ದುವು. ರಾವಸಾಹೇಬನು ಗೌಡನ ಮಗನು; ಅದ ರಲ್ಲೂ ಅದು ಸ್ಥಳಿಕ ಜನರಿಂದ ನಡೆಯಿಸಿದ ಹಾಯ್‌ಸ್ಕೂಲು. ಹೀಗಾಗಿ ಅವನನ್ನು ವರ್ಷ ವರ್ಷವೂ ಮೇಲಿನ ತರಗತಿಗೆ ಏರಿಸುತ್ತ ಬಂದಿದ್ದರು. ಆದರೆ ರಾವಸಾಹೇಬ ತಾನಷ್ಟು ಜಾಣನೆಂದೇ ಭಾವಸಿದ್ದ. ಆದರೂ ಈ ಪೊಳ್ಳು ಕಲ್ಪನೆಯನ್ನು ಕಳೆಯಲು ಅಜಿತ ಮನಸ್ಸು ಮಾಡುತಿರಲಿಲ್ಲ. ಕಕ್ಕನೇ ಒಮ್ಮೊಮ್ಮೆ ರಾವಸಾಹೇಬನ ಅಭ್ಯಾಸದ ಬಗ್ಗೆ ಅಜಿತನ ಅಭಿ ಪ್ರಾಯ ಕೇಳಿದಾಗ ನಿಜಸ್ಥಿತಿಯನ್ನು ಹೇಳದೆ ಇರುತ್ತಿರಲಿಲ್ಲ. ಆಗೆಲ್ಲ ರಾವಸಾಹೇಬನ ಪ್ರತ್ಯುತ್ತರ ಒಂದು ಸಿದ್ಧವಾಗಿಯೇ ಇರುತ್ತಿದ್ದಿತು. 'ಅವನ ಹಾಗೆ ನಾನು ಸಿಕ್ಕಸಿಕ್ಕ ಪುಸ್ತಕಗಳನ್ನು ಓದಿ ತಲೆ ಕೆಡಿಸಿಕೊ ಳ್ಳುವದಿಲ್ಲ!' ಎಂದು. ಆದಗೌಡನಿಗೆ ಮಗನ ಮಾತು ಸರಿಯೆನಿಸು ವದು. ಯಾಕಂದರೆ ಅಜಿತ ಆಗಾಗ ತನ್ನ ತಂದೆಯ ಪುಸ್ತಕದ ಕಪಾಟನ್ನು ತೆರೆಯುವದೂ, ಆ ಗ್ರಂಥಗಳನ್ನೆಲ್ಲ ಸಿಸ್ತಿನಿಂದಿಡುವುದೂ ಮಾಡುತ್ತಿದ್ದ. ಅಲ್ಲದೆ ಯಾವಾಗಲೂ ಮನೆಯಲ್ಲಿದ್ದಾಗ ಓದುತ್ತಲೇ ಇರುವ. ಈಗೀಗ

ಉರ್ದು ಭಾಷೆಯ ಅಭ್ಯಾಸವನ್ನೂ ಮಾಡುತ್ತಿರುವ. ಅನ್ಯ ಮತ ಗ್ರಂಥಗಳನ್ನೋದುವ. ಕುರಾನವೊಂದನ್ನು ಎಲ್ಲಿಂದಲೋ ತಂದಿದ್ದ. ತಂದೆಯ ಗ್ರಂಥಸಂಗ್ರಹದಲ್ಲಿರುವ ಬಾಯಬಲ್ಲಿಗೆ ಚನ್ನಾಗಿ ಹೊದಿಕೆ ಹಾಕಿದ್ದನ್ನು ಪ್ರತ್ಯಕ್ಷ ಗೌಡನೇ ಕಂಡಿದ್ದ. ಇವೆಲ್ಲ ಸಂಗತಿಗಳು ಗೌಡರಿಗೆ ಸೇರುತ್ತಿರಲಿಲ್ಲ. ತನ್ನ ತಮ್ಮನೂ ಹೀಗೆಯೇ ಓದಿ ಓದಿ ಮನೆಯ ಹಿತನವನ್ನು ಬಿಟ್ಟು ಊರ ಹಿತ ಸಾಧಿಸುವೆನೆಂದು ಕೆಲಸ ಮಾಡುತ್ತ ಹೋಗಿ ಹಾಳಾದ. ಅಣ್ಣನೆಂದು ಸುಮ್ಮನಿರದೆ ನನ್ನ ಹುಳುಕನ್ನೇ ಹೊರಗೆಡವಲು ಸಂಧಿ ಸಾಧಿಸುತ್ತಿದ್ದ. ಗೌಡನ ಅಧಿಕಾರವೆಂದರೆ ಅವನಿಗೆ ವೈಯುರಿದು ಹೋಗುತ್ತಿತ್ತು. ತಂದೆಯ ಲಕ್ಷಣಗಳೇ ಮಗನಲ್ಲಿಯೂ ಈಗ ತೋರುತ್ತಿವೆ. ಏನೇ ಆಗಲಿ, ಅವನೊಬ್ಬನೆ ಹಾಳಾಗಲಿ, ನಮ್ಮ ರಾವಸಾಹೇಬನನ್ನು ತಕ್ಕೊಂಡು ಹಾಳಿಗೆ ಹಚ್ಚುವುದು ಬೇಡ. ಎಂದುಕೊಂಡು ಸ್ವತಃ ಆದಗೌಡನೇ ಅನೇಕ ಸಲ ಅಜಿತ ರಾವಸಾಹೇಬರಲ್ಲಿ ಬುದ್ಧಿಪೂರ್ವಕವಾಗಿ ವೈಮನಸ್ಯವನ್ನುಂಟುಮಾಡಲೂ ಯತ್ನಿಸುತ್ತಿದ್ದ.

ಮೊನ್ನೆ ಮೊನ್ನೆ ಆದ ಸಾಲೆಯ ವಾರ್ಷಿಕೋತ್ಸವದ ಕಾಲಕ್ಕೆ ಹಾಯಸ್ಕೂಲಿನ ವಿದ್ಯಾರ್ಥಿಗಳು ಆಡಿದ ನಾಟಕದಲ್ಲಿ ಅಜಿತನು ಮೌಲವಿಯ ಪಾತ್ರ ವಹಿಸಿದ್ದ. ಪ್ರೇಕ್ಷಕರೆಲ್ಲರೂ ಅವನ ಅಭಿನಯವನ್ನು ಹೊಗಳಿದರು ಶಿಕ್ಷಣಪ್ರಸಾರ ಸಂಘದವರು ಬೆಳ್ಳಿಯ ಪದಕವನ್ನು ಮೆಚ್ಚುಗೆಯಾಗಿ ಇತ್ತರು. ಅಜಿತನ ಈ ಯಶಸ್ಸಿಗೆ ಪ್ರತಿಯಾಗಿ ರಾವಸಾಹೇಬನೂ ಅದೇ ಬಂದ ಮೊಹರಮ್ಮದಲ್ಲಿ ಭಾಪೀ ಗೌಡನಾಗಿ ಜನರ ಗಲಾಟೆಯನ್ನು ಅಡಗಿಸಲೆಂದು ಕೈಯಲ್ಲಿ ಬೆತ್ತ ಹಿಡಿದು, ಕುಸ್ತಿಯ ಮೈದಾನದಲ್ಲಿ ತಿರುಗಾಡಿ ಒಕ್ಕಲಿಗರಿಂದ ಹೊಗಳಿಸಿಕೊಂಡು ಸಮಾಧಾನ ಹೊಂದಿದ್ದ.

ಹೆಡ್‌ಮಾಸ್ತರರೇನೋ ಗೌಡರ ಮನೆಯೊಳಗಿಂದ, ಸುಮ್ಮನೆ ಎದ್ದು ಬಂದರಾದರೂ ಸಾಲೆಯಲ್ಲಿ ಬಂದು ಬಹಳ ಹಾರಾಡಿದರು. ‘ಗೌಡರಾದರೇನು, ತಮ್ಮ ಮನೆಗೆ. ನಮಗೇನು..? ಆ ಹುಡುಗನನ್ನು ಸಾಲೆಯ ಕಟ್ಟೆಯನ್ನೇ ಏರಗೊಡಲಿಕ್ಕಿಲ್ಲ.’ ಎಂದು ಮೊದಲಾಗಿ ಒದರಾಡಿದರು. ಅವರ ಎಲ್ಲ ಮಾತಿನ ಮೇಲಿಂದ ನಡೆದ ಸಂಗತಿಯ ಕಲ್ಪನೆ

ಎಲ್ಲ ಸಹಾಯಕ ಶಿಕ್ಷಕರಿಗೂ ಬಂದಿತು ಜಾಧವ ಮಾಸ್ತರರ ಮನದಲ್ಲಿ ಒಮ್ಮೆ ಇವರನ್ನು ಒರೆಗೆ ಹಚ್ಚಬೇಕೆಂದೆನಿಸಿತೇನೋ. ಆ ದಿನ ಸಾಲೆ ಬಿಡುವ ಮುಂಚೆ ಆರನೆಯ ತರಗತಿಯ ವಿದ್ಯಾರ್ಥಿಗಳಿಗೆ ಒಂದು ಕಿವಿಮಂತ್ರ ಹೇಳಿಬಿಟ್ಟರು !

ಮರುದಿನ ಆ ತರಗತಿಯ ಒಬ್ಬ ವಿದ್ಯಾರ್ಥಿಯೂ ಕ್ಲಾಸಿಗೆ ಇಲ್ಲ. ಅಜಿತನನ್ನು ಕರೆದುಕೊಳ್ಳದ ಹೊರತು ತಾವು ಸಾಲೆಯಲ್ಲಿ ಕಾಲಿಕ್ಕುವದಿಲ್ಲವೆಂದು ಅವರ ಅಭಿಪ್ರಾಯ. ಈಗ ಈ ಸಂಪು ಊರ ಜನತೆಯ ಲಕ್ಷ್ಯವನ್ನೆಳೆಯಿತು. ಕೆಲ ವೃದ್ಧರಿಗೆ 'ಹುಡುಗರು ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾಕಿಕೊಳ್ಳುತ್ತಿದ್ದಾರೆ. ಇವರಿಗೊಮ್ಮೆ ಬುದ್ಧಿ ಕಲಿಸಬೇಕು.' ಎನ್ನಿಸುತ್ತಿದ್ದಿತು. ಕೆಲವು ಸಮುಂಜಸ ಜನರಿಗೆ ಹುಡುಗರ ಐಕ್ಯ, ಸ್ವಾಭಿಮಾನ ಉತ್ಸಾಹಗಳನ್ನು ಕಂಡು, ಕೌತುಕವೆನಿಸುವದು. ಆದರಲ್ಲೂ ವಿದ್ಯಾರ್ಥಿಗಳ ಉತ್ಸಾಹ ಅಪವ್ಯಯವಾಗುತ್ತಲಿದೆ, ಎಂದೂ ಭಾಸವಾಗುತ್ತಿದ್ದಿತು. ಇಷ್ಟಾದ ಮೇಲೆ ಮಾತ್ರ ಕೆಲ ಕಾಂಗ್ರೆಸ ಕಾರ್ಯಕರ್ತರು ಹೆಡ್‌ಮಾಸ್ತರರೊಡನೆ ಈ ವಿಷಯದಲ್ಲಿ ಮಾತುಕತೆ ನಡೆಯಿಸಲು ಮುಂದಾದರು. 'ವಿದ್ಯಾರ್ಥಿಗಳ ಈ ಸ್ವೈರ ವರ್ತನವನ್ನು ತಡೆಯಲೇಬೇಕು. ಅವರ ಮೇಲೆ ಅಧಿಕಾರ ನಡೆಯಿಸಲೇಬೇಕು.' ಎಂದು ಹೆಡ್‌ಮಾಸ್ತರರಿಗೆ ಅನ್ನಿಸುತ್ತಿದ್ದಿತು. ಆದರೆ ಆ ಕಾಲ, ದೇಶವೇ ಬಿಡುಗಡೆಗಾಗಿ ಬಲಿದಾನ ಕೊಡಲು ಸಿದ್ಧವಾದ ಕಾಲ !

ಹಾಯ್‌ಸ್ಕೂಲಿನ ಮುಂದಿನ ಬೈಲಿನಲ್ಲಿರುವ ಒಂದು ಬೇವಿನಗಿಡದ ನೆರಳಿನಲ್ಲಿ ನಾಲ್ಕಾರು ವಿದ್ಯಾರ್ಥಿಗಳು ಕುಳಿತು ಮಾತನಾಡುತ್ತಿದ್ದಾರೆ. ಕೆಲವು ಹುಡುಗರು ಇಬ್ಬರೊ ಮೂವರೊ ಅತ್ತಿತ್ತ ಹಾಯ್ದಾಡುತ್ತಿದ್ದರು. ಅಭೇದ್ಯ ಸೆರೆಮನೆಯಂತಿರುವ ಸಾಲೆಯ ಆಫೀಸ ರೂಮಿನಲ್ಲಿ ಏನೋ ಗಂಭೀರವಾದ ಚರ್ಚೆ ನಡೆದಿದ್ದಿತು. ಹಲವು ಹೊಸ ಹೊಸ ಪ್ರಶ್ನೆಗಳು ಉದ್ಭವಿಸುತ್ತಿದ್ದುವು. ನಡುನಡುವೆ ಮಾತು ರಭಸಗೊಳ್ಳುವುದು, ಕಾವೇರುವುದು. ಸುತ್ತಲೂ ಮಧ್ಯಾಹ್ನದ ರಣರಣ ಬಿಸಿಲು.

"ನಾವು ಆ ದಿನ, ಅಜಿತ ಮುತಾಲಿಕರನ್ನು ಬಿಟ್ಟು ಸಾಲೆಯಲ್ಲಿ ಹೋಗಬಾರದಿತ್ತು...." ಎಂದು ಒಬ್ಬನೆಂದ, ಆಕಳಿಸಿ ಮೈ ಮುರಿಯುತ್ತ-

"ಹೀಗೆ ಮಾಡುವರೆಂಬುದು ನನಗೆ ಗೊತ್ತೇ ಇತ್ತು. ಅದಕ್ಕೇ ನಾನು ಸಿಪಾಯಿ ಕರೆಯಲು ಬಂದರೂ ಹೋಗುವುದು ಬೇಡ ಅನ್ನುತ್ತಿದ್ದೆ." ಅಜಿತ ಉತ್ತರ ಕೊಟ್ಟ.

"ಅದೇನಿಲ್ಲ; ಸಣ್ಣ ಹುಡುಗರು ನಿಮ್ಮಿಬ್ಬರ ಹೆಸರ ಹೇಳಿದ್ದಕ್ಕ ಇಷ್ಟೆಲ್ಲ ಆಯ್ತು ನೋಡು."

"ಹೇಳಿ ಕೇಳಿ ಅವರು ಸಣ್ಣ ಹುಡುಗರು! ಅವರಿಗೇನು ಅಷ್ಟು ತಿಳಿವಳಿಕೆ? ಮುಂದಾದವರು ಅದರ ಹೊಣೆ ಹೊರಲೇಬೇಕಲ್ಲ!"

"ನಿಮ್ಮ ಮನೆಯಲ್ಲಿ ಕಕ್ಕನ ಬೆಂಬಲವಿಲ್ಲ. ಅದಕ್ಕೆ ಹೀಗಾಯ್ತು."

"ಕಕ್ಕ! ಬೆಂಬಲ! ಹಃ! ಹಃ! ಹಃ!" ಅಜಿತ ತಿರಸ್ಕಾರದ ನಗೆ ನಕ್ಕು ನುಡಿದ.

ವಿದ್ಯಾರ್ಥಿಗಳು ಹರತಾಳ, ಸಂಪುಗಳನ್ನು ಯಾಕೆ ಮಾಡುವರು? ಅದರ ಕಾರಣ ಸರಿಯಾಗಿದೆಯೋ ಇಲ್ಲೋ ಇದನ್ನು ತಿಳಿದುಕೊಳ್ಳುವ ಬುದ್ಧಿ—ಮನಸ್ಸು—ಆದಗೌಡನಿಗೆ ಇರಲೇ ಇಲ್ಲ. ಅಂತೇ ಅವನಿಗೆ ಇನ್ನೂ ಅಜಿತನನ್ನು ಸಾಲೆಯಲ್ಲಿ ಕರಕೊಳ್ಳದಿದ್ದರೆ ನೆಟ್ಟಗೆ ಎಂದೇ ಅನ್ನಿಸುತ್ತಿತ್ತು. ತನ್ನ ಅನಿಸಿಕೆಯಂತೆ ಆಗಬೇಕೆಂದು ಆತ ಪ್ರಯತ್ನವನ್ನೂ ಮಾಡಬಹುದಿತ್ತು. ಜನತೆಗೆ ಅಂಜಿ ಸುಮ್ಮನಿದ್ದ.

ನಡುವೆ ಓಡಾಡುತ್ತಿರುವ ನಾಲ್ಕಾರು ಜನರು ವಿದ್ಯಾರ್ಥಿಗಳನ್ನು ಕರೆದೊಯ್ದು, ಮುಖ್ಯಾಧ್ಯಾಪಕರ ಮುಂದೆ ನಿಲ್ಲಿಸಿ, ಹುಡುಗರಿಗೆ 'ಸುಮ್ಮನೆ ಸಾಲೆಗೆ ಕೆಟ್ಟ ಹೆಸರ ತರಬೇಡಿರಿ; ವರ್ಷ ವ್ಯರ್ಥ ಹೋದೀತು. ಪರೀಕ್ಷೆಯ ದಿನಗಳು.. ನಿಮಗೆ ನಿಮ್ಮ ಭವಿತವ್ಯದ ಕಡೆಗೆ ಲಕ್ಷ್ಯವಿಲ್ಲ. ಇಲ್ಲದ ಕಷ್ಟ ನಷ್ಟ ಹೊಂದಬೇಕಾದೀತು.' ಹೀಗೆ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ, ಅಜಿತನ ಸಹಿತ ಎಲ್ಲ ಹುಡುಗರನ್ನು ತರಗತಿಯಲ್ಲಿ ಸೇರಿಸಿ ಹೋದರು. ಇದನ್ನೆಲ್ಲ ನೋಡುತ್ತ ಹೆಡ್‌ಮಾಸ್ತರರು ಸುಮ್ಮನೆ ಕುಳಿತಿದ್ದರು. ಮನಸ್ಸಿನಲ್ಲಿ 'ಗವ್ಹರ್ನಮೆಂಟ ಹಾಯ್ಸ್ಕೂಲ ಆಗಿದ್ದರೆ ಈ ಹುಡುಗರನ್ನ ನೋಡುತ್ತಿದ್ದೆ. ಸಾಲೆಯ ವೆಚ್ಚಕ್ಕಾಗಿ ಶಿಕ್ಷಣ ಪ್ರಸಾರಕ ಸಂಘದವರು ಊರ ಜನರ ಸಹಾಯ ಕೋರಬೇಕಾಗುವದಂದೇ ಈ ಮಧ್ಯಸ್ಥರ ಮಾತು ಕೇಳಬೇಕಾಗುತ್ತದೆ. ಇಲ್ಲ

ನಮ್ಮ ಬೆಲೆಯೇ ಇಲ್ಲ. ಪೌರುಷವೂ ನಡೆಯುವಂತಿಲ್ಲ.' ಎಂದು ಕೊಳ್ಳುತ್ತಿದ್ದರು. ಒಳಗೊಳಗೇ ಕುದಿಯುತ್ತಿದ್ದರು. ಆದರೂ ಕೂಡ ಇಂಥ ವ್ಯಕ್ತಿತ್ವವಿಲ್ಲದ ನೌಕರಿಯನ್ನು ಬಿಡುವ— ಇಲ್ಲವೆ ಈ ಹಾಯ್ ಸ್ಕೂಲನ್ನೇ ರಾಷ್ಟ್ರೀಯ ವಿದ್ಯಾಪೀಠವನ್ನಾಗಿ ಮಾರ್ಪಡಿಸುವ—ವಿಚಾರದ ಗಾಳಿಯೂ ಕೂಡ ಅವರ ಸಮೀಪಕ್ಕೆ ಸುಳಿಯಲಿಲ್ಲ.

ರಾಷ್ಟ್ರದ ಪ್ರಗತಿಯು ಎಲ್ಲರ ದಾರಿ ಕಾಯುತ್ತ ನಿಲ್ಲುವದಿಲ್ಲ. ಅದು ತನ್ನಷ್ಟಕ್ಕೆ ತಾನೇ ಮುಂದೆ ಸಾಗುತ್ತಲೇ ಇರುತ್ತದೆ, ಇದ್ದವರೊಡನೆ. ಕೆಲ ದಿನಗಳು ಜಾರಿದುವು. ಊರಲ್ಲಿ ಆಗಾಗ ಕಾಂಗ್ರೆಸಿನ ಚಟುವಟಿಕೆಗಳು ನಡೆದೇ ಇದ್ದುವು. ಇಂದು ಉಗಿಬಂಡಿಯ ನಿಲ್ಮನೆಯಲ್ಲಿ ದೊಡ್ಡ ಜನಸಂದಣಿ. ಎಂಟು ಜನ ಸ್ವಯಂಸೇವಕರ ದಳವೊಂದು ಹೋಗುತ್ತಿದೆ ಸಿದ್ದಾಪುರದಿಂದ. ನಾಗಪುರದಲ್ಲಿ ನಾಡಗುಡಿಯ ಸತ್ಯಾಗ್ರಹದ ಸೇನಾನಾಯಕರಾಗಿ ವಲ್ಲಭಭಾಯಿಯವರು ನಿಂತಿದ್ದಾರೆ. ಭಾರತದ ಹಲವು ಪ್ರಾಂತಗಳಿಂದ ಸತ್ಯಾಗ್ರಹ ಸಮರದಲ್ಲಿ ಸ್ವಯಂಸೇವಕರು ಬಂದು ಧುಮುಕುತ್ತಿದ್ದಾರೆ. ಅದರಂತೆ ಕರ್ನಾಟಕದಿಂದಲೂ ಹಲವು ಕಡೆಯಿಂದ ಸ್ವಯಂಸೇವಕರ ದಳಗಳು ನಡೆದಿವೆ. ಈ ಹೊತ್ತು ಹೊರಟವರು ಸಿದ್ದಾಪುರ ಕಾಂಗ್ರೆಸ ಕಮೀಟಿಯ ಪರವಾದ ಸೇವಕರು. ಸಾಲೆಯ ಬಾಲಕರಲ್ಲಿ ಹಲವರು ಅವರಿಗೆ ಸುಖಪ್ರಯಾಣವನ್ನು ಕೋರಿ, ಕಳಿಸಲು ನಿಲ್ದಾಣದಲ್ಲಿ ನೆರೆದಿರುವರು. ಗುಂಪಿನ ನಾಯಕತ್ವವನ್ನು ಸಿದ್ದಾಪುರದ ಅನುಭವಿಕ ಕಾರ್ಯಕರ್ತರೊಬ್ಬರು ವಹಿಸಿಕೊಂಡಿದ್ದಾರೆ. ತಮ್ಮೂರಿನಿಂದ ದಳ ಹೋಗಬಾರದೆಂದು ಆದ ಗೌಡನು ಶಕ್ಯವಿದ್ದಷ್ಟು ಪ್ರಯತ್ನಿಸಿದ. ಇಲ್ಲಿಯೇ ತಡೆದುಬಿಡಬೇಕೆಂದು ಸ್ವತಃ ಹೋಗಿ ಹೇಳಿ ಪೋಲೀಸ ಅಧಿಕಾರಿಗಳಿಗೂ ಬುದ್ಧಿಗಲಿಸ ಹೋದ. ಪಾಪ, ಅವರು ಇವನ ಮಾತು ಕೇಳಲಿಲ್ಲ. ಅದರಿಂದ ಅದು ಅವನ ಕೈಮೀರಿ ಹೋಯಿತು. ಮಾಡುವದೇನು, ಕಾಲಮಹಿಮೆ!

ನೆಲವನ್ನು ಅದುರಿಸುತ್ತ ಉಗಿಬಂಡಿಯು ನಿಲ್ಗಟ್ಟಿಗೆ ಹೊಂದಿ ಬಂದು ನಿಂತಿತು. ನಿಲ್ದಾಣದಲ್ಲಿ ಕುಳಿತ ಜನತೆಯ ಮೇಲೆ ಒಮ್ಮೆಲೇ ವಿಮಂತ್ರದ ಕಟ್ಟಿಗೆಯನ್ನು ತಿರುಗಿಸಿದಂತಾಯಿತು. ಎಲ್ಲರೂ ಎದ್ದರು. ಚಟುವಟಿಕೆ

ಯಿಂದ ತಮ್ಮ ತಮ್ಮ ಗಂಟುಗದಡಿಗಳನ್ನು ತಕ್ಕೊಂಡು, ಎಲ್ಲರಿಗೂ ಗಾಡಿಯಲ್ಲಿ ಏರುವ ಆತುರ. ಅದೇಕೊ ಅಂದು ಬಂಡಿಯಲ್ಲಿ ಸ್ವಲ್ಪ ಗೊಂದಲ ಹೆಚ್ಚಾಗಿಯೇ ಇದ್ದಿತು. ಸ್ಥಳಶೋಧನೆಗೆಂದು ಗಾಡಿಯುದ್ದಕ್ಕೂ ತಿರುಗಾಡಿ ನೋಡುವ ಸ್ವಯಂಸೇವಕರಿಗೆ ಎಲ್ಲೆಲ್ಲೂ ಆದರದ ಕರೆ, ಸವಿನಯದ ಸ್ವಾಗತ. ಅಷ್ಟು ಸತ್ಯಾಗ್ರಹದ ಸುಪ್ರಭಾವ, ನಾಡಿನ ಜನತೆಯ ಮೇಲೆ.

ದಳದ ಹಿರಿಮಣಿಯು ಜನರೆಲ್ಲರ ದೃಷ್ಟಿಯ ಲಕ್ಷ್ಯವಾಗಿ ಬಾಗಿಲಲ್ಲಿ ನಿಂತಿದ್ದಾನೆ. ಹೂಮಾಲೆಗಳು ಹೊರೆಹೊರೆಯಾಗಿ ಅವನ ಕೊರಳನ್ನು ಅಲಂಕರಿಸಿವೆ. ಮುಖದಲ್ಲಿ ಕಾಂತಿ ತುಳುಕುತ್ತಲಿದೆ. ಆಶೀರ್ವಾದವನ್ನು ಪಡೆಯುವ ದೃಷ್ಟಿಯಿಂದ ಅವನು ಸುತ್ತಲೂ ಇದ್ದ ಜನರನ್ನು ನೋಡುತ್ತಲಿದ್ದಾನೆ. ಗುಂಪಿನಲ್ಲಿದ್ದ ಒಂದಿಬ್ಬರು ಹುಡುಗೆಯರು, ಪ್ರಯಾಣಸನ್ನದ್ಧರಾದ ಸ್ವಯಂಸೇವಕರಿಗೆ ಗೆಲವಾಗಲೆಂಬ ಭಾವದ ಗೀತೆಯನ್ನು ಹಾಡಿದರು. ನಾಯಕನೂ ಒಂದು ಸಣ್ಣ ಭಾಷಣ ಮಾಡಿ ಎಲ್ಲರನ್ನೂ ನೆನೆಸಿದನು. ಅನೇಕರು ಸತ್ಯಾಗ್ರಹಕ್ಕೆ ಹೊರಡುವ ಗೆಳೆಯರೊಂದಿಗೆ ಮಾತಾಡುತ್ತಿದ್ದಾರೆ. ನಿಲ್ಮನೆಯ ಕೈಸಾಲೆಯಲ್ಲಿ ಉತ್ಸಾಹದ ತರಂಗಗಳೇಳುತ್ತಿವೆ. ಗೆಲವು-ಧ್ವಜದ ಸನ್ನೆಯೊಡನೆ ಗಾಡಿ ಚಲಿಸಿತು. ಫಕ್ ಫಕ್ ಎಂದು ಹರಿದುಹೋಯಿತು.

ಜಯದ ನಿನಾದದೊಡನೆ, ಗೆಲುವಿನ ಹರುಷ ಹೊಳೆಯಲ್ಲಿ ಮಿಂದು ಹುಡುಗರೆಲ್ಲ ಹಿಂದಿರುಗುತ್ತಲಿದ್ದಾರೆ. ಹಳ್ಳಿಯ ಹಿರಿಯರ ಗುಂಪೊಂದು ಹಿಂದಿನಿಂದ ಬರುತ್ತಲಿದೆ. ಅದರಲ್ಲಿ ಹಲವು ತರದ ಮಾತುಗಳು ಏಳುತ್ತಿದ್ದುವು.

"ಗೌಡರ ಹುಡುಗನೂ ಬಂದಿದ್ದಾನಲ್ಲೋ?" ಗೌಡ ಈ ಕಾರ್ಯಕ್ಕೆ ತುಂಬ ವಿರೋಧಿಯೆಂಬುದನ್ನರಿತವನೊಬ್ಬ ನುಡಿದ.

"ಬಂದರೆ ಏನಾಯ್ತು?"

"ಖಾದಿ ಟೊಪ್ಪಿಗೆ ಹಾಕಿಕೊಂಡರೆ ಮನೆಯೊಳಗ ಕಾಲ ಹಾಕಗೊಡೂದಿಲ್ಲ ಅವರ ಕಾಕಾ!"

"ಅವನೂ ಖಾದಿ ಟೊಪ್ಪಿಗೆ ಹಾಕಿಕೊಂಡು ಮನೆಗೆ ಹೋಗೂದೇ

ಇಲ್ಲ ! ”

“ ಅಜಿತನನ್ನು ಎಷ್ಟು ಒತ್ತಿಟ್ಟರೂ ಅವನು ಕೇಳುವ ಹುಡುಗನೇ ಅಲ್ಲ ! ಗೌಡ ಏನು ಮಾಡುವವ ? ”

“ ಗೌಡನ ಕೈಯೊಳಗ ಏನದ ? ಯಾರ ಒತ್ತಿ ಇಟ್ಟರೆ ಸುಮ್ಮನಿರುವರೇ ? ಹುಡುಗರು ಮತ್ತಿಷ್ಟು ರಬ್ಬರ ಚಂಡಿನಂತೆ ಹೆಚ್ಚೆಚ್ಚು ಪುಟಿಯುವರು ! ”

೨

ಹಾಗೆ ಹೀಗೆ ಅನ್ನುತ್ತ ಒಂದು ವರ್ಷ ಸಂದಿತು. ಹೋದ ಸಲವಂತೂ ಸತ್ಯಾಗ್ರಹ, ಸಂಪು, ಚಳವಳಿ ಅಂತ ಅಜಿತನಿಗೆ ಹೆಡ್‌ಮಾಸ್ತರರು ಫಾರ್ಮು ಕೊಡಲಿಲ್ಲ. ಆಗ ರಾವಸಾಹೇಬನು ‘ ಇದೊಂದು ವರ್ಷ ಹೋಗಲಿ, ನಾನೂ ಅಣ್ಣನನ್ನು ಬಂದು ಸೇರುವೆ. ’ ಎಂದು ಹೆಮ್ಮೆಯ ನುಡಿಗಳಿಂದ ಮೂದಲಿಸಿಯೂ ಇದ್ದ. ಆದಗೌಡನೂ ಆಗಾಗ ‘ಅಂದೇ ಸಾಲೆ ಬಿಡಿಸಿ ಬಿಡತಿದ್ದೆ. ಎಲ್ಲರೂ ಮ್ಯಾಟ್ರಿಕ್ ಅಷ್ಟ ಆಗಲಿ ಎಂದು ಹೇಳಿದ್ದಕ್ಕ ಸುಮ್ಮನಾದೆ. ಇದೊಂದ ವರ್ಷ ಆ ಪುಸ್ತಕ ಓದು ಈ ಪುಸ್ತಕ ಓದು ಮಾಡ್ತ ತಿರಗು ಅಂದರ ಆಯ್ತು. ಮುಂದಿನ ವರ್ಷ ನಿನಗಾ ಆ ದೊಡ್ಡ ಹೋರಿಗಳಿಗೆ ಗಂಟಿ ಅದೆ..ಹೋಗುವಿಯಂತ.. ಹೊಲಕ ಹರಗಲಿಕ್ಕೆ !’ ಎಂದು ತುಚ್ಛತೆಯಿಂದ ಹಂಗಿಸುತ್ತಿದ್ದನು. ಇದರಿಂದ ಅಜಿತನಿಗೂ ಸ್ವಲ್ಪ ಸಿಟ್ಟು ಬಂದಿತು. ಎಲ್ಲವನ್ನೂ ಬಿಟ್ಟು ಅಭ್ಯಾಸದ ಕಡೆಗೆಯೇ ಮನಸ್ಸು ಹಾಕಿದ್ದ. ಎಷ್ಟು ಮನಸ್ಸನ್ನು ನಿಗ್ರಹಿಸಿದರೂ ಅದು ಮಹಾತ್ಮರ ಉಪವಾಸ, ಹಿಂದೂ ಮುಸ್ಲೀಮರ ಐಕ್ಯ ಎಂದು ಏನೇನೋ ಧೇನಿಸುತ್ತ ಎಲ್ಲೆಲ್ಲಿಯೋ ಹರಿದಾಡುವುದು. ನೆನೆದಂತೆ ಆ ವಿಷಯ ಹೃದಯವನ್ನು ಅಲುಕಿಸುವುದು. ಅಭ್ಯಾಸದ ಕಡೆಗೆ ಮನಸ್ಸು ಹತ್ತದು. ಹೊಟ್ಟೆಯಲ್ಲಿ ಏನೋ ಸಂಕಟ. ರಾಷ್ಟ್ರಹಿತಕ್ಕೆ ಎಲ್ಲಿಯ ಕಂಟಕ ಈ ಹಿಂದೂ ಮುಸ್ಲೀಮ ಭೇದಭಾವ ? ಎಂಬ ಪ್ರಶ್ನೆಯು ಮನವನ್ನು ಕಲುಕಿಬಿಡುವುದು. ಈ ಮೂರ್ಖ ಜನತೆಗೆ

ಒಂದಾಗದಿದ್ದರೆ ಮಹಾತ್ಮರ ಗತಿಯೇನು ? ' ಎಂದೂ ಕೊರಗುವನು, ಮರಗುವನು.

ಈಗ ನಾಲ್ಕೆಂಟು ದಿನಗಳಿಂದ ಅಜಿತನ ಕಣ್ಣಿಗ ನಿದ್ದೆಯಿಲ್ಲ. ಊಟದಲ್ಲಿ ರುಚಿಯಿಲ್ಲ. ಪುಸ್ತಕ ಹಿಡಿದು ಕುಳಿತರೆ ಕೈಯಲ್ಲಿ ಪುಸ್ತಕ, ತಲೆ ತುಂಬ ವಿಚಾರ. ಮಹಾತ್ಮರ ಪ್ರಕೃತಿಯ ಚಿಂತೆ. ಮುಖದಲ್ಲಿ ಮ್ಲಾನತೆ. ಮನೆಯವರೇನೋ ಅಜಿತ ಅಭ್ಯಾಸದಲ್ಲಿಯೇ ಮಗ್ನನಾಗಿದ್ದಾನೆಂದು ಭಾವಿಸಿದ್ದರು. ಅವನ ಮನಸ್ಸು ವಿಶೇಷವಾಗಿ ರಾಜಕಾರಣದ ಕಡೆಗೆ ಓಡುತ್ತಿದ್ದಿತು. ಇತಿಹಾಸದೊಳಗಿನ ಯುದ್ಧ, ರಾಜ್ಯಸ್ಥಾಪನೆ, ಸೋಲು ಗೆಲುವುಗಳನ್ನು ಸುಮ್ಮನೆ ಪರೀಕ್ಷೆಗಾಗಿ ಓದಿ ಬಿಡುವುದು ಅಜಿತನಿಗೆ ತೃಪ್ತಿಯನ್ನುಂಟುಮಾಡುತ್ತಿರಲಿಲ್ಲ. ಆ ಯುದ್ಧಗಳಾಗಲು ಕಾರಣ, ಆ ಕಾಲದ ಸಾಮಾಜಿಕ ರಾಜಕೀಯ ಸ್ಥಿತ್ಯಂತರಗಳು, ಸೋಲು ಗೆಲುವುಗಳ ಮೂಲ ಕಾರಣ ಇವುಗಳನ್ನೆಲ್ಲ ಯೋಚಿಸಿ ತಿಳಕೊಳ್ಳಲು ಹವಣಿಸುವನು. ಅದರ ಜೊತೆಗೆ ಆ ಐತಿಹಾಸಿಕ ದೃಷ್ಟಿಯಿಂದ ಇಂದಿನ ಭಾರತದ ಸಮಸ್ಯೆಯನ್ನು ಹೇಗೆ ಬಗೆಹರಿಸಬೇಕೆಂಬುದನ್ನು ತರ್ಕಿಸುತ್ತಿದ್ದನು. ಒಂದೊಂದು ದಿನ ಅವನ ಇತಿಹಾಸದ ಗುರುಗಳು ಅವನ ಮುಂದೆ ನಿರುತ್ತರರಾಗಿ ಮುಗುಳುನಗೆಯಿಂದ ಸೋಲನ್ನೊಪ್ಪಿಕೊಳ್ಳುತ್ತಿದ್ದರು.

ಬೇರೆ ಬೇರೆ ದೇಶಗಳ ರಾಜ್ಯಪದ್ಧತಿಗಳನ್ನರಿತುಕೊಳ್ಳಲು ಅಜಿತನ ಮನಸ್ಸು ಬಹಳ ತವಕಗೊಳ್ಳುತ್ತಿತ್ತು. ಇದಕ್ಕಾಗಿ ಒಮ್ಮೊಮ್ಮೆ ಅಭ್ಯಾಸ ಹಿಂದೆ ಬಿದ್ದರೂ ಅವನು ಗಮನಿಸುತ್ತಿರಲಿಲ್ಲ. ರಾವಸಾಹೇಬನು ತಂದೆ ಕೊಡುತ್ತಿದ್ದ ಚಿಲ್ಲರೆ ಹಣವನ್ನು ಚಹದಂಗಡಿಯ ಲೆಕ್ಕ ತೀರಿಸುವುದರಲ್ಲಿ ವ್ಯಯ ಮಾಡುತ್ತಿದ್ದರೆ ಈತ ಪುಸ್ತಕ ಕೊಳ್ಳಲಿಕ್ಕೆ ವಿನಿಯೋಗಿಸುವನು.

ಅಜಿತನಿಗೆ ತಮ್ಮ ಶಾಲೆಯಲ್ಲಿ ಇತಿಹಾಸ ಹಾಗೂ ಇಂಗ್ಲೀಷ್ ವಿಷಯಗಳ ಶಿಕ್ಷಕರನ್ನು ಕಂಡರೆ ತುಂಬ ಗೌರವ. ಶಿಕ್ಷಕರ ಗುಂಪಿನಲ್ಲಿ ಅವರಿಬ್ಬರೇ ವಿದ್ವಾಂಸರು. ತಮ್ಮ ವಿಷಯಗಳಲ್ಲಿ ಪೂರ್ಣ ಪಾಂಡಿತ್ಯವುಳ್ಳವರು. ಜೊತೆಗೆ ಶಿಷ್ಯರು ನಿಜವಾದ ವಿದ್ಯೆಯನ್ನು ಕಲಿಯ [illegible]ಕೆ

ಬರಲಿ ಎಂಬ ಸದಾಶಯವೂ ಅವರ ಮನದಲ್ಲಿತ್ತು.

ಒಂದು ದಿನ ಇತಿಹಾಸದ ತಾಸಿಗೆ ಶಿಕ್ಷಕರು ಬರುವ ಹೊತ್ತಿಗೆ ವರ್ಗದಲ್ಲಿ ಒಂದು ಪ್ರಕರಣ ನಡೆದಿದ್ದಿತು. ರಹೀಮ ಬಂದು ತನ್ನ ಅಪೀಲು ಹೇಳಿದ.

“ ಇವರೆಲ್ಲರು ನನಗೆ ಕುಲಗೆಟ್ಟವನು...ದೇಶಕಂಟಕ, ಮಹಾತ್ಮರನ್ನು ಉಪವಾಸವಿರುವಂತೆ ಮಾಡಿದವ..ಎನ್ನುವರು ಸರ್. ”

“ ಯಾರು, ಯಾರು ? ”

“ ಅಜಿತ, ದೇಸಾಯಿ ಮೊದಲಾದವರು. ” ಕೈಮಾಡಿ ತೋರಿಸಿದ ನಾತ. ಶಿಕ್ಷಕರ ಕಣ್ಣು ಮುಖ ಕೂಡಿಯೇ ಕೆಂಪೇರಿದುವು. ತಡೆಯಲಾರದಷ್ಟು ಸಿಟ್ಟು ತುಂಬಿಬಂತು.

“ ಅಜಿತಾ ! ”

“ ಸರ್. ”

“ ನೀನು ಒಳ್ಳೆಯ ಹುಡುಗ,— ಎಲ್ಲರಲ್ಲಿಯೂ ಬಂಧುಭಾವವನ್ನಿಟ್ಟುಕೊಂಡು ಹೋಗುವೆ ಎಂದು ತಿಳಿದಿದ್ದೆ. ದೇಶದಲ್ಲಿ ಹಿಂದು ಮುಸಲ್ಮಾನ ಐಕ್ಯಕ್ಕಾಗಿ ಮಹಾತ್ಮರು ಅನ್ನತ್ಯಾಗ ಮಾಡುವಂತಹ ಗಂಭೀರ ಪರಿಸ್ಥಿತಿಯೇನು? ಈಗ ನೀನು ಇಂಥ ಹೊಲಸು ವಿಚಾರಗಳಿಗೆ ಮನಸ್ಸು ಮಾಡುವುದೆಂದರೇನು? ಇದೇ ಏನು ನಿನ್ನ ಯೋಗ್ಯತೆ?”

“ ಕ್ಷಮಿಸಿರಿ ಸರ್, ತಮಗೆ ತಪ್ಪು ತಿಳಿವಳಿಕೆಯಾಗಿದೆ. ನಾನು ಇದುವರೆಗೂ ಇಂಥ ವಿಷಯಗಳತ್ತ ಮನಸ್ಸು ಬಿಟ್ಟಿಲ್ಲ. ಈಗ ನಾನು ಹಾಗೆ ಮಾತನಾಡಲಿಲ್ಲವೂ ಕೂಡ. ಮಧ್ಯಾಹ್ನ ಮಾತಿಗೆ ಮಾತು ಹೊರಟಿತು. ಹಿಂದು ಧರ್ಮ ಶ್ರೇಷ್ಠ. ಹಿಂದುಸ್ತಾನದಲ್ಲಿ ವಾಸಿಸುವವರೆಲ್ಲ ಹಿಂದುಗಳು ಎಂದು ಹೇಳಿದೆನಿಷ್ಟೇ. ”

ಶಿಕ್ಷಕರಿಗೆ ಕೋಪ ಇಮ್ಮಡಿಸಿತು.

“ ನಿನಗೇನು ಗೊತ್ತು ? ಉರ್ದು ಕಲಿತಿರುವೆಯಂತೆ ಯಾತಕ್ಕೆ? ಉರ್ದುವಿನಲ್ಲಿ ಇಸ್ಲಾಂ ಧರ್ಮವನ್ನು ತೆಗಳಲಿಕ್ಕೋ ? ಕುರಾನ ಓದಿರುವೆಯಾ? ಸಿದಗೌಡ— ಅಜಿತನ ತಂದೆ— ಎಂಥ ಸರ್ವಧರ್ಮ ಸಮತಾವಾದಿ. ಅಂಥವರ ಹೊಟ್ಟೆಯಿಂದ ಹುಟ್ಟಿ ಈ ಕೆಟ್ಟ ಬುದ್ಧಿ ನಿನಗೇಕೆ?

ಇಸ್ಲಾಂ ಧರ್ಮ ಎಷ್ಟು ಪವಿತ್ರ ಗೊತ್ತೇ? ಚೋಟುದ್ದ ಹುಡುಗನಾಗಿ ಧರ್ಮಗಳ ವಿಷಯದಲ್ಲಿ ಮಾತನಾಡತಾನೆ ಅವಿಧೇಯ. ನಡೆ ಇಲ್ಲಿಂದ.'' ಎಂದು ಗದರಿಸಿದರು. ಅಜಿತನ ಮನಸ್ಸಿಗೆ ಬಹಳ ವ್ಯಥೆಯಾಯಿತು. ಗುರುಗಳು ತಪ್ಪು ತಿಳಿದುಕೊಳ್ಳುತ್ತಿದ್ದಾರಲ್ಲ, ಎಂದು ಖಿನ್ನನಾದನು. ಅವರ ಮಾತಿಗೆ ಮಾತು ಬೆಳೆಸಲಿಚ್ಛಿಸದೆ ತನ್ನ ಪುಸ್ತಕಗಳನ್ನು ಕಂಕುಳಲ್ಲಿ ಇಟ್ಟುಕೊಂಡು ನೇರವಾಗಿ ಮನೆಯ ಕಡೆಗೆ ಹೋದನು.

ಅಂದಿನಿಂದ ನಾಲ್ಕು ದಿನ ಅಜಿತ ಶಾಲೆಯ ಮುಖವನ್ನು ನೋಡಲಿಲ್ಲ. ಹೊತ್ತಿಗೆ ಸರಿಯಾಗಿ ಊಟ ಮಾಡುವುದು. ತನ್ನ ಕೋಣೆಯನ್ನು ಸೇರಿ ಕುರಾನ ಓದಿ ಟಿಪ್ಪಣಿ ತೆಗೆಯುವದು. ನಾಲ್ಕನೆಯ ದಿನ ಮೊದಲನೆಯ ಗಂಟೆಯೇ .ಇತಿಹಾಸದ ಕ್ಲಾಸು. ಶಿಕ್ಷಕರು ಹಾಜರಿ ತೆಗೆದುಕೊಳ್ಳುತ್ತಿದ್ದರು.

“ ಅಜಿತ ಗೌಡ..'' ಎಂದು ಹೆಸರು ಓದಿದರು.

“ ಪ್ರಜೆಂಟ ಸರ್. ”

ಉಪಾಧ್ಯಾಯರು ಕತ್ತೆತ್ತಿ ನೋಡಿದರು. ಅಜಿತನೇ ಹಾಜರಿಯನ್ನು ಹೇಳಿದ್ದ.

“ ನಾಲ್ಕು ದಿನ ಸಾಲೆಗೆ ಏಕೆ ಬರಲಿಲ್ಲ ?''

“ ಸ್ವಲ್ಪ ಕೆಲಸವಿತ್ತು ಸರ್. ”

“ ಏನು ಕೆಲಸ, ಗೌಡರು ಎಲ್ಲಿಯಾದರೂ ಕಳಿಸಿದ್ದರೋ ? ”

“ ಇಲ್ಲ, ಸರ್. ”

“ ಮತ್ತೇನಪ್ಪ ನಿನ್ನ ರಾಜಕಾರ್ಯ ? ”

“ ತಮ್ಮ ಅಪ್ಪಣೆಯಾದರೆ ಹೇಳುವೆ ಸರ್. ”

“ ಹೇಳು ನೋಡೋಣ. ”

ಅಜಿತ ಹೇಳುವ ಬದಲು ಒಂದು ಕಾಗದದ ಫೈಲನ್ನು ಗುರುಗಳ ಕೈಗಿತ್ತ. ಉಪಾಧ್ಯಾಯರು ಅದರ ಮೇಲೆ ಕಣ್ಣಾಡಿಸಿದರು. “ ಭಾರತೀಯರೂ ಇಸ್ಲಾಂ ಧರ್ಮವೂ '' ಎಂಬ ಪ್ರಬಂಧ. ಬೆರಗಾದರು.

“ ಮ್ಯಾಟ್ರಿಕ್ಕಿನ ಅಭ್ಯಾಸ ಬಿಟ್ಟು ಇದೇನು ಹವ್ಯಾಸ ?'' ಎಂದರು.

ಅಜಿತ ಅದಕ್ಕೆ ಸುಮ್ಮನಾದ. ಶಿಕ್ಷಕರು ಅಜಿತನ ಕೈಹಿಡಿದು, ಅವನ ಮುಖದ ಕಡೆಗೆ ಒಂದು ಕ್ಷಣ ನೋಡಿದರು ಅದರಲ್ಲಿ ಕ್ಷಮೆಯು ತುಂಬಿದ್ದಿತೇನೋ !

ಶಾಲೆಯಲ್ಲಿ ಅಜಿತನು ಬರೆಯುತ್ತಿದ್ದ ಪ್ರಬಂಧಗಳನ್ನು ಇಂಗ್ಲೀಷ್ ಕನ್ನಡ ಶಿಕ್ಷಕರಿಬ್ಬರೂ ಕೆಲವು ಸಲ ವಿದ್ಯಾರ್ಥಿಗಳಿಗೆಲ್ಲ ಓದಿ ತೋರಿಸು ವರು. ಒಮ್ಮೊಮ್ಮೆ ಅಂಥ ಒಳ್ಳೆಯ ಪ್ರಬಂಧವಿದ್ದಾಗ ಶಿಕ್ಷಕ ರೂಮಿನ ಲ್ಲಿಯೂ ಒಯ್ದು ಓದದೆ ಇರುತ್ತಿರಲಿಲ್ಲ. ಸಾಲೆಯು ಇನಸ್ಪೆಕ್ಶನಕ್ಕೆ ಬಂದಾಗ ಸಯ್ಯದರೆಂಬ ಎಜ್ಯುಕೇಶನಲ್ ಇನಸ್ಪೆಕ್ಟರರು ಆ ಪ್ರಬಂಧ ವನ್ನು ನೋಡಿ, ಅಜಿತನನ್ನು ಹತ್ತರ ಕರೆದು ಪ್ರೀತಿಯಿಂದ ಮಾತನಾಡಿ ದರು. ಬರೆಯಲು ಪ್ರೋತ್ಸಾಹಿಸಿದರು. ಉರ್ದುವಿನಲ್ಲಿ ಸರಸವಾಗಿ ಮಾತನಾಡುವುದನ್ನು ಕಂಡು ಮೆಚ್ಚಿದರು. ಅವನ ವಿಷಯವನ್ನು ವ್ಹಿಜಿಟ ಬುಕ್ಕಿನಲ್ಲಿ ಕಾಣಿಸಿದರಲ್ಲದೆ ಗುಣಗ್ರಾಹಿಗಳಾದ ಅವರು ಆ ಪ್ರಬಂಧ ವನ್ನು ಒಯ್ದು ಪ್ರಕಟನೆಗೂ ಇತ್ತರು. ಈ ಸಲ ಅಜಿತನ ಮೇಲಿನ ಪ್ರಸಾದದಿಂದ ಹಾಯ್‌ಸ್ಕೂಲಿಗೆ ಮುನ್ನೂರು ರೂಪಾಯಿ ಗ್ರ್ಯಾಂಟು ಹೆಚ್ಚಿಗೆ ಸಿಕ್ಕಿತು. ಅದರಿಂದ ಜಾಧವ ಮಾಸ್ತರರಿಗೊಂದಿಷ್ಟು ಹೆಮ್ಮೆ, ಉಳಿದ ಶಿಕ್ಷಕರಿಗೆ ಅಜಿತನನ್ನು ಕಂಡರೆ ಒಂದಿಷ್ಟು ಆದರ, ತಮ್ಮ ವಿದ್ಯಾರ್ಥಿಯೆಂದು.

ಇದನ್ನೆಲ್ಲ ಕಂಡು ರಾವಸಾಹೇಬನಿಗೆ ತುಂಬ ಅಸಮಾಧಾನ.

ಮುಂದೆ ಕೆಲವು ದಿನಗಳಲ್ಲಿಯೇ ಮಹಾತ್ಮರು ಕಾಂಗ್ರೆಸ ಅಧಿ ವೇಶನಕ್ಕೆಂದು ಬೆಳಗಾಂವಿಗೆ ಹೊರಟರು. ಹೋಗುವಾಗ ಸಿದ್ದಾಪುರ ಕಾಂಗ್ರೆಸ ಕಮಿಟಿಯವರ ಆಗ್ರಹದಿಂದ ನಿಲ್ದಾಣದಲ್ಲಿ ಒಂದು ಇರುಳು ಕಳೆಯಲು ಒಪ್ಪಿದರು. ಅದರಿಂದ ಅಜಿತನಿಗೆ ಹಿಡಿಸಲಾರದಷ್ಟು ಹಿಗ್ಗು. ತಾನು ಹೃದಯಮಂದಿರದಲ್ಲಿಟ್ಟು ಹಗಲಿರುಳೂ ಪೂಜಿಸುತ್ತಿದ್ದ ಮಹಾ ವ್ಯಕ್ತಿ ಇಂದು ನೋಡಲು ಸಿಕ್ಕುವುದೆಂದು ಅವನಿಗೆ ಸಂತಸ. ಆ ದಿನ ಅವನಿಗೆ ಸೂರ್ಯನ ಮೇಲೆ ಬಲು ಸಿಟ್ಟು, ಬೇಗನೇ ಪಶ್ಚಿಮದಿಕ್ಕಿನಲ್ಲಿ ಮುಳುಗಲಾರದ್ದಕ್ಕೆ. ಹಗಲು ಹನ್ನೆರಡು ತಾಸೂ ಮಹಾತ್ಮರ ದರ್ಶನದ ಕಲ್ಪನಾತರಂಗಗಳಲ್ಲಿ ಮುಳುಗೇಳುತ್ತಿದ್ದ. ಹರ್ಷ ಹೊಂದುತ್ತಿದ್ದ.

ಆ ಹರ್ಷದ ಭರದಲ್ಲಿ ಸಂಜೆಯ ಊಟವನ್ನೂ ಚೆನ್ನಾಗಿ ಮಾಡದೆ ಪಡಸಾಲೆಗೆ ಬಂದು,—

" ಸ್ಟೇಶನಕ್ಕೆ ಹೋಗುವೆ " ಎಂದು ಹೇಳಿದ ಕಕ್ಕನಿಗೆ.

" ಈಗಲೇ ಹೋಗಿ ಅಲ್ಲೇನು ಮಾಡುವಿ? ಅವರೇನೋ ರಾತ್ರಿ ಮೋಟಾರಿನಿಂದ ಬರಲಿದ್ದಾರೆ. ಮುಂಜಾನೆ ವ್ಯಾಖ್ಯಾನ ಇದೆ. ಅದೇ ಕಾಲಕ್ಕೆ ಹೋದರಾಯಿತು! "

" ಇಲ್ಲ; ರಾತ್ರಿಯೇ ಲೆಕ್ಚರು. "

ಅಜಿತನಿಗೆ ಮುಂದೆ ಮಾತನಾಡಗೊಡದೆ, " ನಿನಗೇನು ಗೊತ್ತು? ನನಗೆ ಹುಕುಂ ಇದೆಯಲ್ಲ, ನಾಳೆ ಮುಂಜಾನೆ ಸಭೆಯೆಂದು. ಫೌಜದಾರರೂ ಬರುವವರಿದ್ದಾರೆ. ನಾನೂ ಬರಬೇಕಾಗಿದೆ. ಟಾಂಗಾ ಹೇಳಿದೇನೆ. ಮುಂಜಾನೆ ರಾವಸಾಹೇಬ....ನಾ....ನೀ....ಎಲ್ಲಾರೂ ಹೋಗೋಣ.... "

" ಸಾಲೆಯ ಹುಡುಗರೆಲ್ಲ ಹೊರಟಿದ್ದಾರೆ. ನಾನೂ ಹೋಗುವೆ." ಹುಮ್ಮಸ್ಸಿನಿಂದ ನುಡಿದ ಅಜಿತ.

" ನೀ ಯಾವದ ನನ್ನ ಮಾತ ಕೇಳೀದಿ? "

ಅಜಿತ ಅಷ್ಟರಲ್ಲಿ ಹೋಗಿಬಿಟ್ಟಿದ್ದ. ಗೌಡನ ಈ ಮಾತು ಕೇಳಲಿಕ್ಕೆ ಅಲ್ಲಿರಲಿಲ್ಲ. ಸಾಲೆಯ ವಿದ್ಯಾರ್ಥಿಗಳೂ, ಊರ ಹಿರಿಕಿರಿಯರೂ ಈಗಾಗಲೇ ಗುಂಪುಗುಂಪಾಗಿ ನಿಲ್ದಾಣದ ಕಡೆಗೆ ನಡೆದಿದ್ದಾರೆ. ಎಲ್ಲರಲ್ಲೂ ಹುರುಪು, ಹುಮ್ಮಸ್ಸು, ಆನಂದ. ಏನೋ ಒಂದು ಭಾಗ್ಯ ಒದಗಿಬಂದಂತೆ ಸಕಲರ ಹೃದಯದಲ್ಲಿಯೂ ಹಿಗ್ಗಿನ ಬುಗ್ಗೆ ಚಿಮ್ಮುತ್ತಲಿದೆ. ನಿಲ್ಮನೆಯ ಸಮೀಪದಲ್ಲಿಯ 'ರೆಸ್ಟ ಹೌಸಿ'ನಲ್ಲಿಯೇ ಮಹಾತ್ಮರು ಇಳಕೊಳ್ಳುವ ವ್ಯವಸ್ಥೆ ಮಾಡಲಾಗಿದೆ. ಕಾಂಗ್ರೆಸ ಕೆಲಸಗಾರರ ಓಡಾಟ ಹೆಚ್ಚುತ್ತಲಿದೆ. ನೆರೆಯ ನಗರಗಳಲ್ಲಿಯ ಸ್ಕೂಲು ಕಾಲೇಜಿನ ವಿದ್ಯಾರ್ಥಿಗಳೆಲ್ಲ ಸ್ವಯಂಸೇವಕರಾಗಿ ಬಂದಿದ್ದಾರೆ. ಅಜಿತನೂ ಸೇವಕರ ಸಮವಸ್ತ್ರವನ್ನು ತೊಟ್ಟು ದಳದಲ್ಲಿ ಸೇರಿಬಿಟ್ಟಿದ್ದಾನೆ. ಸಂಜೆಯ ಏಳು ಗಂಟೆಯಿಂದಲೇ ರೆಸ್ಟ ಹೌಸಿನ ಮುಂದೆ ದಾರಿಗೆ ಹೊಂದಿ ಎರಡೂ ಮಗ್ಗಲು ಸ್ವಯಂಸೇವಕರು ಸಾಲಾಗಿ ನಿಂತಿದ್ದಾರೆ. ಅವರ ನಡುವೆ

ನಿಂದಲೇ ಮಹಾತ್ಮರ ಕಾರು ಹಾಯ್ದು ಬರತಕ್ಕುದು. ಜನವೆಲ್ಲ ಅವರ ಹಿಂದೆ. ಸೇವಕರಿಗದೊಂದು ಹೆಮ್ಮೆ, ಎಲ್ಲರಿಗಿಂತ ಸಮೀಪದಿಂದ ನಾವೇ ಮಹಾತ್ಮರನ್ನು ಕಾಣುವೆವೆಂದು. ನಾಲ್ಕಾರು ಜನ ಪೋಲೀಸರು ರೆಸ್ಟ ಹೌಸಿನ ಅಂಗಳದಲ್ಲಿ ಅಡ್ಡಾಡುತ್ತಲಿದ್ದಾರೆ. ಈಗ ಕಾರಿನ ಹಾರ್ನ ಕೇಳಿಸೀತು. ಬಂದಾರು ಬಂದಾರು ಎಂದು ಕಿವಿ ಕಣ್ಣುಗಳನ್ನೆಲ್ಲ ನಿಗರಿಸಿಕೊಂಡು ಜನರು ನಿಂತಿದ್ದಾರೆ. ಶಾಂತರಾಗಿದ್ದಾರೆ. ಸೂಜಿ ಬಿದ್ದರೂ ಸದ್ದಾಗುವಷ್ಟು ಶಾಂತರಾಗಿದ್ದಾರೆ. ಆಗ ಕ್ಷಣವೆಂದರೆ ಯುಗವಾಗಿದೆ.

ಒಂಭತ್ತು ಹೊಡೆಯಿತು. ಆಗ ಬಂತು ! ಬಂತು ! ಕಾರು ಬಂದಿತು! "ಮಹಾತ್ಮಾ ಗಾಂಧಿ ಮಹಾರಾಜಕಿ ಜೈ ! ಭಾರತ ಮಾತಾಕಿ ಜೈ !!" ಎಂಬ ಜಯಘೋಷದ ಸ್ವಾಗತವಾಯಿತು. ಕಾರು ಮುಂದೆ ಬಂದಂತೆ ಹಿಂದಿನ ಸ್ವಯಂಸೇವಕರೆಲ್ಲ ಸಾಲು ಮುರಿದರು. ಕಾರಿನ ಬೆನ್ನು ಹತ್ತಿದರು, ಕುತೂಹಲದಿಂದ. ಆದರೆ ಕಾರು ಮಹಾತ್ಮರದಾಗಿರಲಿಲ್ಲ. ಅದರಲ್ಲಿ ಯಾರೋ ಇರೋಪಿಯನ್ನರಿದ್ದರು ! ಜನ ಮೂಗು ಮುರಿಯಿತು. ಹಿಂದಿನಿಂದ ಅವರೇ ಅಂಡ್ರೂಸ, ಮೀರಾಬೆನ್ ಎಂದು ಗೊತ್ತಾಯಿತು.

ಹಿಂದಿನಿಂದಲೇ ಮಹಾತ್ಮರ ಕಾರು ಬರಲಿದೆ, ಎಂದು ಕೇಳಿದ ಸೇವಕದಳದ ನಾಯಕನು. ಮತ್ತೆ ಸಿಸ್ತುಗೊಳಿಸಿದನು ಅಷ್ಟರಲ್ಲಿ ಬಂತು ! ಈ ಸಲ ಬಂದೇಬಿಟ್ಟಿತು ಮಹಾತ್ಮರ ಕಾರು ! ಕಾರಿನಲ್ಲಿ ಮುಂದೆ ಮಹಾದೇವಭಾಯಿ ದೇಸಾಯಿ ಕುಳಿತಿದ್ದಾರೆ. ಹಿಮ್ಮಗ್ಗಲು ಮಹಾತ್ಮರು ಮುಗುಳು ನಗೆ ಬೀರುತ್ತಿದ್ದಾರೆ. ಉಟ್ಟದ್ದೊಂದು ಲಂಡ ಪಂಜೆ, ಹೊತ್ತುಕೊಂಡದ್ದೊಂದು ಖಾದಿ ದೋತರ, ತಲೆಯ ಮೇಲೆ ಏನಿಲ್ಲ. ಕಾರು ಸ್ವಯಂಸೇವಕರ ಸಾಲಿನೊಳಗೆ ಬಂದೊಡನೆ ಜಯ ಜಯಕಾರವಾಯಿತು. ಜಾಂದಳ ಬಿರಿಯಿತೇನೊ ಆ ಧ್ವನಿಗೆ ! ಜನ ಕೈಮುಗಿಯಿತು. ಮಹಾತ್ಮರು ಈ ಮೊದಲೇ ಕೈಜೋಡಿಸಿದ್ದಾರೆ ! ಅವರ ವಿನಯ ಕಂಡು ಜನರ ಮನವರಳಿತು. ಜನಸಮೂಹವೆಲ್ಲ ತಾವು ಇಂದು ಕಣ್ಣು ಪಡೆದದ್ದಕ್ಕೆ ಸಾರ್ಥಕವಾಯಿತೆಂದುಕೊಂಡಿತು. ಅಜಿತನು

ಮೈ ಪುಳಕಗೊಂಡಿತು. ದಳದ ನಾಯಕ ಮುಂದೆ ಬಂದ. ಮಹಾತ್ಮರ ಕೊರಳಲ್ಲಿ ಹಲವರು ಹೂ-ಹಾರಗಳನ್ನೂ ಕೈನೂಲಿನ ಹಾರಗಳನ್ನೂ ಹಾಕಿದರು. ಕಾರೇ ತುಂಬಿತು ಹಾರಗಳಿಂದ. ಸುತ್ತೆಲ್ಲ ಜನ ಕಿಕ್ಕಿರಿದು ತುಂಬಿದೆ. ಹಲವರು ಕಾರನ್ನು ಹಿಡಿದಿದ್ದಾರೆ. ಮುಂದೆ ಸಾಗದಾಯಿತು ಕಾರು. ಕೊನೆಗೆ ದಳದ ನಾಯಕ ಕಾರಿನ ಮಗ್ಗಲು ಮೇಲೇರಿ ನಿಂತು, ದೊಡ್ಡ ತುತ್ತೂರಿಯನ್ನು ಹಿಡಿದು ಅದರಲ್ಲಿ ಒದರಿ ಹೇಳಿದ.

“ಇನ್ನು ಮಹಾತ್ಮರು ವಿಶ್ರಾಂತಿ ತಕ್ಕೊಳ್ಳುತ್ತಾರೆ! ಬೆಳಗಿನ ಐದು ಗಂಟೆಗೆ ಇಲ್ಲಿ ಸಾಮೂಹಿಕ ಪ್ರಾರ್ಥನೆ ನಡೆಯುತ್ತದೆ. ಆಮೇಲೆ ಮತ್ತೆ ವಿಶ್ರಾಂತಿ. ನಂತರ ಏಳುವರೆ ಗಂಟೆಗೆ ಸಭೆ. ಆಗ ಎಲ್ಲರೂ ಬರ್ರಿ! ಈಗ ಹೋಗಬೇಕು” ಎಂದು ಕಾರ್ಯಕ್ರಮವನ್ನು ಹೇಳಿ, ಜನರು ಹೋಗಲಿಕ್ಕೆ ವಿನಂತಿ ಮಾಡಿಕೊಂಡ. ಜನಸಮೂಹ ಕದಲಲಿಲ್ಲ. ಅಲ್ಲಲ್ಲಿ ಗುಜುಗುಜು ಮಾತೇಳಹತ್ತಿದುವು. ಗೊಂದಲಕ್ಕೆ ಆರಂಭವಾಯಿತು. ಜನ ಇನ್ನೂ ಮುಂದೆಯೇ ಧಾವಿಸುತ್ತಿತ್ತು. ಕಾರ್ಯನಿರ್ವಾಹಕ ಹೇಳಿಕೊಂಡ, “ಈಗ ಮಹಾತ್ಮರಿಗೆ ಬಹಳ ಶ್ರಮವಾಗಿದೆ. ಮುಂಜಾನೆ ಎಲ್ಲರಿಗೂ ದರ್ಶನ ಕೊಡುತ್ತಾರೆ. ನಾವು ಅವರ ಪ್ರಕೃತಿಯ ಕಡೆಗೆ ಲಕ್ಷ್ಯ ಕೊಡಲಿಕ್ಕೆ ಬೇಡವೆ? ಇಂದು ಬೆಳಗಿನಿಂದ ಊರು ಊರುಗಳಲ್ಲಿ— ಸಭೆಯಲ್ಲಿ ಮಾತನಾಡುತ್ತಲೇ ಬಂದಿದ್ದಾರೆ. ವಿಶ್ರಾಂತಿ ಹೊಂದಲಿ. ದಯಮಾಡಿ ಹೋಗಬೇಕು..” ಎಂದು ಕೈಮುಗಿದು ಕೇಳಿಕೊಂಡ. ತಿಳಿದ ಜನ ಸ್ವಲ್ಪ ಹಿಂದೆ ಸರಿದರು. ಇನ್ನೂ ಹಳ್ಳಿಯ ಜನರ ಹವಣಿಕೆ ಮುಂದೆಯೇ ಇತ್ತು. ಪಾಪ ಹಾಲಿನಂಥ ಹೃದಯದ ಹಳ್ಳಿಗರು. ತಮ್ಮ ಅನ್ನದಾತನನ್ನು ಬಿಟ್ಟು ಹಿಂದೆ ಸರಿಯಲು ಹೇಗೆ ಮನಸ್ಸು ಮಾಡಿಯಾರು? ಮಾಡಲಿಲ್ಲ. ಆಗ ಹಳ್ಳಿಯ ಮುಖಂಡನೊಬ್ಬ, “ಹೋಗರಿ! ನಡೀರಿ! ಹೇಳ್ತಾರ ತಿಳಿಯೂದಿಲ್ಲ? ಹಾಂಗ ಮುಂದಃ ಬರ್ತಾರ ಕುರಿಯಂತೆ” ಎಂದು ಬಡಿಗೆ ನೆವರಿ ಜನರನ್ನು ಹಿಂದೆ ನೂಕಹತ್ತಿದ. ಆಗ ಮಹಾತ್ಮರೇ ಕಾರಿನಲ್ಲಿ ಎದ್ದು ನಿಂತು, ನಾಲ್ಕು ಮಾತು ಹೇಳಿ, ಕೈಜೋಡಿಸಿದರು. ಒಮ್ಮೆಲೇ ಜನ ಹಿಂದೆ ಸರಿಯಿತು, ಹೊರಳಿತು, ಹೊರಟಿತು, ಹೋಯಿತು, ಹೋಗೇಬಿಟ್ಟಿತು. ಆ

ದಿನ ಇರುಳೆಲ್ಲ ನಿಲ್ದಾಣದ ತುಂಬೆಲ್ಲ ಜನಜಾತ್ರೆಯೇ ಆಗಿತ್ತು.

‘ ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥೧॥
ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥೨॥
ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥೩॥

. . . . . . . . . . . . . . . . . . . . . . . . . .

ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥೧೯॥
ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥೨೦॥

ಗೀತಾ ಅ. ೧೨

ಹೀಗೆ ಬೆಳಗಿನ ಐದು ಗಂಟೆಗೆ ಪ್ರಾರ್ಥನೆ ಆರಂಭವಾಗಿ, ಮುಂದೊರಿಯಿತು. ರೆಸ್ಟ ಹೌಸಿನ ವಿಸ್ತಾರವಾದ ಅಂಗಳವೆಲ್ಲ ಜನರಿಂದ ಕಿಕ್ಕಿರಿದು ತುಂಬಿದೆ. ಎಲ್ಲರೂ ಶಾಂತವಾಗಿ ಕೇಳುತ್ತ ಕುಳಿತಿದ್ದಾರೆ. ಗಾಂಧೀಜಿಯವರ ಆಶ್ರಮವಾಸಿಗಳೊಬ್ಬರು ಪ್ರಾರ್ಥನೆ ಹೇಳುತ್ತಲಿದ್ದಾರೆ. ಇನ್ನುಳಿದವರು ಅನ್ನುತ್ತಲಿದ್ದಾರೆ. ಅಂತಃಕರಣವನ್ನು ಅರಳಿಸುವ, ಶಾಂತಿಯನ್ನು ಕುದುರಿಸುವ ಈ ಪ್ರಾರ್ಥನೆಯ ಮೊದಲ ಪಲ್ಲವಿಯನ್ನು ಕೇಳಿದೊಡನೆ, ನಸುಬೆಳಕಿನ ಮುಂಬೆಳಗಿನಲ್ಲಿ ಬೆಳತನಕ ಜಾಗರಣೆಗೈದ ಜನತೆಯ ಮುಖದ ಮೇಲೆ ಒಂದು ಅಪೂರ್ವ ಶಾಂತಿ ವ್ಯಾಪಿಸಿತು.

ಮೇಲೆ ನೀಲವರ್ಣದ ಬಾಂಬೊಲ. ಅಲ್ಲರಳಿದ ಮಲ್ಲಿಗೆಗಳು. ಕೆಳಗೆ ಅಕೃತ್ರಿಮವಾದ ನೆಲದಾಯಿ, ತಿಳಿಬೆಳಗು, ತಂಗಾಳಿ. ಮನುಲೋಕದ ಆತ್ಮಚರಿತೆಯು ಪರಮಾತ್ಮನ ಪೀಠದ ಕಡೆಗೆ—ಗಗನದೆಡೆಗೆ—ಚಿಮ್ಮುತ್ತಿರುವಂತೆ ಸ್ವರವು ಹೊರಡುತ್ತಿದೆ.

‘ ರಘುಪತಿ ರಾಘವ ರಾಜಾರಾಮ
ಪತಿತಪಾವನ ಸೀತಾರಾಮ— ’

ಪ್ರಾರ್ಥನೆಯ ಮುಕ್ತಾಯದ ಪಲ್ಲವಿಯು ತಂಗಾಳಿಯೊಡನೆ ದಿಗಂತದ ವರೆಗೂ ಹರಡಿತು.

ಪ್ರಾರ್ಥನೆಯಾದನಂತರ ಗಾಂಧೀಜಿಯವರು ಒಳಗೆ ಹೋದರು. ಜನರು ಸಭಾಂಗಣದತ್ತ ತಮ್ಮ ತಮ್ಮ ಸ್ಥಳ ಹಿಡಿಯಲು ಧಾವಿಸಿದರು.

ನಿಲ್ಮನೆಯ ಎದುರಿನ ಬೈಲಿನಲ್ಲಿ ಚಿಕ್ಕ ಚಪ್ಪರವೊಂದನ್ನು ಕಟ್ಟಿದ್ದಾರೆ. ತಳಿರು ತೋರಣಗಳು ಮಂಟಪವನ್ನಲಂಕರಿಸಿವೆ. ಅದರಲ್ಲಿ ಮಹಾತ್ಮರು ಕೂಡಲು ಮೇಜೊಂದನ್ನು ಇಟ್ಟಿರುವರು. ಅದರ ಮೇಲೆ ಧವಳವರ್ಣದ ಖಾದಿಯನ್ನು ಹಾಸಿದ್ದಾರೆ. ಸೂರ್ಯೋದಯದ ಹೊಂಬೆಳಕಿನಲ್ಲಿ ಆ ಮಂಟಪಕ್ಕೂ ಆ ಆಸನಕ್ಕೂ ಒಂದು ತರದ ಅಲೌಕಿಕ ಸೌಂದರ್ಯ ಬಂದಿದೆ.

ಸಭೆ, ಏಳು ಗಂಟೆಗೆಂದಿದ್ದರೂ ಹಲವು ಜನರು ನಾಲ್ಕು ಗಂಟೆಗೇನೇ ಬಂದು ಮಂಟಪದ ಎದುರಿನಲ್ಲಿ ಸ್ಥಳ ಹಿಡಿದುಕೊಂಡು ಕುಳಿತಿದ್ದಾರೆ. ಕೆಲವರು ಯಾವಾಗಾದರೂ ಇಲ್ಲಿಯೇ ಬರುವರಲ್ಲ, ಎಂದುಕೊಂಡು, ರಾತ್ರಿಯೇ ಹೋಗಿ ಅಲ್ಲಿಯೇ ಕಂಬಳಿ ಮುಸುಕು ಹಾಕಿಕೊಂಡು ಮಲಗಿದ ಒಕ್ಕಲಿಗರೂ ಇದ್ದರು. ಅವರು ಜನರ ಗೊಂದಲ ಆರಂಭವಾಗಲು ಎದ್ದು ಕುಳಿತರು. ಸುತ್ತಲಿನ ಹಳ್ಳಿಗಳ ಜನರೆಲ್ಲ ಸೇರಿದ್ದರು. ಎಲ್ಲ ಜಾತಿಯ ಜನರೂ ಬಂದಿದ್ದರು. ಮಹಾತ್ಮರು ಬರುವುದಕ್ಕೆ ಇನ್ನೂ ಸ್ವಲ್ಪ ಅವಕಾಶವಿದೆಯೆನ್ನುವಷ್ಟರಲ್ಲಿ ನೂರಾರು ಕಾರುಗಳು ಬಂದು ನೆರೆದುವು. ಪೋಲೀಸ ಅಧಿಕಾರಿಗಳೂ ಪೋಲೀಸರೂ ಶಾಂತೆಯನ್ನು ಕಾಯ್ದುಕೊಳ್ಳಲಿಕ್ಕೆಂದು ಕೈಕಟ್ಟಿಕೊಂಡು ನಿಂತಿದ್ದರು. ಸಮಯಕ್ಕೆ ಸರಿಯಾಗಿ ಆಗಮಿಸಿ ಮಹಾತ್ಮರು ಸಭೆಯನ್ನಲಂಕರಿಸಿದರು.

ಮಹಾತ್ಮರು ಆಸನದಲ್ಲಿ ಮಂಡಿಸಿ, ಹಿಂದೀ ಭಾಷೆಯಲ್ಲಿ ಅರ್ಧ ತಾಸಿನ ವರೆಗೆ ಮಾತನಾಡಿದರು. ಕೊನೆಗೆ ನಿಧಿಯನ್ನು ಕೂಡಿಸುವ ಉದ್ದೇಶವನ್ನು ಸೂಚಿಸಿ ಮಾತು ಮುಗಿಸಿದರು. ಹಾರ ಹಾಕಲಾಯಿತು. ನೋಡುನೋಡುವಷ್ಟರಲ್ಲಿ ನಿಧಿಗೆ ಹತ್ತು ಸಾವಿರ ರೂಪಾಯಿಗಳು ಸೇರಿದುವು. ಮಹಾತ್ಮರ ಕೊರಳನ್ನಲಂಕರಿಸಿದ ಹೂವಿನ ಹಾರಕ್ಕೂ, ಇತರ ಅರ್ಪಣೆಯ ವಸ್ತುಗಳಿಗೂ ತುಂಬ ಬೆಲೆ ಬಂದುವು.

ಮಹಾತ್ಮರನ್ನು ಕಂಡು ಅಜಿತನಲ್ಲಿ ಒಂದು ಹೊಸ ಹುಮ್ಮಸು ಹುಟ್ಟಿತು. ದೇಶಸೇವೆಗಾಗಿಯೇ ತನ್ನ ಆತ್ಮವನ್ನು ಅರ್ಪಿಸಿಕೊಂಡು ಬಿಟ್ಟ. ಅದೇ ತನ್ನ ಕರ್ತವ್ಯ, ಅದೇ ತನ್ನ ಧ್ಯೇಯ, ಅದರಲ್ಲಿಯೇ ತನ್ನ ಜನ್ಮಸಾರ್ಥಕತೆಯೆಂದು ನಿಶ್ಚಯಿಸಿದ. ಭಾರತದ ಸ್ವಾತಂತ್ರ್ಯಕ್ಕಾಗಿಯೇ ತನ್ನ ಬಾಳು ಮೀಸಲು ಎಂಬ ವಿಚಾರದಲ್ಲಿಯೇ ಮಗ್ನನಾಗಿದ್ದ. ಅಷ್ಟರಲ್ಲಿ ಜನಸಂದಣಿಯೊಳಗಿಂದ ರಾವಸಾಹೇಬ ಹತ್ತರ ಬಂದು,

"ನಾವು ಮುಂದೆಯೇ ಕುಳಿತಿದ್ದೆವು!" ಎಂದ ಹೆಮ್ಮೆಯಿಂದ.

"ಎಲ್ಲಿ ಕುಳಿತರೇನು? ಮನಸ್ಸು ಮಹಾತ್ಮರ ಹತ್ತರ ಇದ್ದರಾಯಿತಲ್ಲ!"

ಅಜಿತನ ಮಾತಿನಿಂದ ರಾವಸಾಹೇಬ ಸಿಡುಕಿನಿಂದ ದೂರ ಸರಿದು ಹೋಗಿಬಿಟ್ಟ. ಅಜಿತ ಮತ್ತೆ ತನ್ನ ಧ್ಯೇಯದತ್ತ ಮನಸ್ಸು ಹೊರಳಿಸಿದ.

ವರ್ಷವೆಲ್ಲ ಹೀಗೆ ಕಳೆದರೂ ಕೂಡ—ಕಕ್ಕನ ನಿರೀಕ್ಷೆಯನ್ನು ವಿಫಲಗೊಳಿಸಿ ಅಜಿತ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆ ಪಾಸಾದನು. ಜೊತೆಗೆ ತುಂಬ ಗುಣಗಳನ್ನೂ ಪಡೆದು ಹಾಯ್‌ಸ್ಕೂಲಿಗೆ ಮೊದಲಿಗನಾಗಿ ಬಂದನು. ಮುಂದೆ ಅವನ ವಿದ್ಯಾಭ್ಯಾಸ ಸಿದ್ದಾಪುರದಲ್ಲಿ ಸಾಗುವಂತಿರಲಿಲ್ಲ. ಎಲ್ಲಿಯಾದರೂ ನಗರದಲ್ಲಿ ಇಡಬೇಕಾಗುತ್ತಿದ್ದಿತು. ಅರಿಯದ ಹುಡುಗ ಬೇರೆ. ಕಡೆಗೆ ಇಡುವದಕ್ಕಿಂತ ಅಕ್ಕನ ಹತ್ತರ ಮುಂಬಯಿಗೆ ಕಳಿಸುವುದೇ ಒಳಿತೆಂದು ನೆರೆಹೊರೆಯವರ ಹೇಳಿಕೆ. ಇನ್ನೂ ಆದಗೌಡ ಯಾವುದಕ್ಕೂ ತುಟಿ ಎರಡು ಮಾಡಿದ್ದಿಲ್ಲ. ಅವನ ಮನಸ್ಸು ಒಮ್ಮೆ 'ಇನ್ನೇತಕ್ಕೆ ಕಲಿಯುವನು? ಹೊಲ ಮನೆ ನೋಡಿಕೊಂಡಿರಲಿ' ಎಂದರೆ ಮರುಕ್ಷಣದಲ್ಲಿ ಊರಲ್ಲಿ ನಿಂತರೆ ಅವನು ಇನ್ನೇನು ಬಹಳ ದಿನ ಕೂಡಿ ಇರಲಿಕ್ಕಿಲ್ಲ. ಬೇರೆಯೇ ನಿಲ್ಲುವವನು. ಇಂಥ ಚಳವಳಿಖೋರನನ್ನು ಬೇರೆಯಾಗಿ ಇಡುವುದೇ ಒಳಿತು. ಇಲ್ಲವಾದರೆ ಕೆಲಸಗಾರರಾದ ನಮಗೆ ಇಲ್ಲದ ಶೂಲಿ. ಇಂದು ಬೇರೆ ಇಟ್ಟರೆ ಅವರ ಹೊಲಗಳ ಉತ್ಪನ್ನ ಅವರಿಗೆ. ಅದನ್ನು ಕೊಡಲು ಗೌಡನು ಸಿದ್ಧವಿಲ್ಲ. ಅಜಿತನ ಪಾಲಿನ ಹೊಲ ಏನಿಲ್ಲೆಂದರೂ ಅರವತ್ತು ಎಕರೆಯಷ್ಟು.

ಮೇಲಾಗಿ ತುಂಬ ಬೆಲೆಯುಳ್ಳದು ಇನ್ನೂ ನಾಲ್ಕೆಂಟು ವರ್ಷ ಕೂಡಿಯೇ ನಡೆದರೆ ಆ ಉತ್ಪನ್ನದ ಮೇಲೆ ತನ್ನ ಮಕ್ಕಳಿಗೆ ಇನ್ನೂ ನಾಲ್ಕು ಕೂರಿಗೆ ಜಮೀನು ಕೊಳ್ಳಬಹುದು. ಇಂಥ ಸಂಪಾದನೆಯನ್ನು ಕೂಡಲೆ ಕೈಯೊಳಗಿಂದ ಬಿಡಲಿಕ್ಕೆ ಗೌಡನ ಮನಸ್ಸು ಒಪ್ಪೀತೇ? ಮುಂಬಯಿಯಲ್ಲಿ ಅಜಿತನನ್ನು ಇಟ್ಟರೆ ವೆಚ್ಚವೂ ಹೆಚ್ಚಿಗೆ ಬರುವುದಿಲ್ಲ. ಹೇಗೂ ಅಕ್ಕನ ಮನೆಯಲ್ಲಿ ಉಣ್ಣುವ. ಕಾಲೇಜಿನ ಫೀಗಾಗಿ ತಿಂಗಳಿಗೆ ಸ್ವಲ್ಪ ಹಣ ಕಳುಹುತ್ತ ಹೋದರೆ ತೀರಿತು.' ಎಂದು ಕೊನೆಗೆ ಒಂದು ತೀರ್ಮಾನಕ್ಕೆ ಬಂದಂತಾಗಿತ್ತು, ಆದಗೌಡನ ಮನಸ್ಸು. ಆದರಿಂದ ರಾವ ಸಾಹೇಬನ ಕೆಟ್ಟ ಜೊತೆಯೊಂದನ್ನು ಬಿಡಿಸಿದ ಶ್ರೇಯವೂ ಅವನಿಗೆ ಸಿಕ್ಕುವಂತಿತ್ತು. ಆದರೂ ತಾನಾಗಿಯೇ ಮಾತು ತೆಗೆಯಲು ಅವನ ಮನಸ್ಸು ಒಡಂಬಡಲಿಲ್ಲ.

ಅಜಿತ ಅಜ್ಜಿಯ ಸುತ್ತ ದಿನಬೆಳಗಾದರೂ ಹಚ್ಚಿದ್ದ. "ಕಕ್ಕನನ್ನು ಕೇಳು, ಮುಂಬಯಿಗೆ ಹೋಗುವೆ.." ಅಂತ. ಅದರಂತೆ ಅಕ್ಕನಿಗೂ ಬರೆದು ಕೇಳಿದ್ದ. ಅವಳೂ 'ಬೇಕಾದಾಗ ಬಾ' ಎಂದು ಬರೆದಿದ್ದಳು. ಅಂದಿನಿಂದ ಅಜಿತನ ಮನಸ್ಸು ಆತುರಗೊಂಡಿತ್ತು. ಮುರದೇವಿಗೆ ಮೊಮ್ಮಗನನ್ನು ಮುಂಬಯಿಗೆ ಕಳಿಸುವದೆಂದರೆ ಒಲ್ಲದ ವಿಷಯ. 'ಯಾವ ದೇಶೋ ಯಾವ ಊರೋ! ಗುರುತಿಲ್ಲದ ಜನ, ಎಂಥ ನೀರು, ಎಂಥ ಹವೆ, ಏನು ಕತೆ ಅಲ್ಲಿ ಹೋಗಿ ಕಲಿತು ಮಾಡುವುದೇನು? ಬೇಕಾದಷ್ಟು ಅಡವಿ ಇದೆ. ಬೆಳೆಸಿ ತಿಂದುಂಡಿರಲಿ, ನಮ್ಮ ಹಿರಿಯರು ಕಲಿತವರೇ ಇದ್ದರೇ? ಹೇಗೂ ದೊಡ್ಡವನಾಗಿದಾನೆ, ಹೆಣ್ಣೊಂದನ್ನು ನೋಡಿ ಮದಿವೆ ಮಾಡಿದರಾಯಿತು. ಮೂರುನಾಲ್ಕು ವರ್ಷಗಳಲ್ಲಿ ಮರಿಮಕ್ಕಳನ್ನೂ ಕಂಡೇನು' ಎಂದು ಅವಳ ಬಯಕೆ. ಆದರೂ ಅಜಿತನ ಕಿಟಕಿಟಿಯನ್ನು ತಾಳಲಾರದೆ—ಮನಸ್ಸೂ ಇಲ್ಲದೆ—ಮಗನೂ ಕಳಿಸಲು ಒಪ್ಪಲಿಕ್ಕಿಲ್ಲವೆಂದು ಭಾವಿಸಿ— ಒಂದು ದಿನ ಬಚ್ಚಲದಲ್ಲಿ ಗೌಡ ಸ್ನಾನ ಮಾಡುವಾಗ ಮೆಲ್ಲನೆ ಬಂದು ಮುರದೇವಿ ಮಗನ ಮುಂದೆ ಮಾತು ಒಡೆದಳು, ಧ್ವನಿಯಲ್ಲಿ ತನ್ನ ಮನಸ್ಸಿನ ಇಂಗಿತವನ್ನು ಸೂಚಿಸುತ್ತ.

"ಅಜಿತ ಮುಂದೂ ಕಲಿಯಬೇಕ ಅನ್ನುವ; ಏನ ಮಾಡುವುದು?"

ಆದಗೌಡ ಸುಮ್ಮನಿದ್ದ. ಮುಖ ತೊಳೆದುಕೊಂಡ, ಉಗುಳಿದ.
ಪತಿಗೆ ನೀರು ಹಾಕಲೆಂದು ಬಚ್ಚಲುಮನೆಗೆ ಬಂದ ಗಂಗವ್ವ ಸಂಕೋಚ
ದಿಂದ ನೀರು ತೋಡಿಟ್ಟು ದೂರ ಸರಿದು ನಿಂತಳು. ಅವಳ ಮುಖ
ವನ್ನೊಮ್ಮೆ ನೋಡಿದ. ಆಮೇಲೆ,

"ಕಲಿಯುತ್ತೇನೆ ಅಂದರೆ ಕಲಿಸುವದು."

"ಕಲಿಸುವುದು!" ಮುರದೇವಿಯ ಮನಸ್ಸು ಸ್ವಲ್ಪ ಅಳುಕಿತು.

"ಕಲಿಯುತ್ತೇನೆ ಅಂದ ಮೇಲೆ ಕಲಿಸಲಿಕ್ಕೆ ಬೇಡ? ನಾಳೆ ತನ್ನ
ಮಗನಿಗೆ ಕಲಿಯಲಿಕ್ಕೆ ಕಳಸಲಿಲ್ಲ ಅಂತ ಅವನ ಅವ್ವ ಅಂದಾಳಲ್ಲ!"

ತನ್ನ ಮಗನ ಮಾತು ಹೊರಡುತ್ತಲೇ ಸರಸ್ವತಿಯು ರೊಟ್ಟಿ ಮಾಡು
ವದನ್ನು ನಿಲ್ಲಿಸಿ, ಅಡಗಿಯ ಮನೆಯ ಬಾಗಿಲ ಸಳಿಕೆಯಲ್ಲಿ ಒಟ್ಟು
ಗೈಯಿಂದ ಬಂದು ನಿಂತು ಕಿವಿಗೊಟ್ಟು ಆಲಿಸುತ್ತಿದ್ದಳು. ಭಾವನ ಈ
ಮಾತು ಕೇಳಿ, "ನಾನೇನ ಅನ್ನೋದಿಲ್ಲ, ಇನ್ನೇತಕ ಪರವೂರಲ್ಲಿ ನಿಂತ
ಕಲಿತಾನು?" ಎಂದು ಹೇಳಬೇಕೆಂದಳಾದರೂ ಮರೆಗೆ ಬಂದು ನಿಂತು
ಕೇಳುತ್ತಿರುವ ಸಂಗತಿ ಅವರಿಗೆ ಗೊತ್ತಾಗುವದೆಂದುಕೊಂಡು ಸುಮ್ಮ
ನಾದಳು.

"ಅವಳೇನ ಅನ್ನತಾಳ ಪ್ರಾಣಿ, ನಮ್ಮ ಎಲ್ಲರನ್ನ ಬಿಟ್ಟ ಇದಾಳೇನ
ಆಕೆ?"

"ಹಾಗೆ, ಹೇಗೆ ಅನ್ನಲಿಕ್ಕೆ ಬಂದೀತು? ಈಗ ಅವನೂ ದೊಡ್ಡವ
ನಾಗಿದಾನೆ. ಅವರೂ ತಾಯಿ ಮಕ್ಕಳ ಮಾತಾಡಿಕೊಳ್ಳುವರು. ಏನಾ
ದರ ಒಂದ ಮಾಡಬೇಕನ್ನವರು. ಇನ್ನೇನು ನಾವು ಹಿರಿಯರಂತ ಒಂದ
ಮಾತ ಕೇಳವರ ಅವರ. ಕೇಳಿದರ ನಾವು ಹೇಳೋದು, ಇಲ್ಲಾದರ
ಇಲ್ಲ" ಎಂದು ಹೆಂಡತಿಯ ಮುಖದ ಕಡೆಗೆ ನೋಡುತ್ತ ನುಡಿದ,
ಆದಗೌಡ. ಗಂಗವ್ವ ಹುಬ್ಬು ಹಾರಿಸಿ, ತನ್ನ ಅನುಮತಿಯನ್ನು ಸೂಚಿಸಿ
ದಳು ಈ ಮಾತಿಗೆ.

ಒಳಮುಗ್ಗಲಿಗೆ ನಿಂತಲ್ಲಿಯೇ ಸರಸ್ವತಿ ಸಿಟ್ಟು ಬೆಂಕಿಯಾದಳು.
ನಮಗೆ—ತಾಯಿ ಮಕ್ಕಳಿಗೆ—ಮನೆಯೊಳಗೆ ಮಾತಾಡಲೂ ಸ್ವಾತಂತ್ರ್ಯ
ಇಲ್ಲವೆ? ಅದೇನ ಅಷ್ಟ ದೊಡ್ಡ ಮಾತ ಅಂತ ಗಂಡನ ಕಿವಿಯೊಳಗ

ಪೋಣಿಸಿ ಇಟ್ಟಿದಾಳ ಇಷ್ಟ ಲಗೂನೆ ಈಕೆ?" ಎಂದು ಗಂಗವ್ವನ ಮೇಲೆ ನಿಂತಲ್ಲಿಯೇ ಕೋಪಗೊಂಡಳು.

ನಿಜವಾಗಿಯೂ ಮೊನ್ನೆ ಮಧ್ಯಾಹ್ನದಲ್ಲಿ ತಾಯಿ ಮಕ್ಕಳಿಬ್ಬರೂ ಹಿತ್ತಲಿನಲ್ಲಿ ಮಾತಾಡಿದ್ದರು. ಅಜಿತ "ಮುಂಬಯಿಗೆ ಹೋಗುವೆ" ಎನ್ನುವ. ಸರಸ್ವತಿಯು "ಬೇಡ ನಾ ಒಬ್ಬಾಕೆ ಇಲ್ಲಿ ಇರಲಿಕ್ಕೆ ಆಗುವದಿಲ್ಲ. ನೀ ನಾಲ್ಕೆಂಟ ವರ್ಷ ಅದನ್ನ ಕಲಿಯುವೆ ಇದನ್ನ ಕಲಿಯುವೆ ಅಂತ ಹೊರಗ ಹೊರಗ ತಿರಗತ ಹೋದರ ನಾ ಯಾರನ್ನ ನೋಡಿ ಹೊತ್ತ ಹಾಕಲಿ?" ಎನ್ನುತ್ತಿದ್ದಳು. ಈ ಮಾತುಗಳು ನಡೆದಾಗ ಅಲ್ಲಿ ಗಂಗವ್ವ ಸುಳಿದು ಹೋದದ್ದೂ ಸುಳ್ಳಲ್ಲ.

"ಇಂಥಾ ಅರ್ಥವಿಲ್ಲದ ಮಾತ ಹೇಳಬೇಡ, ನನ್ನ ಮುಂದ ನೀ. ಯಾವಾಕಿ ಹೇಳತಾಳ ನಿನಗ?" ಸ್ವಲ್ಪ ಸಿಟ್ಟಿನಿಂದಲೇ ಮುರದೇವಿಯ ಬಾಯಿಂದ ಮಾತು ಹೊರಟಿತು.

ಕೂಡಲೆ ಗಂಗವ್ವ ಅದೇಕೋ ಅಲ್ಲಿ ನಿಲ್ಲದೆ ಸೆಡವಿನಿಂದ ಒಳಗೆ ಹೋದಳು. ಅವಳ ಆ ನಡಿಗೆಯು ಠೀವಿಯೊಳಗಿನ ಮರ್ಮ ಅತ್ತೆಯಾದ ಮುರದೇವಿಗೆ ತಿಳಿಯದೆ ಇದ್ದೀತೆ? ಹಾಗೆಯೇ ಮಾತನ್ನು ಮುಂದುವರಿಸಿದಳು, ಸ್ವಲ್ಪ ಜೋರಾಗಿಯೇ.

"ಮನೆ ಒಡೆಯುವ ಮಾತ—ಹೆಂಡತಿಯ ಮಾತ ಕೇಳಬಾರದಪ್ಪ ನೀ. ಇಂದ ಇದನ್ನ ಹೇಳಿದಳು ನಾಳೆ ಇನ್ನೊಂದ ಹೇಳ್ತಾಳು. ಅದನ್ನೆಲ್ಲ ನೀ ಕೇಳ್ತ ಹೋದರ ನಾಲ್ಕ ದಿನದೊಳಗ ಮನೆ ಒಡೆದ ಎರಡ ಆದಾವು. ಊರ ಜನರ ಮುಂದ ಏನ ನಗ್ಗೇಡು ಮಾಡಿಕೊಳ್ಳುವಿ? ನನ್ನ ಕಣ್ಣ ಮುಂದೇ ಮನೆ ಹೋಳಮಾಡೋದು ನಾ ಕಾಣಲಾರೆ. ಅವರದೇನ ಖರ್ಚ ಇಲ್ಲ. ತಾಯಿ ಮಗಾ ಇಬ್ಬರೇ; ನಿಮ್ಮದೇ ಖರ್ಚ ಹೆಚ್ಚ ಅದ; ಮನೆಗೆ ಬರುಹೋಗುವ ಜನಾನೂ ಹೆಚ್ಚ ನಿಮ್ಮದೇ. ಇಪ್ಪತ್ತ ಕೂರಿಗೆ ಬೆಳೆ ಅವರಿಗೆ ಏನ ಮಾಡೋದ ಇಬ್ಬರಿಗೆ? ಒಳ್ಳೇ ರೀತಿಯಿಂದ ಯಾವನಾದರ ಜನ್ಮ ಮಾಡುವವನಿದ್ದರೆ ಇಷ್ಟರೊಳಗೇ ಅವರು ಎರಡು ಮೂರು ಸಾವಿರ ರೂಪಾಯಿ ಶಿಲ್ಲಕ ಇಟ್ಟ ತೋರಸತಿದ್ದ."

ಇನ್ನೂ ಏನೇನು ಅನ್ನುತ್ತಿದ್ದಳೋ ಮುರದೇವಿ. ಆದರೆ ಗೌಡ

ನಡುವೆಯೇ ಬಾಯಿ ಹಾಕಿ,—

"ಹೂಂ! ಶಿಲ್ಲಕ ಉಳಿಯುವವು? ಅವನು ಬೇಕಾದಂತೆ ಚಳವಳಿ ಮಾಡ್ತ ತಿರಗತಾನು. ಬಂದ ಪೋಲೀಸರ ಕೈಕಾಲ ಹಿಡಿದು, ನಾಲ್ಕ ರೂಪಾಯಿ ಕೊಟ್ಟ ಕಳಿಸಿ ಮಾನ ಉಳಿಸಿಕೊಂಡ ಬಾಳುವೆ ಮಾಡೂ ತನಕ ನನಗ ಹೆಚ್ಚ ಆಗಿ ಹೋಗೇದ. ಯಾರ ಕೊರಳದ ಉರುಲ ಅವರಿಗೇ ಗೊತ್ತ. ನಿಮಗ ಏನ ಗೊತ್ತ? ಮನೆಯೊಳಗ ಕೂತ ಲೆಕ್ಕ ಹಾಕಿ ಹೇಳಲಿಕ್ಕೆ ಅಷ್ಟೇ ನೀವು ಜಾಣರು." ಎಂದು ಏನೋ ಕಾರಣ ಮುಂದೊಡ್ಡಿ ಶಿಲ್ಲಕ ಹಣ ಇಲ್ಲವೆಂದು ಹೇಳಿಬಿಟ್ಟ. "ಏನಾದರೂ ಮಾತ ತೆಗೆದು ಎಲ್ಲಿಯಾದರೂ ಒಯ್ದು ಹೊಂದಿಸಿ ಬಿಡಬೇಡಿರಿ. ಬೇಕಾದರೆ ಮುಂಬಯಿಗೆ ಕಳಿಸಿಬಿಡರಿ ಹೋಗಲಿ. ತಿಂಗಳಿಗೆ ಖರ್ಚ ಬಂದದ ಕಳಸೋಣಂತ" ಎಂದ.

"ಊರಾ ಕೇರೀ ಬಿಟ್ಟ ಯಾತಕ್ಕ ಹೋಗ್ತಾನ ಮುಂಬಯಿಗೆ? ಕಲಿಯೋದ ಸಾಕು. ಇನ್ನ ಸುಮ್ಮ ಮನೆಯೊಳಗs ಇರಲಿ." ಹಣೆ ಗಂಟು ಹಾಕಿ ಮುರದೇವಿ ನುಡಿದಳು.

"ಎರಡೂ ನೀನೇ ಅನ್ನುವಿಯಲ್ಲ?" ಸ್ವಲ್ಪ ತಡೆದು, ಹೆಂಡತಿ ತಂದ ದೋತರ ತಕ್ಕೊಂಡು "ಅದೇನ ಬೇಡ, ಮುಂಬಯಿಗೆ ಹೋಗಿ ಬಿಡಲಿ ಅಜಿತ. ಅಲ್ಲೇ ಇಂದಿರಾನೂ ಇದ್ದಾಳು. ದೊಡ್ಡ ಊರೊಳಗ ಮನೆಯೊಳಗ ಒಬ್ಬ ಜೋಡೀನೂ ಆದಂತಾಯಿತು, ಇವನ ಕಲಿಯೋದೂ ಆಯ್ತು. ಕಾಲೇಜಗಳು ಆರಂಭ ಆಗೋದರೊಳಗs ಹೋಗಲಿ. ಸುಧೀರನಿಗೆ ಪತ್ರ ಬರೆದು ತಿಳಿಸುವೆ ನಾ." ಎಂದು ವಾಡೆಯ ಬಸ್ತಿಯತ್ತ ಸಾಗಿದ ಆದಗೌಡ. ಬಾಯಲಿ "ದರ್ಶನಂ ದೇವ ದೇವಶ್ಯ ದರ್ಶನಂ ಪಾಪನಾಶನಂ, ದರ್ಶನಂ ಸ್ವರ್ಗ ಸೋಪಾನಂ" ಎಂದು ಅದೇನೋ ನಿತ್ಯವಿಧಿಯ ಮಂತ್ರ ಜಪಿಸುತ್ತಲಿದ್ದ. ಹೃದಯದಲ್ಲಿ 'ಅಲ್ಲಿಷ್ಟು ಬೆಳಕ ಕೆಡವಿ ಬರಲಿನ್ನ' ಎಂದಿತ್ತೋ ಏನೋ!

ಸರಸ್ವತಿಯು ಬಿಸಿಯುಸಿರೊಂದನ್ನು ಬಿಟ್ಟು ಮರಳಿ ಹೋಗಿ ಆರಿದ ಒಲೆಯ ಕೆಂಕಿಯನ್ನು ಊದಿ ಊದಿ ಹೊತ್ತಿಸತೊಡಗಿದಳು.

೭

ಮುಂಬಯಿಯ ನಿಲ್ಮನೆಗಳಲ್ಲಿ ದಾದರ ಅಷ್ಟೇನೂ ದೊಡ್ಡದಲ್ಲ. ಬೋರಿಬಂದರವನ್ನು ನೆನೆಸಿಕೊಂಡಾಗಂತೂ ಅದು ಇನ್ನೂ ಸಣ್ಣ ದಾಗಿ ತೋರುವುದು. ಆದರೆ ಅದು ಅಜಿತನಿಗೆ ಬಹು ದೊಡ್ಡ ನಿಲ್ದಾಣ ವೆನಿಸಿತು. ಆತ ಇದೇ ಮೊದಲ ಸಲ ಮುಂಬಯಿಗೆ ಹೋದುದ ರಿಂದಲೂ ಹಾಗೆನಿಸಿರಬೇಕು. ಅಲ್ಲಿ ಉಗಿಬಂಡಿಯಿಂದಿಳಿದ ಜನಸಮೂಹ ವನ್ನು ಕಂಡು ಕೊಂಚ ಕಾಲ ದಂಗುಬಡೆದು ನಿಂತ. ಬೇಟೆಗಾರನ ಸದ್ದನ್ನು ಕೇಳಿದ ಗಂಡೆರಳೆಯಂತೆ ಬೆದರುಗಣ್ಣುಗಳಿಂದ ಸುತ್ತಲೂ ನೋಡತೊಡಗಿದ. ಯಾವ ಕಡೆಯಿಂದ ಹೊರಗೆ ಹೋಗಬೇಕೆಂಬುದು ಅವನಿಗೇನೂ ತಿಳಿಯುವಂತಿರಲಿಲ್ಲ.

ಸುಧೀರ ಬೇಗನನ್ನು ಕರೆದೊಯ್ಯಲು ನಿಲ್ಮನೆಗೆ ಬಂದಿದ್ದ. ಅಜಿತ ಗಾಡಿಯಿಂದ ಇಳಿದೊಡನೆಯೇ ಅಕ್ಕನ ಕ್ಷೇಮಸಮಾಚಾರವನ್ನೆಲ್ಲ ಕೇಳಿ ಕೊಂಡ. ಸ್ವಲ್ಪ ಜನರ ಗೊಂದಲ ಕಡಿಮೆಯಾಗುವ ವರೆಗೆ ಇಬ್ಬರೂ ಅಲ್ಲಿಯೇ ನಿಂತರು. ಸಿದ್ಧಾಪುರದ ಸುದ್ದಿಯನ್ನು ಸುಧೀರ ಕೇಳಿ ತಿಳಿದು ಕೊಳ್ಳಲು ಮಾತು ಬೆಳೆಯಿಸಿದ. ಆದರೂ ಅಜಿತನ ಮನಸ್ಸು ಮಾತಿನ ಕಡೆಗೆ ಇದ್ದಂತಿರಲಿಲ್ಲ. ಬೇಗನೊಡನೆ ಹೊರಗೆ ಬರುತ್ತ ಕೈಯೊಳಗಿನ ವೃತ್ತಪತ್ರಿಕೆಯನ್ನು ತೋರಿಸಿ ಮೆಲ್ಲನೆ ಕೇಳಿದ.

“ ಹಿಂದೂ ಮುಸಲ್ಮಾನರ ದಂಗೆಯ ಸುದ್ದಿಯನ್ನು ಓದಿದ್ದೀರಾ?”

“ ಓದಿದೆ. ಅದರಲ್ಲೇನಿದೆ? ಮಂಗ ಜನ, ಕುಣಿಸಿದಂತೆ ಕುಣಿ ಯುವುದು. ”

ಅಜಿತ ಸುಮ್ಮನಾದ. ಅವನಿಗೆ ಸುಧೀರನ ಮಾತಿನ ಅರ್ಥ ಹೊಳೆ ಯಲಿಲ್ಲ. ‘ ಸೊಕ್ಕಿಗೆ ಬಂದು ಹಿಂದೂ ಮುಸಲ್ಮಾನರು ಹೊಡೆದಾಡು ತ್ತಿರುವರು. ಭಾರತದ ಜನತೆಯಲ್ಲಿ ಒಕ್ಕಟ್ಟಿಲ್ಲ. ಈ ಇಲ್ಲದ ಒಕ್ಕಟ್ಟನ್ನು ಉಂಟುಮಾಡಲು ಸರಕಾರ ಹೆಣಗಿದರೂ ತಿಳಿಯದು, ಈ ಜನತೆಗೆ. ಈದ ಹಬ್ಬ ಅಂದರೇನು? ಅದರ ಪಾವಿತ್ರ್ಯ ಎಂಥದು? ಅಂಥ ದಿನದಲ್ಲಿ ಚೂರಿಯಿಂದ ಇರಿದು ಕೊಲ್ಲುವಂತಹ ಹೊಲೆಗೆಲಸ ಮಾಡುವದೆಂದು

ಕೇನು ? ಕುರಾನದ ಅರ್ಥವನ್ನು ಗಮನಿಸುವದಿಲ್ಲ, ಈ ಧರ್ಮಾಭಿಮಾನಿಗಳು.' ಎಂದೇನೇನೋ ವಿಚಾರಿಸುತ್ತಲೇ ಒಂದು ಸಿದ್ಧಾಂತವನ್ನು ಮುಟ್ಟಿದಂತೆ ನುಡಿದ, ಅಜಿತ.

" ಇವರಿಗೆ ಧರ್ಮದ ನಿಜಸ್ವರೂಪವೇ ಗೊತ್ತಿಲ್ಲ. "

" ಧರ್ಮದ ಜಗಳವಲ್ಲಿದು. "

" ಧರ್ಮದ ಮೇಲಿಂದಲ್ಲವೇ ಜಾತಿ? ಜಾತೀಯ ಜಗಳವೆಂದರೇನು ? ಧರ್ಮದ ಜಗಳವೆಂದರೇನು ? ಯಾವುದಾದರೂ ಒಂದೇ ಅಲ್ಲವೆ ? "

" ಅಜಿತ, ನಿನಗಿನ್ನೂ ತಿಳಿಯದು. ಈ ಜಗಳ ಜಾತಿ ಧರ್ಮಗಳಿಗೆ ಸಂಬಂಧಿಸಿದ್ದಲ್ಲ. ಇದರ ಮೂಲಕಾರಣವೇ ಬೇರೆಯಿದೆ. "

ಅಜಿತ ಬೆರಗಿನಿಂದ ಬೀಗನ ಮುಖದ ಕಡೆಗೆ ನೋಡುತಲಿದ್ದ. ಸುಧೀರ ಮುಂದೆ ಹೇಳತೊಡಗಿದ.

" ಇದಕ್ಕೆಲ್ಲ ಆರ್ಥಿಕ ವಿಷಮತೆ ಕಾರಣವಾಗಿದೆ. ಸಮಾಜದ ಈ ಆರ್ಥಿಕ ಪ್ರಶ್ನೆಯನ್ನು ಸರಿಯಾಗಿ ಬಿಡಿಸದ ಹೊರತು ಇವು ನಿಲ್ಲಲಾರವು. "

ಸುಧೀರ ಬಲ್ಲವನಂತೆ ನುಡಿದ. ಆದರೂ ಅಜಿತನಗೆ ಈ ಮಾತಿನಲ್ಲಿ ನಂಬಿಗೆ ಹುಟ್ಟದು. ಏನೋ ತನ್ನಲ್ಲಿಯೇ ವಿಚಾರದಲ್ಲಿ ಮಗ್ನನಾಗಿದ್ದಾನೆ. ಟಾಂಗಾದ ಕುದುರೆ ಹಾಗೆಯೇ ಮುಂದೆ ಮುಂದೆ ಓಡುತ್ತಲಿದೆ. ಎತ್ತರವಾದ ಮನೆಗಳು ಒಂದೊಂದೇ ಹಿಂದೆ ಸರಿಯುತ್ತಲಿವೆ.

" ಅಲ್ಲಪ್ಪ ಅಜಿತಾ, ನಿಮ್ಮ ಊರಲ್ಲಿ ಹಿಂದು ಮುಸಲ್ಮಾನರು ಕೂಡಿಯೇ ಇರುವದಿಲ್ಲವೇ ? ಹಬ್ಬ ಹರಿದಿನಗಳಲ್ಲಿ ಭೇದಭಾವ ಇಲ್ಲದೆ, ಅಣ್ಣ ತಮ್ಮಂದಿರಂತೆ ಇರುವರಲ್ಲ !

"ಹಳ್ಳಿಗಳಲ್ಲಿ ಈ ಹೊಡೆದಾಟವಿಲ್ಲ; ನಗರಗಳಲ್ಲಿಯೇ ಏಕೆ ಬಂತೀ ದಂಗೆ? ಏನಾದರೂ ವಿಚಾರ ಮಾಡಿರುವಿಯಾ ? " ಅಜಿತ ಸುಮ್ಮನೆ ಕುಳಿತಿದ್ದ. ಅದನ್ನು ಕಂಡು ಸುಧೀರ ಮಾತು ಮುಂದುವರಿಸಿದ. " ನಗರಗಳಲ್ಲಿ ಗಿರಣಿಯ ಕೂಲಿಕಾರರಿಗೆ ಯೋಗ್ಯ ಸಂಬಳ ಸಿಕ್ಕುತ್ತಿ

ರುವದಿಲ್ಲ. ಅವರು ಹಿಂದು ಮುಸಲ್ಮಾನರೆನ್ನದೆ ಒಂದಾಗಿ ಭಾಂಡವಲ-ಶಾಹಿಯೊಡನೆ ಹೋರಾಡಲು ಸಿದ್ಧರಾಗಿ ನಿಲ್ಲುವರು. ಆಗ ಬಡವ, ಭಾಂಡವಲದಾರ ಅನ್ನುವ ಎರಡೇ ಜಾತಿಗಳು. ಬಡವರನ್ನು ಹತ್ತಿಕ್ಕಲು ಸರಕಾರ ಸಿರಿವಂತರಿಗೆ ನೆರವಾಗುವದು. ಶಕುನಿಯಂತೆ ಕುತಂತ್ರಹೂಡಿ ಹೊಡೆದಾಟ ಹಚ್ಚುವುದು ಸರಕಾರ. ಜಗತ್ತಿಗೆ ಜಾತಿಯ ಜಗಳವೆಂದು ಸಾರುವುದು. ಇದರಲ್ಲೇನಿದೆ ?”

ಯಾವ ಪ್ರಶ್ನೆಯನ್ನೂ ಆರ್ಥಿಕದೃಷ್ಟಿಯಿಂದಲೇ ವಿಚಾರಿಸಲು ಹವಣಿಸುವ ಸುಧೀರನ ಮನಸ್ಸು ದೇಶದಲ್ಲಿ ನಡೆದ ಜಾತೀಯ ಗಲಭೆಗಳಿಗೆಲ್ಲ ಹಿನ್ನೆಲೆಯನ್ನು ಈ ರೀತಿ ಕಲ್ಪಿಸುತ್ತಿತ್ತು.

ಅಜಿತ ಅಹುದು ಅಲ್ಲ ಅನ್ನುವಷ್ಟು ಈ ವಿಷಯದಲ್ಲಿ ಬಲ್ಲವನಾಗಿರಲಿಲ್ಲ. ಆದರೂ ಅವನ ಮನಸ್ಸಿನಲ್ಲಿ ವಿಚಾರಗಳ ತಾಕಲಾಟ ಜೋರಿನಿಂದಲೇ ನಡೆದಿದ್ದಿತು. ಏನೇನೋ ಹೊಸ ಹೊಸ ಸಂಗತಿಗಳ ಅರಿವು ಉಂಟಾದಂತಾಗಿ ಮನಸ್ಸು ದಿಙ್ಮೂಢವಾದಂತಾಗುವದು. ಒಂದ ರಕ್ಷಣ ಬುದ್ಧಿ ಕುಂಠಿತವಾಗುವದು. ಹಿಂದೆ ಸರಿಯುತ್ತಿರುವ ಮುಂಬಯಿಯ ಭವ್ಯ ಬೀದಿಯನ್ನು ಕಂಡು ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದ ಅವನು ದಂಗುಬಡೆದವನಾಗಿದ್ದ. ಸುಧೀರ ‘ ಮನೆ ಬಂತು ಕೆಳಗಿಳಿಯೋಣ ’ ಎಂದಾಗಲೇ ಅವನಿಗೆ ಎಚ್ಚರವಾಯಿತು.

ಮಧ್ಯಾಹ್ನವಾಗಿದ್ದಿತು. ಇಂದಿರೆ ಅಡಿಗೆ ಮಾಡಿಕೊಂಡು ತಮ್ಮನ ದಾರೀ ಕಾಯುತ್ತ ಕುಳಿತಿದ್ದಳು. ಹೊರಬಾಗಿಲಲ್ಲಿ ಸದ್ದಾದೊಡನೆಯೇ ಅವಳು ಓಡುತ್ತ ಬಂದಳು. ಈಗ ಇಪ್ಪತ್ತೆರಡು ಇಪ್ಪತ್ತಮೂರು ವಯಸ್ಸಿನವಳವಳು. ಇನ್ನೂ ಮಕ್ಕಳಾಗಿರಲಿಲ್ಲ. ಅಕ್ಕರೆಯಿಂದ ತಮ್ಮನಿಗೆ ತೆಕ್ಕೆಹಾಯ್ದಳು. ಅವಳ ನಯನಗಳಿಂದ ಹರಿಯುತ್ತಿರುವ ಸ್ನೇಹರಸವನ್ನು ಕಂಡು ಅಜಿತನ ಮೈ ಪುಳಕಗೊಂಡಿತು. ಆ ಕ್ಷಣದಲ್ಲಿ, ಈ ಅಕ್ಕರತೆ, ಈ ಸುಖ, ಈ ಒಲುಮೆಯನ್ನು ಕಕ್ಕನ ಮನೆಯಲ್ಲಿ ಬೆಳೆದುದರಿಂದ ಇನ್ನೂ ವರೆಗೆ ಕಾಣದೆ ಹೋದೆನಲ್ಲ ! ಎಂದೆನಿಸದಿರಲಿಲ್ಲ.

ಅಕ್ಕ ಅವನ ಸಲುವಾಗಿ ಇಂದು ಸೀಯಡಿಗೆ ಮಾಡಿದ್ದಳು. ಸ್ನಾನದ ಸಲುವಾಗಿ ನೀರು ಕಾಯಿಸಿಯೂ ಆಗಿತ್ತು. ಅವಳ ನಲ್ಲ—

ಸುಧೀರನಂತೂ ಸ್ಟೇಶನಕ್ಕೆ ಹೋಗುವಾಗಲೇ ಸ್ನಾನ ತೀರಿಸಿ ಹೋಗಿದ್ದ. ಅಜಿತನ ಸ್ನಾನವಾದೊಡನೆಯೇ ಇಬ್ಬರೂ ಊಟಕ್ಕೆ ಕೂಡಬೇಕು. ಸುಧೀರನಿಗೆ ಹೆಚ್ಚು ಅವಕಾಶವಿರಲಿಲ್ಲ. ಊಟವಾದೊಡನೆಯೇ ಕೆಲಸಕ್ಕೆ ಹೊರಡಬೇಕು.

ಇಂಥ ಅವಸರದಲ್ಲಿಯೂ ಕೂಡ ಇಂದಿರೆಯು ತಮ್ಮನ ಮೇಲೆ ಪ್ರಶ್ನೆಗಳ ಸುರಿಮಳೆಯನ್ನೇ ಕರೆದಳು.

" ಅವ್ವ ನೆಟ್ಟಗೆ ಇದ್ದಾಳೇನು ? "

" ನೀ ಬರಲಿಕ್ಕೆ ಇಷ್ಟು ದಿನ ಏಕೆ ತಡೆದೆ ? "

" ಇಲ್ಲಿ ಕಾಲೇಜದೊಳಗ ಪ್ರವೇಶ ಸಿಕ್ಕದಿದ್ದರೆ ಈ ವರ್ಷ ವ್ಯರ್ಥ ಹೋಗತಿರಲಿಲ್ಲ ? "

" ಮುಂಬಯಿಗೆ ಹೋಗುವೆ ಅನ್ನಲು ಕಕ್ಕ ಸಿಟ್ಟಿಗೆ ಬಂದ ? "

" ರಾವಸಾಹೇಬ ಹೇಗೆ ಇದಾನು ? "

" ನಿನಗ ಅವನಿಗೆ ಏಕೆ ಹೊಂದವಲ್ತು ? "

" ಇದರೊಳಗ ಯಾರ ಕಡೆಗೆ ತಪ್ಪ ಅದ ? " ತಮ್ಮನ ತಪ್ಪು ಯಾವ ಅಕ್ಕನಿಗೂ ಕಾಣದು.

" ಹೆಡ್‌ಮಾಸ್ತರರು ಈ ಸಲ ಫಾರ್ಮು ಸುಮ್ಮನೆ ಕೊಟ್ಟರಲ್ಲ ? "

" ಕಾರಣಿಲ್ಲದ ಒಂದ ವರ್ಷ ಹಾಕಿಸಿದರಲ್ಲ ? "

" ಇಷ್ಟೇಕೆ ಸೊರಗಿರುವಿ ? "

" ಗಾಡಿಯೊಳಗ ರಾತ್ರಿ ಮಲಗಲಿಕ್ಕೆ ಸ್ಥಳ ಸಿಕ್ಕಿತೋ ಇಲ್ಲೋ ? "

" ಮದುವೆ ಮಾಡಿ ಕೊಟ್ಟ ಮೇಲೆ ಅಕ್ಕನ ಮನೆಗೆ ಎಷ್ಟ ದಿವಸಕ್ಕ ಬರೋದು ? "

ಈ ರೀತಿ ಅನೇಕ ಪ್ರಶ್ನೆಗಳನ್ನು ಕೇಳತೊಡಗಿದಳು. ನಡುವೆ ಅವನಿಗೆ ಉತ್ತರ ಕೊಡಲಿಕ್ಕೂ ಅವಕಾಶವಿರುತ್ತಿರಲಿಲ್ಲ. ಅಜಿತನಿಗೆ ನಗೆ ಬಂದಿತು.

" ಅಲ್ಲs; ಅವನಿಗೆ ಮಾತಾಡಲಿಕ್ಕೆ ಅವಕಾಶವನ್ನಾದರೂ ಕೊಡಲ್ಲ ! " ಸುಧೀರ ನಡುವೆ ನಕ್ಕು ನುಡಿದ.

ಪತಿಯ ಮಾತು ಕೇಳಿ ಇಂದಿರೆಯೂ ಖೊಳ್ಳೆಂದು ನಕ್ಕಳು. ತಾನು

ಎಷ್ಟು ಆತುರದಿಂದ ಪ್ರಶ್ನೆ ಕೇಳುತ್ತಿರುವೆನೆಂಬುದು ಈಗ ಅವಳ ಲಕ್ಷ್ಯಕ್ಕೆ ಬಂತು.

ಅಜಿತನ ಸ್ನಾನವಾದೊಡನೆಯೇ ಮೂವರೂ ಊಟಕ್ಕೆ ಕುಳಿತರು. ಅಕ್ಕನೂ ತಮ್ಮೊಡನೆಯೇ ಕುಳಿತುದನ್ನು ಕಂಡು ಅಜಿತ ಬೆರಗುಗೊಂಡ. ಈ ಸಂಸ್ಕೃತಿ ಹೊಸದು ಅವನಿಗೆ. ತಮ್ಮನ ಭಾವವನ್ನರಿತು ಇಂದಿರೆಯು “ದಿನಾ ಬೆಳಗಾದರೆ ಆಫೀಸಿಗೆ ಹೋಗುವವರಿವರು. ಹಿಂದಿನಿಂದ ನಾನೊಬ್ಬಾಕೆ ಎಲ್ಲಿ ಊಟ ಮಾಡೋದಂತ ಒಮ್ಮೇ ಕೂತಬಿಡತೇವು ಆಯಿತು.” ಪತಿಯ ಮುಖದ ಕಡೆಗೆ ನೋಡಿ ಮುಗುಳುನಗೆ ಬೀರುತ್ತ ನುಡಿದಳು.

“ಒಬ್ಬನೇ ಊಟ ಮಾಡಿದರೆ ನನಗೆ ಹೊಟ್ಟೇ ತುಂಬದು.” ಸುಧೀರನೂ ನಕ್ಕು ನುಡಿದ. ಮೂವರೂ ನಗೆಯಲ್ಲಿ ಮುಳುಗಿದರು. ಸುಧೀರ ಲಗುಬಗೆಯಿಂದ ಊಟ ತೀರಿಸಿ ಕೆಲಸಕ್ಕೆ ಹೋದ. ಇವರ ಮನೆಯೊಳಗಿನ ನಗೆ ಉಲ್ಲಾಸಗಳನ್ನು ಕೇಳಿ, ಅದೇ ಕಟ್ಟಡದ ಬೇರೊಂದು ವಿಭಾಗದಲ್ಲಿರುವ ಹೆಂಗಸೊಬ್ಬಳು ಬಂದು,—

“ನಿಮ್ಮ ತಮ್ಮ ಬಂದೇನು?” ಎಂದು ಕೇಳಿದಳು.

“ಈಗ ಗಾಡಿಗೆ ಬಂದನಲ್ಲ!”

“ಎಲ್ಲಿರುವರು?” ಇಂದಿರೆಯ ತಮ್ಮನನ್ನು ನೋಡುವ ಬಯಕೆಯಿಂದ ಅವಳು ಕೇಳಿದಳು. ಅವಳೊಬ್ಬ ಡಾಕ್ಟರನ ಹೆಂಡತಿ, ಕನ್ನಡಿಗಳು ಅದರಿಂದ ಇಂದಿರೆಗೂ ಅವಳಿಗೂ ತುಂಬ ಸ್ನೇಹ.

“ಒಳಗೆ ಇದ್ದಾನೆ; ನನಗೆ ಇನ್ನೂ ಒಳಗ ಸ್ವಲ್ಪ ಕೆಲಸವಿತ್ತು. ಅಲ್ಲೇ ಹತ್ತರ ಮಾತಾಡ್ತ ಕೂತಿದಾನ.”

“ಆಯ್ತು; ನಿನಗೊಬ್ಬ ತಮ್ಮ ಆದರೂ ಬಂದಲ್ಲ ಜೊತೆಗೆ?”

“ಎರಡ ದಿನಾ; ಇವನೂ ಹೋಗವನಲ್ಲ. ಕಾಲೇಜು ಗೆಳೆಯರ ಅಂತ?”

ಇಂದಿರೆ ಒಳಗೆ ಹೋಗಿ ಕೆಲಸಕ್ಕೆ ತೊಡಗಿದಳು ಅಜಿತ ಅಲ್ಲಿಯೇ ಪಲ್ಲಂಗದ ಮೇಲೆ ಕುಳಿತಿದ್ದಾನೆ. ಸುತ್ತಲೂ ಟಕಮಕ ನೋಡುತ್ತಲಿದ್ದಾನೆ. ಅಟ್ಟದ ಮೇಲಿನ ಇದ್ದಲಿಯ ಚೀಲ, ಆ ಚಿಕ್ಕ ಒಲೆ, ಚಿಕ್ಕ

ದಾದರೂ ಚೊಕ್ಕಾದ ಅಡಗಿಯ ಮನೆ, ಅಲ್ಲೇ ನೀರಿನಲ್ಲಿ, ಇವೆಲ್ಲ ಅವನಿಗೆ ಹೊಸ ಹೊಸದಾಗೆನಿಸುತ್ತಿದ್ದಿತು.

"ಏಕೆ ಸುತ್ತೆಲ್ಲ ನೋಡುವಿ? ಈ ಸಣ್ಣ ಮನೆಯೊಳಗೆ ಹೇಗೆ ಇರೋದ ಅನ್ನುವಿಯೇನ ಮತ್ತ?"

"ಇಲ್ಲ; ಇರಲಿಕ್ಕೆ ಏನು?" ಅನ್ಯಮನಸ್ಕನಾಗಿ ನುಡಿದ ಅಜಿತ.

"ಹಳ್ಳಿಯಂತೆ ಇಲ್ಲಿ ದೊಡ್ಡ ಮನೆಯೊಳಗ ಇರಲಿಕ್ಕೆ ಸಿಕ್ಕುವುದಿಲ್ಲ!"

"ಹೆಚ್ಚು ಬಾಡಿಗೆ ಕೊಟ್ಟರೆ ಸಿಕ್ಕೀತಲ್ಲ?"

"ದುಡ್ಡು ಬೇಕಲ್ಲ? ಇದಕ್ಕೇ ಇಪ್ಪತ್ತು ರೂಪಾಯಿ ಬಾಡಿಗೆ ಕೊಡತೇವೆ."

"ನಾ ಕಾಲೇಜಿನ ಹಾಸ್ಟೇಲಿನಲ್ಲೇ ಇರತೇನೆ." ಏನೋ ವಿಚಾರ ಸುತ್ತ ನುಡಿದ ಅಜಿತ.

"ಹಾಸ್ಟೇಲಿನಲ್ಲಿ ಇರೋದೇ ಆದರೆ ಮುಂಬಯಿಗೆ ಏಕೆ ಬಂದೆ? ಅತ್ತ ಧಾರವಾಡದ ಕಾಲೇಜ ಇರಲಿಲ್ಲವೇನು?" ಕೊಂಚ ಅಣಕದ ಸ್ವರದಲ್ಲಿ ಕೇಳಿದಳು.

"ಇಲ್ಲಿ ಅಭ್ಯಾಸ ಹೇಗೆ ಆಗೋದು?"

"ಎಲ್ಲ ಅವರೂ ಕಲಿತವರೇ ಇದ್ದಾರೆ. ಅವರಿಗೂ ಕಾಲೇಜ ಅಭ್ಯಾಸ ಹೇಗಿರತದ ಅನ್ನೋದು ಗೊತ್ತದ. ಈ ವರ್ಷ ಒಂದ ಹೋಗಲಿ. ಮುಂದಿನ ವರ್ಷ ಇಲ್ಲೇ ಒಂದ ಕೋಣೆ ತೆರವಾಗೋದದ. ಅದನ್ನ ಈಗs ಹೇಳಿಟ್ಟಿದ್ದಾರೆ ನಿನ್ನ ಅಭ್ಯಾಸಕ್ಕಾಗಿ. ಮೊದಲನೇ ವರ್ಷದೊಳಗ ಅಷ್ಟೇನ ಅಭ್ಯಾಸ ಇರುವದಿಲ್ಲ ಏನಿಲ್ಲ!"

ಅಜಿತ ಒಳಗೊಳಗೇ ಕೊರಗಿದ. ಅಕ್ಕನ ಈ ಅನಿರ್ವಚನೀಯ ಪ್ರೇಮ, ಬೀಗನ ಈ ಉದಾರ ಬುದ್ಧಿ ಇದನ್ನು ತಾನು ಕಕ್ಕನ ಸಂಕುಚಿತ ಮನದ ಅಳತೆಗೋಲಿನಿಂದಲೇ ಅಳೆಯಲಿಕ್ಕೆ ಹೋಗಿ ತಪ್ಪಿದೆನಲ್ಲ! ಎಂದು ಮುಂಬಯಿಯಲ್ಲಿ ಬಂದಾಗಿನಿಂದಲೂ ಸುಧೀರನಂಥ ಪತಿಯ ಸಹವಾಸದ ಫಲದಿಂದಲೂ ಇಂದಿರೆಯ ಮನಸ್ಸು ತಮ್ಮನನ್ನು— ಅಷ್ಟೇ ಏಕೆ ಅನ್ಯ ಬಡಮಕ್ಕಳನ್ನೂ ಮನೆಯಲ್ಲಿಟ್ಟುಕೊಂಡು ನೆರವು ನೀಡಿ

ಶಿಕ್ಷಣ ಕೊಡಿಸುವಷ್ಟು—ವಿಶಾಲವಾಗಿರಬೇಕೆಂಬುದು ಅಜಿತನ ಕಲ್ಪನೆಯಲ್ಲಿಯೂ ಇನ್ನೂ ಸುಳಿದಿರಲಿಲ್ಲ. ಏಕೆ? ಆ ಸಂಕುಚಿತ ಮನೋವೃತ್ತಿಯು—ಊರೇ ಜಗತ್ತೆಂದು ತಿಳಿದ ಮಂಡೂಕ ವಿಚಾರದ—ಹಳ್ಳಿಯ ಗೌಡರ ಮನೆಯಲ್ಲಿ ಹುಟ್ಟಿ ಇಲ್ಲಿಯ ವರೆಗೆ ಬೆಳೆದುದರಿಂದ.

ಅಜಿತನ ಕಣ್ಣುಗಳು ನಿದ್ರೆಯಿಂದ ಜಡವಾಗತೊಡಗಿದುವು. ಮುಂಚಿನ ಇರುಳೆಲ್ಲ ಅವನಿಗೆ ನಿದ್ರೆಯಿರಲಿಲ್ಲ. ಆಕಳಿಸತೊಡಗಿದ. ಅದನ್ನು ಕಂಡು ಇಂದಿರೆಯು—

"ಗಾದಿ ಹಾಸಿ ಕೊಡತೇನ ಮಲಕೋ." ಗಾದಿಯನ್ನು ಬಿಚ್ಚುತ್ತ ನುಡಿದಳು.

"ನೀ ಏನ ಮಾಡುವಿ?" ಅಜಿತ ಮಲಗುತ್ತ ಕೇಳಿದ.

"ನನಗೆ ಹಗಲು ಮಲಗಲಿಕ್ಕೆ ಅವಕಾಶವೇ ಇರುವದಿಲ್ಲ."

ಅಜಿತ ಕಣ್ಣು ಮುಚ್ಚಿದುದನ್ನು ಕಂಡು ಇಂದಿರೆ ಮಾತು ನಿಲ್ಲಿಸಿ ಹೊರಗೆ ಹೋದಳು. ಜಾಗರಣೆ ಶ್ರಮಗಳಿಂದ ನಿದ್ದೆ ಬೇಗ ಬರುವುದು. ಆದರೂ ಹೊಸ ಸ್ಥಳವಾದುದರಿಂದ ಅರ್ಧ ನಿದ್ರೆಯಲ್ಲಿಯೇ ಇದ್ದ ಅಜಿತ. ಅರ್ಧನಿದ್ರೆಯಲ್ಲಿದ್ದಾಗ ಕನಸು ಕಾಣುವದು ಹೆಚ್ಚು. ಅಜಿತ ಸ್ವಪ್ನಸೃಷ್ಟಿಯಲ್ಲಿ ಏನನ್ನು ಕಾಣುತ್ತಿದ್ದನು?

ಶಕುನಿಯೋ ಕೃಷ್ಣನೋ?

ಕುತ್ಸಿತ ನಗೆಯಿದೆ ಮುಖದಲ್ಲಿ. ಕೃಷ್ಣನಂತೂ ಅಲ್ಲ.

ಎಚ್ಚರಾಗುವದೆಂದರೆ ತಮ್ಮದನ್ನು ತಾವು ಬೇಡುವುದೆಂದರೆ, ಹೊಡೆದಾಟ, ವನವಾಸ ತಪ್ಪಿದ್ದಲ್ಲ. ಶಕುನಿ-ತಂತ್ರದ ಮೇಲೆ ನಡೆಯುವ ಸಾಮ್ರಾಜ್ಯದ ನ್ಯಾಯ! ಕೃಷ್ಣನಂತೂ ಎಲ್ಲಿಯೋ ಹೋಗಿದ್ದಾನೆ. ಇಷ್ಟರಲ್ಲಿಯೇ ಅಜಿತನ ಎದೆಯ ಮೇಲೆ ಏನೋ ಭಾರ ಬಿದ್ದಂತೆ ಭಾಸವಾಯಿತು.

ಅಜಿತನ ಕುತ್ತಿಗೆಯನ್ನು ಒತ್ತುತ್ತ ಶಕುನಿ ಕೇಳಿದ.

"ಅನ್ಯಾಯ ಮಾಡುವಿಯೋ ಇಲ್ಲೋ? ಏನು ಕುತ್ತಿಗೆ ಒತ್ತಲಿ?"

"ನ್ಯಾಯದಿಂದ ಹೋಗುವುದೇ ನನ್ನ ಮಾರ್ಗ" ಅಜಿತನಂದ.

"ಇದೋ ಈ ಮಾರ್ಗದಲ್ಲಿಯೇ ನಿನ್ನ ಬಾಳ್ವೆಯು ಇಂದೇ

ಮುಗಿಯಿತೆಂದು ತಿಳಿ!" ಹೀಗೆನ್ನುತ್ತ ಅಜಿತನ ಕುತ್ತಿಗೆಯನ್ನು ಸ್ವಲ್ಪ ಜೋರಾಗಿ ಒತ್ತಿದುವು ಶಕುನಿಯ ಕರಗಳು. ಅಜಿತನ ಹೃದಯ ತಣ್ಣಗಾಗ ತೊಡಗಿತು. ಉಸಿರು ಕಟ್ಟಿದಂತಾಯಿತು. ಗಾಬರಿಯಾದ. ಸಾವಿನ ಕಲ್ಪನೆ ಬಂದಿತವನಿಗೆ. ಸಾವು ಮತ್ತು ಅನ್ಯಾಯ ಇವುಗಳಲ್ಲಿ ಒಂದನ್ನು ಸ್ವೀಕರಿಸ ಬೇಕಾಗಿತ್ತೀಗ!

ಮುಂಚೆ ಬದುಕಬೇಕು. ಬದುಕಿದ ನಂತರ ಮುಂದಿನ ವಿಚಾರ. ಬದುಕಲೇಬೇಕು. ಬದುಕುವದೆಂದ ಮೇಲೆ ಸುಖದಿಂದ ಬಾಳಲಿಕ್ಕೆ ಬೇಕು! ಅದಕ್ಕಾಗಿ ಅನ್ಯಾಯ ಮಾಡಲೂ ಬೇಕು!

"ನನಗೆ ಬಾಳಬೇಕಾಗಿದೆ. ಅಯ್ಯೋ!" ಅತ್ಯಂತ ಪ್ರಯಾಸದಿಂದ ಅಜಿತನ ಬಾಯಿಂದ ಮಾತು ಹೊರಬಂದಿತು.

"ಹಾಗಿದ್ದರೆ ಅನ್ಯಾಯದಿಂದ ನಡೆ. ಲೋಕದಲ್ಲಿ ಎಲ್ಲೆಲ್ಲೂ ನನ್ನ ಆಳಿಕೆ; ಅರ್ಥಾತ್ ಅನ್ಯಾಯದ ಸಾಮ್ರಾಜ್ಯವಿದೆ!"

"ನೀ ಹೇಳಿದಂತೆ ನಡೆಯುವೆ!"

"ನಿನಗೆ ಗೊತ್ತಿದೆಯೋ? ನಾನು ಕೌರವರ ಪಕ್ಷಕ್ಕೆ ಇದ್ದೆ." ಅಜಿತನ ಕುತ್ತಿಗೆಯನ್ನು ಸಡಿಲುಬಿಡುತ್ತ ಕೇಳಿದ. "ನನ್ನ ತಂತ್ರದಿಂದ ಬಂಧುಗಳಾದರೂ ಕೌರವರು ಪಾಂಡವರು ಹೊಡೆದಾಡಿದರು! ಎಲ್ಲಿ ಯಾದರೂ ಓದಿರುವೆಯಾ?"

"ಓದಿರುವೆ."

"ಆ ನನ್ನ ತಂತ್ರ— ನೀತಿ— ಇನ್ನೂ ನಡೆಯುತ್ತಿದೆ. ನೆನಪಿ ನಲ್ಲಿಡು."

"ಅಹುದು; ನನಗೂ ಅನಿಸುತ್ತಿದೆ. ಆ ನೀತಿ ಈಗೀಗ ಹೆಚ್ಚಾಗು ತ್ತಲಿದೆ. ಇಂದಿನ ತಂದೆಮಕ್ಕಳಲ್ಲಿಯೂ ಇದೆ." ಅಜಿತನಂದ.

ಶಕುನಿಗೆ ಸ್ವಲ್ಪ ಸಂತೋಷವಾಯಿತು. ಆಢ್ಯತೆಯಿಂದ ಹೇಳಿದ.

"ಇಷ್ಟೇ ಅಲ್ಲ. ಈಗ 'ವಂದೇ ಮಾತರಂ'ದಂತಹ ಗೀತೆಯ ಲ್ಲಿಯೂ ಮೂರ್ತಿ ಪೂಜೆಯ ವಾಸನೆ ಬರುವಂತೆ ಮುಸಲ್ಮಾನರ ಮನ ವನ್ನು ಸಿದ್ಧಗೊಳಿಸಿದ್ದೇನೆ. ದಿಲ್ಲಿ, ಕಲಕತ್ತೆ, ಅಲಹಾಬಾದ, ಅಹಮದಾ ಬಾದಗಳಲ್ಲಿ ನನ್ನ ಕೈಚಳಕವನ್ನು ಕಂಡಿಲ್ಲವೋ ನೀನು?"

"ಪಾರತಂತ್ರ್ಯದ ಕಡಿವಾಣ ಬಾಯಿಗೆ ಬಿದ್ದರೂ ಕೂಡ ಆ ಬಾಯಿಯನ್ನೇ ಎತ್ತಿ ಹಿಂದಿನ ಎಲ್ಲಿಯದೋ ಸೇಡು ತಕ್ಕೊಳ್ಳಲು ಹಿಂದು ಮುಸಲ್ಮಾನರು ಒಬ್ಬರೊಬ್ಬರು ಕಚ್ಚಲು ಏರಿ ಬರುವರಲ್ಲವೆ? ಈ ಮುಸಲ್ಮಾನರಾದರೂ ಯಾರು? ಮೂಲದಲ್ಲಿ ಹಿಂದುವೇ ಅಲ್ಲವೆ?"

"ಅದನ್ನು ನನಗೆ ನೀನು ಕಲಿಸುವಿಯಾ? ಅದು ನನಗೆ ಗೊತ್ತೇ ಇದೆ. ಆದರೂ ನಾನು ಹಿಂದೂ ಮುಸ್ಲೀಂ ಬಣಗಳನ್ನು ಹೂಡಿ, ಹೊಡೆದಾಟಕ್ಕೆ ಬೆನ್ನು ಚಪ್ಪರಿಸುವೆ. ದೂರದಲ್ಲಿ ಹಿಂದೆ ನಿಂತು ನೋಡುತ್ತ. 'ಭಾರತೀಯರ ಉದಾತ್ತ ಜೀವನ ಧರ್ಮಗಳ ಕಡೆಗೆ ನೋಡಿಯಾದರೂ ಹೊಡೆದಾಟ ನಿಲ್ಲಿಸಿರಿ' ಎಂದು ಹೇಳುವೆ, ಬೋಧಿಸುವೆ."

ಒಂದು ತರದ ಕೀಳು ನಗೆ ಬೀರಿ, ಶಕುನಿ ಕುತ್ತಿಗೆಯನ್ನು ಬಿಟ್ಟು, ಎದೆಯ ಮೇಲಿಂದ ಎದ್ದ. ಅಜಿತ ಒಮ್ಮೆಲೆ ಎದ್ದು ಕುಳಿತ. ಅವನ ಮುಖದ ಮೇಲೆ ಅಸಹಾಯತೆ ಆವರಿಸಿತ್ತು.

"ಏಕೆ ಅಜಿತ ನಿದ್ದೆ ಪೂರ್ಣ ಆಗಲಿಲ್ಲವೇನೋ?" ಎಲ್ಲಿಂದಲೋ ಬೇರೆ ಸೃಷ್ಟಿಯೊಳಗಿಂದ ಅಕ್ಕನ ಮಾತು ಕೇಳಬಂದಿತು.

ಮನುಷ್ಯನು ಎಷ್ಟು ಲೋಕದಲ್ಲಿರುವ? ಅಂತರ್ಮನವು ಸ್ವಲ್ಪ ಅವಕಾಶ ಸಿಕ್ಕಿದೊಡನೆಯೇ ತನ್ನ ಪುರಾಣವನ್ನು ಬಿಚ್ಚದೆ ಇರುವುದಿಲ್ಲ. ಎಷ್ಟೋ ಸಾಧನೆ ಮಾಡಿದರೂ ಕಲ್ಪನೆ ಹಾಗೂ ಮನೋವ್ಯಾಪಾರಗಳನ್ನು ನಿಲ್ಲಿಸಲಾಗುವದಿಲ್ಲ. ಅಜಿತ ಪೌರಾಣಿಕ ಯುಗದಲ್ಲಿ ಜನ್ಮಿಸಿದ್ದರೆ ಪಾಂಡವ ಕೌರವರ ಯುದ್ಧವನ್ನು ಪ್ರತ್ಯಕ್ಷ ಕಾಣಬಹುದಿತ್ತು. ಆದರೆ ಶಕುನಿಯ ತಂತ್ರವನ್ನು ಕಾಣುತ್ತಿದ್ದನೇ?

ಕಪ್ಪುಬಸಿಗಳ ಅಸ್ಪಷ್ಟ ಸಪ್ಪಳ ಅವನ ಕರ್ಣರಂಧ್ರವನ್ನು ಸೇರಿತು. ಅವರಕ್ಕ ಕೋಣೆಯಲ್ಲಿ ಸ್ಟೋವ್ಹ ಹೊತ್ತಿಸಿ ಚಹ ತಯಾರಿಸುತ್ತಿದ್ದಳು. ಇನ್ನೂ ಅಜಿತ ಕಲ್ಪನಾಸೃಷ್ಟಿಯಲ್ಲಿಯೇ ಇದ್ದ. ಕಣ್ಣು ಒರಿಸಿಕೊಳ್ಳುತ್ತ ಕುಳಿತಿದ್ದ.

"ಇನ್ನೂ ನಿದ್ರೆಯಲ್ಲಿರುವಿಯೇನು?" ಇಂದಿರೆ ಕೇಳಿದಳು.

ಇದರಿಂದ ಅಜಿತ ಸತ್ಯಸೃಷ್ಟಿಯಲ್ಲಿ ಅವತರಿಸಿದ.

ಜಾಗ್ರತಾವಸ್ಥೆ, ಸ್ವಪ್ನಾವಸ್ಥೆ, ಸುಷುಪ್ತಾವಸ್ಥೆಗಳು ಅಜಿತನಿಗೆ

ಹಾಸ್ಯಾಸ್ಪದವೆನಿಸುತ್ತಿದ್ದುವು. ಇವು ಕೇವಲ ಮಾನಸಿಕ ಪೃಥಕ್ಕರಣವೆಂದೇ ಆತ ನಂಬುತ್ತಿದ್ದ. ಯೋಗ ಮೊದಲಾದವುಗಳನ್ನು ಅವನು ಒಪ್ಪುತ್ತಿರಲಿಲ್ಲ ಆದರೂ ಅವನಿಗೆ ಈಗ ಜಾಗ್ರತಾವಸ್ಥೆ ಸ್ವಪ್ನಾವಸ್ಥೆಗಳಿರುವವೆಂದು ಮನದಟ್ಟಾಯಿತು

"ಇಲ್ಲ; ಏನೋ ಒಂದು ಸ್ವಪ್ನ ಬಿತ್ತು" ಅಜಿತ ಎಂದ.

"ನನಗಂತೂ ಕನಸು ಬಹಳ ಬೀಳುತ್ತಿರುತ್ತವೆ. ಮೊದಮೊದಲು ಅವ್ವ, ನೀ ಬಹಳಷ್ಟು ಕನಸಿನಲ್ಲಿ ಕಾಣುತ್ತಿದ್ದಿರಿ. ಈಗ ಅಂಥವುಗಳೇನೂ ಇಲ್ಲ. ಬಡಹುಡುಗರು, ಅವರಿಗೆ ಬರೆದುಕೊಡುವುದು, ಕಲಿಸುವುದು." ಇಂದಿರೆಗೆ ಆ ಕನಸಿನ ನೆನಹುಗಳು ಬಹಳ ಸಂತೋಷವನ್ನುಂಟುಮಾಡುತ್ತಿದ್ದುವು

"ನಿಜವೇ? ನಿನಗೆ ಇಂಥ ಕನಸುಗಳು ಬೀಳುವವೇ?"

"ಹೌದು; ಕನಸಿನಲ್ಲಿ ಹುಡುಗರಿಗೆ ಕಲಿಸದಿದ್ದರೆ ನನಗೆ ಸಮಾಧಾನವೇ ಇಲ್ಲ."

"ಹೀಗೋ? ನಾಳೆ ಎರಡು ಹುಡುಗರು ಆದವೆಂದರೆ ಈ ಕನಸೆಲ್ಲ ಎಲ್ಲಿಯೋ ಹೋಗುವವು" ಎಂದು ನಗೆಯಾಡಿದ ಅಜಿತ.

ಸ್ವಲ್ಪ ಸಂಕೋಚ ಬೆರೆತ ಸ್ವರದಲ್ಲಿ, "ಹಾಗೇನಿಲ್ಲ; ಹಗಲು ಕಲಿಸಿದ್ದನ್ನೇ ರಾತ್ರಿ ಕನಸಿನಲ್ಲಿ ಕಾಣುವೆನಾಯ್ತು!" ಎಂದಳು ಇಂದಿರೆ.

"ಹಗಲು ಯಾರಿಗೆ ಕಲಸ್ತಿದಿ ನೀ?" ಆಶ್ಚರ್ಯದಿಂದ ಅಜಿತ ಕೇಳಿದ.

"ಕೂಲಿಕಾರ ಮಕ್ಕಳ ಶಾಲೆಯೊಂದರಲ್ಲಿ ಕಲಿಸಲಿಕ್ಕೆ ಹೋಗುವೆ."

ಸ್ವಲ್ಪ ತಡೆದು, ಏನೋ ವಿಚಾರಿಸುತ್ತ ಅಜಿತ ಕೇಳಿದ. "ಈಗ ಎಷ್ಟು ಹೊತ್ತಾಯಿತು?"

"ನಾಲ್ಕು ಹೊಡೆದು ಹೋಯಿತು. ನೀ ಏಳುವ ದಾರೀ ನೋಡುತ್ತ ಕುಳಿತೆ, ಹೊತ್ತಾಯಿತು. ನೀ ಏಳಬಹುದೆಂದು ಸ್ವಲ್ಪ ಸದ್ದನ್ನೂ ಕೂಡ ಮಾಡಿದೆ."

"ಎಂದಿನಿಂದ ಮಾಸ್ತರತಿ ಆಗಿರುವೆ! ಇದೊಳ್ಳೆ ಆಯ್ತಲ್ಲ!"

ಏನು ಕಲಿಸುವಿ ನೀ? ನಿನ್ನಿಂದ ಕಲಿತ ಹುಡುಗರು ನಿನ್ನಷ್ಟೇ ಜಾಣ ರಾದಾರಲ್ಲ!" ಎಂದು ಅಕ್ಕನ ಕೆಲಸವನ್ನು ಕುರಿತು ಹಾಸ್ಯಗೈದ.

ಆದರೂ ಇಂದಿರೆಯು ಸಹಜಸ್ವರದಲ್ಲಿಯೇ "ಓದು-ಬರೆಯಲಿಕ್ಕೆ" ಎಂದು ಹೇಳಿದಳು.

"ಆ! ಇಲ್ಲಿಯ ಹುಡುಗರು ಕನ್ನಡ ಕಲಿಯುವರೇ?" ಬೆರಗು ಬೆರತಿತ್ತು, ಅವನ ಸ್ವರದಲ್ಲಿ.

"ಹೊ! ಅವರ ಮನೆ-ಮಾತೆಲ್ಲ ಕನ್ನಡವೇ. ನಮ್ಮ ಭಾಗದ ಜನರೇ ಇದ್ದಾರಲ್ಲ, ಇಲ್ಲಿ ಕೆಲಸಕ್ಕೆ."

"ಇಲ್ಲಿ ಕನ್ನಡ ಕಲಿತು ಮಾಡುವರೇನು? ಇಂಥ ಮಹಾನಗರದಲ್ಲಿ ಕನ್ನಡವನ್ನು ಯಾರ ಕೇಳತಾರೆ?"

"ತಪ್ಪ ತಿಳವಳಿಕೆ ಅದೆ ನಿನಗೆ. ತಾಯ್ನುಡಿಯೊಂದನ್ನ ಮೊದಲ ಕಲಿತರೆ ಸಾಕು. ಉಳಿದುದೆಲ್ಲ ತಾನೇ ಬರುವದು. ಮಾತೃಭಾಷೆಯ ಜ್ಞಾನವಿಲ್ಲದವರು ಬದುಕಿ ಉಳಿದಾರೆಯೇ? ನುಡಿಯಿಲ್ಲದ ನಾಡು ಕೊರಡು. ನುಡಿಯೇ ನಾಡಿನ ನಾಡಿ."

ಅಜಿತ ತನ್ನಲ್ಲಿಯೇ ವಿಚಾರಿಸಹತ್ತಿದ. ಅಕ್ಕ ಇದನ್ನೇನು ತಲೆ ಯಲ್ಲಿ ತುಂಬಿಕೊಂಡಿದ್ದಾಳೆ? ಕನ್ನಡ ಕರ್ನಾಟಕ ಎಂದು ಇನ್ನೂ ನಾವು ಎಷ್ಟು ದಿನ ಹೀಗೆಯೇ ಸಂಕುಚಿತ ದೃಷ್ಟಿಯಿಂದ ವಿಚಾರಿಸುತ್ತ ಕೂಡು ವುದು? ಭಾರತದ ಸ್ವಾತಂತ್ರ್ಯ ಮಾನವಜಾತಿಯ ಕಲ್ಯಾಣವನ್ನು ಬಿಟ್ಟು ಕನ್ನಡ ನುಡಿ, ಕನ್ನಡ ಪ್ರಾಂತ ಎಂದು ಹೇಳುತ್ತ ಕುಳಿತರೆ ತಾನೇ ಏನು ಒಂತು?

ಚಹ ಸೋಸಿ ಕೊಡುತ್ತ ಇಂದಿರೆ ಏನೋ ತನ್ನಲ್ಲಿಯೇ ಗುಣ ಗುಣಿಸುತ್ತಿದ್ದಳು:

ಬಂಧನ ಮೀರಿದ ನಂದನ ವನದಿ
ಚಂದ ಕನ್ನಡ ನಾಡ ಸುಮವರಳಿ
ಹಿಂದಮಾತೆಯ ಕೊರಳ ಹಾರ ಪದಕವೆನೆ ಮೆರೆಯಲಿ.

ಅಕ್ಕನ ಈ ಹಾಡಿನ ಭಾವ ರೀತಿ ಎಲ್ಲವೂ ಅಜಿತನನ್ನು ದಂಗು ಗೊಳಿಸಿದುವು. ನಾಲ್ಕಾರು ವರ್ಷಗಳ ಹಿಂದೆ ಕನ್ನಡ ಆರನೆಯ ಇಯತ್ತೆ

ಯನ್ನು ಕಲಿತು, ಸುಧೀರನೊಡನೆ ಮದುವೆಯಾದ ಮೇಲೆ ತನ್ನ ಅಕ್ಕ ಇಷ್ಟರಲ್ಲಿ ಇಷ್ಟು ವಿಶಾಲ ಮನಸ್ಸಿನವಳೂ ಇಂಥ ಧ್ಯೇಯವಾದಿಯೂ ಆಗಿರುವಳೆಂಬುದು ಅವನು ಕನಸಿನಲ್ಲಿಯೂ ಭಾವಿಸಿರಲಿಲ್ಲ. ಇಷ್ಟು ಅಲ್ಪ ಕಾಲದಲ್ಲಿ ಎಷ್ಟು ದೊಡ್ಡ ಕ್ರಾಂತಿಯಾಗಿದೆ ಅಕ್ಕನಲ್ಲಿ !

"ಇಷ್ಟು ಮೆಲ್ಲಮೆಲ್ಲನೆ ಏಕೆ? ಸ್ವಲ್ಪ ಜೋರಿನಿಂದಾವರೂ ಹಾಡಲ್ಲ!" ಅಜಿತ ವಿಚಾರವನ್ನುಳಿದು ಕೇಳಿದ.

ಆಗ ಇಂದಿರೆ ಹಾಡುವದನ್ನು ಒಮ್ಮೆಲೆ ನಿಲ್ಲಿಸಿ, ಸ್ವಲ್ಪ ಸಂಕೋಚ ದಿಂದ ಅಂದಳು

" ನನಗೆಲ್ಲಿ ಹಾಡಲಿಕ್ಕೆ ಬರುವದು ? "

ನಿಜವಾಗಿಯೂ ಇಂದಿರೆಯ ಕಂಠವು ಕೋಮಲವಾಗಿದ್ದಿತು ಅವಳು ಶಾಸ್ತ್ರೋಕ್ತ ಹಾಡಲು ಕಲಿಯದಿದ್ದರೂ ಕೂಡ ಯಾವ ಪದ ವನ್ನು ಕೊಟ್ಟರೂ ಇಂಪಾಗಿ ಹಾಡಿ ತೋರಿಸುತ್ತಿದ್ದಳು. ಚಿಕ್ಕಂದಿನಲ್ಲಿ ಸಾಲೆಯ ಕವಿತೆಗಳನ್ನು ಕೂಡ ಸುಂದರವಾಗಿಯೇ ಅನ್ನುತ್ತಿದ್ದಳು. ಒಳ್ಳೆಯ ಹಾಡುಗಳನ್ನು ಕಲಿಸಿದರೆ ಹಾಡಿಯೇ ಕ್ರಾಂತಿ ಮಾಡುವ ಹೆಣ್ಣುಮಗಳವಳು. ಆದರೆ ಕ್ರಾಂತಿಗೀತಗಳನ್ನು ರಚಿಸಲಿಕ್ಕೆ ಯಾವ ಕವಿಗಳಿಗೆ ಧೈರ್ಯವಿದೆ ?

" ಎಷ್ಟು ಇಂಪಾಗಿ ಹಾಡುವಿಯಲ್ಲ! ನಡುವೆ ಊರಿಗೆ ಬಂದಾಗ ನನಗೆ ಇದರ ಸುಳಿವೂ ಗೊತ್ತಾಗಲಿಲ್ಲವಲ್ಲ ? "

" ಹೇಗೆ ಗೊತ್ತಾಗಬೇಕು ? ಕಾಕಾ ಮನೆಯೊಳಗೆ ಸ್ವರ ತೆಗೆಯು ಗೊಟ್ಟರಲ್ಲವೆ ನಾನು ಹಾಡುವುದು, ನೀನು ಕೇಳುವುದು ? "

" ಹಾಡಿದರೇನು ಮಾಡುವನು ? " ಅಜಿತ ಆಶ್ಚರ್ಯದಿಂದ ಕೇಳಿದ.

" ನಿನಗೆ ಗೊತ್ತಿಲ್ಲ; ಹಾಡುವದು ವೇಶ್ಯೆಯರ ಕಸಬಂತೆ. "

" ಯಾರನ್ನುವರು ? "

" ಕಾಕಾ ! "

" ನನಗೆ ಹೇಳಿದ್ದರೆ ನಾ ಕೇಳತಿದ್ದೆನಲ್ಲ, ಕಾಕಾನಿಗೆ ? "

" ಎಲ್ಲ ಆಗಿದೆ ಬಿಡು ! ಅಲ್ಲಿ ಬಂದಾಗ ನಾಲ್ಕು ದಿನ ಅವರಂತೆ

ಇರುವುದು, ಸುಮ್ಮನೇ ಹಾಗೆ ಹೀಗೆ ಎಂದು ಎಂದು ಅವರ ಮನಸ್ಸನ್ನೇಕೆ ನೋಯಿಸಬೇಕು ನಾವು? ಇಲ್ಲಿ ಬಂದ ಮೇಲೆ ನಮಗೆ ಬೇಕಾದಂತೆ ಇರಲಿಕ್ಕೆ ಬರುತ್ತದಲ್ಲ !"

ಇಷ್ಟರಲ್ಲಿ ಸುಧೀರ ಮನೆಗೆ ಬಂದ. ಏನೋ ನಡುವೆ ಆಫೀಸಿನಲ್ಲಿ ಸಮಯವಿತ್ತೆಂದು ನಡುವೆ ಬಂದಿದ್ದ. ಅದಕ್ಕೆ ಅಜಿತ ಬಂದುದೂ ಕಾರಣವಾಗಿತ್ತು. ಇನ್ನೂ ಹೆಂಡತಿ ಮನೆಯಲ್ಲಿರುವುದನ್ನು ಕಂಡು, ಸ್ವಲ್ಪ ಬೆರಗಿನಿಂದಲೇ ಕೇಳಿದ.

"ನೀ ಇನ್ನೂ ಸಾಲೆಗೆ ಹೋಗಲಿಲ್ಲ ?"

"ಈಗ ಹೋಗುವೆ."

ಎಂದು ಅವಸರದಿಂದ ಗಂಡನಿಗೆ ಒಂದು ಕಪ್ಪು ಚಹ ಮಾಡಿ ಕೊಟ್ಟಳು. ಸುಧೀರ ಕುಡಿಯುತ್ತ, "ಏನು ಮಾತು ನಡೆದಿತ್ತು? ದಿನಾಲು ಸ್ವಲ್ಪ ಇಂಗ್ಲೀಷ ಹೇಳಿಕೊಡತ ಬಾ ಆಕಿಗೆ. ನನಗೆ ಕೆಲಸದಲ್ಲಿ ಸಮಯವೇ ಸಿಕ್ಕುವುದಿಲ್ಲ ಕಲಿಸಬೇಕೆಂದರೆ?"

"ಇನ್ನು ಇಂಗ್ಲೀಷ ಕಲಿತು ಏನು ಮಾಡುವಳು?" ಕೆಣಕುವ ಸ್ವರದಲ್ಲಿ ನಡುವೆಯೇ ಅಜಿತ ಕೇಳಿದ.

"ಅಂದರೆ ?"

"ಅವನು ತಾನಷ್ಟೇ ಕಲಿಯಬೇಕೆಂದು ತಿಳದಿದ್ದಾನೆ ಬಿಡರೀ. ನಮಗೇಕೆ ಕಲಿಸಲಿಕ್ಕೆ ಹೋದಾನಾತ?" ಎಂದಳು ತುಂಟನಗೆ ನಗುತ್ತ ಇಂದಿರೆ.

"ಇಲ್ಲ, ಅಕ್ಕ ನಾ ಕಲಿಸುವೆ."

"ನಾನೇ ಕಲಿಸತಿದ್ದೆ. ಆದರೆ ರಾತ್ರಿ 'ಲಾಯಿಟ್' ಪತ್ರಿಕೆಯ ಆಫೀಸಿನಲ್ಲಿ ನನಗೆ ಟಪಾಲನ ಕೆಲಸ ಒಂದನ್ನು ಕೊಟ್ಟಿದ್ದಾರೆ ನಮ್ಮ ಸಮಿತಿಯವರು."

ಅಕ್ಕನಿಗೆ ಕಲಿಸಬೇಕೋ ಬಿಡಬೇಕೋ ಅನ್ನುವ ವಿಚಾರಕ್ಕಿಂತ ಅಜಿತನಿಗೆ ಇವರಿಬ್ಬರ ಕಾರ್ಯಕ್ರಮಗಳನ್ನರಿತು ಆಶ್ಚರ್ಯವೇ ಹೆಚ್ಚಾಗಿದ್ದಿತು. ಅವನೂ ಹಾಯ್‌ಸ್ಕೂಲಿನಲ್ಲಿ ಓದಿ ಮ್ಯಾಟ್ರಿಕ್‌ನಾಗಿದ್ದನಾದರೂ ಅದು ಹಳ್ಳಿಯ ಹಾಯ್‌ಸ್ಕೂಲು, ಹಳ್ಳಿಯ ವಾತಾವರಣ, ಪುಸ್ತಕೀಯ

ಜ್ಞಾನವಿದ್ದಷ್ಟು ವಿಶಾಲ ಜಗತ್ತಿನ ಅನುಭವ ಅವನಿಗೆ ಇದ್ದಿರಲಿಲ್ಲ. ನಿಲ್ದಾಣದಿಂದ ಮನೆಗೆ ಬರುವಷ್ಟರಲ್ಲಿಯೇ ಸುಧೀರ ಆತ್ಮೀಯ ಗೆಳೆಯನಂತೆ ನಡೆದುಕೊಂಡಿದ್ದ, ಅಜಿತನೊಡನೆ. ಈ ಅಪರಿಚಿತ ಪರಿಸ್ಥಿತಿಯಲ್ಲಿ ಎಲ್ಲವೂ ತಪ್ಪಿದಂತೆ ಅನಿಸುತ್ತಿದ್ದಿತವನಿಗೆ. ಏನೂ ಮಾತಾಡಲರಿಯದೆ ಸುಮ್ಮನೆ ಕುಳಿತುಬಿಟ್ಟ.

"ಮಕ್ಕಳು ಹಾದೀ ನೋಡುತ್ತಿರಬೇಕು. ನಾ ಹೊರಡುವೆ. ಅಜಿತನನ್ನು ನಿಮ್ಮ ಸಂಗಡ ಕರೆದೊಯ್ಯಿರಿ. ಇಲ್ಲವಾದರೆ ಓದಲಿಕ್ಕೆ ಏನಾದರೂ ಕೊಟ್ಟು ಹೋಗಿರಿ. ಅವನ ಇಚ್ಛೆ ಇದ್ದಂತೆ." ಎಂದು ನಸುನಗುತ್ತ ಹೇಳಿ ಇಂದಿರೆ ಹೊರಟುಹೋದಳು

"ನನ್ನ ಕೂಡ ಬರತಾನಲ್ಲ!" ಎಂದು ಅಜಿತನ ಒಪ್ಪಿಗೆಯನ್ನು ನಿರೀಕ್ಷಿಸುವ ದೃಷ್ಟಿಯಿಂದ ಅಜಿತನ ಮುಖವನ್ನು ನೋಡುತ್ತ ಸುಧೀರ ಹೇಳಿದ.

ಅಜಿತನಿಗೆ ಒಮ್ಮೆ ಸುಧೀರನ ಸಂಗಡ ಅವನ ಆಫೀಸಿಗೆ ಹೋಗಬೇಕೆನಿಸಿತು. ಮತ್ತೊಮ್ಮೆ ಈ ಗೊಂದಲದಲ್ಲಿಂದ ಪಾರಾಗಿ ಮೊದಲು ಸ್ವಲ್ಪ ಕಾಲ ತಣ್ಣಗೆ ಎಲ್ಲಿಯಾದರೂ ಕಳೆಯಬೇಕೆನಿಸಿತು. ಮನದಲ್ಲಿ ಊರು ನೋಡುವ ತವಕ ಇತ್ತಾದರೂ ಇಂದೇಕೋ ಅವನಿಗೆ ಮನದಲ್ಲಿ ಹೇಗೊ ಹೇಗೋ ಅನ್ನಿಸುತ್ತಿದ್ದಿತು ಅವನ ಮನದ ಏರಿಳಿತಗಳೆಲ್ಲ ಮುಖದ ಮೇಲೆ ಮೂಡುತ್ತಿದ್ದುವು. ಆದರಿಂದ ಅವನ ಮನೋಭಾವವನ್ನರಿತುಕೊಂಡು,—

"ಹೊಸದಾಗಿ ಮುಂಬಯಿಗೆ ಬಂದಾಗ ನಾಲ್ಕು ದಿನ ಹೀಗೇ ಆಗ್ತದ. ನಾನೂ ಹೊಸದಾಗಿ ಬಂದಾಗ ಮೂರು ನಾಲ್ಕು ದಿನ ಎಲ್ಲಿಯಾದರೂ ಜನ ಇಲ್ಲದಲ್ಲಿ ಹೋಗಿ ಶಾಂತವಾಗಿ ಮಲಗಿಕೊಂಡು ಬಿಡಬೇಕು ಎನ್ನಿಸುತ್ತಿದ್ದಿತು ನೀ ಓದುತ್ತ ಕೂಡು ಬೇಕಾದರೆ ಮನೆಯಲ್ಲಿ. ನಾನೊಬ್ಬನೇ ಹೋಗುವೆ." ಎಂದು ಸುಧೀರ ಹೇಳಿ, ತನ್ನ ಓದುವ ಕೋಣೆಯ ಬಾಗಿಲು ತೆರೆದು ಕೊಟ್ಟು ಹೋದ. ಅವರ ಕೆಲಸವೆಲ್ಲ ಗಡಿಯಾರದಂತೆ.

ಅಜಿತ ಕೋಣೆಯಲ್ಲಿ ಹೋದ. ಚಿಕ್ಕ ಕೋಣೆ. ಕಿಡಕಿಯು

ಎದುರಿಗೊಂದು ಸಣ್ಣ ಮೇಜು. ಅದರ ಹೊಂದಿಗೆಯೇ ಇಟ್ಟ ಸಣ್ಣ ಪುಸ್ತಕದ ಬೀರು. ಅದರಲ್ಲಿ ಮಾರ್ಕ್ಸನ 'Essay on Free Trade', 'Communist Manifesto', 'Critique of Political Economy. ಮೊದಲಾದ ಪುಸ್ತಕಗಳಿದ್ದುವು. ಮೇಜಿನ ಮೇಲೆ ರಶಿಯಾ, ಕಮ್ಯುನಿಝಂ, ಸೋಸ್ಯಾಲಿಝಂಗಳ ಮೇಲಿನ ಕೆಲವು ಪುಸ್ತಕಗಳು ಬಿದ್ದಿದ್ದುವು. ಹಾಗೇ ಸತ್ಯಾಗ್ರಹ, ಗಾಂಧೀವಾದಗಳ ಪುಸ್ತಕಗಳೂ ಇದ್ದುವು. ಅಜಿತ ಒಂದೊಂದರ ಪುಟವನ್ನೇ ತೆಗೆದು ತೆಗೆದು ನೋಡುತ್ತಿದ್ದ. "ಲಾಯಿಟ್" ಪತ್ರಿಕೆಯು ಕೆಲಸಗಾರರು ಅಭ್ಯಾಸಕ್ಕೆಂದು ಕೊಂಡ ವಿವಿಧ ಹೊತ್ತಿಗೆಗಳವು. ಮೇಜಿನ ಮೇಲೆ ಇನ್ನೂ ಮುಗಿಯದೆ ಇದ್ದ "Materialistic Conception of History." ಎಂಬ ಶಿರೋನಾಮೆಯುಳ್ಳ ಲೇಖನದ ಹಸ್ತಪ್ರತಿಯೊಂದಿತ್ತು. ಅದನ್ನು ಕೈಯಲ್ಲಿ ತಕ್ಕೊಂಡು ಸುಮ್ಮನೆ ಅದರ ಮೇಲೆ ದೃಷ್ಟಿಯಾಡಿಸತೊಡಗಿದ ಅಜಿತ.

೮

ಈಗ ಅಜಿತ ಕಾಲೇಜಿಗೆ ಹೋಗಿ ಬರಹತ್ತಿದ. ಕೆಲ ದಿನಗಳಲ್ಲಿ ಅಲ್ಲಿಯೂ ಗೆಳೆಯರ ಬಳಗ ಬೆಳೆಯಿತವನಿಗೆ. ದೊಡ್ಡ ನಗರ, ಅನೇಕ ತರದ ಜನ. ಹಲವರ ಸಹವಾಸಗಳಿಂದ ಅವನ ವೃತ್ತಿ ಬದಲಾಯಿತು. ಅರಳಲಿದ್ದ ಮನವು ವಿಕಾಸಹೊಂದಿ ವಿಶಾಲ ಹೊಂದತೊಡಗಿತು. ಅದರಲ್ಲೂ ಸುಧೀರನ ಸಹವಾಸ, ಆಗಾಗ ದೇಶದ ಮುಖಂಡರ ವ್ಯಾಖ್ಯಾನ, ಅಲೆಯಂಚೆಯ ಕಾರ್ಯಕ್ರಮ ಇವೆಲ್ಲವುಗಳೂ ಅವನ ಜ್ಞಾನಪಿಪಾಸೆಗೆ ಸಾಮುಗ್ರಿಯನ್ನೊದಗಿಸಿಕೊಡುತ್ತಿದ್ದುವು. ಜ್ಞಾನಾರ್ಜನೆಯ ಕ್ಷಣವನ್ನು ಅವನೆಂದೂ ವ್ಯರ್ಥ ಕಳೆಯುತ್ತಿರಲಿಲ್ಲ. ಅವಕಾಶದ ಯೋಗ್ಯ ಫಲ ಪಡೆಯಬೇಕೆಂದು ಎಂದೋ ನಿರ್ಧರಿಸಿಬಿಟ್ಟಿದ್ದ. ಅದರಂತೆ ಅವನಿಗೆ ಊರಿಂದ ಜಾಧವ ಮಾಸ್ತರರ ಕಾಗದವೂ ಬಂದಿತ್ತು. ಅರಿಗೂ ಅವನು ಆಗಾಗ ಕಾಗದ ಬರೆಯುತ್ತಲಿದ್ದ.

ಕಾಲೇಜಿನಲ್ಲಿ ಇದು ಅವನ ಮೊದಲನೆಯ ವರ್ಷ. ಅಭ್ಯಾಸ

ಅಷ್ಟೇನೂ ಇರುತಿರಲಿಲ್ಲ. ಅಭ್ಯಾಸ ಮಾಡಿ ಉಳಿದ ವೇಳೆಯಲ್ಲಿ ರಾಜಕಾರಣದ ಪುಸ್ತಕ ಓದುವುದು, ಸುಧೀರನೊಡನೆ ಚರ್ಚೆ ಮಾಡುವುದು, ಇದರಲ್ಲಿಯೇ ಬಹುಭಾಗ ಹೋಗುತ್ತಿದ್ದಿತು. ಸುಧೀರನೂ ತುಂಬ ಓದಿಕೊಂಡವ. ಅವನ ಕೂಡ ವಾದಕ್ಕೆ ನಿಂತಾಗ ಅಜಿತನಿಗೆ ಸೋಲು. ರಶಿಯನ್ ಕ್ರಾಂತಿ, ಕೂಲಿಕಾರರ ಸಮಸ್ಯೆಗಳ ಚರ್ಚೆ ನಡೆಯಿತೆಂದರೆ ಒಂದೊಂದು ದಿನ ನಡುರಾತ್ರಿ ಮೀರಿಹೋದರೂ ಇಬ್ಬರಿಗೂ ಎಚ್ಚರಿರುತ್ತಿರಲಿಲ್ಲ.

ಮನೆಯಿಂದ ಅಜಿತ ಲೋಕಲ್ ಟ್ರೇನಿನಿಂದ ಕಾಲೇಜಕ್ಕೆ ಹೋಗಬೇಕಾಗಿದ್ದಿತು. ಒಂದಿನ ರೇಲಿನಲ್ಲಿ ದಟ್ಟಣೆಯಿದ್ದಿತು. ಹಾಗೆಯೇ ಏರಿ ಬಾಗಿಲ ಹತ್ತಿರ ಸಲಾಕೆಯನ್ನು ಹಿಡಿದು ಜನರ ಹಿಂಡಿನಲ್ಲಿ ನಿಂತ. ಒಂದೆರಡು ನಿಲ್ಮನೆಗಳು ದಾಟಿದುವು. ಜನರ ಗೊಂದಲ ಬೆಳೆಯುತ್ತಲೇ ಇದ್ದಿತು. ಅದರಲ್ಲಿ ಒಬ್ಬ ಮನುಷ್ಯ ಮೈಸೊಕ್ಕಿನಿಂದ ಎಲ್ಲರನ್ನೂ ನುಗ್ಗಿ ಒಳಗೆ ಸೇರಿದ. ಹಾಗೆ ಬರುವಾಗ ಇನ್ನೊಬ್ಬ ಮುದುಕನ ಕಾಲು ತುಳಿದನೇನೋ!

“ಎಲಾ! ಕಾಲ್ ತುಳಿದೆಯಲ್ಲ! ಕಾಣುವದಿಲ್ಲವೆ?” ಎಂದು ಸಿಡುಕಿನಿಂದ ದಬ್ಬಿದ ಆ ಹೊಸಬನನ್ನು ಮುದುಕ.

“ಇಲ್ಲೇಕೆ ನಿಂತಿರುವಿ ಕಾಲು ತುಳಿಸಿಕೊಳ್ಳಲಿಕ್ಕೆ? ಒಳಗೆ ಹೋಗಿ ಮೂಲೆಯಲ್ಲಿ ಬೀಳಬೇಕಿತ್ತು.” ಎಂದು ಕಠೋರವಾಗಿ ನುಡಿದ.

ಅಜಿತ ಹೊರಳಿ ಅವನ ಕಡೆಗೆ ನೋಡಿದ. ವಿಕಾರವಾದ ಮುಖ. ಅದಿನ್ನೂ ಭೀಕರಗೊಳ್ಳುವಂತೆ ಸಣ್ಣಾಗಿ ಕತ್ತರಿಸಿದ ಕೋರೆ-ಮೀಸೆ ಕೆಂಗಣ್ಣುಗಳು ನಿರ್ಭೀತಿಯ ಪ್ರತೀಕಗಳಾಗಿದ್ದುವು. ಕಿವಿಯ ಕೆಳದುದಿಯ ಹತ್ತಿರ ಕೂದಲಿನ ಕಟಿಂಗವಿತ್ತು. ಎಲೆ ತಿಂದ ತುಟಿಗಳು ಅಸಹ್ಯವಾಗಿದ್ದುವು. ಮೈಯಲ್ಲಿ ಮಲಮಲಿಯ ಶರಟು ತೊಟ್ಟುಕೊಂಡು ಮೇಲ್ ಜಾಕೀಟೊಂದನ್ನು ಹಾಕಿದ್ದ. ಕಾಲಲ್ಲಿ ತುಂಬ ರಂಗಿನಿಂದ ಅಲಂಕೃತವಾದ ಚಡಾವು ಮೆಟ್ಟಿದ್ದ. ಆ ಚಡಾವಿನ ಕಾಲು ಮುದುಕನ ಪಾದಗಳ ಮೇಲೆ ರಭಸದಿಂದ ಬೀಳಲು ಪಾಪ ಕೆರಳದೆ ಏನು ಮಾಡಬೇಕು?

"ನನ್ನ ಕಾಲು ತುಳಿದು ನನಗೇ ಬಯ್ಯುವಿಯೋ?"

"ಸುಮ್ಮನಿರು, ಇಲ್ಲವಾದರೆ ಆ ಬೋರ್ಡಿನ ಮೇಲೆ ಏನು ಬರೆದಿದೆ ನೋಡು!" ಅಲ್ಲಿಯೇ ಎದುರಿಗಿನ ಹಲಿಗೆಯ ಮೇಲಿದ್ದ ರೇಲ ಕಂಪನಿಯ ನೋಟಿಸಿನ ಕಡೆಗೆ ತೋರಿದ. ಧ್ವನಿಯು ಅರ್ಥಪೂರ್ಣವಾಗಿದ್ದಿತು.

ಆ ಮುದುಕ ಅತ್ತ ನೋಡಿದನೋ ಇಲ್ಲವೋ ಏನೋ! ಅಜಿತ ಮಾತ್ರ ನೋಡಿದ. ಅಲ್ಲಿ ಬರೆದುದರ ಭಾವವಿಷ್ಟು. 'ಬಾಗಿಲಲ್ಲಿ ನಿಂತು ಗೊಂದಲದಲ್ಲಿ ಕೆಳಗೆ ಬಿದ್ದರೆ ರೇಲ್ವೆ ಕಂಪನಿ ಅದಕ್ಕೆ ಹೊಣೆಯಲ್ಲ!'

ಅದರ ಕೆಳಗೆ ಇನ್ನೊಂದು ಪಂಕ್ತಿಯಿತ್ತು.

'ತಮ್ಮ ತಮ್ಮ ಜೇಬುಗಳನ್ನು ತಾವು ಎಚ್ಚರದಿಂದ ಕಾಯ್ದುಕೊಳ್ಳಬೇಕು.' ದಿನಾಲು ಅಜಿತ ಆ ನೋಟೀಸನ್ನು ನೋಡುತ್ತಿದ್ದ. ಈ ಮೊದಲು ಹಲವು ಸಲ ಅದನ್ನು ಓದಿಯೂ ಇದ್ದ. ಆದರೆ ಈ ಹೊತ್ತು ಆ ಮವಾಲಿಯ ಮಾತಿನಿಂದ ಇನ್ನೊಮ್ಮೆ ಓದಿದ. ಎಂದಿನಿಂದಲೂ ನೋಡುತ್ತ ಬಂದ ನೋಟೀಸೇ. ಆದರೆ ಇಂದು ಅವನ ಮಾತಿನಿಂದ ಸೂಚಿತವಾಗುವ ಅರ್ಥವೇ ಬೇರೆ. ಇದನ್ನರಿತು ಸುಮ್ಮನಿರಲಾಗಲಿಲ್ಲ, ಅಜಿತನ ಬಿಸಿನೆತ್ತರಿಗೆ.

"ಏನನ್ನುವಿ?" ಕೆರಳಿ ಕೇಳಿದ ಆ ಮವಾಲಿಗೆ.

"ಏನ ರಾವ್, ನೀನೇಕೆ ನಡುವೆ?"

"ಎಲ್ಲಿ ಅನ್ಯಾಯವಿದೆಯೋ ಅಲ್ಲಿ ಅದನ್ನು ನಷ್ಟಗೊಳಿಸಲು ನಡುವೆ ಬರುವುದು ನನ್ನ ಕರ್ತವ್ಯ." ಹೆಮ್ಮೆಯಿತ್ತು, ಅಜಿತನ ಸ್ವರದಲ್ಲಿ.

"ಜಗದ ಗೊಡವೆಗೆ ಹೋಗುವ ಮೊದಲು ನಿನ್ನ ಕಿಸೆ ಸಂಬಾಳಿಸುವ ಸಾಮರ್ಥ್ಯವಾದರೂ ನಿನ್ನಲ್ಲಿದೆಯೋ ನೋಡಿಕೊ?" ಹೀಯಾಳಿಸಿ ನುಡಿದ ಆ ಮವಾಲಿ. ಸ್ವರದಲ್ಲಿ ನಿರ್ಭೀತಿಯೂ ಇತ್ತು.

ಅಜಿತನ ಲಕ್ಷ್ಯ ಜೇಬಿನ ಕಡೆಗೆ ಹರಿಯಿತು. ಅದಾವಾಗಲೋ ಕತ್ತರಿಸಲ್ಪಟ್ಟಿದೆ. ಒಮ್ಮೆಲೇ ಅವನ ಮುಖ ಇಳಿಯಿತು. ಅಪಮಾನದ ಬೆಂಕಿಯಲ್ಲಿ ಬೆಂದ ಬದನೆಯಂತೆ ಕಪ್ಪಾಯಿತು. ಕೊಂಚ ಹೊತ್ತಿನಲ್ಲಿ ಅವನ ಮುಖ ಬಿಳುಪೇರುತ್ತ ಹೋಗಿ ಕೆಂಪುವರ್ಣಕ್ಕೆ ತಿರುಗಿತು; ಕಣ್ಣುಗಳು ಕಿಡಿ ಕಾರತೊಡಗಿದುವು. ತುಟಿ ಅದುರುತ್ತಿರಲು,

" ಕಳ್ಳಾ, ಕಿಸೆ ಕತ್ತರಿಸಿರುವಿಯಾ ? ಕೊಡು ನನ್ನ ಪಾಕೀಟು ?" ಎಂದು ಆ ಮವಾಲಿಯು ಜಾಕೀಟಿಗೆ ಕೈಹಾಕಿದ. ಕರ ಕಂಪಿಸುತ್ತಿದ್ದುವು. ಸಿಟ್ಟಿನ ಭರದಲ್ಲಿ ಮಾತು ತಡೆತಡೆದು ಹೊರಬಿದ್ದಿತವನ ಬಾಯಿಂದ.

"ಹೆಂಗಸರನ್ನ ನಾಚಿಸುವ ನಿನ್ನಂಥ ಕಾಲೇಜ ಹುಡುಗರ ಪರಾಕ್ರಮ ಬಹಳ ನೋಡಿದೇನೆ ಬಿಡು" ಎಂದು ಜಾಕೀಟಿನಿಂದ ಅಜಿತನ ಕೈಯನ್ನು ಹಿಸುಕಿ ಹಿಂದೆ ನುಗಿಸಿದನಾತ. ಗಾಡಿಯೊಳಗಿನ ಜನ ನಕ್ಕಿತೀ ಮಾತಿಗೆ.

ಅಜಿತನ ಕೋಪಾಗ್ನಿಗೆ ಎಣ್ಣೆ ಎರಚಿದಂತಾಯಿತು. ಕೂಡಲೆ ಎದುರಾಳಿಯ ಕೈಯನ್ನು ಹಿಡಿದ, ತಿರುವಿದ. ಅವನೂ ಇವನ ಕುತ್ತಿಗೆಗೆ ಕೈಹಾಕಿದ. ಒಳಗೆ ಎಳೆದ. ಆಯಿತು, ಹೊಡೆದಾಟಕ್ಕೆ ಆರಂಭ. ಜನ ಎದ್ದಿತು. ಬಂಡಿಯಲ್ಲಿ ಗೊಂದಲವೇ ಗೊಂದಲವಾಯಿತು.

ಆ ಮುದುಕ—ಜಗಳಕ್ಕೆ ಕಾರಣನಾದವ—ಗಾಡಿಯಲ್ಲಿಯ ಸರಪಳಿ ಎಳೆದ. ಇಷ್ಟರಲ್ಲಿ ಗಾಡಿ ನಿಲ್ದಾಣಕ್ಕೆ ಸಮೀಪ ಬಂದುದರಿಂದ ಸಾವಕಾಶವಾಗಿ ನಡೆದು ಅಲ್ಲಿಯೇ ಹೋಗಿ ನಿಂತಿತು. ಕೂಡಲೆ ಗಾರ್ಡ, ಇಂಜಿನ್ ಡ್ರಾಯ್‌ವ್ಹರ್, ಸ್ಟೇಶನ್ ಮಾಸ್ತರ್ ಒಂದಿಬ್ಬರು ತಿಕೀಟ್ ಕಲೆಕ್ಟರರು ಎಲ್ಲರೂ ನೆರೆದರು. ಆ ಡಬ್ಬಿಯೊಳಗಿನ ಜನರೂ ಕೆಳಗಿಳಿದರು. ಹೊಡೆದಾಟವೂ ನಿಂತಿದ್ದಿತು. ಬಹುಜನರು ತಮಗೇನೂ ಈ ಜಗಳ ಸಂಬಂಧವಿಲ್ಲವೆಂದು ದೂರ ಸರಿದು ನಿಂತರು.

" ಯಾರು ಸರಪಳಿ ಎಳೆದರು ? " ಗಾರ್ಡ ಕೇಳಿದ.

ಜನರೆಲ್ಲ ಆ ಮುದುಕನನ್ನು ತೋರಿಸಿದರು.

" ಏಕೆ ? ನೀವೇಕೆ ಎಳೆದಿರಿ ಸರಪಳಿಯನ್ನು ?" ಗಾರ್ಡ ಮುದುಕನನ್ನು ಬೆದರಿಸುವ ದನಿಯಲ್ಲಿ ಕೇಳಿದ.

" ಇವರಿಬ್ಬರೂ ಹೊಡೆದಾಡುತ್ತಿದ್ದರು." ಹೊಡೆದಾಟಕ್ಕೆ ತಾನೇ ಕಾರಣನೆಂಬುದನ್ನು ಮಾತ್ರ ಹೇಳಲಿಲ್ಲನಾತ.

" ಹೊಡೆದಾಡುವವರು ಯಾರು ? "

" ಇವರೇ." ಬೆರಳು ಮಾಡಿ ಜನ ತೋರಿಸಿದರು.

" ಏಕೆ ? " ಅವರ ಕಡೆಗೆ ಹೊರಳಿ ಸ್ಟೇಶನ್ ಮಾಸ್ತರ ಕೇಳಿದ.

" ಅವನ ಕಿಸೆ ಕತ್ತರಿಸಲ್ಪಟ್ಟಿದೆ." ನಡುವೆ ಯಾವನೋ ಹೇಳಿದ.

" ಅದಕ್ಕೆ ಕಂಪನಿ ಹೊಣೆಯೇ ? "

ಇಷ್ಟರಲ್ಲಿ ಪೋಲೀಸನೂ ಬಂದ. ಅಜಿತ ಮವಾಲಿಯನ್ನು ತೋರಿಸಿ, ಸಿಟ್ಟಿನಿಂದ :

" ಇವನು ನನ್ನ ಕಿಸೆ ಕತ್ತರಿಸಿದ್ದಾನೆ, ತಪಾಸಿಸಿರಿ " ಎಂದ.

ಜನರು ಪಿಸಿಪಿಸಿ ನಕ್ಕರು. ಈ ತರುಣ ಮುಂಬಯಿಗೆ ಹೊಸದಾಗಿಯೇ ಬಂದಿರುವನೇನೋ ಎಂದುಕೊಂಡರು ಕೆಲವರು. ಕಾಲೇಜಿನಲ್ಲಿ ಓದುವ ಹುಡುಗರಿಗೆ ವ್ಯವಹಾರವೇ ಕಡಿಮೆ ಎಂದಾಡಿದವರೂ ಹಲವರು. ಇಬ್ಬರನ್ನೂ ಪೋಲೀಸರ ಸ್ವಾಧೀನ ಕೊಡಲಾಯಿತು. ಬಂಡಿ ಹೊರಟಿತು. ಆ ಮುದುಕನೂ ಬಂಡಿಯಲ್ಲಿ ಹತ್ತಿ ನಡೆದ. ಅಜಿತ ಅವನ ಕಡೆಗೊಮ್ಮೆ ಬೆರಗಿನಿಂದ ನೋಡಿ, ' ಎಂಥ ಮನುಷ್ಯನೀತ ? ತನಗೇನೂ ಸಂಬಂಧ ವಿಲ್ಲದಂತೆಯೇ ನಡೆದುಬಿಟ್ಟನಲ್ಲ ' ಎಂದು ಮನದಲ್ಲಿಯೇ ಅಂದು ಕೊಂಡ.

" ನಿನ್ನ ಹೆಸರೇನು ? ತೆಗೆ ಹತ್ತು ರೂಪಾಯಿ ! " ಪೋಲೀಸ ಆಫೀಸಿನಲ್ಲಿ ಅಜಿತನನ್ನು ಜಬರಿಸಿ ಕೇಳಿದ ಅಧಿಕಾರಿ, ಈತ ಮುಂಬಯಿಯ ಸಾಕಷ್ಟು ಪರಿಚಯವಿಲ್ಲದವನೆಂದರಿತು.

ಇಂಥದಕ್ಕೆ ಅಜಿತ ಬೆದರುವಂತಿರಲಿಲ್ಲ. ಅವನು ಕಲಿತವನಿದ್ದ. ಈಗ ಕೆಲದಿನ ಮುಂಬಯಿಯಲ್ಲಿ ಕಳೆದವನೂ ಇದ್ದ. ಧೈರ್ಯವೂ ಇತ್ತು. ಈ ಮಾತಿಗವನು ಸೊಪ್ಪು ಹಾಕಲಿಲ್ಲ. ದೇಶದಲ್ಲಿ ಕಾಯಿದೆ ಶಾಂತತೆ ವ್ಯವಸ್ಥೆಗಳ ಹೆಸರಿನಲ್ಲಿ ನಡೆಯುವ ಅನ್ಯಾಯದ ಅರಿವೂ ಅವನಿಗಿತ್ತು.

" ರೂಪಾಯಿ ಕೊಡುವದಿಲ್ಲ; ಏನು ಮಾಡುವಿರೋ ಮಾಡಿರಿ ' " ಎಂದ.

" ನೀನಿನ್ನೂ ಕಾಲೇಜ ವಿದ್ಯಾರ್ಥಿ ಕಾಣಸ್ತದ " ಎಂದು ಏರಿ ಮೈ ಮೇಲೆ ಬಂದ ಪೋಲೀಸನೊಬ್ಬ.

"ಇರಲಿ ಬಿಡರೀ ಏನ ಮಾಡತೀರಿ" ಎಂದು ಪೋಲೀಸರಿಗೆ ಹೇಳಿದ ಆ ಮವಾಲಿ.

ಅಜಿತನಿಗೆ ಈ ಜಗದ ನೀತಿಯೇ ವಿಚಿತ್ರವೆನಿಸಿತು. ಪೋಲೀಸರು ಕಿಸೆ ಕತ್ತರಿಸಿದವನನ್ನು ಬಿಟ್ಟು ತನ್ನನ್ನೇ ಜಬರಿಸುತ್ತಿದ್ದಾರೆ. ಯಾರ ಸಲುವಾಗಿ ತಾನು ಹೊಡೆದಾಡಿದನೋ ಅವನಂತೂ ಈ ಬಡೆದಾಟ ತನಗೇನೂ ಸಂಬಂಧ ಎಲ್ಲದಂತೆ ಹೋಗಿಬಿಟ್ಟ. ಯಾರ ಕೂಡ ಜಡೆದಾಡಿದನೋ ಅವನೇ ತಿರುಗಿ ನನ್ನನ್ನು ಬಿಡಿಸಲು ಯತ್ನಿಸುತ್ತಿದ್ದಾನೆ! ಹಿಂದೀ ಜನರ ಜೀವನವೇ ಒಂದು ಸಮಸ್ಯೆ!

ಸ್ವಲ್ಪ ಹೊತ್ತಿನಲ್ಲಿ ಅಜಿತನನ್ನು ಬಿಡಲಾಯಿತು. ಹಿಂದಿನಿಂದ ಬರುವ ಇನ್ನೊಂದು ಗಾಡಿಯಲ್ಲಿ ಹತ್ತಿ ಕಾಲೇಜದತ್ತ ಹೋಗಬಯಸಿದ ಅಜಿತ. ನಿಲ್ದಾಣದಲ್ಲಿ ಕೆಲಕಾಲ ಅಡ್ಡಾಡುವುದರಲ್ಲಿ ಗಾಡಿಯೂ ಬಂದಿತು. ಇಂದಿನ ಹೊಸ ಅನುಭವವನ್ನು ತಿರುತಿರುಗಿ ನೆನೆಯುತ್ತ ಯಾವದೋ ಒಂದು ಎದುರಿಗೆ ಸಿಕ್ಕ ಡಬ್ಬಿಯಲ್ಲಿ ಏರಿದ. ಒಳಗೆ ಒಂದು ಬಾಕಿನ ತುದಿಯಲ್ಲಿ ಸ್ವಲ್ಪ ಸ್ಥಳವಿದ್ದಿತು. ಅಲ್ಲಿ ಕೂಡಬೇಕೆಂದು ಜನರನ್ನು ಬದಿಗೆ ಸರಿಸುತ್ತ ನಾಲ್ಕು ಹೆಜ್ಜೆ ಸಾಗುವುದರಲ್ಲಿದ್ದ. ಅಷ್ಟರಲ್ಲಿ ಅಲ್ಲಿ ಬದಿಗೆ ಕುಳಿತವನು—

"ಇಲ್ಲಿ ಬಾ ಶಮುಸೇರ!" ಎಂದು ಯಾವದೋ ಒಂದು ವ್ಯಕ್ತಿಯನ್ನು ಕೈಹಿಡಿದು ಅಲ್ಲಿ ಕುಳ್ಳಿರಿಸಿಕೊಂಡ, ಆದರದಿಂದ.

ಅಜಿತ ನಿರಾಶೆಯಿಂದ ಆ ವ್ಯಕ್ತಿಯು ಕಡೆಗೆ ನೋಡಿದ. ಅದೇ ವ್ಯಕ್ತಿ! ತನ್ನ ಕೂಡ ಈ ಮೊದಲು ಹೊಡೆದಾಡಿದ ಮವಾಲಿ. ಅವನ ಹೆಸರೇ ಶಮುಸೇರ.

"ಶಮುಸೇರ! ಶಮುಸೇರ!" ಎಂದು ಮನದಲ್ಲಿಯೇ ಜಪಿಸಿದ ಅಜಿತ ಆ ನಾಮವನ್ನು. "ನಿಜವಾಗಿಯೂ ಶಮುಸೇರನೀತ!" ಎಂದುಕೊಂಡ ಮನದಲ್ಲಿ!

"ಬಾ ಅಜಿತರಾವ್" ಎಂದು ಅಜಿತನನ್ನೂ ಸಲಿಗೆಯಿಂದ ಕೈಹಿಡಿದು ಹತ್ತರ ಕುಳ್ಳಿರಿಸಿಕೊಂಡ ಶಮುಸೇರ.

"ಶಮುಸೇರ, ಕ್ಷಮಿಸಿ; ನಾನು ಸುಮ್ಮನೇ ನಿಮ್ಮ ಕೂಡ ಜಗಳಾಡಿದೆ!"

ಶಮುಸೇರನೊಬ್ಬ ಪ್ರಸಿದ್ಧ ಗುಂಡನೆಂಬುದು ಅಲ್ಲಿ ಕುಳಿತ ಹಲವರಿಗೆ

ಗೊತ್ತಿದ್ದಿತು. ಆವರು ಅಜಿತನ ಕಡೆಗೆ ಬೆರಗಿನಿಂದ ನೋಡುತ್ತಿದ್ದರು, ಇಂಥ ವ್ಯಕ್ತಿಯು ಕೂಡ ಹೊಡೆದಾಡಿದ ಹುಡುಗನೆಂದು !

"ಇರಲಿ ಬಿಡು, ಹೀಗೆ ನಡೆಯೋದೇ" ಎಂದ ಸರಳಸ್ವರದಿಂದ ಶಮುಸೇರ

"ಏನ ನಡೆಯೋದು? ಯಾವನ ಸಲುವಾಗಿ ಜಗಳಾಡಿದೆನೋ ಅವನೇ ನಮ್ಮಿಬ್ಬರನ್ನೂ ಪೋಲೀಸರ ಕಡೆಗೆ ಒಪ್ಪಿಸಿ ಹೋದನಲ್ಲ ?"

"ಜಗತ್ತೇ ಹಾಗಿದೆ. ನಿನಗಿನ್ನೂ ಗೊತ್ತಿಲ್ಲ. ಕಾಲೇಜದ ವಿದ್ಯಾರ್ಥಿಗಳೆಲ್ಲ ನಿನ್ನಂತೆಯೇ ಕಲ್ಪನಾ ಲೋಕದಲ್ಲೇ ವಿಹರಿಸುತ್ತಾರೆ !"

"ಹೀಗೇನು ಹೇಳುವಿರಿ ?"

"ನಿನ್ನನ್ನೇ ನೋಡಲ್ಲ !"

"ಅಂದರೆ ?"

"ನೀನಿಂಥ ಕ್ರಾಂತಿಕಾರಕ ವಿದ್ಯಾರ್ಥಿ. ನಿನಗೆ ಹೊಡೆದಾಡುವ ರೀತಿ ನೀತಿಗಳೇನಾದರೂ ಗೊತ್ತಿವೆಯೇ ?"

"ಹೊಡೆದಾಡುವ ನೀತಿ !" ಅಜಿತನ ಬಾಯಿಂದ ಹೊರಟ ಉದ್ಗಾರವಿದು.

"ಅಹುದು, ಹೊಡೆದಾಟವೂ ಒಂದು ಕಲೆ. ಅದನ್ನೂ ಅಭ್ಯಸಿಸಲಿಕ್ಕೆ ಬೇಕು. ನಿಜವಾಗಿಯೂ ನಿನ್ನನ್ನು ಒಂದೇ ಏಟಿನಲ್ಲಿ ಮೆತ್ತಗೆ ಮಾಡುತ್ತಿದ್ದೆ. ಆದರೆ ಸುಮ್ಮನೆ ಬಿಟ್ಟೆ !"

"ನಾವು ಅಹಿಂಸಾವಾದಿಗಳು. ದೈಹಿಕ ಬಲ ಪ್ರಯೋಗಿಸಲಾರೆವು."

"ಅದಕ್ಕೇ ನಾನು ಹೇಳುವುದು. ಈಗಿನ ವಿದ್ಯಾರ್ಥಿಗಳು ಬಳೆ ಹಾಕಿಕೊಳ್ಳುವದೊಂದೇ ಉಳಿದಿದೆಯೆಂದು. ಮೊದಲು ಶಾರೀರಿಕ ಬಲ ಸಂಪಾದಿಸಲಿಕ್ಕೆ ಬೇಕು"

"ಏತಕ್ಕೆ ?"

"ಪ್ರಸಂಗ ಬಾರದೆ ನಿನಗೆ ತಿಳಿಯದು."

"ಏನು ಪ್ರಸಂಗ ಬರುವುದು ? ಇದು ಬೌದ್ಧಿಕ ಕ್ರಾಂತಿಯ ಯುಗ."

" ನೀನು ಕ್ರಾಂತಿಯ ನೇತೃತ್ವ ವಹಿಸಬೇಕೆಂದಿರುವಿಯೋ ? " ಶಾಂತಸ್ವರದಿಂದ ಶಮುಸೇರ ಕೇಳಿದ.

" ಇಲ್ಲ; ನಾನು ದೇಶಸೇವಕನಾಗಬೇಕೆಂದಿರುವೆ. "

" ಅದರ ಅರ್ಥ ಅದೇ. ನಿನಗೆ ಏನಾಗಬೇಕಾಗಿದೆಯೋ ಅದಾಗಲಿ! ಆದರೆ ನನ್ನ ಒಂದು ಮಾತನ್ನು ಕೇಳು. ಲಾಠಿಯ ಕೈ ಕಲಿ, ಹೊಡೆದಾಡಲು ಶಕ್ತಿ ಸಂಪಾದಿಸು, ಚನ್ನಾಗಿ ಓಡಲು ಕಲಿ. ಸುಳ್ಳು ಮೋಸಗಳಲ್ಲಿ ಪ್ರವೀಣನಾಗು. ಅಂದರೆ ನೀನು ಒಳ್ಳೆಯ ದೇಶಭಕ್ತನಾಗುವಿ. "

ಇಷ್ಟರಲ್ಲಿ ಅಜಿತನಲ್ಲಿ ಶಮುಸೇರನ ಬಗ್ಗೆ ಆತ್ಮೀಯತೆಯುಂಟಾಗಿದ್ದಿತು. ಅವನ ಮಾತಿನಲ್ಲಿ ಶಿಷ್ಟತನ ತರ್ಕಶುದ್ಧ ವಿಚಾರಸರಣಿ ಕಾಣದಿದ್ದರೂ ಅವನು ಬುದ್ಧಿಹೀನನಲ್ಲ. ಅಲ್ಲದೆ ಆತ ಸುತ್ತಲಿನ ರಾಜಕೀಯ ಸಾಮಾಜಿಕ ಚಳವಳಿಯಲ್ಲಿಯೂ ಮನಸ್ಸು ಹಾಕುತಿದ್ದ. ಹಲವು ಚಟುವಟಿಕೆಗಳಲ್ಲಿ ಅವನ ಅಂಗವಿದ್ದಿತು. ಪೋಲೀಸರಿಗೆಲ್ಲ ತುಂಬ್ರ ಪರಿಚಿತ ವ್ಯಕ್ತಿ. ಹೃದಯದಲ್ಲಿ ದಯೆಯೂ ಇದೆ. ಎಂಥ ವಿಚಿತ ಮನುಷ್ಯನೀತ !

ಇವನು ಯಾವ ಗುಂಪಿನ ವ್ಯಕ್ತಿ ?

ಎಲ್ಲಿದ್ದು, ಏನು ಸಾಮಾಜಿಕ ಕೆಲಸ ಮಾಡುತ್ತಿರುವ ?

ತನ್ನಂಥ ಗುಂಡರನ್ನು ತಯಾರಿಸುತ್ತಿರಬಹುದೇ ?

ಅಂತೂ ಆಶ್ಚರ್ಯದ ಸಂಗತಿ. ತಿಳವಳಿಕೆಯ ಗುಂಡ ವಿಶಾಲ ಹೃದಯದ ವ್ಯಕ್ತಿ. ಗೆಳೆತನಕ್ಕೆ ಯೋಗ್ಯ ಮನುಷ್ಯ ಎಂದು ಅಜಿತ ಅವನ ಪರಿಚಯವನ್ನು ಹೆಚ್ಚಾಗಿಯೇ ಮಾಡಿಕೊಂಡು ಕಾಲೇಜ ಸೇರಿದ, ವಿಲಂಬವಾಗಿ.

ಮೂರು ನಾಲ್ಕು ದಿನ ಮನೆಯಲ್ಲಿ ಈ ಪ್ರಸಂಗದ ವಿಷಯದ ಮಾತೇ ಮಾತು. ಇಂದಿರೆ ತಮ್ಮನಿಗೆ ಎಚ್ಚರದಿಂದಿರಲು ಸೂಚಿಸಿದ್ದೂ ಆಯಿತು. ಜೊತೆಗೆ ಶಮುಸೇರನನ್ನು ಬಯ್ಯದೆಯೂ ಇರಲಿಲ್ಲ ಆಕೆ. ಸುಧೀರನು ಮುಂಬಯಿ ಗುಂಡರ ರೀತಿ ನಡತೆಗಳ ಪರಿಚಯವನ್ನು ಮಾಡಿಕೊಟ್ಟ.

ಒಂದು ದಿನ ಸಾಯಂಕಾಲ ಸುಧೀರ ಆಫೀಸಿನಿಂದ ಬಂದೊಡ

ನೆಯ ಮಾತಿಗೆ ಮಾತು ಹೊರಟು ರಶಿಯದ ಸಮತಾವಾದದ ಬಗ್ಗೆ ಮಾತು ಹೊರಟಿತು. "ಸಮತೆ ಒರಲಿಕ್ಕೆ ಎಂದೂ ಶಕ್ಯವಿಲ್ಲ." ಎಂದು ಅಜಿತ ತಟ್ಟನೆ ನುಡಿದುಬಿಟ್ಟ.

"ಅದೇಕೆ ಶಕ್ಯವಿಲ್ಲ ?" ಎಂದು ಸುಧೀರನ ಪ್ರವಚನ ಮೊದಲಾಯಿತು. ರಶಿಯದ ಝಾರನ ಆಳಿಕೆ, ಅಲ್ಲಿ ಆದ ಕ್ರಾಂತಿ, ಮಾರ್ಕ್ಸವಾದ, ಸ್ಟ್ಯಾಲಿನ್ ಎಲ್ಲರೂ ಬಂದು ಹೋದರು. ಅಲ್ಲಿಯ ಸಮತಾವಾದ ಹಿಂದುಸ್ತಾನಕ್ಕೆ ಹೇಗೆ ಅನ್ವಯಿಸುವುದೆಂಬುದರ ಬಗ್ಗೆಯೂ ಮಾತು ಮುಂದರಿಯತೊಡಗಿತು. ಭಾರತದ ದೀನ ದರಿದ್ರರ ಜೀವನಚಿತ್ರಪಟವೆಲ್ಲ ಎಲ್ಲರ ಕಣ್ಣೆದುರು ಸುಳಿಯತೊಡಗಿತು.

ಒಂಬತ್ತು ಗಂಟೆ ಹೊಡೆದರೂ ಯಾರಿಗೂ ಎಚ್ಚರವಿರಲಿಲ್ಲ. ಗಡಿಯಾರದ ಮುಳ್ಳುಗಳು ತಮ್ಮ ಕೆಲಸವನ್ನು ತಾವು ಮಾಡಿಕೊಂಡು ನಡೆದಿದ್ದುವು. ಸುಧೀರನಿಗಾಗಲಿ ಅಜಿತನಿಗಾಗಲಿ ಅತ್ತ ಲಕ್ಷ್ಯವಿರಲಿಲ್ಲ. ಒಳಮಗ್ಗಲಿಗೆ ಕುಳಿತ ಇಂದಿರೆಯು ಒಲೆಯ ಕಡೆಗೊಮ್ಮೆ ಪತಿಯ ಮುಖದ ಕಡೆಗೊಮ್ಮೆ ನೋಡಿ ತಣ್ಣಗಾಗಿದ್ದಳು. 'ಮಾಡಿದ ಅಡಿಗೆ ಆರಿ ಹೋಗುವದಲ್ಲಾ !" ಎಂಬ ಚಿಂತೆ ಅವಳಿಗೆ. ಮನಸ್ಸುಗೊಟ್ಟು ಕೇಳುತ್ತ ಕುಳಿತಿದ್ದ ಅಜಿತನಿಗೆ ಅಕ್ಕನ ಚಿಂತೆಯ ಅರಿವೇ ಇರಲಿಲ್ಲ.

ಅಜಿತನ ಮನಸ್ಸು ಸುಧೀರನ ವಾಕ್‌ಪ್ರವಾಹದಲ್ಲಿ ತೇಲಿಹೋಗಿತ್ತು. ಮಾತಿನ ವಿಷಯ ಅವನ ಒಲವಿನದು. ಭಾರತದ ಬಡವರ ಜಾಳದರ್ಶನ. ಬಡವರನ್ನು ಬಡತನವನ್ನು ನೂರಾರು ಸಲ ಕಂಡಿದ್ದ ಅಜಿತ. ಸಿರಿವಂತಿಕೆಯ ಜೊತೆಗಿಟ್ಟು ನೋಡಿದ್ದ. ಒಂದೆಡೆಗೆ ತುತ್ತು ಕೂಳಿಗೆ ಗತಿಯಿಲ್ಲದೆ 'ಅವ್ವಾ ಹಸಿವು! ಅವ್ವಾ ಹಸಿವು!' ಎಂದು ಚೀರುವ ಬಡಬಗ್ಗರ ಕೂಗು ! ಇನ್ನೊಂದೆಡೆಗೆ ಅಳತೆ ಮೀರಿ ತಿಂದು ಬಡವರ ಮೇಲೆ 'ಹುರ್ ಹುರ್' ಎಂದು ಹರಿಹಾಯುವ ಸಿರಿವಂತರ ಕಟುನೀತಿ. ಇನ್ನೊಂದೆಡೆಯಲ್ಲಿ ಮೈತುಂಬ ಬಟ್ಟೆಯಿಲ್ಲದೆ ಒರಿಷ್ಮೆಯಿಂದ ಚಳಿಯಲ್ಲಿ ನಡಗುತ್ತ ಫುಟ್ ಪಾಥಿನ ಮೇಲೆ ಬಿದ್ದ ಕೂಲಿಕಾರರ ಗುಂಪು. ಮಗುದೊಂದೆಡೆಯಲ್ಲಿ ಸೂಟು ಬೂಟುಗಳನ್ನು ಧರಿಸಿ, ಚಲನಚಿತ್ರಗಳನ್ನು ನೋಡಿ ಕಾರಿನೊಳಗಿಂದ ಬಂಗಲೆಗಳಿಗೆ ಮರಳುವ ವಿಲಾಸಿಯುಗ್ಮ. ಅಜಿತನ ಕಣ್ಣ ಮುಂದೆ

ಸುಧೀರನ ಮಾತುಗಳಿಂದ ಈ ಎರಡು ಧ್ರುವಲೋಕದ ಚಿತ್ರಗಳೂ ಮೂಡುತ್ತಿದ್ದುವು.

ಅಜಿತನಿಗೆ ಏನೋ ಒಂದು ಸಂಗತಿ ನೆನಪಾದಂತಾಗಿ ಮೆಲ್ಲಗೆ ಒಂದು ಮಾತು ಆಡಿದ, "ಇಂದೇನೋ ಭಗವಾನಲಾಲರು ನಮ್ಮ ಕಾಲೇಜಿಗೆ ಹೊಸದೊಂದು ಹಾಸ್ಟೇಲ ಕಟ್ಟಲಿಕ್ಕೆ ಹತ್ತು ಸಾವಿರ ರೂಪಾಯಿ ದಾನ ಕೊಟ್ಟರು?"

"ಅಯ್ಯೋ ಸಿರಿವಂತರ ಮೋಸಗಾರಿಕೆಯು ಮೇಲ್‌ಹೊದಿಕೆಯಿದು! ಸಾಗರವನ್ನೇ ಕಲಕಿದ ಬಿರುಗಾಳಿ— ಹಡಗಗಳನ್ನು ಬಂಡೆಗೆ ಅಪ್ಪಳಿಸಿ ಸಾವಿರಾರು ಜನರನ್ನು ಮೃತ್ಯು ಮುಖದಲ್ಲಿ ದೂಡಿದ ಲಯುಗಾಳಿ— ಅಸಂಖ್ಯ ಗಿಡ ಮರಗಳನ್ನು ಮುರಿದು ಇಲ್ಲಿ ಬಂದಾಗ ನಮಗೆ ತಂಗಾಳಿಯೆನಿಸುವುದು. ಮಲಯಾನಿಲವಾಗುವದು. ಇದರಂತೆಯೇ ದುಡ್ಡುಳ್ಳವರ ದಾನಧರ್ಮ! ಆ ದ್ರವ್ಯ ಎಷ್ಟು ಬಡವರ ರಕ್ತ ಹೀರಿ ಬಂದಿದೆಯೋ? ಹಲವರ ಬಾಳು ಹಾಳುಗೆಡವಿ ಹತ್ತು ಸಾವಿರ ಹೊನ್ನನ್ನು ಒಂದು ಕಾಲೇಜಕ್ಕೆ ದಾನ ಕೊಟ್ಟರೆ ದಾನಶೂರನಾದನೇ ಆ ಶೇಠ?"

ಸುಧೀರ ತುಂಬ ಆವೇಶದಿಂದ ನುಡಿದು ಸುಮ್ಮನಾದ. ಅಲ್ಲಿ ಯಾರೂ ಮಾತಾಡುವಂತಿರಲಿಲ್ಲ. ಅಜಿತನ ಮನಸ್ಸು ಸ್ವಚ್ಛವಾಗಿದ್ದಿತು. ಕಣ್ಣೀರು ಇಳಿಯುತ್ತಿದ್ದುವು.

"ಹತ್ತು ಹೊಡೆಯಿತು. ಊಟಕ್ಕೆ ಏಳುತ್ತೀರಾ?" ಮೆಲ್ಲನೆ ಇಂದಿರೆ ಅಂದಳು. ಆಗಲೇ ಸುಧೀರನಿಗೆ ಎಚ್ಚರ. ಅಜಿತನಿಗೆ ಮೈಮೇಲೆ ಅರಿವು. ಕೈಕಾಲು ತೊಳೆದುಕೊಂಡು ಊಟಕ್ಕೆ ಎದ್ದರು. ಊಟದ ಹೊತ್ತಿನಲ್ಲಿ ಇಬ್ಬರೂ ಮೌನವಾಗಿದ್ದರು. ಅಜಿತನಿಗೆ ಇಂದಿನ ಅನ್ನ ಸವಿ ಹತ್ತಲಿಲ್ಲ. ಅಕ್ಕ ತುಪ್ಪ ಬಡಿಸಲು ಬಂದರೆ ಬೇಡ ಅಂದ. ತುಪ್ಪ ತಿನ್ನದ ಜನವೆಷ್ಟೋ ಇದೆ, ಎಂದುಕೊಂಡನೇನೋ! ತುತ್ತು ಗಂಟಲೊಳಗೆ ಇಳಿಯುತ್ತಿರಲಿಲ್ಲ. ತುತ್ತಿಗೊಮ್ಮೆ ಎತ್ತಿ ನೀರು ಕುಡಿಯುತ್ತ ಊಟ ಮಾಡಿದ.

ಹೇಗೋ ಒಮ್ಮೆ ಊಟ ಮಾಡಿ ಎದ್ದರು. ಸುಧೀರ ಕೇಳಿದ, "ಲಾಯಿಟ್ ಪತ್ರಿಕೆಯ ಆಫೀಸಿಗೆ ಬರುವಿಯಾ? ನಡೆ, ಓದಲಿಕ್ಕೇನೋ

ಬೇಕಾಗ ಅವಕಾಶ ಸಿಕ್ಕುವುದು. ಮ್ಯಾನೇಜರರ ಗುರುತು ಮಾಡಿ ಕೊಡುತ್ತೇನೆ. ಪತ್ರಿಕೆಯ ಉದ್ದೇಶ ಗೊತ್ತಾಗುವುದು. ಕೇವಲ ನಾಲ್ಕು ಹುಡುಗರಲ್ಲಿ ರಾಜಕಾರಣದ ನಾಲ್ಕು ಮಾತು ಆಡಿದರೆ ಆಗಲಿಲ್ಲ. ಕೃತಿ ಮಾಡಬೇಕು" ಎಂದ.

ಅಜಿತನಿಗೆ ಆಲಸ್ಯ ಬಂದಿದ್ದಿತು. ಆದರೂ ಬೇಡವೆಂದರೆ ಮತ್ತೆಲ್ಲಿ ಬೀಗನ ಲೆಕ್ಚರು ಆರಂಭವಾಗುವದೇನೋ ಎಂದುಕೊಂಡು "ಹೂಂ!" ಎಂದು ಬೆನ್ನುಹತ್ತಿದ.

ಹತ್ತು ಹೊಡೆದು ಹೋಗಿದ್ದಿತು. ಸುಧೀರ ಲಗುಬಗೆಯಿಂದ ತಮ್ಮ ಸಾಪ್ತಾಹಿಕ ಪತ್ರಿಕೆಯ ಆಫೀಸಿನ ಕಡೆಗೆ ನಡೆದಿದ್ದ. ಅಜಿತ ಬೆನ್ನುಹತ್ತಿದ್ದ. ಯಾರೂ ಏನೂ ಮಾತಾಡುತಿರಲಿಲ್ಲ. ಅಜಿತ ಮನಸ್ಸಿನಲ್ಲಿ "ಲಾಯಿಟ್" ಪತ್ರಿಕೆಯ ಆಫೀಸಿನ ಕಲ್ಪನೆ ಕಟ್ಟುತಲಿದ್ದ. ಈ ಮೊದಲು ಮುಂಬಯಿಗೆ ಬಂದ ಮೇಲೆ ೬-೭ ತಿಂಗಳುಗಳಿಂದ ಈ ಪತ್ರಿಕೆಯನ್ನು ಓದುತ್ತಿದ್ದ. ಅದರೊಳಗಿನ ಲೇಖನಗಳ ಕಿಡಿನುಡಿ, ಮನಂಬುಗುವ ತತ್ವಗಳನ್ನು ನೋಡಿ ಮೆಚ್ಚಿದ್ದ. ಅದರ ಕಪ್ಪು ಕಾಗದ ಅವ್ಯವಸ್ಥಿತ ಮುದ್ರಣಗಳು ಅವನ ಮನಸ್ಸನ್ನು ಅಷ್ಟು ಹಿಡಿಯುತ್ತಿರಲಿಲ್ಲ. ಉಳಿದ ಪತ್ರಿಕೆಗಳೊಡನೆ ಹೋಲಿಸಿ ನೋಡಿದರೆ ಅದೇನು ಬಾಹ್ಯ ಸೌಂದರ್ಯವುಳ್ಳ ಪತ್ರಿಕೆಯಲ್ಲ. ಅದರ ಸಲುವಾಗಿ ಒಮ್ಮೆ ಸುಧೀರನೊಡನೆ ಕೇಳಿದರೆ ಆತ:

"ಅದು ಬಡವರ ಪತ್ರಿಕೆ, ಬಡವರಿಗಾಗಿ ಹುಟ್ಟಿದ್ದು, ಬಡತನದಲ್ಲಿ ಬಾಳಿ ಬಡವರಿಗಾಗಿ ಹೋರಾಡಬೇಕು. ಬಡವರಿಗೆ ಹೊಟ್ಟೆಗೇ ಹಿಟ್ಟಿಲ್ಲ ಪತ್ರಿಕೆಗೆ ಎಲ್ಲಿ ದುಡ್ಡು ಸುರಿದು ಪ್ರಚಾರ ಮಾಡಿಯಾರು? ಇದ್ದುದರಲ್ಲಿ ಆತ್ಮಜಾಗ್ರುತಿಯನ್ನೂ ಜಗತ್ತಿನ ಸಿರಿವಂತರ ಕುಹಕ ನೀತಿಯನ್ನೂ ಸುಲಭ ಭಾಷೆಯಲ್ಲಿ ಚಿತ್ರಿಸುವುದು ಅದರ ಉದ್ದೇಶ, ಧ್ಯೇಯ." ಎಂದು ಹೇಳಿ ಬಿಟ್ಟಿದ್ದ. ಅಜಿತನೂ ಅಷ್ಟಕ್ಕೆ ಸುಮ್ಮನಾಗಿಬಿಟ್ಟಿದ್ದ.

ಮೂರು ನಾಲ್ಕು ದೊಡ್ಡ ಬೀದಿಗಳನ್ನು ದಾಟಿ ಸಣ್ಣ ಬೀದಿಗೆ ಇಬ್ಬರೂ ಇಳಿದರು. ಅಲ್ಲಿ ವಿದ್ಯುದ್ದೀಪಗಳ ಸುಳುವಿಲ್ಲ. ಚಿಕ್ಕ ದಾರಿ, ಕೊಳಚೆಯೊಳಗಿನ ಗುಂಗಾಡು ಗುಂಯ್ಯುಗುಟ್ಟುವವು. ಕತ್ತಲೆಯಲ್ಲಿ ಯಾವ ಪಕ್ಷಿಗಳೋ ಬಂದು ಮೋರೆಗೆ ಹೊಡೆದು ಹೋಗಹತ್ತಿದುವು.

ಮೂಗು ಹಿಡಿಯುವ ಹೊಲಸು ವಾಸನೆ. ಅಲ್ಲಿಂದ ಇಲ್ಲಿಂದ ಅಸಹ್ಯ ಮಾತು ಬೈಗಳು. ನಡುನಡುವೆ ಹುಡುಗರ ಕಿರುಚಾಟ ಚೀರಾಟ. ಇದನ್ನೆಲ್ಲ ಕಂಡು ಕೇಳಿ, "ಸುಧೀರ ಇತ್ತಲ್ಲಿ ನರಕ ಯಾತನೆಗೆ ತಂದನಪ್ಪಾ!" ಎಂದುಕೊಂಡಿರಬೇಕು ಅಜಿತ.

ಅಷ್ಟರಲ್ಲಿ ಸುಧೀರ ಕೂರಳಿ "ಏಳು ತಿಂಗಳಾಯಿತು ಇಲ್ಲಿ ಬಂದು. ಮುಂಬೈಯೆನ್ನೆಲ್ಲ ನೋಡಿರಬೇಕು ನೀನು?" ಎಂದ.

"ಮುಂಬಯನ್ನೇನೋ ನೋಡಿದ್ದೇನೆ. ಆದರೆ ಇಂಥ ಸ್ಥಳವನ್ನು ಮಾತ್ರ ನಾನು ಕಂಡುದಿಲ್ಲ."

"ಮುಂಬಯಿಗೆ ಬಂದವರು ಇದನ್ನು ಕಾಣುವದು ವಿರಳ. ಹಾಯ್‌ಕೋರ್ಟು, ಬೋರೀಬಂದರ, ಹ್ಯಾಂಗಿಂಗ ಗಾರ್ಡನ್‌ಗಳನ್ನು ಕಂಡು ನಗರದ ಸಿರಿವಂತಿಕೆಯನ್ನು ಮೆಚ್ಚಿ ಹೋಗುವ ಜನರೇ ಬಹಳ. ಆ ಸಿರಿವಂತಿಕೆಯು, ಯಾರ ಅಸ್ಥಿಪಂಜರದ ಕಲ್ಲುಗಳಿಂದ — ರಕ್ತದ ಕೆಸರುಗಳಿಂದ ಕಲಿಸಿ ಕಟ್ಟಿದ ತಳಹದಿಯ ಮೇಲೆ ನಿಂತಿದೆಯೋ ಅವರ ಕಡೆಗೆ, ಅವರ ವಾಸಸ್ಥಾನದ ಕಡೆಗೆ ಕಣ್ಣು ತೆರೆದು ನೋಡುವ ಪುಣ್ಯ ಬಹಳ ಮಂದಿಗಿಲ್ಲ."

ಅಜಿತನಿಗೆ ಸುಧೀರನ ಬಗ್ಗೆ ಬಹಳ ಆದರವೆನಿಸಿತು. ಏನೂ ಹೇಳಲಿಲ್ಲ. 'ಭಾರತಕ್ಕೆ ಸ್ವಾತಂತ್ರ್ಯ ಬೇಕೆಂದು ಪ್ರಭಾತಫೇರಿ ತೆಗೆದರಿಲ್ಲ, ವ್ಯಾಖ್ಯಾನ ಕೊಟ್ಟರಿಲ್ಲ, ಸ್ಕೂಲು-ಕಾಲೇಜುಗಳ ಹರತಾಳ ಪಾಲಿಸಿದರಿಲ್ಲ, ಜೇಲಿಗೆ ಹೋಗಿ ಬಂದರೂ ಇಲ್ಲ. ಈ ಬಡವರ ಉದ್ಧಾರ ಮಾಡುವವರೆಗೆ ಎಲ್ಲವೂ ವ್ಯರ್ಥ. ಬಡವರೂ ಮನುಷ್ಯರು ಎಂದು ತಿಳಿದು ನಾಡಿನ ಮುಖಂಡರೂ ಸಿರಿವಂತರೂ ಇವರ ಸುಧಾರಣೆಗಾಗಿ ಎಂದು ಕಾರ್ಯ ಕೈಕೊಳ್ಳುವರೋ ಅಂದೇ ಭಾರತಕ್ಕೆ ಸ್ವಾತಂತ್ರ್ಯ ಸುಖ' ಎಂಬ ವಿಚಾರವೊಂದು ಸುಳಿದು ಹೋಯಿತು, ಮಿಂಚಿನ ವೇಗದಿಂದ.

ಮನಸ್ಸಿನಂತೆ ಕಾಲುಗಳೂ ತಮ್ಮ ಕೆಲಸವನ್ನು ತಾವೇ ಮಾಡುತ್ತಿದ್ದುವು. ಆ ಚಿಕ್ಕ ಬೀದಿಯನ್ನು ದಾಟಿ ಸ್ವಲ್ಪ ದೊಡ್ಡ ಬೀದಿಗೆ ಬಂದರು. ದೂರದಲ್ಲಿ ಏನೋ ಸ್ವಲ್ಪ ಜನರ ಗೊಂದಲ ಕೇಳಬರಹತ್ತಿತು. ಅಜಿತ ತನ್ನ ವಿಚಾರಸರಣಿಯನ್ನು ತಡೆದು ಇಂಥ ರಾತ್ರಿಯಲ್ಲಿ ಇದೇನು ಗೊಂದಲವೆಂದು ಬೆರಗುವಟ್ಟು ಕೇಳುತಲಿದ್ದ. ಅಷ್ಟರಲ್ಲಿ ಆ ಜನ

ಸಮೂಹ ಇವರ ಸಮೀಪಕ್ಕೆಯೇ ಬಂತು. ಅಲ್ಲೊಂದು ಮೂರು ಬೀದಿ ಗಳ ಒಂದು ಚಿಕ್ಕ ಕೂಟ. ಒಂದು ಕಂದೀಲು ಹಚ್ಚಿಕೊಂಡು ಬೀಡಿ ಕಡ್ಡಿಪೆಟ್ಟಿಗೆಗಳ ಚಿಕ್ಕ ವ್ಯಾಪಾರಿಯೊಬ್ಬ ಕುಳಿತಿದ್ದಾನೆ. ಈ ಭಾಗಕ್ಕೆ ಇನ್ನೂ ವಿದ್ಯುದ್ದೀಪಗಳನ್ನು ತರುವದಾಗಲಿಲ್ಲವೇನೋ ನಗರಸಭೆಗೆ. ಅದಕ್ಕೇನು ಅವಸರ? ಇಲ್ಲೇನು ಮುನಸಿಪಾಲ್ಟಿಯ ಮೆಂಬರರ ಮನೆ ಗಳಾಗಲಿ ಸಿರಿವಂತರ ವಿಲಾಸಭವನಗಳಾಗಲಿ ಇವೆಯೇ ಬೆಳಕಿನಲ್ಲಿ ಬೆಳಗಲಿಕ್ಕೆ? ಆ ಅಂಗಡಿಕಾರನ ಸುತ್ತೆಲ್ಲ ಕೂಲಿಕಾರರು ಇರುವೆಗಳಂತೆ ನೆರೆದಿದ್ದಾರೆ. ಇನ್ನಿಷ್ಟು ಮುಂದಕ್ಕೆ ಹೋದ ಮೇಲೆ—

"ಇದೇನು ಗೊಂದಲ?" ಎಂದು ಅಜಿತ ಕೇಳಿದ ಸುಧೀರನಿಗೆ.

"ಏನು ಹೇಳು ನೋಡೋಣ?" ಪರೀಕ್ಷಕರ ಪ್ರಶ್ನೆಯಾಗಿತ್ತು.

"ಬೀಡಿ ಅಂಗಡಿ ಅಲ್ಲೇನು?" ಅಂದ, ಅನುಮಾನಿಸುತ್ತ ಅಜಿತ.

"ಅಲ್ಲ; ಇಲ್ನೋಡು! ಇಲ್ಲಿಂದ ಸ್ವಲ್ಪ ದೂರದಲ್ಲಿಯೇ ಮೂರು ಬಟ್ಟೆಯ ಮಿಲ್ಲುಗಳಿವೆ. ಆ ಗಿರಣಿಗಳಿಗೆ ಕೂಲಿಕಾರರು ಹೋಗಿಬರುವ ಮೂರು ದಾರಿಗಳ ಕೂಟವಿದು, ಕಾಲಕೂಟವಿದ್ದಂತಿದೆ. ಈತ ಅಫು, ಮದ್ಯ, ಗಾಂಜಿಗಳನ್ನು ಕಳ್ಳತನದಿಂದ ಮಾರುತ್ತಾನೆ, ಇಲ್ಲಿ ಕುಳಿತು."

"ಅವನನ್ನು ಹಿಡಿಯಬೇಕು?" ನಡುವೆಯೇ ಸುಧೀರನ ಮಾತು ತಡೆದು ಅಜಿತ ಕೇಳಿದ.

"ಪೋಲೀಸರೆಲ್ಲ ಅವರಿಗೆ ಅನುಕೂಲ ಇರುತ್ತಾರೆ. ನಿನಗೆ ಇಲ್ಲಿಯ ಮವಾಲಿಗಳ ಕೈಯು ಮೊನ್ನೆಯೇ ಗೊತ್ತಾಗಿದೆಯಲ್ಲ!"

ಈಗ ಅಜಿತನ ತಲೆಯಲ್ಲಿ ಒಮ್ಮೆಲೇ ಪ್ರಕಾಶ ಬಿತ್ತು, ಅಂದು ಶಮಸೇರನ ಮಾತು ಕೇಳಿ ಪೋಲೀಸರು ತನ್ನನ್ನು ಬಿಟ್ಟ ಸಂಗತಿಯ ಗುಟ್ಟಿನ ಮೇಲೆ. ಹಾಗೆಯೇ ಸುಧೀರ ಮುಂದೆ ಹೇಳತೊಡಗಿದ:

"ಅಬಕಾರಿಯ ಖಾತೆಯ ಉತ್ಪನ್ನ ಶಿಕ್ಷಣಕ್ಕೆ ಸರಕಾರದವರಿಂದ ಕೊಡಲ್ಪಡುವದಿಲ್ಲವೇ? ಜನತೆ ಅಧೋಗತಿಗೆ ಇಳಿಯಲು ಮಾರ್ಗ ತೋರಿಸಿ, ಜನ ಎಷ್ಟು ಕೀಳು ದಾರಿಯಲ್ಲಿ ಮುಂದುವರಿಯುವರೋ ಆ ಪ್ರಮಾಣದಲ್ಲಿ ನಮ್ಮ ಶಿಕ್ಷಣದ ಸುಧಾರಣೆಯಾಗುವದು. ಇಂದು ಬಿ.ಟಿ. ಕಾಲೇಜಿನ ಆರಂಭ, ನಾಳೆ ಲಾ ಕಾಲೇಜಿನ ರಜತಮಹೋತ್ಸವ, ನಾಡದು

ಆರ್ಟ್ಸ ಕಾಲೇಜಿನ ಸುವರ್ಣಮಹೋತ್ಸವ ಎನ್ನುವ ಪ್ರಗತಿಯೆಲ್ಲ ನಾಡಿನ ಜನತೆಯ ಅಧೋಗತಿಯ ಮೆಟ್ಟಲುಗಳ ದಿಗ್ದರ್ಶನವೇ. ಭಾರತ ಸುಧಾರಿಸುತ್ತಿರುವದೋ ರಸಾತಳಕ್ಕಿಳಿಯುತ್ತಿರುವುದೋ ನೋಡು. ರಾಷ್ಟ್ರಪುರುಷನ ಹೊಟ್ಟೆಗೆ ಕೂಳು ಹಾಕದೆ ಕುಸ್ತಿಗೆ ಸಿದ್ಧನಾಗೆಂದು ವ್ಯಾಯಾಮಕ್ಕೆ ತೊಡಗಿಸಿದಂತೆ."

ಇಷ್ಟು ಹೇಳಿ ಸ್ವಲ್ಪ ಹೊತ್ತು ಸುಮ್ಮನೆ ನಿಂತ ಸುಧೀರ. ಅವನ ಸ್ವರದಲ್ಲಿ ಈ ಮೊದಲು ಅಜಿತ ಎಂದೂ ಕಾಣದ ಒಂದು ತರದ ವ್ಯಗ್ರತೆಯನ್ನು ಕಂಡ. ಕೊಂಚ ಕಾಲ ಕಳೆಯಿತು. ಸಮೀಪದಲ್ಲಿ ಕೂಲಿಕಾರರ ಗುಂಪು ಬರುತ್ತಲಿದೆ. ಏನೋ ಮಾತುಗಳು ಕೇಳಬಂದುವು.

"ಇಂದ ನನಗ ಮುಚ್ಚಾವಲು ಹೆಚ್ಚಿಗೆ ಸಿಕ್ಕಿತೋ!"

"ಅಷ್ಟ ಆಗಲಿ ಅಲ್ಲಾ ಈಗ? ಹಿಂದಕ ನಾ ನಿನಗ ಕುಡಿಸಿಲ್ಲ?"

"ನಾನs ಕುಡಿಯೋದ ಬಿಟ್ಟಿದೇನಲ್ಲ! ಸುಧೀರ ಅಣ್ಣಾ ಹೇಳಿದಾಗಿಂದೂ!"

ಅಜಿತನ ಕಿವಿಗಳಿಗೆ ಈ ಮಾತುಗಳು ಬಿದ್ದೊಡನೆಯೇ ಸುಧೀರನ ಪಾದಗಳಿಗೆ ವಂದಿಸಬೇಕೆಂದೆನಿಸಿತವನಿಗೆ. ಸುಧೀರನ ಸಮೀಪಕ್ಕೆ ಇದ್ದು ನೋಡಿದಷ್ಟೂ ಅವನ ಸುಗುಣಗಳು ದಿನದಿನಕ್ಕೆ ಹೆಚ್ಚಿಗೆಯೇ ಕಾಣುತ್ತಿದ್ದುವು, ಅಜಿತನಿಗೆ. ಆದರ ಹೆಚ್ಚುತ್ತಿದ್ದಿತು. ದೂರ ನಿಂತವನು ಸರಿದು ಅಜಿತ ಹತ್ತರ ಹೋದ. ಹೃದಯದಲ್ಲಿಯೇ ಹೋಗಬೇಕೆಂದಿನಿಸಿತ್ತೇನೋ ಅವನಿಗೆ. ನಡೆಯಲ್ಲಿ ಅಂಥ ಆವೇಗವಿತ್ತು. ಆಗ ಸುಧೀರ ಹೇಳಿದ:

"ಅಜಿತ, ಬರುತ್ತಿರುವ ಈ ಗುಂಪು ನಾನು ಕೆಲಸ ಮಾಡುತ್ತಿರುವ ಗಿರಣಿಯೊಳಗಿನ ಕೂಲಿಕಾರರದು. ಇಂದು ಶನಿವಾರ. ಅವರ ಸಂಬಳ ಆಗುವದಿದ್ದಿತು. ಸಂಬಳ ಕೊಡುವ ದಿನವೆಂದು, ದಿನದಕ್ಕಿಂತ ಒಂದು ತಾಸು ಕೆಲಸ ಹೆಚ್ಚು. ಸಂಬಳ ಸಿಗುವದೆಂಬ ಹುರುಪಿನಲ್ಲಿ ದುಡಿಯುತ್ತಿದೆ. ಜನ ಅವರ ದುಡಿತಕ್ಕೆ ಅವರ ದುಡ್ಡು ಅವರಿಗೇ ಕೊಡಬೇಕಾದರೂ ಒಂದು ತಾಸು ಪುಕ್ಕಟೆ ದುಡಿಸಿಕೊಳ್ಳುವುದು ಈ ಸಿರಿವಂತ ವರ್ಗ. ಅವರ ಸಂಬಳ ಕೊಡುವುದೂ ಕೂಡ ಭಾಂಡವಲದಾರರು ಒಂದು ದಯೆದೋರಿ

ದಂತೆ ಕೂಲಿಗಳ ಮೇಲೆ.''

ಅಷ್ಟರಲ್ಲಿ ಕೆಲಸಗಾರರ ಗುಂಪು ತೀರ ಸಮೀಪಕ್ಕೆ ಬಂತು. ರೊಕ್ಕ ಕೈಯಲ್ಲಿ ಬಂದುದರಿಂದ ಉಲ್ಲಸಿತ ಸ್ವರದಲ್ಲಿ ಮಾತುಗಳು ಹೊರಡುತ್ತಿದ್ದುವು. ನಿರ್ಜೀವ ದೇಹದಲ್ಲಿಯು— ಮರಣೋನ್ಮುಖ ರೋಗಿಯ ಕೊನೆಯ ಉತ್ಸಾಹದಂತೆ ಉತ್ಸಾಹವೂ ಇದ್ದಿತು ಅವರಲ್ಲಿ. ಪರಕು ರುಮಾಲು, ತೇಪೆ ಹಚ್ಚಿದ ಕೋಟು, ಹರಕು ಅಂಗಿ, ಎಂದೋ ಸ್ನಾನ ಮಾಡಿದ ಹೊಲಸು ಮೈ. ಕೆಲವರು ಹರಕು ಚಿಂದಿಯೊಂದನ್ನು ನಡುವಿಗೆ ಸುತ್ತಿದ್ದಾರೆ. ಹಲವರು ಅರ್ಧ ಚೊಣ್ಣ ಹಾಕಿಕೊಂಡಿದ್ದಾರೆ, ಮರ್ಯಾದೆ ಕಾಯ್ದುಕೊಳ್ಳುವುದಕ್ಕಾಗಿ. ಅವು ನೀರು ಕಂಡುದೆಂದೋ! ಮುಖದ ಮೇಲೆ ಗಿರಣಿಯೊಳಗಿನ ಧೂಳು! ಗುಂಪು ಬಂದಿತು ಎದುರಿಗೆ. ಭಾರತದ ನಗ್ನ ಸ್ವರೂಪವಿದು! ಹತ್ತಿರ ಬಂದಿತು. ಮಂದ ಬೆಳದಿಂಗಳಿನ ಇರುಳಿನಲ್ಲಿ, ಕೆಲವರು ಆ ಅಂಗಡಿಯ ಕಡೆಗೆ ಹೊರಳುತ್ತಿದ್ದರು. ಕೆಲವರು ಬೇಡವೆಂದು ಎಳೆಯುತ್ತಿದ್ದರು. ಅವರವರಲ್ಲಿ ಜಗ್ಗಾಟ, ತಿಕ್ಕಾಟ, ವಾದವಿವಾದ!

"ಇದೊಂದ ನಮ್ಮ ತಾಯಿ ಇದ್ದಾಂಗರ್ಯೋ, ತಾಯಿನ ಒದ್ದು ಮುಂದ ಹ್ಯಾಂಗ ಹೋಗತೀರ್ಯೋ, ನಿಮಗ ದಯಾ ಮಾಯಾ ಹ್ಯಾಂಗ ಬರೋದಿಲ್ಲ'' ಎಂದು ಹುಚ್ಚು ಸ್ವರದಲ್ಲಿ ಒಬ್ಬ ಕುಡುಕ ಒದರಿದ.

"ಹೋಂದ್ಲೆ; ಬರ್‍ರಿ! ಇದೊಂದ ದಿನಾ ಕುಡದರ ಏನಾಗ್ತೇತಿ?" ಎಂದು ಇನ್ನೊಬ್ಬ ಅತ್ತ ನಡೆದ.

"ನನ್ಗೂ ಮೈ ನೂಸಕ ಹತ್ತೀತ್ಯೋ."

ಮೈದಣಿ ದುಡಿದು, ಸೆರೆ-ಸಿಂದಿಯ ಮಬ್ಬಿನಲ್ಲಿ ಶ್ರಮವನ್ನು ಮರೆಯುವ ಜನವದು!

ಇಲ್ಲಿಯ ವರೆಗೆ ಬದಿಗೆ ನಿಂತ ಸುಧೀರ ಅಜಿತರಿಬ್ಬರೂ ಎದುರಿಗೆ ಬಂದರು. ಆಗ ಕೂಡಲೇ ಸುಧೀರನ ಗುರುತು ಆ ಜನಕ್ಕೆ ಹತ್ತಿತು. ಅವರ ಗಿರಣಿಯ ಕೆಲಸಗಾರನೇ ಆತ. ಕೂಲಿಕಾರರು ಬೆದರಿದರು. ಹಿಂಜರಿದರು. ಕೆಲವು ಕುಡಿಯುವ ಲಾಲಸಿಗರು, 'ಇದೆಲ್ಲಿಂದ ಪೀಡೆ ಬಂದಿತೋ' ಎಂದುಕೊಂಡರೇನೊ!

" ಇಷ್ಟೇಕೆ ವೇಳೆಯೋ? " ಎಂದು ಸುಧೀರ ಕೇಳಿದ.

" ಪಗಾರ ಕೊಡಬೇಕಾದ್ರ ತಡ ಹಚ್ಚಿದರು, ಇನ್ನs ಲೆಕ್ಕ ಆಗಿರಲಿಲ್ಲಂತ ದ್ಯಾವ್ರು. ನೀವಿದ್ದಾಗ ಮೂರು ಸಂಜಿನಾಗs ಕೊಟ್ಟಬಿಡತಿದ್ದರಿ! "

ಸುಧೀರನಿಗೆ ಎಲ್ಲವೂ ಗೊತ್ತು. ಅವನೂ ಕೆಲ ದಿನ ಸಂಬಳ ಕೊಡುವ ಕೆಲಸ ಮಾಡಿದವನಿದ್ದ. ಈಗೀಗ ಆ ದಪ್ತರ ಇನ್ನೊಬ್ಬರ ಕಡೆಗೆ ಹೋಗಿ ಇವನಿಗೆ ಬೇರೆ ಕೆಲಸ ಕೊಡಲ್ಪಟ್ಟಿತ್ತು.

" ಈಗ ನೆಟ್ಟಗೆ ಮನೀಗೆ ಹೋಗಿಬಿಡಿರಿ. ಮತ್ತೇನ ಮಾಡಬೇಡಿರಿ! "

" ಇಲ್ಲ ದ್ಯಾವ್ರು! " ಗುಂಪು ನಿರುತ್ಸಾಹದಿಂದ ಮುಂದೆ ಸಾಗಿತು. ಅವರಲ್ಲಿ ಕೆಲವರು ಹೊರಳಿ ಹೊರಳಿ ನೋಡುತ್ತಿದ್ದರು. ಸುಧೀರ ಅಲ್ಲೇ ನಿಂತಿದ್ದ, ಕಾವಲುಗಂಬದಂತೆ. ಸ್ವಲ್ಪ ಹೊತ್ತಿನ ಮೇಲೆ ಏನು ನೆನಪು ಬಂದಿತೇನೋ " ಕೂಲಿ ಕೊಡಬೇಕಾದರೂ ಕಾರಕೂನ ಲಂಚ ತಿನ್ನುವ ಇವರಿಂದ" ಎಂದು ಹೇಳುತ್ತಲೇ ಲಗುಬಗೆಯಿಂದ ಆ ಗುಂಪಿನ ಹಿಂದೆ ನಾಲ್ಕು ಹೆಜ್ಜೆ ಹೋದ. ಸ್ವಲ್ಪ ಮುಂದೆ ಹೋದ ನಂತರ—

" ಏ ಸಿದ್ದಾ! " ಎಂದು ಕೂಗಿದ.

ಗುಂಪಿನೊಳಗಿನ ಒಬ್ಬ ಹರಯುದವ ಹೊರಳಿ ನಿಂತ. ನಾಲ್ಕು ಹೆಜ್ಜೆ ಮುಂದೆಯೂ ಬಂದ. ಏನೋ ಮರೆತದ್ದು ನೆನಪಾದವನಂತೆ,
" ಹೋಂದ ದ್ಯಾವ್ರು! ನನಗ ನೆಪ್ಪs ಆಗಲಿಲ್ಲ! " ಎಂದ.

" ಆಗದಿದ್ದರ ಎಲ್ಲಿ ಹೋಗ್ತಾವ ಬಿಡು? "

" ಇಲ್ಲ ದ್ಯಾವ್ರು, ಮುಂದಿನ ವಾರತನಕ ಮತ್ತ ರೊಕ್ಕ ಕೈಯಾಗs ಏನಾ ತಿಂದ್ಯಾನ ಅಂದ್ರೂ ಇರೂದಿಲ್ಲ. ಈಗs ತಕ್ಕೊಂಡ ಬಿಡ್ರಿ! " ಎಂದು ಒಂದಾಣೆ ಕೊಟ್ಟ.

ಅಜಿತನ ಕಡೆಗೆ ಸುಧೀರ ಮರಳಿ ಬರುತ್ತ ಹೇಳಿದ :

" ಮೊನ್ನೆ ಕೂಸಿಗೆ ಅಪ್ಪುವಿಗೆಂದು ರೊಕ್ಕ ಇರಲಿಲ್ಲ ಸಿದ್ದನ ಹತ್ತರ ಕೇಳಿದ. ಒಂದಾಣೆ ಕೊಟ್ಟಿದ್ದೆ."

"ಕೂಸಿಗೆ ಯಾತಕ್ಕ ಅಪ್ಪೂ?" ಆಶ್ಚರ್ಯದಿಂದ ಅಜಿತ ಕೇಳಿದ.

"ನಿನಗೆ ಕಲ್ಪನೆ ಬರಲಿಕ್ಕೆ ಶಕ್ಯವಿಲ್ಲ ಅಜಿತ, ಗೌಡರ ಮನೆಯೊಳಗ ಹುಟ್ಟಿ ಬೆಳದೀದಿ."

ಎಂದಿಷ್ಟೇ ಹೇಳಿದ. ಅಜಿತನೂ ಮುಂದೆ ಕೇಳಲಿಕ್ಕೆ ಹವಣಿಸಲಿಲ್ಲ. ಮತ್ತೊಂದು ನಾಲ್ಕು ಹೆಜ್ಜೆ ಮುಂದೆ ಹೋಗಿ, "ಬಂದಾಣೆಯ ಮಹತ್ವ ವೇನಪ್ಪು?" ಎಂದ.

"ಅದೂ ನನ್ನ ಹಣವಲ್ಲ. ಫಂಡಿನ ಹಣ. ಕೂಲಿಕಾರರಿಗೆ ವಿಪತ್ತು ಬಂದಾಗ, ಸಂಪು ಸಾರಿದಾಗ ಸಹಾಯಕ್ಕೆ ಬೇಕೆಂದು ಒಂದು ಫಂಡು ಕೂಡಿಸಲಾಗಿದೆ. ಆ ಫಂಡಿನ ಹಣದಿಂದಲೇ ಒಂದು ಪ್ರಾಥಮಿಕ ಸಾಲೆ ಯನ್ನೂ ಆರಂಭಿಸಿದ್ದೇವೆ ಕೆಲಸಗಾರರ ಮಕ್ಕಳಿಗಾಗಿ. ಇಂದಿರೆ ಆ ಸಾಲೆ ಯಲ್ಲಿಯೇ ಕೆಲಸಕ್ಕೆ ಹೋಗುವಳು. ಇನ್ನೂ ಒಂದಿಬ್ಬರು ಸಂಬಳ ವಿಲ್ಲದೆ ಕಲಿಸುವ ಹೆಣ್ಣುಮಕ್ಕಳೂ ಸಿಕ್ಕಿದ್ದಾರೆ. ಹೀಗೆ ನಾನೊಬ್ಬ ದುಡ್ಡು ಕೊಟ್ಟು ನೆರವಾದರೆ ಏನಾದೀತು? ಮುಗಿಲೇ ಹರಿದು ಬಿದ್ದಂ ತಿದೆ ಕೂಲಿಕಾರರ ಅವಸ್ಥೆಯೆಂದರೆ! ಪ್ರಸಂಗ ಬಂದಾಗ ಸಾವಿರಾರು ರೂಪಾಯಿಗಳ ನೆರವನ್ನೂ ಮಾಡಬೇಕಾದೀತು ಕೆಲಸಗಾರರಿಗೆ!"

ಸ್ವಲ್ಪ ಹೊತ್ತು ಸುಮ್ಮನೆ ಸಾಗಿದರು. ಇಬ್ಬರೂ ತಮ್ಮ ತಮ್ಮ ವಿಚಾರದಲ್ಲಿಯೇ ಗುಂಗಾಗಿದ್ದರು. ಅಜಿತನ ಮನದಲ್ಲಿ ಒಂದೇ ಒಂದು ವಿಚಾರ ತಿರುತಿರುಗಿ ಸುತ್ತುತ್ತಿದ್ದಿತು. 'ಯಾರು ಶ್ರೇಷ್ಠ? ಯಾರು ದೊಡ್ಡವರು? ಸಾವಿರಾರು ರೂಪಾಯಿ ಸಂಬಳ ತಕ್ಕೊಂಡು ವಿದ್ಯಾರ್ಥಿ ಗಳನ್ನು ನಾಗರಿಕರನ್ನಾಗಿ ಮಾಡಲು ವ್ಯರ್ಥ ಪ್ರಯತ್ನ ಪಡುತ್ತಿರುವ ಪ್ರಿನ್ಸಿಪಾಲ್ ಪ್ರೊಫೆಸರುಗಳೋ? ಇಲ್ಲವೆ ಏನೂ ಸಂಬಳವಿಲ್ಲದೆ ಈ ಕೆಲಸಗಾರರ ಮಕ್ಕಳಿಗೆ ಕಲಿಸಿ, ಕೆಲಸಗಾರರನ್ನೂ ಅವರ ಮಕ್ಕಳನ್ನೂ ಉದ್ಧರಿಸಲು ನಿಂತ ಸುಧೀರ ಇಂದಿರೆಯರೊ? ಇಂಗ್ಲಂಡದಷ್ಟೇ ವಿಶಾಲ ವಾಗಿರುವ ಪ್ರಾಂತಗಳ ಮೇಲೆ ಅಧಿಕಾರವನ್ನು ನಡೆಯಿಸಲಿಕ್ಕೆಂದು ಲಕ್ಷಾವಧಿ ರೂಪಾಯಿಗಳನ್ನು ಪಗಾರ ರೂಪದಿಂದ ಎತ್ತಿಹಾಕಿ ಕೈಕೆಳ ಗಿನ ಜನರಿಗೆ ರಾಜ್ಯಸತ್ತೆಯ ಕಟುಪರಿಚಯವನ್ನು ಮಾಡಿಕೊಡುವ ಗವರ್ನರ ಶ್ರೇಷ್ಠನೋ? ಇಲ್ಲವೆ ಯಾವಾಗ್ಗೆ ಕೆಲಸದ ಮೇಲಿಂದ ತೆಗೆದಾ

ರೆಂಬ ನಿಯಮವಿಲ್ಲದೆ ಬಡವರ ಕಷ್ಟನಷ್ಟಗಳಲ್ಲಿ ಒಂದಾಗಿ ದುಡಿಯುವ ಈ ತರುಣ ಶ್ರೇಷ್ಠನೋ! ಊರನ್ನೇ ಸುಲಿದು ತಿಂದು ತೇಗುವ ಬ್ರಿಟಿಷ ಸತ್ತೆಯ ಸೂತ್ರಧಾರಿಯಾದ ಆದಗೌಡ ದೊಡ್ಡವನೋ? ಇಲ್ಲವೆ ಕೂಸಿಗೆ ಅಫೂ ತಿನ್ನಿಸಿ ಕೆಡವಿ ಹೆಂಡತಿಯನ್ನು ಕೆಲಸ ಮಾಡಲು ಹಚ್ಚುವ ಕೂಲಿಕಾರನು ದೊಡ್ಡವನೋ? ಕೂಲಿಯವರನ್ನು ಉಪವಾಸವಿಟ್ಟು ಲಾಭ ಮಾಡಿಕೊಂಡು ಕಾಲೇಜದ ಕಟ್ಟಡಕ್ಕೆ ಹತ್ತು ಸಾವಿರ ರೂಪಾಯಿ ಕೊಡುವ ಭಗವಾನಲಾಲನು ದಾನಶೂರನೋ? ಹೊಟ್ಟೆಗಿಲ್ಲದಾಗಲೂ ತಮ್ಮ ಸಂಘಕ್ಕೆ ನಾಲ್ಕಾಣೆ ಕೊಡುವ ಈ ಕೂಲಿಯವನು ಉದಾರನೋ?

ಸಣ್ಣಂದಿರುವಾಗ ಕಲಿತ ಕವಿತೆ ನೆನಪಾಯಿತವನಿಗೆ.

'ವೈಗಳ್ಳನಾಗಬೇಡ ನೀ ಗುರು ತಾಯಿತಂದೆಗಳ ನುಡಿಗೆ.'

ಈ ವೃತ್ತಿಯ ಗುರುಹಿರಿಯರ ಮಾತಿಗೆ ವೈಗಳ್ಳನಾಗದಿದ್ದರೆ ಹೇಗೆ? ಬಾಲಕರ ವರ್ಗದಿಂದ ಕಾಲೇಜಿನ ಪ್ರಿನ್ಸಿಪಾಲರ ವರೆಗಿನ ಎಲ್ಲ ಗುರುಗಳ ನೆನಪಾಯಿತವನಿಗೆ. ಪ್ರಾಥಮಿಕ ಸಾಲೆಯ ಒಂದಿಬ್ಬರು ಮಾಸ್ತರರು ಅಂತಃಕರಣವುಳ್ಳವರಿದ್ದರು. ಹಾಯ್‌ಸ್ಕೂಲಿನ ಜೀವನದಲ್ಲಿ ಜಾಧವ ಮಾಷ್ಟರರೊಬ್ಬರು. ಅವರ ಸಲುವಾಗಿ ಆದರವಿದ್ದಿತು ಅಜಿತನಿಗೆ. ಕಾಲೇಜಿನ ಪ್ರಿನ್ಸಿಪಾಲ? ಪ್ರೊಫೆಸರ್ಸ? ಉಚ್ಚ ಶಿಕ್ಷಣ ಕೊಡುವ ಡಾಂಭಿಕತನ ಮಾಡಿ ಕೇವಲ ಹೊಟ್ಟೆಯ ಉದ್ಯೋಗವನ್ನೇ ಮಾಡುವ ಈ ವಿಲಾಸಿಗಳ—ಕ್ಷುದ್ರಜೀವಿಗಳ—ನೆನಹೂ ಕೂಡ ಅಸಹ್ಯವೆನಿಸಿತಾಗ!

ಸರಕಾರವೆಂದರೆ ಪ್ರಜೆಗಳ ತಂದೆತಾಯಿಗಳಂತೆ! ಹಿಂದುಸ್ತಾನದ ಚಕ್ರವರ್ತಿ ಚಕ್ರವರ್ತಿಣಿಯರನ್ನು ಜನ ಚಿತ್ರದಲ್ಲಿಯೇ ಕಾಣಬೇಕು! ಅವರ ಪ್ರತಿನಿಧಿ ಭಾರತದಲ್ಲಿ ಸಂಚಾರ ಮಾಡುವಾಗ— ಸಾವಿರಾರು ಮೈಲು ತಾರು ಕಂಬಗಳಿಗೆ—ಫರ್ಲಾಂಗಿಗೆ ಮೂವರಂತೆ—ರಕ್ಷಣಕ್ಕಾಗಿ ಹಿಂದುಸ್ತಾನದ ಜನರನ್ನು ನಿಲ್ಲಿಸುವುದು! ಅದೂ ಬೆನ್ನ ತಿರುಗಿಸಿ! ರಾತ್ರಿ ಹಗಲುಗಳೆನ್ನದೆ ಕಾವಲು, ಚಳಿಮಳೆಗಳನ್ನು ಲಕ್ಷಿಸದೆ ಕಾವಲು, ಬಿಸಿಲು ಗಾಳಿಗಳ ಪರಿವೆ ಮಾಡದೆ ಕಾಯಬೇಕು ಮಕ್ಕಳು ತಂದೆಯನ್ನು! ಇಂಥ ಸರಕಾರ ಸ್ಥಾನಿಕ ಸ್ವರಾಜ್ಯದ ಹರಟೆ ಹೊಡೆಯುವ ತಾವೇ ರಾಜರೆಂದು ಭಾವಿಸುವರು! ರಾಜತಂತ್ರದ ಗೊಂಬೆಗಳಂತಿರುವ ಸಂಸ್ಥಾನಿಕರ ಸಭೆ

ಕರೆಯುವದು, ಸಂದೇಶ ಸಾರುವುದು, ಅವರ ಪೂರ್ವಜರಿಗೆ ವಿರೋಧ ಮಾಡಿದ ರಾಜರ ನೆನಪು ಮಾಡಿಕೊಡುವುದು. ಗಿಝ್ನಿ ಮಹಮ್ಮದ ನೊಯ್ದ ಸೋಮನಾಥ ದೇವಾಲಯದ ಚಂದನದ ಬಾಗಿಲಗಳನ್ನು ತಂದು ಭಾರತದಲ್ಲಿ ಮೆರೆಸಿ, ಪರ್ಯಾಯದಿಂದ ಜಾತಿಭೇದದ ಬೀಜ ಬಿತ್ತುವುದು. ಮೇಲೆ ಪ್ರಜೆಗಳಿಗೆ ಒಕ್ಕಟ್ಟಾಗಿರೆಂದು ಬೋಧಿಸುವುದು. ಹೀಗೆ ವಿಲಾಸವೃತ್ತಿಯಲ್ಲಿ ಐದಾರು ವರ್ಷ ಭಾರತದಲ್ಲಿ ಕಳೆದು ಭಾರತೀಯರ ಬಡತನವನ್ನು ಹೆಚ್ಚಿಸುವುದು! ಇದಕ್ಕಿಂತಲೂ ಹೆಚ್ಚಿಗೆ ಸರಕಾರಕ್ಕೂ ಪ್ರಜೆಗಳಿಗೂ ಏನಾದರೂ ಸಂಬಂಧವಿದ್ದರೆ ವರಿಷ್ಟ ಅಧಿಕಾರಿಗಳಿಗೇ ಗೊತ್ತು! ಇಲ್ಲವಾದರೆ ರಾವಬಹಾದ್ದೂರ ದಿವಾನಬಹಾದ್ದೂರರಿಗೇ ಗೊತ್ತು! ಈ ಸರಕಾರ ಪ್ರಜೆಗಳ ತಾಯಿತಂದೆ!

ಅಜಿತನ ಕಣ್ಣಿಗೆ ಕತ್ತಲು ಕವಿದಂತಾಯಿತು. ಕಾಲ ಕೆಳಗಿನ ನೆಲ ಸರಿದಂತೆ ಭಾಸವಾಗುತ್ತಿದ್ದಿತು!

“ಇದೇ ಆಫೀಸು” ಎಂಬ ಸುಧೀರನ ಮಾತು ಅಜಿತನನ್ನು ಎಚ್ಚರಿಸಿತು.

ಎದುರಿಗೆ ಒಂದು ಚಿಕ್ಕ ಮನೆ. ಅದರ ಬಾಗಿಲ ಮೇಲೆ “ಲಾಯಿಟ್ ಆಫೀಸು” ಎಂದು ಬರೆದ ಚಿಕ್ಕ ಬೋರ್ಡು. ಒಳಗೆ ಒಂದು ಮಿಣಿ ಮಿಣಿ ದೀಪ ಉರಿಯುತ್ತಿದೆ; ನೆಲದ ಮೇಲೆ ಒಂದೆರಡು ಜಮಖಾನೆಗಳನ್ನು ಹಾಸಲಾಗಿದೆ. ಒಬ್ಬ ಯುವಕ ಕುಳಿತು ಏನೋ ಟಪಾಲು ಬರೆಯುತ್ತಿದ್ದಾನೆ. ಮೈಯಲ್ಲೊಂದು ಹಾಫ್ ಶರ್ಟು, ಬಾಚದ ತಲೆಗೂದಲು, ಅಸ್ತವ್ಯಸ್ತವಾಗಿವೆ. ಮುಖದ ತುಂಬ ಗಡ್ಡದ ಕೂದಲು ಬೆಳೆದದ್ದು ಅಪರಿಚಿತರು ಯಾರಾದರೂ ಕಂಡರೆ ಹುಚ್ಚನಂತೆ ಕಾಣುವ ವೇಷ. ಇವರ ಹೆಜ್ಜೆ ಸಪ್ಪುಳಕ್ಕೆ ಎಚ್ಚತ್ತು ಮುಖ ಮೇಲೆತ್ತಿ “ಬರ್ರಿ! ಬರಲಿಕ್ಕೆ ತಡವಾಯಿತು? ಸಂಗಡ ಇನ್ನೊಬ್ಬರಾರು?” ಎಂದು ಮುಗುಳು ನಗೆ ನಕ್ಕು ಕೇಳಿದ. ಆ ಕಪ್ಪು ಮುಖದಲ್ಲಿ ಬಿಳಿ ಹಲ್ಲುಗಳು ಎದ್ದು ಕಂಡುವು, ಅಜಿತನಿಗೆ.

“ಇವನೇ ಆ ನಮ್ಮ ಆಪ್ತ. ಇತ್ತ ಒಲವಿದೆ. ಮೊನ್ನೆ ಕೊಟ್ಟ ಕಥೆ ಇವನೇ ಬರೆದುದು. ಆ ಹೊತ್ತೇ ಇವನ ಬಗ್ಗೆ ನಿಮಗೆ ಹೇಳಿದೆನಲ್ಲ!

ಇಂದು ಸಹಜ ಕರೆದು ತಂದೆ. ನಮ್ಮ ಪತ್ರಿಕೆಯ ಆಫೀಸು ತೋರಿಸಲಿಕ್ಕೆ" ಎಂದು ಸುಧೀರ ಹೇಳಿದ

"ಹೀಗೋ! ಬರ್ರಿ!" ಎಂದು ಅಜಿತನನ್ನು ಹತ್ತಿರ ಕೂಡಲು ಕರೆದ ಆತ. ಅಜಿತ ಸುಧೀರರಿಬ್ಬರೂ ಕುಳಿತರು. ಅಲ್ಲಿ ಒಳಗಿನ ಹ್ಯಾಂಡಪ್ರೆಸ್ಸಿನ ಸಪ್ಪಳ ಕೇಳಬರುತ್ತಿದ್ದಿತು. ಮನೆಯಲ್ಲಿ ಗಾಳಿಯಾಡದುದರಿಂದ ಒಂದು ತರದ ವಾಸನೆ ಏಳುತ್ತಿದ್ದಿತು. ಅಜಿತ ಕುಳಿತನಾದರೂ ಮನಸ್ಸಿಗೆ ಸಮಾಧಾನ ಇರಲಿಲ್ಲವೆಂಬುದು ಅವನ ಮುಖದ ಮೇಲೆ ಒಡೆದು ತೋರುತ್ತಿದ್ದಿತು.

"ಎರಡು ದಿನ ಆಯಿತು, ಪ್ರೆಸ್ಸಿನ ಕೆಲಸಗಾರನೊಬ್ಬ ಚಳಿಜ್ವರದಿಂದ ಮಲಗಿದಾನೆ. ಕೆಲಸವೆಲ್ಲ ಹಾಗೇ ಬಿದ್ದಿದೆ. ಈ ಹೊತ್ತು ರಾತ್ರಿ ಆರಂಭಿಸಬೇಕಾಯಿತು" ಎಂದ ಆ ಕುಳಿತ ಮನುಷ್ಯ.

"ಇಂಥಲ್ಲಿ ಕೆಲಸಮಾಡಿದರೆ ಜೇನೆ ಬೀಳದೆ ಏನು ಮಾಡುವನು ಪಾಪ!" ಅಜಿತ ಮನದಲ್ಲಿಯೇ ಅಂದುಕೊಂಡ.

"ವಿಳಾಸ ಬರೆಯುವ ಕೆಲಸ ಇವರಿಗೆ ಒಪ್ಪಿಸಿಬಿಡಿರಿ; ಮಾಡುತ್ತಾರೆ. ನಾವು ಪತ್ರಿಕೆಯ ಕೆಲಸ ನೋಡೋಣ ನಡೆಯಿರಿ" ಎಂದ ಸುಧೀರ.

"ಏನೂ ನೋಡಬೇಕಿಲ್ಲ ಎಲ್ಲ ಕೆಲಸ ತೀರಿದಂತಾಗಿದೆ. ಇದೊಂದು ಟಪಾಲು ಬರೆದು ಮುಗಿಸುವೆ. ಆಮೇಲೆ ಎಲ್ಲರೂ ವಿಳಾಸ ಬರೆಯಲಿಕ್ಕೇ ಹತ್ತೋಣ."

ಅಷ್ಟರಲ್ಲಿ ಒಳಗಿನಿಂದ ಒಬ್ಬನು ಪತ್ರಿಕೆಯ ಕೆಲವು ಪ್ರತಿಗಳನ್ನು ತಂದು ಸುಧೀರನ ಕೈಯಲ್ಲಿ ಕೊಟ್ಟ. ಅವುಗಳಲ್ಲಿ ಒಂದನ್ನು ಅಜಿತನ ಕೈಯಲ್ಲಿ ಕೊಡುತ್ತ, "ನಿನ್ನ ಕಥೆ ಈ ಸಲ ಬಂದಿದೆ ನೋಡು" ಎಂದ.

ಅಜಿತ ತೆಗೆದು ನೋಡಿದ. "Heart of Hindustan" ಎಂದು ಅವನು ಬರೆದ ಚಿಕ್ಕ ಕಥೆ ಪ್ರಕಟವಾಗಿದ್ದಿತು. ಅದು ಒಬ್ಬ ಕೂಲಿಕಾರನ ಜೀವನಚಿತ್ರ. ಕಥಾ ವಸ್ತು ಹೀಗೆ: 'ಒಬ್ಬ ಕೂಲಿಕಾರ ಬಹು ದಿನಗಳಿಂದ ಒಂದು ಗಿರಣಿಯಲ್ಲಿ ಕೆಲಸ ಮಾಡುತ್ತಿರುತ್ತಾನೆ. ಒಮ್ಮೆ ಅಕಸ್ಮಾತ್ತಾಗಿ ಅವನ ಕೈಯು ಮಶಿನಿನಲ್ಲಿ ಸಿಕ್ಕು. ಊನನಾಗುತ್ತಾನೆ. ಮುಂದೆ ಏನೂ ಕೆಲಸಮಾಡಲು ಬಾರದವನಂತಾಗುವ, ಅವನಿಗೆ ಗಿರಣಿಯ ಒಡೆಯರು ಸಹಾಯಂ ಧನ ನೀಡುವದಿಲ್ಲ. ಕೆಲಸವಿಲ್ಲ, ಹೀಗಾಗಿ ಉಪ

ವಾಸ ಬಿದ್ದು ಸಾಯುವನಾತ.' ಅಜಿತ ಓದಿದ. ಓದಿದಂತೆ ಅವನ ಕಣ್ಣು ಗಳಲ್ಲಿ ನೀರೂರಿದುವು. ಕೊನೆಗೆ ಕೊಂಚ ತಿದ್ದುಪಡೆ ಮಾಡಿದ್ದರು. ಆ ತಿದ್ದುಪಡೆ ಬಹು ಸಮರ್ಪಕವೆನಿಸಿತು. ತಿರುಗಿ ಓದಿದ. ತನ್ನ ಕೈಯೇ ಇಂಥ ಕಥೆ ಬರೆಯಿತೆ? ಎಂದು ತನ್ನಲ್ಲಿಯೇ ಕೇಳಿಕೊಂಡ. ಅಜಿತ ಪತ್ರಿಕೆಯನ್ನು ಮುಚ್ಚಿ ಕಣ್ಣಿಗೆ ಒತ್ತಿಕೊಂಡು ಸುಧೀರನ ಕೈಗೆ ಕೊಡುತ್ತ,—

" ನನಗೆ ಏನ ಮಾಡನ್ನುವಿರಿ ? " ಎಂದು ಕೇಳಿದ.

" ನೀನೂ ನಮ್ಮೊಡನೆ ಕೆಲಸ ಮಾಡಬಯಸುವಿಯಾ ? " ಅಂದ ಅಪರಿಚಿತ ಆ ವ್ಯಕ್ತಿ.

" ಹೌದು "

" ಜನತಾ ಸೇವೆ ಬಹಳ ಕಠಿಣ ಕೆಲಸ "

" ಇರಲಿ. "

" ಇದರಲ್ಲಿ ಹೆಜ್ಜೆ ಹೆಜ್ಜೆಗೂ ಕಷ್ಟ."

" ಬರಲಿ."

" ಕಷ್ಟ ಸಹಿಸಬಲ್ಲೆಯಾದರೆ ಬಾ, ಸೇರು, ಕೆಲಸ ಮಾಡು. ಇದೆಲ್ಲರ ಕೆಲಸ. "

" ಕೆಲಸವೇನೋ ಎಲ್ಲರದು. ಆದರೆ ಮಾಡುವ ಭಾಗ್ಯ ಬಹಳ ಜನಕ್ಕಿಲ್ಲ ! "

ಆತ ಅಜಿತನನ್ನೊಮ್ಮೆ ನಿಟ್ಟಿಸಿ ನೋಡಿದ, ಒಂದು ಕ್ಷಣ. ಸುಮ್ಮ ನಾದ. ಮೂವರೂ ಕೂಡಿ ಮಡಿಕೆ ಹಾಕುವುದು, ವಿಳಾಸ ಬರೆಯು ವುದು, ಅಂಚೆಯ ಚೀಟಿ ಮೆತ್ತುವದು, ಹೀಗೆ ಕೆಲಸ ಹಂಚಿಕೊಂಡು ಮಾಡತೊಡಗಿದರು. ಆಗಾಗ ಒಳಗಿನಿಂದ ಅಚ್ಚಾದ ಪ್ರತಿಗಳನ್ನು ಒಬ್ಬ ಕೆಲಸಗಾರನು ತಂದು ಕೊಡುತ್ತಿದ್ದ. ಎಲ್ಲರ ಕೈಗಳೂ ಯಂತ್ರದಂತೆ ಕೆಲಸದಲ್ಲಿ ತೊಡಗಿದ್ದುವು. ರಾತ್ರಿಯ ಗಭೀರ ಶಾಂತತೆಯನ್ನು ಭಂಗ ಮಾಡಿ ಕಿರ್ರೆಂದು ಹೊರಗೆ ಕ್ರಿಮಿಗಳ ಸದ್ದು ನಡೆದಿದ್ದಿತು. ದೀಪ ಉರಿದು ಕಾಡಿಗೆಯನ್ನು ಮನೆತುಂಬ ಪಸರಿಸುತ್ತಿದೆ. ಸುತ್ತಲೂ ಸುತ್ತುವ ಮೂರು ನಾಲ್ಕು ಪತಂಗಗಳಿಗೆ ನಕ್ಷತ್ರದ ಬೆಳಕಿನಂತೆ ಕಂಡಿರಬೇಕದು.

ಅಂತಲೇ ಆಶೆಯಿಂದ ಧಾವಿಸುತ್ತಿದ್ದವಷ್ಟು ! ತರುಲತೆಗಳಿಂದ ತುಂಬಿ ನಿಬಿಡವಾದ ವನಪ್ರದೇಶವು ದೂರದಿಂದ ಎಷ್ಟು ಸುಂದರವಾಗಿ ಕಾಣು ವುದೋ ಅಷ್ಟು ಸಮೀಪದಲ್ಲಿ ಹೋದಾಗ ಕಾಣದು. ಒಳಹೊಕ್ಕು ನೋಡಿದರೂ ಇನ್ನೂ ಕಂಟಕಪ್ರಾಯ. ಹಾಯ್‌ಸ್ಕೂಲಿನಲ್ಲಿ ಓದುತ್ತಿ ರುವಾಗ ಅಜಿತನು ನಿಜವಾದ ದೇಶಸೇವೆಯಿಂದ ಎಷ್ಟು ದೂರವಾಗಿ ದ್ದನೋ ಅಷ್ಟು ದೂರಿನ ದೃಶ್ಯವು ಪರಮ ರಹಸ್ಯಮಯ ನಂದನ ವನದಂತೆ ಕಾಣುತ್ತಿದ್ದಿತವನಿಗೆ, ಆ ದೂರದ ಅಂತರದ ಕಾರಣದಿಂದ. ಈ ದೇಶಸೇವೆಯೆಂಬ ಯಂತ್ರದ ಕಾರಖಾನೆಯು ಅತಿ ಜಟಿಲವೂ ಕಬ್ಬಿಣ ದಂತೆ ಕಠಿಣವೂ ವಿಪತ್ತು ಸಂಶಯ ಸಂಕಟಗಳಿಂದ ಪರಿವೃತವಾದುದೂ ಎಂಬದನ್ನವನರಿಯನು. ರಾಷ್ಟ್ರಸೇವಾನದಿಯು ಕಲನಾದಿನಿ ನಿರ್ಝರಿಣಿ ಯಂತೆ, ನಿರ್ಮಲ ನೀರ ಹೊನಲಿನಂತೆ ಸಹಜವೆಂದೂ, ಎದುರಿಗೆ ಕಾಣುವ ಪ್ರಗತಿಯ ಎಲ್ಲ ಮಾರ್ಗಗಳು ಪ್ರಶಸ್ತವೂ ಸರಳವೂ ಎಂದೂ ದೇಶವು ತನ್ನ ಕೇವಲ ಕಲ್ಪನೆಯಂತೆ ಮಾರ್ಪಡುತ್ತ ಹೋಗುವದೆಂದೂ ಅವನ ನಂಬಿಕೆ.

ವಿಶೇಷತಃ ಆ ಸಮಯದಲ್ಲಿ ಅವನ ಮನೋ ಮುಗಿಲಿನ ಬಹು ದೂರದ ಕ್ಷಿತಿಜದಲ್ಲಿ ಹೊಸ ಜವ್ವನದ ಅದಮ್ಯ ಬಿರುಮಳೆಯು ಬಿದ್ದು, ಮುಂದಿನ ಮಾರ್ಗವನ್ನೆಲ್ಲ ಚಿಗಿತ ಹೂದೋಟದಿಂದ ಅಲಂಕರಿಸಿತ್ತು. ಸಮಸ್ತ ಗಗನಾಂಗಣವು ಅವನ ಹೃದಯದ ಮೇಘ ಹಿಲ್ಲೋಲದಿಂದ ತುಂಬಿ ತುಳುಕುತ್ತಿದ್ದಿತು. ಭಾರತ ಭೂಮಿಯೆಲ್ಲವೂ ಬಿಸಲಿನಿಂದ ಬಳಲಿ ನಿಂತ ಕೋಮಲ ತರುಲತೆಗಳಂತೆ ಇದ್ದಿತು.

ಅಲ್ಲಿ ಕೆಲಸ ಮಾಡುವವರೆಲ್ಲ ಒಂದು ಮನೆಯವರಂತೆ ಇರುತ್ತಿ ದ್ದರು. ಅಜಿತನಿಗೆ ದಿನಗಳೆದಂತೆ ಎಲ್ಲರ ಪರಿಚಯವೂ ಆಯಿತು. ಪ್ರೆಸ್ಸಿನ ಕೆಲಸದ ಅನುಭವವೂ ಬೆಳೆಯಿತು. ಪತ್ರಿಕೆಯ ಆಡಳಿತವನ್ನೂ ಅರಿತು ಕೊಂಡ. ಅವನ ಕಾಲೇಜ ಅಭ್ಯಾಸದ ಜೊತೆಗೆ ಬಿಡುವಿನ ದಿನಗಳಲ್ಲಿ 'ಲಾಯಿಟ್' ಪತ್ರಿಕೆಯ ಕೆಲಸವೊಂದು ಅವನದಾಯಿತು. ಅದರಲ್ಲಿ ಆಗಾಗ ಚಿಕ್ಕ ಚಿಕ್ಕ ಬರಹಗಳನ್ನು ಕೊಡುತ್ತಿದ್ದ. ತನ್ನ ಲೇಖನ ಅಚ್ಚಾದ ಸಂಚಿಕೆಯ ಪ್ರತಿಯೊಂದನ್ನು ಊರಿಗೆ ಜಾಧವ ಮಾಸ್ತರರ ಕಡೆಗೆ ಕಳಿಸು

ತ್ತಿದ್ದ. ಇವನ ಪ್ರಗತಿಯನ್ನು ಕಂಡು ಅವರು ಆನಂದಬಡುತ್ತಿದ್ದರು. ಆಗಾಗ ಉತ್ಸಾಹ ಕೊಟ್ಟು ಪತ್ರವನ್ನೂ ಬರೆಯುತ್ತಿದ್ದರು.

ಅಜಿತ ಈ ಎಲ್ಲ ಕೆಲಸಗಳನ್ನೂ ನೋಡಿಕೊಂಡು ಕಾಲೇಜಿನಲ್ಲಿ ಒಂದು ಕೆಲಸ ಕೈಕೊಂಡಿದ್ದ. ಸವಿಮಾತು, ನಗೆಮೊಗದವನಾದುದರಿಂದ ಅಲ್ಲಿಯೂ ಅವನಿಗೆ ಬಹುಜನ ವಿದ್ಯಾರ್ಥಿಗಳು ಗೆಳೆಯರಾಗಿದ್ದರು. ಅದರ ಫಲವಾಗಿ ಆತನು ಬೇಗನೆ ಕಾಲೇಜ ವಿದ್ಯಾರ್ಥಿಗಳ ಅಭ್ಯಾಸ ಮಂಡಲ (Study Circle) ವೊಂದನ್ನು ಸ್ಥಾಪಿಸಿದ್ದ. ಆ ಮಂಡಲ ದಲ್ಲಿಯು ಅವನ ಐದು ಜನ ಮಿತ್ರರೂ ಅಜಿತನ ಯೋಜನಾ ವಿಚಾರಣೆಯಲ್ಲಿ ಕೆಲಸ ಹಂಚಿಕೊಂಡಿದ್ದರು. ಮೊಹದೀನ ಬ್ಯಾರಿಷ್ಟರನಾಗಿ ಮುಸಲ್ಮಾನರ ಮುಂದಾಳಾಗಿ ನಿಂತು ಎಲ್ಲ ಮುಸಲ್ಮಾನರ ಮನಸ್ಸನ್ನು ಐಕ್ಯದ ಕಡೆಗೆ ಹೊರಳಿಸುವುದು. ಶೀತಲ ತನ್ನ ತಂದೆಯ ಕಾರಖಾನೆಗಳಲ್ಲಿ ಕೂಲಿ ಕಾರ ಹಿತದ ದೃಷ್ಟಿಯಿಂದ ಮಾರ್ಪಾಡು ಮಾಡಬೇಕು. ಚಂದ್ರಕಾಂತ ಆಯ್. ಸಿ. ಎಸ್. ಪರೀಕ್ಷೆ ಪಾಸಾಗಿ ನೌಕರಿಯಲ್ಲಿ ಸೇರಿ ತನ್ನ ಕೈಕೆಳ ಗಿನ ಎಲ್ಲ ನೌಕರರನ್ನು ದೇಶದ ಸ್ವಾತಂತ್ರ್ಯದ ಕಡೆಗೆ ಕೆಲಸಕ್ಕೆ ಹಚ್ಚು ವದು. ಯಶವಂತ ಗರಡೀಮನೆ ಸ್ಥಾಪಿಸಿ ಸ್ವಯಂಸೇವಕರ ದಳ ಹೊರ ಡಿಸಿ ಶಾರೀರಿಕ ಶಿಕ್ಷಣ ಕೊಡುವುದು. ಶೇಷಾದ್ರಿ ವಿಜ್ಞಾನ ಶಾಸ್ತ್ರದ ಹಲವು ಶೋಧಗಳನ್ನು ನಡೆಯಿಸಿ, ಎಲ್ಲ ದೇಶಗಳ ಸೈನ್ಯ ಒಂದುಗೂಡಿ ದರೂ ಯಾವುದರ ಮುಂದೆ ನಿಲ್ಲಲಾರದೋ ಅಂಥ ಮೃತ್ಯುಕಿರಣ (Death Rays) ಶೋಧಿಸಿ ತೆಗೆಯುವ ರೀತಿಯಲ್ಲಿ ಅಭ್ಯಾಸ ಮುಂದು ವರಿಸತಕ್ಕದ್ದು ಎಂದು ನಿರ್ಧರಿಸಲಾಗಿತ್ತು.

ಅಜಿತ ಅರ್ಥಶಾಸ್ತ್ರದ ಅಭ್ಯಾಸ ಮಾಡುತ್ತ, ಎಲ್ಲರಿಗೂ ಮಾರ್ಗ ದರ್ಶಕನಾಗಿರುವದು, ಅಲ್ಲದೆ ಗುಪ್ತರೀತಿಯಿಂದ ಬೌದ್ಧಿಕ ಹಾಗೂ ಸಾಂಸ್ಕೃತಿಕ ಸೀಮೆಯ ಮೇಲೆ ತನ್ನ ಮಂಡಲದ ಸದಸ್ಯ ಸೈನ್ಯ ಇಟ್ಟು ಕೊಂಡಿರುವುದೂ ಅವನ ಕೆಲಸವಾಗಿತ್ತು. ದೇಶದ ಸ್ವಾತಂತ್ರ್ಯದ ಬಗ್ಗೆ ಸಮಾಜ ಸೇವೆಯ ಬಗ್ಗೆ ಇಂಥ ರಸಭರಿತ ಯೋಜನೆಗಳು ಅಜಿತನಿಂದ ಸೂಚಿಸಲ್ಪಡುತ್ತಿದ್ದುದರಿಂದಲೇ ಅವನ ಮೇಲೆ ಎಲ್ಲರ ಶ್ರದ್ಧೆಯಿದ್ದಿತು.

ಅಭ್ಯಾಸ ಮಂಡಲದ ಗೆಳೆಯರೆಲ್ಲರೂ ತಮ್ಮ ತಮ್ಮ ವಿಷಯಗಳಲ್ಲಿ

ಅಭ್ಯಾಸ ಮಾಡಿ ಲೇಖನ ಬರೆದು ತರುತ್ತಿದ್ದರು. ಕೂಡಿ ಓದಿ ಚರ್ಚಿಸುತ್ತಿದ್ದರು ಒಳ್ಳೆಯವುಗಳನ್ನು ಪತ್ರಿಕೆಗಳಿಗೆ ಪ್ರಕಟನೆಗೂ ಕಳಿಸುವರು. ಇದೆಲ್ಲ ಕೆಲಸವನ್ನು ಆ ಕಾಲೇಜಿನ ಒಬ್ಬಿಬ್ಬರು ಪುರೋಗಾಮಿ ಪ್ರೊಫೆಸರರು ಸಹಾನುಭೂತಿಯಿಂದಲೂ ಕಾಣುತ್ತಿದ್ದರು.

ಒಂದೆಡೆಗೆ 'ಲಾಯಿಟ್' ಪತ್ರಿಕೆಯ ಕೆಲಸ ಇನ್ನೊಂದೆಡೆಗೆ ಕಾಲೇಜ ಅಭ್ಯಾಸ. ಮತ್ತೊಂದೆಡೆಗೆ ಅಭ್ಯಾಸ ಮಂಡಲದ ನೇತೃತ್ವ. ಹೀಗೆ ಅಜಿತನ ವೇಳ ಹೇಗೆ ಹೋಗುತ್ತಿದ್ದಿತೆಂಬುದು ಗೊತ್ತಾಗುತಿರಲಿಲ್ಲ ಕೂಡ. ನೋಡು ನೋಡುವಷ್ಟರಲ್ಲಿ ಪರೀಕ್ಷೆ ಬಂದಿತು, ಆಯಿತು. ಬೇಸಿಗೆಯ ಬಿಡುವಿನಲ್ಲಿ ಊರಿಗೆ ಹೋಗಬೇಕೆಂಬ ನೆನಪೂ ಕೂಡ ಅವನಿಗೆ ಆಗಲಿಲ್ಲ. ಬಿಡುವಿನಲ್ಲಿ ಏನಾದರೂ ಓದುವುದು, ಗೆಳೆಯರ ಮನೆಮನೆಗೂ ತಿರುಗಿ ಅಭ್ಯಾಸಮಂಡಲದ ಕಾರ್ಯ, ಧ್ಯೇಯಗಳಲ್ಲಿ ಅವರು ನಿರಾಶೆಗೊಳ್ಳದಂತೆ ನೋಡಿಕೊಳ್ಳುವುದು, ಕೈಲಾದಷ್ಟು ಪತ್ರಿಕೆಯ ಕೆಲಸಕ್ಕೆ ನೆರವಾಗುವುದು. ಈ ವಿಚಾರದಲ್ಲಿದ್ದ ಅಜಿತನಿಗೆ ಊರಿಗೆ ಬಂದು ಹೋಗೆಂದು ಒಂದೆರಡು ಪತ್ರಗಳು ಬಂದರೂ ಕೂಡ ಅದಕ್ಕೆ ಉತ್ತರ ಬರೆಯಲಿಕ್ಕೂ ಸಹ ಅವನಿಗೆ ಸಮಯ ಸಿಕ್ಕಲಿಲ್ಲ.

ಒಂದಿನ ಅಕ್ಕ ಬಹಳ ಹೇಳಿಕೊಂಡ ಮೇಲೆ ಓದುವುದನ್ನು ಬಿಟ್ಟು ಪೇಟೆಗೆ ಸಾಮಾನು ತರಲಿಕ್ಕೆ ಹೋದ ಅಜಿತ. ಅವರಿಗೆ ಇತ್ತಿತ್ತಲಾಗಿ ಇಂಥ ಮನೆ ಕೆಲಸಗಳ ಕಡೆಗೆ ಲಕ್ಷ್ಯ ಪೂರೈಸುವದೆಂದರೆ ಕ್ಷುಲ್ಲಕ ವಿಚಾರವೆನ್ನಿಸುತ್ತಿದ್ದಿತು. ಎಂದಾದರೂ ತಾಯಿಯ ನೆನಪನ್ನು ಅಕ್ಕ ತೆಗೆದರೆ 'ನಮ್ಮ ಬುದ್ಧಿ ಪ್ರೇಮಗಳು ಕೇವಲ ಮನೆಯ ನಾಲ್ಕು ಗೋಡೆಗಳ ಆವರಣದಲ್ಲಿಯೇ ಸಿಕ್ಕು ಕೂಡಬಾರದು. ಅವು ಹೊರಗೂ ಹರಿದು ವಿಶ್ವವ್ಯಾಪಿಯಾಗಬೇಕು' ಎಂದು ಹೇಳುತಲಿದ್ದ. ಇದರಿಂದ ಇಂದಿರೆಯೂ ಅವನಿಗೆ ಅಷ್ಟೇನೂ ಕೆಲಸ ಹೇಳುತ್ತಿರಲಿಲ್ಲ. ಇತ್ತಿತ್ತಲಾಗಿ ಅವಳ ದೇಹದಲ್ಲಿ ಯಾಕೋ ಆಲಸ್ಯ ಹೆಚ್ಚಿದುದರಿಂದ ಅಜಿತನನ್ನು ಪೇಟೆಗೆ ಕಳಿಸಬೇಕಾಗಿದ್ದಿತು.

ಅಜಿತ ಪೇಟೆಯಲ್ಲಿ ಹೋಗಿ ಮನೆಗೆ ಬೇಕಾಗುವ ಅಕ್ಕಿ ಬೇಳೆಗಳನ್ನು ಕೊಂಡ. ಮೇಲಿಂದ ಮೇಲೆ ಈ ಉಪದ್ರವ ಬೇಡೆಂದು ಸ್ವಲ್ಪ

ಹೆಚ್ಚಾಗಿಯೇ ಕೊಂಡಿದ್ದ. ಎರಡು ಕೈಚೀಲಗಳೂ ತುಂಬಿದ್ದುವು; ಜಡವಾಗಿದ್ದುವು. ವಿಚಾರದ ಭಾರದಲ್ಲಿ ಕೈಯೊಳಗಿನ ಭಾರದ ಅರಿವು ಅವನಿಗಿರಲಿಲ್ಲ. ಮನೆಯ ಕಡೆಗೆ ಹೊರಳಿ ನಡೆದಿದ್ದ. ಅಷ್ಟರಲ್ಲಿ,—

"ಯಪ್ಪಾ! ಯಪ್ಪಾ!" ಎಂಬ ಕೂಗೊಂದು ಅವನ ಕಿವಿಗೆ ಬಂದುತಾಗಿತು.

ಮುಂಬಯಿಯಲ್ಲಿ ಕನ್ನಡಿಗರಿದ್ದಾರೆ. ಕನ್ನಡ ಕಲಿಯುವ ಲವಲವಿಕೆಯುಳ್ಳವರೂ ಇದ್ದಾರೆ, ಎಂಬುದು ಈ ಮೊದಲೇ ತಿಳಿದಿತ್ತಾದರೂ ಈ ಕರೆಯು ಅಮೃತದ ಧಾರೆಯಂತೆ ಅನಿಸಿತವನಿಗೆ. ಯಾವ ನುಡಿಯನ್ನು ತನ್ನೂರಲ್ಲಿ ದಿನಾಲು ಸಾವಿರ ಸಲ ಕೇಳಿದರೂ ಏನೂ ಅನ್ನಿಸುತ್ತಿರಲಿಲ್ಲವೋ ಅದನ್ನೇ ಇಲ್ಲಿ ಕೇಳಿದಾಗ ಅವನ ಮೈ ಪುಳಕಗೊಂಡಿತು. ಹಿಂದಿರುಗಿ ನೋಡಿದನು. ಸಮೀಪದಲ್ಲಿ ಒಬ್ಬ ನಡುಹರಯದ ಮನುಷ್ಯನು ಬರುತ್ತಿದ್ದನು. ಅವನ ಮೈಮೇಲಿನ ಬಟ್ಟೆಗಳನ್ನು ನೋಡಿ ಅವನಾರೆಂಬುದು ಅಜಿತನಿಗೆ ತಟ್ಟನೆ ಹೊಳೆಯಿತು. ಅವನು ತನ್ನನ್ನೇ ಕರೆಯುತ್ತಿರುವನೆಂದು ತಿಳಿದೊಡನೆ "ಏಕೆ?" ಎಂಬ ಪ್ರಶ್ನೆಯ ಭಾವವನ್ನು ಹುಬ್ಬು ಏರಿಸುವುದರಿಂದಲೇ ಪ್ರಕಟಿಸಿದ. ಅಜಿತ ನಾಲ್ಕು ಹೆಜ್ಜೆ ಅವನ ಕಡೆಗೆ ಹೋಗುತ್ತ,—

"ಯಪ್ಪಾ! ಚೀಲ ಕೊಡತೀರ್ಯಾನ್ರಿ! ನಾ ತರತ್ಯಾನು" ಎಂದ ಆತ. ಧ್ವನಿಯಲ್ಲಿ ದೈನ್ಯವಿತ್ತು.

ಅಜಿತನು ಕೂಲಿಯವನ ಕೈಯಿಂದ ತನ್ನ ಕೈಚೀಲವನ್ನು ಒಯ್ಯಿಸುವಂಥ ಕಾಲೇಜ ವಿದ್ಯಾರ್ಥಿಯಾಗಿರಲಿಲ್ಲ. ಉಳಿದವರಂತೆ ಅಶಕ್ತತೆಯನ್ನು ಅವನಿಗೆ ಶಿಕ್ಷಣ ತಂದು ಕೊಟ್ಟಿರಲಿಲ್ಲ. ಅದರಲ್ಲೂ ಕೂಲಿಯವನ ಮೇಲೆ ಹೊರಿಸುವಷ್ಟು ಸಾಮಾನು ಇರಲಿಲ್ಲ. ಆದರೂ ಆ ವ್ಯಕ್ತಿಯ ದನಿ ಕೇಳಿ ಕೊಡಬೇಕೆನಿಸಿತು ಪರಿಪಾಠ ಬಲದಿಂದ.

"ಬೇಡ ಹೋಗೋ" ಎಂದ.

"ಯಾನ ಕೊಟ್ಟದ ಕೊಡರಿ ಯಪ್ಪಾ! ಹೊಟ್ಟಿಗ್ಯಾನೂ ಇಲ್ಲ!" ಎಂದ. ಮುಖದಲ್ಲಿ ನಟನೆ ಇರಲಿಲ್ಲ. ಅದು ಹಸಿವೆಯಿಂದ ಕಳೆಗುಂದಿತ್ತು. ಉಟ್ಟಿದ್ದ ದೋತರ ಶರ್ಟು ತಲೆಗೆ ಸುತ್ತಿದ ವಸ್ತ್ರ ಎಲ್ಲವೂ

ಹರಿದಿದ್ದುವು.

" ಎರಡಾಣೆ ಕೊಡಲೇನೋ? " ಎಂದ ಅಜಿತ.

" ನಿಮಗ ತಿಳಿದ್ದದ್ದ ಯಪ್ಪ!" ಎಂದು ಚೀಲ ತಕ್ಕೊಂಡು ನಡೆದ. ಮನೆ ಸೇರಲಿಕ್ಕೆ ಕಾಲುಗಂಟೆಯಾದರೂ ನಡೆಯಬೇಕಿತ್ತು. ಅಜಿತ ದಾರಿಯುದ್ದಕ್ಕೂ ಮಾತಾಡುತ್ತ ನಡೆದ.

" ನಿನ್ನ ಹೆಸರೇನೊ ?"

" ಸಿದ್ದ್ಯಾ, ದಾವ್ರೂ."

" ಊರಾವುದೋ ನಿಮ್ಮದು ?"

" ವಿಜಾಪುರ ಕಡೆ, ಅಮರಾವತಿ ಅಂತ ಹಳ್ಳಿ ಐತಿ ಎಳ್ರಿ!"

" ಇಲ್ಲೇಕ್ಕೆ ಬಂದಿರಿ?"

" ಬೆಳೀ ಮಳೀ ಹೊಯ್ತಪ್ಪ, ಹೊಲಾ ಕರೀದs ಬಿತ್ತು. ಹೊಟ್ಟಿ ಉರಿ ಆರಸಕಂತ ಈ ಶಾರ ಶ್ಯಾರದ್ಯ ಯಪ್ಪ!"

" ಎಷ್ಟು ದಿನಾ ಆಯ್ತು ?"

" ಮೂರ ವರ್ಷ ಆಯ್ತಲ್ಲ!"

" ಎಲ್ಲಿ ಮನೆ ಮಾಡೀರ್‍ಯೋ?"

" ಮನೆ ಎಲ್ಲೀದರೀ ಯಣ್ಣಾ? ಅಲ್ಲೊಂದ ದೊಡ್ಡ ಪೂಲ ಐತಿ. ಅದರ ಕಮಾನಿನ ಆಸರಕ್ಕ ಇದೇವರೀ; ಹ್ಯಾಂಗೋ ಹೊತ್ತ ಹಾಕೋದಲ್ಲ!"

" ಹೆಂಡತಿ ಮಕ್ಕಳ ಇದ್ದಾರೇನೋ ?"

" ಇದಾರಣ್ಣಾ, ಹೆಂಡ್ತಿ ಇದಾಳೆ ಎರಡ ಹೆಣ್ಣ ಮೂರ ಗಂಡ ಮಕ್ಕಳ ಇದಾವು. ಅವಕ್ಯಾನ ತಾಪತ್ರಿ ಇಲ್ಲ್ಯಪ್ಪ!" ಒಣ ನಗೆ ನಕ್ಕ ಸಿದ್ದ.

" ನಿನಗೆಷ್ಟು ಸಿಗ್ತದನೊ ?"

" ಎಂಟ ಹತ್ತ ಆಣೆ ಸಿಕ್ತಾವ್ರಿ!"

" ನವಕರಿ ಗಿವಕರಿ ಹಿಡಿಬಾರದೇನೋ?"

" ಹಿಡದ್ದೇನ ದ್ಯಾವ್ರೂ; ಈಗ್ಯಾನ ನಾಲ್ಕ ದಿನ ಸಂಪ ಮಾಡಿದೇವಲ್ಲ! ಅಲ್ಲಿತನಕ ಈ ಕೂಲಿ."

" ಹೀಗೋ! ಸಂಪಿನಾಗ ನೀನೂ ಇದ್ದೀಯೋ ?"

" ಹೌದಣ್ಣ; ತಿಳದವರ ಹೇಳಿದ ಮ್ಯಾಲ ಕೇಳ್ಕ ಬ್ಯಾಡ ?"

" ಹೇಳಿದವರ ಕೆಲಸ ಕೊಡತಾರೇನೊ ?"

ಸಿದ್ದ ಸ್ವಲ್ಪ ಕಾಲ ಸುಮ್ಮನಾದ. ಹೊರಳಿ ಅಜಿತನ ಮುಖವನ್ನೊಮ್ಮೆ ನಿರೀಕ್ಷಿಸಿದ. ಆಮೇಲೆ ನಾಲ್ಕು ಹೆಜ್ಜೆ ಮುಂದೆ ಹೋಗಲು ಕೇಳಿದ.

" ಅವರೆಲ್ಲಿಂದ ಕೊಟ್ಟಾರರೀ ಪಾಪ; ಅವರೂ ನಮ್ಮ ಹಂಗs ಅಲ್ಲರೀ ?"

" ಅವರೂ ಗಿರಣಿಯ ಕೆಲಸ ಮಾಡುವವರೋ ?"

"ಹೂನ್ರಿ ಯಪ್ಪ—" ಸ್ವಲ್ಪ ತಡೆದು "ಅದೂ ಗಿರಣೀ ಕೆಲಸಾನs ಅನ್ರಿ; ಅವರ ಬರಕೊಳ್ಳೋದ ಮಾಡತಾರರೀ ನಾವಿಷ್ಟ ಒಳಗ ಅರಳಿ ಹಿಂಜು ಕೆಲಸ ಮಾಡತೇವ್ರಿ, ಇದs ಅಂತರ."

ಸಿದ್ದನ ಮಾತು ಅಜಿತನಿಗೆ ಅರ್ಥಪೂರ್ಣವೆನಿಸಿತು, ಕಾರಕೂನನ ಜೀವಿತ ಹಾಗೂ ತನ್ನ ಜೀವಿತ ಒಂದೇ ಎಂದು ತಿಳಿದಿರುವ ಕೂಲಿಕಾರನ ಭಾವವನ್ನು ಕಂಡು.

" ಅವರಿಗೂ ನಿನ್ನಷ್ಟs ಕೂಲಿ ಏನೋ ?" ಚಿಕಿತ್ಸಕ ದೃಷ್ಟಿಯಿಂದ ಪ್ರಶ್ನೆ ಹಾಕಿದ.

" ನಾಲ್ಕ ಕಾಸ ಹೆಚ್ಚ ಕೊಡತಾರ ಅಷ್ಟs ಅಲ್ಲರಿ ?"

" ನಿಮ್ಮ ಪಗಾರ ಹೊಟ್ಟೆಗೆ ಸಾಲ್ತದೇನೊ ?"

"ಯಪ್ಪಾ, ನೆಟ್ಟಗ ನಾಲ್ಕೊಪ್ಪತ್ತ ಇದ್ದರ ಹಾಗs ನಡೀತೈತಿ. ಬ್ಯಾನಿ ಬ್ಯಾಸರಕಿ ಅಂತ ಬ್ಯಾರೆ ಇರತಾವಲ್ರಿ! ಅರವೀ ಅಂಚಡಿ ಕೊಂಡರ ಆಗುದುಲ್ಲ್ಯಪ್ಪ! ನಮ್ಮ ಅವ್ವ ಮುದಕಿ ಒಂದs ಚಿಂದಿ ಸುತ್ಕೊಂಡಿರತಾಳ. ನಿನ್ನೆ ಒಂದ ರೂಪಾಯ್ನು ಎಂಟಾಣೆ ಕೊಟ್ಟ ದೋತರಾ ಕೊಂಡಕೊಂಡೆ, ಇಂದ ಹೊಟ್ಗಿ ಇಲ್ಲ್ಯಪ್ಪ."

ಮನೆ ಬಂತು. ಕೂಲಿಯವನ ಸ್ಥಿತಿಗತಿಗಳನ್ನು ಕೇಳಿ ಅಜಿತನ ಹೃದಯ ತುಂಬಿ ಬಂದಿದ್ದಿತು ಹಾಗೆಯೇ ಆವಾರದ ಬಾಗಿಲನ್ನು ದಾಟಿ ಒಳಗೆ ನಡೆದಿದ್ದನು. ಮಾತು ಇಲ್ಲ. ಎದುರಿನಿಂದ ಯಾರೋ ಇಬ್ಬರು

ಹೊರಗೆ ನಡೆದಿದ್ದರು. ಅವರು ಅಜಿತನನ್ನು ದಾಟಿ ಹೋದ ಮೇಲೆ ಒಬ್ಬ ಇನ್ನೊಬ್ಬನಿಗೆ ಮರಾಠಿಯಲ್ಲಿ ಹೇಳಿದ. ಅದರ ಭಾವ ಹೀಗೆ: "ಇವನೇ ಅವನ ಬೀಗ" ಎಂದು. ಅಜಿತನಿಗೆ ತನ್ನ ಕುರಿತೇ ಈ ಮಾತು ಅನ್ನಿಸಿತು. ವಿಚಾರ ಜಾಳಿಗೆಯೊಳಗಿಂದ ಹೊರಗೆ ಬಂದ. ಆವಾರದ ಒಳಗೆ ಬಂದಿದ್ದರೂ ತಮ್ಮ ಮನೆಯನ್ನು ಸೇರಲು ಇನ್ನೂ ಮೂರು ನಾಲ್ಕು ಕೋಣೆಗಳನ್ನು ದಾಟಬೇಕಾಗುತ್ತಿದ್ದಿತು. ಎಲ್ಲ ಕೋಣೆಯುವರೂ ಹೊರಗೆ ಬಂದು ಅಜಿತನನ್ನು ನೋಡಿ ನೋಡಿ ಒಳಗೆ ಹೋಗುತ್ತಿದ್ದರು. 'ಏನೋ ವಿಶೇಷವಿದೆ' ಎಂದು ಅಜಿತ ಊಹಿಸಿದ. ಅದೇಕೋ ಎದೆ ಹಾರಿತು. ಹಾಗೆಯೇ ಸಂಪಿನ ವಿಷಯುಕ್ಕೆ ಮಿಲ್ಲಿನ ಮ್ಯಾನೇಜರನಿಗೂ ಸುಧೀರನಿಗೂ ಆದ ವೈಮನಸ್ಯದ ಕತೆಯೆಲ್ಲ ಒಮ್ಮೆಲೇ ಅವನ ತಲೆಯುಲ್ಲಿ ಸುಳಿದು ಹೋಯಿತು. ಮತ್ತೂ ಹೃದಯ ಹಾರಿತು, ಅಧೀರತೆಯಿಂದ. ಹತ್ತು ಹೆಜ್ಜೆಯ ಮೇಲಿನ ಮನೆ ಹತ್ತು ಹರದಾರಿಯಾಯಿತವನಿಗೆ. ಹೇಗೋ ಮನೆಯ ಬಾಗಿಲಲ್ಲಿ ಕಾಲಿಟ್ಟೊಡನೆಯೇ—

"ಅವರನ್ನು ಪೋಲೀಸರು ಹಿಡಿದು ಒಯ್ದರು" ಎಂದು ಇಂದಿರೆ ಹೇಳಿದಳು. ಇಲ್ಲಿಯ ವರೆಗೆ ತಡೆದು ನಿಂತ ಕಣ್ಣೀರು ಈಗ ಸುರಿಯ ಹತ್ತಿದುವು.

"ಸುತ್ತಿನ ಮನೆಯ ಹೆಂಗಸರೆಲ್ಲ ನೋಡಿ ನೋಡಿ ಹೋದರು" ಎಂದು ಅಳಹತ್ತಿದಳು. ಎಷ್ಟಾದರೂ ಹಳ್ಳಿಯ ಹುಡುಗಿಯ ಹೃದಯವಲ್ಲವೇ ಅವಳದು? ಎಷ್ಟು ಒತ್ತಿ ಹಿಡಿದರೂ ತಮ್ಮನನ್ನು ಕಂಡೊಡನೆ ಅವಳ ದುಃಖ ಕೇಳದಾಯಿತು. ಮುಂಬಯಿಯುಂಥ ನಗರದಲ್ಲಿ ತಮ್ಮನನ್ನುಳಿದು ಮತ್ತಾರಿದ್ದಾರೆ, ಅವಳ ಶೋಕವನ್ನು ಕೇಳಲಿಕ್ಕೆ?

ಅಕ್ಕನಿಗೆ ಏನು ಹೇಳಬೇಕು? ಹೇಗೆ ಸಮಾಧಾನಪಡಿಸಬೇಕು? ಎಂಬುದೇನೂ ತಿಳಿಯದಾಯಿತು. ದಿಙ್ಮೂಢನಾದ ಕೆಲ ಕಾಲ ಅಜಿತ. ಅಕಸ್ಮಾತ್ ಬಂದ ಆಪತ್ತು ಹುಚ್ಚು ಹಿಡಿಸಿದ್ದಿತಾತನಿಗೆ. ಹೊರಳಿ ಸಿದ್ದನ ಮುಖದ ಕಡೆಗೆ ನೋಡಿ 'ಹೀಗಾಯಿತಲ್ಲ!' ಎಂದು ನಿಟ್ಟುಸಿರೊಂದನ್ನು ಬಿಟ್ಟ.

## ೯

ರಾವಸಾಹೇಬನಿಗೆ ಮ್ಯಾಟ್ರಿಕ್ ಪರೀಕ್ಷೆಗೆ ಫಾರ್ಮ ಸಿಗುವುದರಲ್ಲಿಯೇ ಕಣ್ಣೀರು ಕಪಾಳಿಗೆ ಬಂದುವು. ಪರೀಕ್ಷೆಗೆ ಕುಳಿತ. ಪರಿಣಾಮವಂತೂ ಗೊತ್ತಿದ್ದುದೇ. ಮರುವರ್ಷವೂ ಕುಳಿತ, ಅದೂ ಸಾರೆ ಹಾಗೆಯೇ ಆಯಿತು.

“ ಇನ್ನೊಂದು ವರ್ಷ ನೋಡು, ಪಾಸಾದರೆ ಆಗುವಿ ಇಲ್ಲವಾದರೆ ಬಿಟ್ಟುಬಿಡು ” ಎಂದು ಆದಗೌಡನಂತೂ ಹೇಳಿಯೇ ಬಿಟ್ಟ.

ಹಿಂದೆ ಅಜಿತನಿಗೆ “ ಇದೊಂದು ವರ್ಷ ಆದರ ನಾನೂ ನೀನೂ ಕೂಡಿಯೇ ಪರೀಕ್ಷೆಗೆ ಹೋಗೋಣ ” ಎಂದು ಮೂದಲಿಸಿದ ಮಾತು ಈಗ ರಾವಸಾಹೇಬನಿಗೆ ಒಳಗೊಳಗೇ ಜೀವ ತಿನ್ನುತ್ತಿದ್ದಿತು. ಆದರೆ ಮಾಡುವದೇನು? ಅನ್ಯರೊಡನೆ ಮತ್ಸರ ಮಾಡಲು ಇದ್ದ ಸಿಟ್ಟು ಹಟಗಳು ಪರೀಕ್ಷೆಯ ಅಭ್ಯಾಸಕ್ಕೆ ಇಲ್ಲ, ಅವನಲ್ಲಿ ಅದರಲ್ಲೂ.

“ ಇನ್ನೂ ನಮ್ಮ ಅಜಿತನೇ ಒಳ್ಳೆಯವ ಇವನಕಿಂತ. ಉದ್ದ ಕೂದಲಾ ಕಾಯ್ದು ಬೈತಲಾ ತಕ್ಕೊಂಡ ಊರಾಗ ತಿರಗಾಡತಾನು. ಪಾಸ ಆಗಂದರ ಹೇಗೆ ಆಗಬೇಕು ? ” ಎಂದು ಮುರದೇವಿ ಬರೆ ಎಳೆದೇ ಬಿಟ್ಟಳು.

ಆದಗೌಡನ ಮನಸ್ಸಿನಲ್ಲಿಯೂ ಒಂದು ಕುದಿಯಿದ್ದಿತು. ತಮ್ಮನ ಮಗನು ಮ್ಯಾಟ್ರಿಕ್ಕ ಪಾಸಾಗಿ ಕಾಲೇಜಿನಲ್ಲಿ ಓದಹತ್ತಿದ. ತನ್ನ ಮಗನನ್ನು ಇಷ್ಟಕ್ಕೇ ಸಾಲೆಬಿಡಿಸುವುದೇ ? ಏನಾದರೂ ಆಗಲಿ ಪರೀಕ್ಷೆ ಪಾಸು ಮಾಡಿಸಿಯೇ ತೀರುವುದು. ಅದಕ್ಕಾಗಿ ಬೇಕಾದಷ್ಟು ಖರ್ಚಾದರೂ ಚಿಂತೆಯಿಲ್ಲ. ಒಂದೆರೆಡು ಜನ ಪರೀಕ್ಷಕರಿಗೆ ಹೇಳಲು ಸಾಹೇಬರ ವಸೀಲಿ ಹಚ್ಚಲು ಹೋದ. ಖರ್ಚೇನೋ ಆಯಿತು. ಪರೀಕ್ಷೆಯಲ್ಲಿ ರಾವಸಾಹೇಬ ಮಾತ್ರ ಪಾಸಾಗಲಿಲ್ಲ. ಕೊನೆಗೆ ಮನೆಯಲ್ಲಿ ಒಬ್ಬ ಮಾಸ್ತರರಿಂದ ಪಾಠ ಹೇಳಿಸಬೇಕು ಎಂದೂ ಯೋಚಿಸಿದ. ಈ ನಡುವೆ ಅಜಿತನ ಒಂದು ಕಾಗದ ಬಂದಿತು. ಅದರಲ್ಲಿ ಆತ ‘ ಕಾಲೇಜಿನ ಒಂದು ಸಂಘವು ಏರ್ಪಡಿಸಿದ ಸ್ಪರ್ಧೆಯಲ್ಲಿ ತನ್ನ ಪ್ರಬಂಧಕ್ಕೆ ಬಹುಮಾನ

ಸ್ಕೂಲಿನಲ್ಲಿ ಒತ್ತಿ ಹೇಳಹೋದರೆ ಸ್ಕೂಲಿಗೆ ಬರವುದನ್ನೇ ನಿಲ್ಲಿಸಿಬಿಡು ತ್ತಾನೆ. ಹಾಗೆ ಮಾಡಿಯೂ ಉಪಯೋಗವಿಲ್ಲ."

"ಹೌದು; ಅವನನ್ನು ಒಲಿಸಿಯೇ ಹಾದಿಗೆ ತರಲಿಕ್ಕೆಬೇಕು. ಬೆದರಿ ಸಿದರೆ ಉಪಯೋಗವಾಗುವಂತಿಲ್ಲ."

"ಬೆದರಿಸಲಿಕ್ಕೆ ಅವನೇನು ಸಣ್ಣ ಮಗುವೇ ಇನ್ನೂ?"

"ಇದಕ್ಕೆ ಉಪಾಯವೇನು?"

"ಮನೆಯಲ್ಲಿ ಒಬ್ಬ ಶಿಕ್ಷಕರ ಕಡೆಯಿಂದ ಪಾಠ ಹೇಳಿಸಿರಿ. ನಿಮ್ಮ ಎದುರಿಗೆಯೇ ಕುಳಿತು ಪಾಠ ಸಾಗಬೇಕು ಮಾತ್ರ"

"ಮನಸ್ಸುಗೊಟ್ಟು ಹೇಳುವವರೊಬ್ಬರು ಬೇಕಲ್ಲ? ತಿಂಗಳಾ ಹದಿ ನೈದು ರೂಪಾಯಿಯಾದರೂ ಕೊಡತೇನೆ."

ಮೊದಲೇನೋ ರೂಪಾಯಿಗಳು ಸಿಕ್ಕುವವೆಂದು ಹೆಡ್‌ಮಾಸ್ತರರಿಗೆ ತಾವೇ ಪಾಠ ಹೇಳುವ ಯೋಚನೆ ಬಂತು. ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು. ಹಣೆಯೇರಿಸಿ ವಿಚಾರಿಸಿದರು. 'ಏನಾದರೂ ಗೌಡರ ಹುಡುಗ. ಮೊದಲಿನಿಂದಲೂ ಓದಿದವನಲ್ಲ. ದೊಡ್ಡವರ ಹುಡುಗನೆಂದು ಮೇಲಿನ ವರ್ಗಕ್ಕೆ ಏರಿಸುತ್ತ ಬಂದಿದೆ. ಈತ ಅಭ್ಯಾಸ ಮಾಡಿ ನನ್ನ ಹೆಸರು ಬೆಳ ಕಿಗೆ ತರುವುದು ಅಷ್ಟರಲ್ಲಿಯೇ ಇದೆ. ಈಗ ಹತ್ತೆಂಟು ರೂಪಾಯಿಗಳ ಆಶೆಗಾಗಿ ಒಪ್ಪಿಕೊಂಡೆನೆಂದರೆ ನಾಳೆ ಗೌಡರ ಕೂಡ ಕೆಡಕುತನ ಕಟ್ಟಿ ಕೊಳ್ಳಬೇಕಾದೀತು. ಈ ಕೆಲಸದಲ್ಲಿಯೇ ಬೀಳುವುದು ಬೇಡ.' ಎಂದ್ಯ ಕೊಂಡು, ಜಾಧವ ಮಾಸ್ತರರ ಹೆಸರನ್ನು ಸೂಚಿಸಬೇಕೆಂದು ಯೋಚಿಸಿ ದರು. ಹೀಗೆ ಮಾಡಿದರೂ ಅವರಿಗೊಂದು ಸಂಕಟ. ಪಾಠ ಹೇಳಲಿ ಕ್ಕೆಂದು ಜಾಧವ ಮಾಸ್ತರ ಗೌಡರ ಮನೆಗೆ ಹೋಗಿ ಬರಹತ್ತಿದನೆಂದರೆ ಊರ ಜನರಲ್ಲಿ ಅವನ—ತನ್ನ ಅಸಿಸ್ಟಂಟನ—'ಇಂಪ್ರೇಶನ್' ಬೆಳೆಯುವ ದಲ್ಲ ಎಂದು. ಆದರೆ ಉಳಿದ ಸಹಾಯಕ ಶಿಕ್ಷಕರಾರೂ ಆ ಕೆಲಸ ಮಾಡು ವಂತಿಲ್ಲ. ಕೊನೆಗೆ ನಿರುಪಾಯರಾಗಿ—

"ಜಾಧವ ಮಾಸ್ತರನೇ ಹೇಳಿದರೆ ಹೇಳಬೇಕು. ಉಳಿದವರಾರೂ ಹೇಳುವಂತಿಲ್ಲ. ಎಲ್ಲ ವಿಷಯ ನೋಡಿಕೊಂಡವರೆಂದರೆ ಅವರೊ ಬ್ಬರೇ"

ಹನ್ನೆರಡ ಸಾರೆ ಹೇಳಿ ಹೇಳಿ ಬಂದಾರ ಮಾಸ್ತರರಿಗೆ.''

" ಈಗೆಲ್ಲಿ ಬಿಟ್ಟಿದಾನ ತಗೋ ನಿನ್ನ ಗಂಡ! ಹಗಲೀ ರಾತ್ರಿ ಅಭ್ಯಾಸ ಮಾಡಸರೀ ಬೇಕಾದರ ತಿಂಗಳಾ ಹತ್ತೆಂಟ ರೂಪಾಯಿ ಕೊಡತೇನು, ಅಂತ ಮಾಸ್ತರನ ತಲೆ ಎಬ್ಬಿಸಿ ಇಟ್ಟಿದಾನು." ಮುರದೇವಿ ಸೊಸೆಯ ಮಾತನ್ನು ನಡುವೆಯೇ ತಡೆದು ನುಡಿದಳು.

''ಹೀಗೇನ ಹೇಳಿದ್ದರು ನನ್ನ ಮಗನಿಗೆ?'' ಸರಸ್ವತಿಯ ಪ್ರಶ್ನೆಯಿದು.

'' ಇದೆಲ್ಲ ಏನ ಮಾಡೋದು ನಮ್ಮ ರಾವಸಾಹೇಬಗ? ಓದಲಿಕ್ಕೆ ಬರಿಯಲಿಕ್ಕೆ ಬಂದರೆ ಸಾಕು. ಇನ್ನೊಂದ ನಾಲ್ಕ ವರ್ಷ ಹೋದರೆ ಗೌಡಕಿ ಮಾಡಲಿಕ್ಕೆ ಬೇಕು. ಈಗೆಲ್ಲಿ ಊರೂರ ತಿರುಗಿ ಕಲಿತ ಗಿರಣಿ ಯೊಳಗ ಕಾರಕೂನಕಿ ಮಾಡೋದ ಕೆಟ್ಟದ ಹೊಟ್ಟಿ ಸಲುವಾಗಿ?'' ಎಂದು ಬಿಂಕದಲ್ಲಿ ಗೌಡಕಿಯ ಮಾತೆತ್ತಿ ಮುಗಿಸಿದಳು ಗಂಗವ್ವ.

ಮನೆಯ ವ್ಯವಸ್ಥೆ, ಊರ ಕೆಲಸ, ಮೇಲಧಿಕಾರಿಗಳ ಮನವೊಲಿಸು ವುದು, ಇವಾವುದರಲ್ಲಿಯೂ ಗೌಡನಿಗೆ ಅಷ್ಟು ಚಿಂತೆಯಿರಲಿಲ್ಲ. ರಾವ ಸಾಹೇಬನ ವಿಷಯಕ್ಕೆ ಅವನ ಚಿಂತೆ ದಿನದಿನಕ್ಕೆ ಬೆಳೆಯುತ್ತ ಬಂತು. ಹುಡುಗ ಈಗಲೇ ವಿಲಾಸ ದುಶ್ಚಟಗಳಿಗೆ ಒಳಗಾಗಿದ್ದಾನೆ, ಎಂಬ ಸಂಗ ತಿಯು ಹೇಗೋ ಆದಗೌಡನ ಲಕ್ಷ್ಯಕ್ಕೆ ಬಂತು. ಮಗನಿಗೆ ತಾನೇ ನೇರವಾಗಿ ಸೂಚಿಸುವುದಕ್ಕಿಂತ ಅವನ ತಾಯಿಯಿಂದ ಹೇಳಿಸಿದರೆ ಒಳಿ ತೆಂದು ಗಂಗವ್ವನಿಂದ ಹೇಳಿಸಿದನು. ಅದಕ್ಕೆ ರಾವಸಾಹೇಬನು " ನೀವು ಹೀಗೆ ಹಗಲಿರುಳೂ ಅಭ್ಯಾಸ ಅಭ್ಯಾಸ ಎಂದು ಬೆನ್ನುಹತ್ತಿದರೆ ನನಗೆ ಅಭ್ಯಾಸವೇ ಬೇಡ. ಸಾಲೆಗೆ ಹೋಗುವದನ್ನೇ ಬಿಟ್ಟುಬಿಡುವೆ'' ಎಂದು ಸ್ಪಷ್ಟವಾಗಿ ಹೇಳಿಬಿಟ್ಟ. ಗೌಡನಿಗೆ ಮತ್ತೂ ಚಿಂತೆ ಹೆಚ್ಚಾಯಿತು.

" ಹುಡುಗನಿಗೆ ಬುದ್ಧಿ ಬಾರದಲ್ಲ; ಇವನು ಹೀಗೆ ಹೇಳುತ್ತಾನೆ. ಏನು ಮಾಡುವುದು?'' ಎಂದು ಯೋಚಿಸತೊಡಗಿದರು. ಬಗೆಹರಿಯ ಲಿಲ್ಲ. ಕೊನೆಗೆ ಹೆಡ್‌ಮಾಸ್ತರರ ಮುಂದೆ ಹುಡುಗನ ವಿಷಯಕ್ಕೆ ಮಾತೆತ್ತಿದರು.

'' ನೀವು ಏನ ಹೇಳ್ತೀರಿ; ಮಾಸ್ತರರೇ?"

" ರಾವಸಾಹೇಬ ಬುದ್ಧಿವಂತ; ಆದರೆ ಓದುವುದೇ ಇಲ್ಲ. ನಾವು

ಸ್ಕೂಲಿನಲ್ಲಿ ಒತ್ತಿ ಹೇಳಹೋದರೆ ಸ್ಕೂಲಿಗೆ ಬರವುದನ್ನೇ ನಿಲ್ಲಿಸಿಬಿಡು ತ್ತಾನೆ. ಹಾಗೆ ಮಾಡಿಯೂ ಉಪಯೋಗವಿಲ್ಲ."

"ಹೌದು; ಅವನನ್ನು ಒಲಿಸಿಯೇ ಹಾದಿಗೆ ತರಲಿಕ್ಕೆಬೇಕು. ಬೆದರಿ ಸಿದರೆ ಉಪಯೋಗವಾಗುವಂತಿಲ್ಲ."

"ಬೆದರಿಸಲಿಕ್ಕೆ ಅವನೇನು ಸಣ್ಣ ಮಗುವೇ ಇನ್ನೂ?"

"ಇದಕ್ಕೆ ಉಪಾಯವೇನು?"

"ಮನೆಯಲ್ಲಿ ಒಬ್ಬ ಶಿಕ್ಷಕರ ಕಡೆಯಿಂದ ಪಾಠ ಹೇಳಿಸಿರಿ. ನಿಮ್ಮ ಎದುರಿಗೆಯೇ ಕುಳಿತು ಪಾಠ ಸಾಗಬೇಕು ಮಾತ್ರ"

"ಮನಸ್ಸುಗೊಟ್ಟು ಹೇಳುವವರೊಬ್ಬರು ಬೇಕಲ್ಲ? ತಿಂಗಳಾ ಹದಿ ನೈದು ರೂಪಾಯಿಯಾದರೂ ಕೊಡತೇನೆ."

ಮೊದಲೇನೋ ರೂಪಾಯಿಗಳು ಸಿಕ್ಕುವವೆಂದು ಹೆಡ್‌ಮಾಸ್ತರರಿಗೆ ತಾವೇ ಪಾಠ ಹೇಳುವ ಯೋಚನೆ ಬಂತು. ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು. ಹಣೆಯೇರಿಸಿ ವಿಚಾರಿಸಿದರು. 'ಏನಾದರೂ ಗೌಡರ ಹುಡುಗ. ಮೊದಲಿನಿಂದಲೂ ಓದಿದವನಲ್ಲ. ದೊಡ್ಡವರ ಹುಡುಗನೆಂದು ಮೇಲಿನ ವರ್ಗಕ್ಕೆ ಏರಿಸುತ್ತ ಬಂದಿದೆ. ಈತ ಅಭ್ಯಾಸ ಮಾಡಿ ನನ್ನ ಹೆಸರು ಬೆಳ ಕಿಗೆ ತರುವುದು ಅಷ್ಟರಲ್ಲಿಯೇ ಇದೆ. ಈಗ ಹತ್ತೆಂಟು ರೂಪಾಯಿಗಳ ಆಶೆಗಾಗಿ ಒಪ್ಪಿಕೊಂಡೆನೆಂದರೆ ನಾಳೆ ಗೌಡರ ಕೂಡ ಕೆಡಕುತನ ಕಟ್ಟಿ ಕೊಳ್ಳಬೇಕಾದೀತು. ಈ ಕೆಲಸದಲ್ಲಿಯೇ ಬೀಳುವುದು ಬೇಡ.' ಎಂದ್ಕೊ ಕೊಂಡು, ಜಾಧವ ಮಾಸ್ತರರ ಹೆಸರನ್ನು ಸೂಚಿಸಬೇಕೆಂದು ಯೋಚಿಸಿ ದರು. ಹೀಗೆ ಮಾಡಿದರೂ ಅವರಿಗೊಂದು ಸಂಕಟ. ಪಾಠ ಹೇಳಲಿ ಕ್ಕೆಂದು ಜಾಧವ ಮಾಸ್ತರ ಗೌಡರ ಮನೆಗೆ ಹೋಗಿ ಬರಹತ್ತಿದನೆಂದರೆ ಊರ ಜನರಲ್ಲಿ ಅವನ—ತನ್ನ ಅಸಿಸ್ಟಂಟನ—'ಇಂಪ್ರೇಶನ್' ಬೆಳೆಯುವ ದಲ್ಲ ಎಂದು. ಆದರೆ ಉಳಿದ ಸಹಾಯಕ ಶಿಕ್ಷಕರಾರೂ ಆ ಕೆಲಸ ಮಾಡು ವಂತಿಲ್ಲ. ಕೊನೆಗೆ ನಿರುಪಾಯರಾಗಿ—

"ಜಾಧವ ಮಾಸ್ತರನೇ ಹೇಳಿದರೆ ಹೇಳಬೇಕು. ಉಳಿದವರಾರೂ ಹೇಳುವಂತಿಲ್ಲ. ಎಲ್ಲ ವಿಷಯ ನೋಡಿಕೊಂಡವರೆಂದರೆ ಅವರೊ ಬ್ಬರೇ"

ಹೆಡ್‌ಮಾಸ್ತರರು ಹೀಗೆ ಹೇಳುವಂತೆಯೇ ಇತ್ತು. ಅದು ಸತ್ಯವೂ ಇದ್ದಿತು. ಹಲವು ಜನ ಶಿಕ್ಷಕರು ಹೊಟ್ಟೆಯ ಪಾಡಿಗಾಗಿ ಶಿಕ್ಷಕ ವೃತ್ತಿಯನ್ನು ಅವಲಂಬಿಸಿದವರು. ಜಾಧವ ಮಾಸ್ತರರಿಗೆ ನಿಜವಾಗಿಯೂ ಶಿಕ್ಷಣ ಕಲೆಯಲ್ಲಿ ಒಲವಿತ್ತು; ಗಮನವಿತ್ತು. ಈಗಾಗಲೇ ಹತ್ತೆಂಟು ಹುಡುಗರ ಕ್ಲಾಸೊಂದನ್ನಿಟ್ಟು ಮ್ಯಾಟ್ರಿಕ್ ಪರೀಕ್ಷೆ ಪಾಸು ಮಾಡಿಸಿಯೂ ತೋರಿಸಿದ್ದರು. ಮೇಲಾಗಿ ಇನ್ನಾವ ಶಿಕ್ಷಕರೂ ಗೌಡರ ಮನೆಗೆ ಹೋಗಿ ಪಾಠ ಹೇಳಿ ಬರಲು ಒಪ್ಪುವಂತಿರಲಿಲ್ಲ. ಗೌಡರ ಮನೆಗೆ ಹೋಗಿಬರ ತೊಡಗಲು, ಊರಲ್ಲಿ ತಾವೊಂದು ಪಕ್ಷಗಟ್ಟಿದಂತೆ ಜನತೆಗೆ ಭಾಸವಾಗುವದೆಂದು ಅವರ ಭಾವನೆ.

"ಆ ಮಾಸ್ತರ ಕಡೆಯಿಂದ ನಮ್ಮ ಹುಡುಗನಿಗೆ ಪಾಠ ಹೇಳಿಸುವುದಿಲ್ಲ ನಾ." ಗೌಡರೆಂದರು ನಿಶ್ಚಯದ ಸ್ವರದಲ್ಲಿ.

"ಅವರನ್ನು ಬಿಟ್ಟರೆ ನಿಮಗೆ ಬೇರೆ ಮಾಸ್ತರರೇ ಸಿಕ್ಕುವುದಿಲ್ಲ."

"ಏಕೆ? ಉಳಿದವರಲ್ಲಿ ಒಬ್ಬರನ್ನು ಕೇಳಿರಲ್ಲ!"

ಮಾಸ್ತರರು ಎಲ್ಲ ಸಂಗತಿಯನ್ನು ವಿವರಿಸಿ ಹೇಳಿದರು. ಕೊನೆಗೆ ಗೌಡನು ಜಾಧವ ಮಾಸ್ತರರನ್ನೇ ಮಗನ ಶಿಕ್ಷಣಕ್ಕೆ ಇಡಬೇಕಾಯಿತು. ಅದರಿಂದ ಅವನ ಮನಸ್ಸಿಗೆ ಸಮಾಧಾನವಾಗಲಿಲ್ಲ. ಆದರೂ ಪರಿಸ್ಥಿತಿಗೆ ಬಾಗಿ ನಡೆಯಬೇಕಾಯಿತು. ಒಳ್ಳೆಯ ದಿನ ನೋಡಿ ಜಾಧವ ಮಾಸ್ತರರನ್ನು ಪಾಠ ಆರಂಭಿಸಲು ಕರೆಯಿಸಿದರು. ಅವರಿಗೆ ರಾವಸಾಹೇಬನ ವಿದ್ಯೆಯ ಮಟ್ಟವೆಲ್ಲ ಗೊತ್ತು. ಅದರ ಜೊತೆಗೆ ಅವನು ತುಂಬ ದುರಭಿಮಾನಿಯೆಂಬುದರ ಅರಿವೂ ಅವರಿಗಿತ್ತು. ಮೇಲಾಗಿ ಆದಗೌಡನ ಮನದ ಹೊಯ್ದಾಟದ ತೆರೆಯನ್ನು ಅವರು ತಿಳಿದುಕೊಂಡಿದ್ದರು. ಆದರೂ ಅವರು ಪಾಠ ಹೇಳಲು ಒಪ್ಪಿದರು. ರಾವಸಾಹೇಬನನ್ನು ಒಳ್ಳೆಯ ಮನುಷ್ಯನನ್ನಾಗಿ ಮಾಡಿದರೆ ಮುಂದೆ ಊರನ್ನೆಲ್ಲ ಒಬ್ಬ ಒಳ್ಳೆಯ ವ್ಯಕ್ತಿಗೆ ಒಪ್ಪಿಸಿದ ಶ್ರೇಯ ಸಿಕ್ಕುವುದೆಂದು ಭಾವಿಸಿ ಪಾಠಕ್ಕೆ ಆರಂಭಿಸಿದರು.

"ನಾ ಹೇಳಿದ್ದನ್ನು ಲಕ್ಷ್ಯಗೊಟ್ಟು ಕೇಳಕೋಬೇಕು. ಚಿತ್ತ ಇಟ್ಟ ಓದಬೇಕು. ನನಗೂ ಯಶ ಸಿಕ್ಕಬೇಕು. ನೀನೂ ತೇರ್ಗಡೆಯಾಗಬೇಕು."

"ಆದಷ್ಟು ಮಾಡತೇನ್ರಿ, ಆಗದಿದ್ದರೆ ನಾನೇನು ಮಾಡಲಿ?"

“ ಮನಸ್ಸುಗೊಟ್ಟು ಮಾಡಿದರೆ ಆಗ್ತದೆ. ನಿನಗೆ ಆಗದ ಕೆಲಸ ಯಾವದದೆ? ”

ಅವನಲ್ಲಿ ಆತ್ಮವಿಶ್ವಾಸ ಹುಟ್ಟಿಸಲೆಂದು. ಜಾಧವ ಮಾಸ್ತರರು ನುಡಿದ ಈ ಮಾತು ಚುಚ್ಚುಮಾತಾಗಿ ರಾವಸಾಹೇಬನಿಗೆ ಪರಿಣಮಿಸಿತು. ಅವನ ಕೀಳ್ನಡೆಯ ನೆನಹನ್ನೆಲ್ಲ ಕೆದರಿತು. ಆದರಿಂದ ಮುಖ ಬಿಗಿದುಕೊಂಡೆ ಪಾಠಕ್ಕೆ ಕುಳಿತ. ಪಾಠವೆತ್ತೊ ಸಾಗುತ್ತಿದ್ದಿತು. ಅವನ ಮನವೆಲ್ಲೋ ಹರಿಯುತ್ತಿದ್ದಿತು.

ದಿನಾಲು ಸಂಜೆ ಮುಂಜಾವುಗಳಲ್ಲಿ ಪಾಠ ಸಾಗುವುದು. ಮಗನ ಅಭ್ಯಾಸದ ಚಿಂತೆಗಾಗಿ ಪಾಠ ಮುಗಿಯುವವರೆಗೆ ಗೌಡರೂ ಮಾಸ್ತರರ ಎದುರಿಗೆ ಕುಳ್ಳಿರುತ್ತಿದ್ದರು. ಶಿಕ್ಷಕರು ತಿಳಿಸಿ ಹೇಳುವ ರೀತಿ, ಇತಿಹಾಸದ ವಿವರಣೆಗಳು ಗೌಡರಿಗೂ ತುಂಬ ಮೆಚ್ಚುಗೆಯಾದುವು. ಮಾಸ್ತರರ ತಿಳಿಹೃದಯ ಗೌಡರ ಮನವನ್ನೇ ಕೆಲದಿನಗಳಲ್ಲಿ ಸೂರೆಗೊಂಡುಬಿಟ್ಟಿತು. ಮೇಲಿಂದ ಮೇಲೆ ಮಗನಿಗೆ ‘ ಹೀಗೆ ಕಲಿಸುವ ಮಾಸ್ತರರು ಸಿಕ್ಕ ಮೇಲೆ ನಾನೂ ಮ್ಯಾಟ್ರಿಕ್ ಆದೇನು! ’ ಎಂದು ಹೇಳುತ್ತಿದ್ದರು ತಿಂಗಳಾಯಿತು. ಗೌಡರು ಮಾಸ್ತರರಿಗೆ ಹತ್ತು ರೂಪಾಯಿಗಳನ್ನು ಕೊಡಲಿಕ್ಕೆ ಹೋದರು, ಪಾಠದ ಪ್ರತಿಫಲವೆಂದು. ಜಾಧವ ಮಾಸ್ತರರು ಹಣ ತಕ್ಕೊಳ್ಳಲಿಲ್ಲ. ತಿರುಗಿ “ ದುಡ್ಡಿಗಾಗಿ ನಾನು ಪಾಠ ಹೇಳುತ್ತಿಲ್ಲ. ಮುಂದೆ ರಾವಸಾಹೇಬನೊಬ್ಬ ಒಳ್ಳೆಯ ಗೌಡನಾಗಲೆಂದು ದುಡಿಯುತ್ತಿರುವೆ ಅಷ್ಟೇ ” ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಅಂದಿನಿಂದ ಜಾಧವ ಮಾಸ್ತರರ ಬಗ್ಗೆ ಗೌಡರ ಮನೆಯವರಿಗೆಲ್ಲ ಇನ್ನೂ ಆದರ ಹೆಚ್ಚಾಯಿತು. ಆದರೆ ಒಂದು ದಿನ ಪಾಠಕ್ಕೆ ತಂದೆ ಹಾಜರ ಇಲ್ಲವಾದರೆ ರಾವಸಾಹೇಬನ ಕಡೆಯಿಂದ ಮಾಸ್ತರರ ವಿರುದ್ಧ ಏನಾರೊಂದು ದೂರು ಇದ್ದೇ ಇರುತ್ತಿದ್ದಿತು. ಗೌಡನಿಗೆ ಇದು ಮಗನ ಮೈಗಳ್ಳತನದ ಲಕ್ಷಣವೆಂಬುದು ತಿಳಿದುಬರಲಿಕ್ಕೆ ಬಹಳ ದಿನ ಹಿಡಿಯಲಿಲ್ಲ. ಆದರೂ ಮುಂದೆ ಗೌಡನಾಗುವ ಮಗನನ್ನು ಮಾಸ್ತರರ ಮುಂದೆ ಇಳಿಸಿ ಮಾತಾಡಲು ಅವನ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ. ಒಮ್ಮೊಮ್ಮೆ ಪಾಠ ಹೇಳುವಾಗ ಮಗನ ಯೋಗ್ಯತೆಯನ್ನು ತಂದೆ ಕಾಣಲೆಂದು ಒಂದೆರಡು ಸುಲಭ ಪಶ್ನೆಗಳನ್ನು

ಕೇಳಿ, ತಪ್ಪು ಉತ್ತರ ಕೊಟ್ಟಿದ್ದನ್ನು ಗೌಡರಿಗೆ ತೋರಿಸುತ್ತಿದ್ದರು. ಇಂಥ ಒಂದು ಸಂದರ್ಭದಲ್ಲಿ ಆದಗೌಡ ಮನಸ್ಸು ತಾಳದೆ "ಕಲ್ಲ ಇದ್ದಾನೆ. ಕಟೆದು ಕಟೆದು ಮೂರ್ತಿ ಮಾಡಿರಿ" ಎಂದು ಅಂದೇ ಬಿಟ್ಟ. ಹಿಂದಿನಿಂದ ರಾವಸಾಹೇಬನಿಗೆ ಮತ್ತೂ ಸಿಟ್ಟು ಮಾಡಿದ. ಇಂಥದಕ್ಕೆಲ್ಲ ಒಂದೆರಡು ಸಲ ರಾವಸಾಹೇಬ ಸುಮ್ಮನಿದ್ದ. ಆಮೇಲೆ ಒಂದು ದಿನ ತಂದೆಯ ಸಮಕ್ಷಮ ಹೀಗೆ ಪ್ರಶ್ನೆ ಕೇಳಕೂಡದೆಂದು ಉದ್ದವಾದ ಪತ್ರವೊಂದನ್ನು ಬರೆದು, ಓಲೇಕಾರನ ಕೈಯಲ್ಲಿ ಕೊಟ್ಟು ಜಾಧವ ಮಾಸ್ತರರಿಗೆ ತಲುಪಿಸಿ ಉತ್ತರ ತರಲು ಹೇಳಿದ.

ಜಾಧವ ಮಾಸ್ತರರು ಪತ್ರ ಓದಿ ನೋಡಿ ನಕ್ಕು ಇಟ್ಟುಬಿಟ್ಟರು. ಉತ್ತರ ಕೊಡಲಿಲ್ಲ.

"ಉತ್ತರ ಕೊಡ ಅಂದಾರರೀ?" ಓಲೇಕಾರ ಕೇಳಿದ.

"ಸಂಜೆ ನಾನೇ ಬಂದಾಗ ಹೇಳುವೆ" ಎಂದು ಹೇಳಿ ಕಳಿಸಿದರು.

ಅಂದಿನಿಂದ ಜಾಧವ ಮಾಸ್ತರರು ಪಾಠ ಹೇಳಲಿಕ್ಕೆಯೇ ಹೋಗಲಿಲ್ಲ. ಒಂದೆರಡು ದಿನ ಗೌಡರು ದಾರೀ ನೋಡಿದರು. ಆಮೇಲೆ ಕರೆಯ ಕಳುಹಿದರು. ಮಾಸ್ತರರು ತಮಗೆ ಪಾಠ ಹೇಳಲಿಕ್ಕೆ ಬರಲಾಗುವದಿಲ್ಲವೆಂದು ಹೇಳಿ ಕಳಿಸಿದರು. ಗೌಡರಿಗೆ ನಡೆದ ಸಂಗತಿ ಗೊತ್ತಾಯಿತು. "ಪಾಠ ಹೇಳಲಿಕ್ಕೆ ಬರದಿದ್ದರೂ ಮನೆಗೆ ಬಂದು ಹೋಗುತ್ತ ಇರ್ರಿ!" ಎಂದು ಆಗ್ರಹ ಮಾಡಿದರು. "ಹುಡುಗನ ಮಾತು ತಗೊಂಡು ಏನ ಮಾಡ್ತೀರಿ, ಅವನ ಏಸಿರಿ ನಮಗೆ ಗೊತ್ತಿಲ್ಲೇನು?" ಎಂದು ಮುರದೇವಿಯೂ ಹೇಳಿಕೊಂಡಳು. ಹಿರಿಯಳ ಮಾತು ಮೀರುವುದು ಒಳಿತಲ್ಲವೆಂದು ಮಾಸ್ತರರು ಗೌಡರ ಮನೆಗೆ ಹೋಗಹತ್ತಿದರು. ಮನಸ್ಸಿಲ್ಲದಿದ್ದರೂ ಹಾಗೆಯೇ ಪಾಠ ಹೇಳಲಿಕ್ಕೂ ಆರಂಭಿಸಿದರು. ಮುಂದೆ ಮೂರು ನಾಲ್ಕು ದಿನಗಳಲ್ಲಿ ಮಾಸ್ತರರ ಮನೆಯ ಮೇಲೇ ಕಲ್ಲಿನ ಸುರಿಮಳೆ!

ಸುಮ್ಮನೆ ಪಾಠ ಹೇಳುವುದನ್ನು ನಿಲ್ಲಿಸಿಬಿಡಬೇಕೆಂದು ಒಮ್ಮೆ ಮಾಸ್ತರರಿಗೆ ಅನ್ನಿಸಿತು ಮರುಕ್ಷಣದಲ್ಲಿ ಧ್ಯೇಯವಾದಿಯಾದ ನಾನೇ ಹೀಗೆ ಹೆದರಿ ಹಿಂಜರಿದರೆ ಹೇಗೆ? ಅವನಿಗೇನೋ ತಿಳವಳಿಕೆಯಿಲ್ಲ, ಹೀಗೆ ನಡೆಯುತ್ತಾನೆ. ನಾಳೆ ಬುದ್ಧಿ ಬಂತೆಂದರೆ ಅವನೇ ಬಹಳ ಒಳ್ಳೆಯವ

ನಾಗುತ್ತಾನೆ. ಇವನೊಬ್ಬನು ಒಳ್ಳೆಯವನಾದರೆ ನಾಳೆ ಊರನ್ನೇ ಒಳ್ಳೆಯವನ ಕೈಗೆ ಒಪ್ಪಿಸುವ ಕೆಲಸ ಮಾಡಿದಂತೆ ಆಗುವದಲ್ಲ, ಎಂದೇನೇನೋ ವಿಚಾರಿಸುವರು. ಮೂರು ನಾಲ್ಕು ದಿನ ಈ ಕಲ್ಲಿನ ಪ್ರಸಂಗವನ್ನು ಯಾರ ಮುಂದೆಯೂ ಹೇಳಲಿಲ್ಲ. ಮೊದಲಿನಂತೆಯೇ ಗೌಡರ ಮನೆಗೆ ಪಾಠಕ್ಕೆ ಹೋಗಿ ಬರುತ್ತಲೇ ಇದ್ದರು. ರಾವಸಾಹೇಬನ ಕೂಡ ಏನೂ ವಿಶೇಷ ಘಟನೆ ನಡೆಯದಂತೆ ವರ್ತಿಸುತ್ತಿದ್ದರು.

ಈಗ ರಾವಸಾಹೇಬನಿಗೆ ಒಂದು ಒಗಟು. ಮಾಸ್ತರರು ಏನೂ ಆಗದಂತೆಯೇ ನನ್ನ ಕೂಡ ವರ್ತಿಸುತ್ತಿದ್ದಾರಲ್ಲ, ಎಂದು ಆಶ್ಚರ್ಯ. ಅವರು ಪಾಠ ಹೇಳಲು ಕುಳಿತರೆಂದರೆ ಆ ಆಶ್ಚರ್ಯ ಸಿಟ್ಟಿನಲ್ಲಿ ಪರಿವರ್ತನಗೊಳ್ಳುವುದು. 'ಇಂಥ ಮೂರ್ಖನಿಗೆ ಏನು ಮಾಡಬೇಕಪ್ಪ?' ಎಂದುಕೊಳ್ಳುವ. 'ಇನ್ನೊಂದೆರಡು ದಿನ ಹೋಗಲಿ, ತಾನೇ ಹೆದರಿ ಬಿಡುವನು' ಎಂದೂ ಯೋಚಿಸುವ. ಮರುದಿನದ ಮತ್ತಷ್ಟು ಕಲ್ಲಿನ ತೂರಾಟ. ಹೀಗೆ ಮೂರು ನಾಲ್ಕು ದಿನ ಹೇಗೆಯೋ ಸಾಗಿತು.

ಮತ್ತೂ ಜಾಧವ ಮಾಸ್ತರರು ನಗುತ್ತಲೇ ಪಾಠ ಹೇಳಲು ಹೋಗುವರು. ಇನ್ನೂ ಏನೇನಾಗುವುದೋ ನೋಡೋಣ. ಇದೊಂದು ಪ್ರಯೋಗ ಎಂದುಕೊಂಡು ಅವರು ಸಾಗಿದ್ದರು. ಈಗ ರಾವಸಾಹೇಬನಿಗೆ ಒಂದು ಸತ್ಯ ಸಿಕ್ಕಂತಾಯಿತು. 'ಹುಚ್ಚ ಮಾಸ್ತರ! ಈ ಕಲ್ಲಿನ ಸುರಿಮಳೆಗೂ ತನಗೆ ಪಾಠ ಹೇಳಲು ಬರುವವದಕ್ಕೂ ಏನೂ ಸಂಬಂಧ ಇಲ್ಲೆಂದೇ ಭಾವಿಸಿದ್ದಾನೆ' ಎಂಬುದೇ ಆ ಸತ್ಯ. ಅಂದ ಮೇಲೆ ಕೇಳುವದೇನು? ಮರುದಿನವೇ ಊರೆಲ್ಲ ಸುದ್ದಿ. ಗೌಡರ ಹುಡುಗನಿಗೆ ಪಾಠ ಹೇಳುವುದರಿಂದ ಮಾಸ್ತರರ ಮನೆಯ ಮೇಲೆ ಕಲ್ಲು ಬೀಳುತ್ತಿವೆಯೆಂದು. ಆ ದಿನ ಶಾಲೆಯಲ್ಲಿ ಬರುತ್ತಲೇ ಹೆಡ್ ಮಾಸ್ತರರು ಜಾಧವ ಮಾಸ್ತರರಿಗೆ ಹೇಳಿದರು.

"ನಾವು ಪಾಠ ಹೇಳಿ ಈ ಊರ ಉದ್ಧಾರ ಮಾಡುವುದು ಅಷ್ಟರಲ್ಲೇ ಇದೆ. ಸುಮ್ಮನೇಕೆ ಕಷ್ಟ ಸಹಿಸುವಿರಿ.

" ಕಷ್ಟ ಸಹಿಸದೆ ಸುಖ ಹೇಗೆ ಆಗಬೇಕು ? "

" ಇದರಿಂದ ಸುಖ ಆಗದು. ಗೌಡರ ಹುಡುಗನಿಗೆ ಬುದ್ಧಿ ಬಾರದು.

ತಿಂದು ಗೋಳಿಗಳಂತೆ ತಿರುಗುವವರೇ ಅವರು. ಅವರ ಹಿರಿಯರಿಗೆ ಬುದ್ಧಿ ಇದ್ದರೆ ಅವರಿಗೆ ಬಂದೀತು.'' ಹೆಡ್‌ಮಾಸ್ತರರು ಗೌಡರಿಗೆ ಹೀಗೆ ಎಂದೂ ಆಡುವವರಲ್ಲ. ಆದರೆ ಜಾಧವ ಮಾಸ್ತರರ ಮನೆಯ ಮೇಲೆ ಕಲ್ಲು ಬೀಳುವದನ್ನು ಕೇಳಿ ಅವರಿಗೆ ಸುಮ್ಮನಿರಲಾಗಲಿಲ್ಲ.

"ಗೌಡನಿಗೆ ತಿಳಿಯಬಾರದೇನು?'' ಇನ್ನೊಬ್ಬ ಸಹಾಯಕ ಶಿಕ್ಷಕರು ಕೆರಳಿ ಕೇಳಿದರು.

"ಅವರಿಗೆ ಗೊತ್ತಾಗಿಲ್ಲ ಕಾಣ್ತದೆ'' ಜಾಧವ ಮಾಸ್ತರರು ಶಾಂತ ಸ್ವರದಲ್ಲಿಯೇ ಹೇಳಿದರು.

"ನಿಲ್ಲಿರಿ, ನಾನು ಹೇಳಸ್ತೇನಿ, ಕುಲಕರ್ಣಿ ರಂಗಣ್ಣನವರಿಂದ.''

ಆ ದಿನ ಸಂಜೆಯಿಂದಲೇ ಮಾಸ್ತರರ ಮನೆಯ ಮೇಲೆ ಕಲ್ಲು ಬೀಳುವುದು ನಿಂತಿತು. ಮರುದಿನ ಪಾಠಕ್ಕೆ ಹೋದಾಗ ರಾವಸಾಹೇಬನೂ ಮೆತ್ತಗಾಗಿದ್ದ. ಗೌಡರೂ ಮನಸ್ಸಿಲ್ಲದಾಗ ಆ ಮಾತು ಈ ಮಾತು ಆಡುತ್ತ 'ನನಗೆ ಗೊತ್ತು ಆಗಿದ್ದರೆ ಆಗಲೇ ತಡೆದು ಬಿಡತಿದ್ದೆ. ಕೆಟ್ಟ ಹುಡುಗರ ಸಂಗತಿ ಮತ್ತೇನು?'' ಎಂದು ಸಂಕೋಚದಿಂದ ನುಡಿದು ಕ್ಷಮೆಯನ್ನು ಕೇಳಿಕೊಂಡಂತೆ ಮಾಡಿದರು. ಒಳಗಿಂದೊಳಗೇ ಮಗನಿಗೂ ಚನ್ನಾಗಿ ಛೀ ಹಾಕಿದ್ದರು.

ರಾವಸಾಹೇಬನ ಪಾಠ ಮೂರು ನಾಲ್ಕು ತಿಂಗಳು ಸಾಗುವಷ್ಟರಲ್ಲಿ ಜಾಧವ ಮಾಸ್ತರರ ಸೌಜನ್ಯ ಅವರನ್ನೂ ಗೌಡರ ಮನೆಯವರೆಲ್ಲೊಬ್ಬರಂತೆಯೇ ಮಾಡಿಬಿಟ್ಟಿತು. ಅವರಿಗೆ ಗೌಡರ ಮನೆಯವರೆಲ್ಲರ ಕಷ್ಟ ಸುಖಗಳ ಅರಿವೂ ಆಗಿದ್ದಿತು. ಗೌಡರಂತೂ ಮಾಸ್ತರರ ಚಾಣಾಕ್ಷತನವನ್ನು ಕಂಡು ಬೆರಗಾಗಿಯೇ ಬಿಟ್ಟಿದ್ದರು. ಹಲವು ಸಲ ತಾಯಿಯ ಹತ್ತರ ಮಾಸ್ತರರ ಗುಣಕಥನವನ್ನು ಮಾಡದೆ ಇರಲಿಲ್ಲ. ಜೊತೆಗೆ "ಹೆಡ್‌ಮಾಸ್ತರರ ಮಾತು ಕೇಳಿ ಏನೋ ತಿಳಕೊಂಡಿದ್ದೆ. ಆದರೆ ಹಾಗೇನಿಲ್ಲ ನಮ್ಮ ಹುಡುಗನಿಗೆ ಇಂಥ ಮಾಸ್ತರ ಸಿಕ್ಕದ್ದೊಂದು ಪುಣ್ಯ'' ಎಂಬ ಮಾತನ್ನೂ ಜೋಡಿಸದೆ ಇರಲಿಲ್ಲ.

ಈಗೀಗ ಜಾಧವ ಮಾಸ್ತರರು ಗೌಡರಿಗೆ ಹೆಚ್ಚು ಪರಿಚಿತರಾದರು. ಮನೆಯಲ್ಲಿ ಏನಾದರೂ ವಿಶೇಷವಿದ್ದರೆ ಮಾಸ್ತರರಿಗೆ ಊಟದ ಔತಣ.

ಇದ್ದೇ ತೀರಬೇಕು. ಗೌಡರ ನಡೆನುಡಿ ಅಷ್ಟು ಸರಳವಲ್ಲ. ಇಪ್ಪತ್ತು ವರ್ಷಗಳಷ್ಟು ದೀರ್ಘಕಾಲ ಗೌಡಕಿ ಮಾಡಿದುದರ ಪರಿಣಾಮ ಅವರ ಮೇಲೆ ಚನ್ನಾಗಿಯೇ ಆಗಿತ್ತು. ಯಾವ ವಿಷಯವನ್ನು ಹೇಳುವದಾದರೂ ಕೆಲ ಸಂಗತಿಯನ್ನು ಮನದಲ್ಲಿ ಹುದುಗಿಸಿಟ್ಟುಕೊಂಡೇ ಹೇಳುವುದು ಅವರ ಪರಿಪಾಠ. ಆದರೊಳಗೆ ಎದುರಿಗಿನವರನ್ನು ಬಹು ಬೇಗ ಮನಬಿಚ್ಚಿ ಮಾತಾಡುವಂತೆ ಮಾಡುವ ಕಲೆ ಅವರಲ್ಲಿತ್ತು.

ಆದಗೌಡನ ಮಾತಿನ ರೀತಿಯಲ್ಲಿ ವೈಶಿಷ್ಟ್ಯವಿದ್ದಂತೆ ಅವನ ಅಭಿರುಚಿಯಲ್ಲಿಯೂ ವೈಶಿಷ್ಟ್ಯವಿತ್ತು. ಅವರು ಯಾವಾಗಲೂ ಉಡುತ್ತಿದ್ದುದು ಬಿಳಿ ಅಂಚಿನ ಸೋಲಾಪುರ ಮಿಲ್ಲಿನ ದೋತರ. ಅದನ್ನು ಹಿಂದೆ ಮುಂದೆ ಚನ್ನಾಗಿ ತೀಡಿ ತೀಡಿ ಬಹಳ ಅಚ್ಚುಕಟ್ಟಾಗಿ, ಲಕ್ಷಣವಾಗಿ ಉಡುತ್ತಿದ್ದರು. ಮೈಯಲ್ಲಿ ತೊಡುತ್ತಿದ್ದುದು ಕಪ್ಪು ಕಾಲರುಗಳಿಲ್ಲದ ಮಲಮಲಿಯ ದುಂಡಂಗಿ. ಕಾಲಕಾಲಕ್ಕೆ ಮುಖಕ್ಷೌರ ಮಾಡಿಸಿಕೊಳ್ಳುತ್ತಿದ್ದರು. ತರುಣರಂತೆ ಕೊಂಚ ಮೀಸೆಯವರಲ್ಲ ಅವರು. ತುಂಬ ಮೀಸೆಯುಳ್ಳವರು. ಕ್ಷೌರ, ನಾವಲಿಗರ ಭೀಮಪ್ಪನಿಂದಲೇ ಆಗಬೇಕು. ಮೀಸೆ ಸ್ವಲ್ಪವೂ ಕೊಂಕಕೂಡದು. ತಲೆ ನುಣ್ಣಗೆ ಬೋಳಿಸಿ ನೀಳವಾದ ಚಂಡಿಕೆ ಕಾಯ್ದಿರಬೇಕು ಅಷ್ಟೆ. ಹೊರಗೆ ಹೊರಟರೆ ಒಂದು ಸಾದಾ ಕೋಟು, ಅದರ ಮೇಲೊಂದು ಹೊದೆಯುವ ದೋತರ, ಕಾಲಿಗೆ ಜರದ ಜೋಡು ಇದ್ದೇ ತೀರಬೇಕು.

ಊಟ ತಿಂಡಿಗಳಲ್ಲೂ ಹಾಗೇ. ಗೌಡರ ಊಟವೆಂದರೆ ಊರಲ್ಲಿಯೇ ಪ್ರಸಿದ್ಧವಾಗಿತ್ತು. ಊಟಕ್ಕೆ ಕುಳಿತರೆ ತಾಸು ಹಿಡಿಯುತ್ತಿದ್ದಿತು. ತಿನ್ನುವ ತಿಂಡಿ ತುಪ್ಪದಲ್ಲಿ ಮಾಡಿರಬೇಕಲ್ಲದೆ ಅದನ್ನು ಬಡಿಸುವ ರೀತಿಯೂ ಸೊಗಸಾದದ್ದಿರಬೇಕು. ಅದರಂತೆ ವೀಳ್ಯದೆಲೆ ತಿಂದರೂ ಯಾವಾಗಲೂ ಒಂದೇ ತೋಟದ್ದು. ಅವರ ತೋಟದ ಭರಮನೇ ಹದಿನೈದು ವರ್ಷಗಳಿಂದಲೂ ಚಿಗುರೆಲೆ ಕೊಯ್ದು ತಂದು ಕೊಡುತ್ತಿದ್ದನು. ಅವನೇ ಕೊಡಬೇಕು. ಅಡಿಕೆ ಸುಣ್ಣಗಳಲ್ಲೂ ಒಂದು ರೀತಿ. ಅವರ ಸುಣ್ಣದ ಡಬ್ಬಿಯಿಂದ ಅನ್ಯರಾರೂ ಸುಣ್ಣ ತಕ್ಕೊಳ್ಳುವಂತಿಲ್ಲ. ಅವರೇ ಕೊಡಬೇಕು. ತಪ್ಪಿ ಯಾರಾದರೂ ತಕ್ಕೊಂಡರೆ ಆ ಸುಣ್ಣ ತೆಗೆಯಿಸಿ

ಬೇರೆ ಸುಣ್ಣ ಹಾಕಿಸುತ್ತಿದ್ದರು. ಅದೂ ಸರಸ್ವತಿಯ ಕೈಯಿಂದಲೇ ಆಗ ಬೇಕು. ಅವಳಷ್ಟು ಓರಣದಿಂದ ಡಬ್ಬಿಗೆ ಸುಣ್ಣ ಹಾಕಲಿಕ್ಕೆ ಗಂಗವ್ವನಿಗೂ ಬರುತ್ತಿರಲಿಲ್ಲ. ಆದಗೌಡರೆಷ್ಟು ಮತಾಭಿಮಾನಿಗಳೋ ಅಷ್ಟೇ ಜಾಧವ ಮಾಸ್ತರರು ಡಾಂಭಿಕ ಮತಧರ್ಮಗಳ ಕಟ್ಟಿನಿಂದ ಹೊರಗಿದ್ದವರು. ಈ ವಿಷಯದಲ್ಲಿ ಮಾಸ್ತರರಿಗೂ ಗೌಡರಿಗೂ ಒಂದೆರಡು ಸಲ ದೊಡ್ಡ ವಾದವೇ ನಡೆದು ಹೋಗಿತ್ತು. ಧರ್ಮದ ವಿಷಯದಲ್ಲಿ ಗೌಡರ ವಿಷಯದಲ್ಲಿ ಗೌಡರ ಮನದ ಶ್ರದ್ಧೆ ಚಲಿಸಲು ಶಕ್ಯವಿಲ್ಲೆಂದರಿತ ಮಾಸ್ತರರು ಈಗೀಗ ಆ ವಿಷಯದಲ್ಲಿ ಮಾತೆತ್ತಿ ಮನಸ್ತಾಪ ಮಾಡಿಕೊಳ್ಳಲು ಇಚ್ಛಿಸುತ್ತಿರಲಿಲ್ಲ.

ಒಂದು ದಿನ ಸಂಜೆ ಮಾಸ್ತರರು ಪಾಠ ಹೇಳಲಿಕ್ಕೆ ಹೋದಾಗ ರಾವಸಾಹೇಬನು ಆಡ್ಡಾಡಲಿಕ್ಕೆ ಹೋದವ ಇನ್ನೂ ತಿರುಗಿ ಮನೆಗೆ ಬಂದಿರಲಿಲ್ಲ. ಅದರಿಂದಲೇ ಗೌಡರ ಕೂಡ ಮಾತಿಗೆ ಕುಳಿತರು ಮಾಸ್ತರರು. ಮಾತಿಗೆ ಮಾತು ಹೊರಟು ರಾವಸಾಹೇಬನ ವಿಷಯಕ್ಕೆ ಮಾತು ಹೊರಳಿಸಿ ಗೌಡರೆಂದರು :

" ಈಗೀಗ ಮಾತ್ರ ಯಾವಾಗಲೂ ಕೈಯೊಳಗ ಪುಸ್ತಕ ಹಿಡಿದುಕೊಂಡೇ ಇರುವನು. ಆದರೆ ನೀವು ಕೇಳಿದ ಒಂದು ಪ್ರಶ್ನೆಗೂ ಉತ್ತರ ಹೇಳುವದಿಲ್ಲ. ಹೇಗೆ ಓದಿರತಾನೋ ಏನ ಓದತಿರತಾನೋ ಅವನಿಗೇ ಗೊತ್ತು. "

" ನಾನೂ ಅದೇ ತಿಳಕೊಳ್ಳಬೇಕಾಗಿದೆ. ಈಗೀಗ ಅವನ ಲಕ್ಷಣ ನೆಟ್ಟಗಿಲ್ಲ. "

" ನಿಮಗೆ ಏನ ತಿಳದರೂ ಹೇಳ್ತ ಇರ್ರಿ! ಅವನ ಸಲುವಾಗಿ ಹೆಚ್ಚ ಲಕ್ಷ್ಯ ಹಾಕಲಿಕ್ಕೆ ಬೇಕು. ಗೌಡನಾಗುವ ಹುಡುಗ ಈತ. "

" ಅದಕ್ಕೇ ನಾನೂ ಅಷ್ಟ ಲಕ್ಷ್ಯ ಹಾಕೋದು. ಊರ ಗೌಡನೇ ಹೀಗಾದ ಮೇಲೆ ಜನ ಹೇಗಿರಬೇಕು ? "

" ಹೇಗೆ ? " ಎಂದರು ಗೌಡರು ಆಶ್ಚರ್ಯದಿಂದ.

ಏನೋ ಧ್ಯೇನಿಸುತ್ತ ಮಾಸ್ತರರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು. ಆಮೇಲೆ " ಅವನ ಪುಸ್ತಕದ ಕಪಾಟು ತೆರೆದು ನೋಡಲಿಕೆ

ಸಿಕ್ಕೀತೇನು ? ”

“ ನೋಡಬಹುದಲ್ಲ, ಅದಕ್ಕೇನು ? ”

“ ಕೀಲಿ ಹಾಕಿ ಹೋಗಿರಬೇಕಲ್ಲ ? ”

ಗೌಡ ಸ್ವಲ್ಪ ವಿಚಾರಿಸಿ, “ ಕೀಲಿಯು ಕೈ ನನ್ನಲ್ಲೊಂದಿದೆ” ಎಂದು ಹೇಳಿದ.

ಹಾಗೆಯೇ ಎದ್ದು ಹೋಗಿ, ಕೋಣೆಯೊಳಗಿಂದ ಬೀಗದ ಕೈಯೊಂದನ್ನು ತಂದು ಕೊಟ್ಟನು. ಇಬ್ಬರೂ ಕೂಡಿ ರಾವಸಾಹೇಬನ ಕೋಣೆಯಲ್ಲಿ ಹೋಗಿ ಕಪಾಟು ತೆಗೆದರು. ಅಲ್ಲಿ ಇಲ್ಲಿ ಹುಡುಕಿ ಮಾಸ್ತರರು ಕೆಲವು ಪುಸ್ತಕಗಳನ್ನೂ ಹಲವು ಚಿತ್ರಗಳನ್ನೂ ಹೊರಗೆ ತೆಗೆದರು. ಆ ಮೇಲೆ ಮೊದಲಿನಂತೆ ಬೀಗ ಹಾಕಿ ಹೊರಗೆ ಬಂದರು.

ಅಷ್ಟರಲ್ಲಿ ರಾವಸಾಹೇಬ ಹೊರಗಿನಿಂದ ಕಾಲು ಅಪ್ಪಳಿಸುತ್ತ ಬಂದ. ಗೌಡರು, “ ಮಾಸ್ತರರು ಬಂದು ಎಷ್ಟೊತ್ತ ಆಯ್ತು; ಮನೆಗೆ ಬರಲಿಕ್ಕೆ ಇಷ್ಟು ವೇಳೆ ಏಕೆ ? ” ಎಂದು ಮಗನಿಗೆ ಕೇಳಿದರು.

“ ಬೆಳದಿಂಗಳೊಳಗ ತಿರಗಾಡ್ತ ಹೋದೆವು, ಹೊತ್ತಾಯ್ತು ! ” ಎಂದು ಬಿಗುವಿನಿಂದ ಹೇಳಿ ಒಳಗೆ ಊಟಕ್ಕೆ ಹೋದ.

ಮಾಸ್ತರರು ದೀಪದ ಬೆಳಕಿನಲ್ಲಿ ಗೌಡರಿಗೆ ಪುಸ್ತಕಗಳನ್ನು ತೋರಿಸಿದರು. ‘ ಕಾಮಶಾಸ್ತ್ರ ’, ‘ ಅನಂಗರಂಗ ’, ‘ ಸ್ತ್ರೀವಶೀಕರಣ ’ ಪುಸ್ತಕಗಳನ್ನು ನೋಡಿ ಗೌಡರು ಅವಾಕ್ಕಾದರು. ತಮ್ಮ ಮಗನ ಚಿತ್ತ ಹೀಗೆ ಚಂಚಲವಾಗಿರಬೇಕೆಂಬುದು ಅವರ ಕನಸಿನಲ್ಲಿಯೂ ಕೂಡ ಸುಳಿದಿರ್ಲಲಿಲ್ಲ. ಮಾಸ್ತರರು ಮೆಲ್ಲನೆ ಒಂದು ಪಾಕೀಟಿನಲ್ಲಿಯ ಚಿತ್ರಗಳನ್ನು ಹೊರಗೆ ತೆಗೆದು ಗೌಡರಿಗೆ ತೋರಿಸಿದರು. ಸ್ತ್ರೀಯರ ನಗ್ನ ಚಿತ್ರಗಳವು ! ಗೌಡರು ನೋಡಲಿಕ್ಕೂ ನಾಚಿದರು. ಸಂಕೋಚಪಟ್ಟುಕೊಂಡರು. ಮೆಲ್ಲಗೆ—

“ ತೆಗೆದ ಇಟ್ಟ ಬಿಡಿರಿ ! ತಿಳಿದಂತೆ ಆಯ್ತು ? ” ಎಂದರು ತ್ರಸ್ತ ಸ್ವರದಲ್ಲಿ.

ಪುಸ್ತಕಗಳನ್ನು ತೆಗೆದು ಇಟ್ಟಾಯಿತು. ಮಗನ ಏ[illegible]ೀಲು ಪತೆಯನ್ನು ಕಂಡು ಗೌಡರಿಗೆ ಇಂದು ಅತ್ಯಂತ ಖೇದವಾಯಿತು. ಮಗ

ನನ್ನು ಕಂಡು ಬೆದರಿಸಬೇಕೆಂದರು. ಮರುಕ್ಷಣದಲ್ಲಿ ಬಾಗದ ಮರವೆಂದೆಣಿಸಿತೇನೋ! ಸುಮ್ಮನೆ ಇದ್ದು ಬಿಟ್ಟರು.

ಮುಂದೆ ಎರಡು ಮೂರು ದಿನಗಳಲ್ಲಿ ಗೌಡರ ಮನೆಯಲ್ಲಿ ಒಂದು ಹಬ್ಬದ ಊಟವಿತ್ತು. ಅದಕ್ಕಾಗಿ ಮಾಸ್ತರರಿಗೂ ಆಮಂತ್ರಣವಿತ್ತು. ಆದರಿಂದ ಎಲ್ಲರಿಗೂ ನಡುಮನೆಯಲ್ಲಿಯೇ ಎಲೆ ಹಾಕಿದ್ದಾರೆ. ಅಡಿಗೆಯ ಮನೆಯಲ್ಲಿ ಕೂಡಿಸುವಂತಿಲ್ಲ. ಗಂಗವ್ವ ಬಡಿಸುತ್ತಿದ್ದಾಳೆ. ಅಲ್ಲೇ ಸಮೀಪದಲ್ಲಿ ಕುಳಿತು ಮುರದೇವಿಯು ಯಾರು ಯಾರಿಗೆ ಏನೇನು ಬೇಕೆಂಬುದನ್ನು ಒಳಗಿನಿಂದ ತರಲು ಎಲೆಯ ಕಡೆಗೆ ನೋಡಿ ಸೂಚಿಸುತ್ತಿದ್ದರು.

"ನೀವೇನ ನಮ್ಮ ಹಾಗೆ ಮುಪ್ಪಿನವರೇನು? ತಕ್ಕೊಳ್ಳಿರಿ ಇನ್ನೊಂದ ಹೋಳಿಗೆ" ಅಂದು ಅನ್ನುತ್ತ ಮುರದೇವಿಯು ಮಾಸ್ತರರಿಗೆ ಹೋಳಿಗೆ ಹಾಕಲು ಸೂಚಿಸಿದಳು.

"ಪ್ರಾಯದವರಾದರೂ ನಿಮ್ಮಂತೆ ನಮ್ಮ ಪ್ರಕೃತಿ ಗಟ್ಟಿ ಅಲ್ಲ ತಾಯೀ!"

"ಈಗಿನ ಹುಡುಗರೇನು? ಹನ್ನೆರಡು ಸಾರೆ ಚಹ ಕುಡಿಯುವರು. ಊಟ ಅಂದರೆ ಔಷಧ ತಿಂದಂತೆ ಮಾಡ್ತಾರು. ಹೇಗೆ ಇರಬೇಕು ಶಕ್ತಿ?" ರಾವಸಾಹೇಬನ ಮೇಲೆ ಹಾಯಿಸಿ ಮುರದೇವಿ ನುಡಿದಳು.

"ತಿನ್ನೋದ ಉಣ್ಣೋದರೊಳಗೆ ಅಷ್ಟೇ ಏನದೆ? ನೀತಿ ನಡತಿಯೂ ನೆಟ್ಟಗೆ ಬೇಕು ಹನ್ನೆರಡು ಕೆಟ್ಟ ಕೆಟ್ಟ ಪುಸ್ತಕ ಓದೋದೂ, ಸಣ್ಣ ವಯಸ್ಸಿನೊಳಗ ಕೆಟ್ಟ ನಡತಿಗೆ ಬೀಳೋದು. ಅದ ಆಗೋದ ಬೇಡಂತ ಹಿರಿಯರು ಮಕ್ಕಳ ಮದುವೆ ಮಾಡೋದು. ಇಪ್ಪತ್ತು ವರ್ಷದೊಳಗ ನಾಲ್ಕು ಮಕ್ಕಳ ಹಡಿಯೋದು ಅಂದರ ಆಯ್ತು ಇವರ ಮುದಕರ ಆದರು" ಎಂದು ಗೌಡರು ಮಾತಿನ ಬಾಣ ಎಸೆದರು

ರಾವಸಾಹೇಬನ ಹೃದಯ ಆದುರಿತು; ಮುಖ ಮುದುರಿಕೊಂಡು ಬಿಗುಹಿನಿಂದ ಊಟ ಮಾಡುತ್ತಿದ್ದ. ಈ ಮಾತಿನ ಮಲಕು ಪಾಪ ಮುರದೇವಿಗೇನು ಹೊಳೆಯಬೇಕು? ಅವಳು ಮಗನ ಮಾತಿಗೆ ಒಪ್ಪದೆ:

“ ಮದವಿ ಆದರೆ ಏನಾಗ್ತದೆ? ಇಲ್ಲದ್ದೊಂದ ಹೇಳುವಿ ನೀ. ನಿನ್ನ ಮದಿವೆ ಯಾವ ವಯಸ್ಸಿಗೆ ಆಗಿತ್ತು? ಈಗೇನ ಅಜಿತ ರಾವ ಸಾಹೇಬರು ಮದಿವೆಗೆ ಬಂದಿಲ್ಲ? ಇದೇ ವಯಸ್ಸಿಗೆ ಮದಿವೆ ಮಾಡಿದರೆ ಚಂದ.’’

ಮುದುಕಿಗೆ ಮರಿಮಕ್ಕಳನ್ನು ಕಾಣುವ ಆಶೆಯಿದೆ ಎಂಬುದನ್ನು ಅರಿತುಕೊಳ್ಳಲು ಜಾಧವ ಮಾಸ್ತರರಿಗೆ ಬಹಳ ವೇಳೆ ಹಿಡಿಯಲಿಲ್ಲ. ಅಂತೇ ಅವರಂದರು.

“ ಏನ ಮರಿಮಕ್ಕಳನ್ನಷ್ಟು ಕಾಣುವ ಆಶಾ ಅದನs? ಅದೂ ಆದೀತಲ್ಲ. ಗಂಡು ಹುಡುಗರಿಗೆ ಆಗದಿದ್ದರೆ ಇಂದಿರಾ ಹಡದಾಳಲ್ಲ?’’

“ ಏನ ಹಡಿತಾಳೋ ಏನ ಮಣ್ಣೋ, ನೆರದ ಆರ ವರ್ಷ ಆಯ್ತು. ಇನ್ನೂ ಸುದ್ದೀನೇ ಇಲ್ಲ. ಬೇಡ ಅಂದರ ದೂರ ಮುಂಬಯಿಗೆ ಆಕೆಯ ಗಂಡ ಕೆಲಸ ಹಿಡಿದ. ವರ್ಷಾರತಿಂಗಳೊಳಗ ಇಂದಿರಾನ ಭೆಟ್ಟಿ ಏನ ಆಗುವ ಹಾಂಗಿಲ್ಲ. ನಮ್ಮಂತಹ ಮುದಿಕೆಯರೇನು ಹೋಗಿ ಬರುವಂತಹ ಊರಾ? ಇಲ್ಲೇ ಎಲ್ಲಿಯಾದರ ಹತ್ತರ ಹಳ್ಳಿಯೊಳಗ ಇದ್ದರ ಬಂಡಿ ತಗೊಂಡ ಹೋಗಿ ಬಂದೇವ— ”

‘‘ಹಳ್ಳೀ ಊರಿಗೇ ಕೊಟ್ಟಿದ್ದೇವಲ್ಲ. ಕೆಲಸಕ್ಕ ಅಂತ ಮುಂಬಯಿಗೆ ಹೋದರು. ಅವಳ ದೈವಕ್ಕೇನ ಕೈ ಹಚ್ಚುವದದೆ?’’ ಎಂದರು ಗೌಡರು.

ಊಟ ತೀರಿಸಿ ಎಲೆ-ಅಡಿಕೆ ಹಾಕಿಕೊಂಡು ಮಾಸ್ತರರು ಮನೆಗೆ ಹೊರಟರು. ತಲೆಬಾಗಿಲ ಹೊರಗೆ ಸರಸ್ವತಿ ದೊರಕಿದಳು. ಈಗ ಜಿನ ಮಂದಿರಕ್ಕೆ ಹೋಗಿ ಮನೆಗೆ ಬರುತ್ತಿದ್ದಳಾಕೆ. ಕೈಯಲ್ಲಿ ಬೆಳ್ಳಿಯ ಗಿಂಡಿ ಆರತಿಗಳಿದ್ದುವು. ರೇಶಿಮೆಯ ಮಡಿ ಉಟ್ಟಿದ್ದಳು. ಇದೀಗ ಅಷ್ಟಕ ಮುಗಿಸಿಕೊಂಡು ಬಂದಿದ್ದಳೇನೊ! ಇಂದು ಪರ್ವದಿನವೆಂದು ಊರೊಳಗಿನ ಸಾರ್ವಜನಿಕ ಮಂದಿರಕ್ಕೆ ಹೋಗಿದ್ದಳು. ಬಹುಶಃ ಗೌಡರ ಮನೆಯ ಹೆಣ್ಣುಮಕ್ಕಳು ವಾಡೆಯೊಳಗಿನ ಬಸ್ತಿಗೇನೇ ಹೋಗುವುದು ಹೆಚ್ಚು. ಪರ್ವದಿನಗಳಲ್ಲಿ ವ್ರತ ಉದ್ಯಾಪನಗಳಿದ್ದಾಗಷ್ಟು ದೊಡ್ಡ ಬಸದಿಗೆ ಹೋಗಬೇಕಾಗುತ್ತಿದ್ದಿತು. ದೇವ ದರ್ಶನವಾಗದೆ

ಊಟ ಮಾಡುವಂತಿರಲಿಲ್ಲ. ಇತ್ತೀಚೆಗಾಗಿ ಅವಳ ಮನಸ್ಸು ಊಟ ಉಡಿಗೆಗಳಿಗಿಂತ ದೇವ ಪೂಜೆ ಧ್ಯಾನಗಳಲ್ಲಿ ಹೆಚ್ಚು ಮಗ್ನವಾಗಿರುತ್ತಿತ್ತು. ಇದ್ದ ಇಬ್ಬರು ಮಕ್ಕಳು ದೂರದಲ್ಲಿದ್ದರು. ಮನೆಯಲ್ಲಿ ಆದಷ್ಟು ಕೆಲಸ ಮಾಡುವುದು, ಉಳಿದ ವೇಳೆಯಲ್ಲಿ ದೇವರ ಹತ್ತಿರ ಮಕ್ಕಳ ಯಶ ಕೋರುವದು, ತನಗೆ ಸದ್ಗತಿ ಬೇಡುವುದು ಇವಿಷ್ಟೇ ಅವಳ ಬಯಕೆಯಾಗಿದ್ದುವು.

"ಇಂದು ಅಜಿತನ ಕಾಗದ ಬಂದದ ತಾಯೀ, ಇಂದಿರಾ ಮೂರು ತಿಂಗಳ ಬಸಿರಂತೆ" ಎಂದು ಜಾಧವ ಮಾಸ್ತರರು ಹೇಳಿದರು.

ಸರಸ್ವತಿಗೆ ಹಿಡಿಸಲಾರದಷ್ಟು ಆನಂದ. ಮಾನವನು ತಾನು ಬಹು ದಿವಸದಿಂದ ಬಯಸಿ ನೋಂತುದಕ್ಕೆ ದೊರೆತ ಫಲವು ನಿಜವಾಗಿಯೂ ಫಲವಾಗಿರುವದೇ ಎಂಬ ಸಂಶಯವೂ ಕೆಲವು ಸಲ ಬರುವುದುಂಟು. ಹಾಗೆಯೇ ಸರಸ್ವತಿಯ ಮನಸ್ಥಿತಿಯಾಯಿತು. ಅದರಿಂದ ಮತ್ತೂ ಅವಳು ಕೇಳಿದಳು.

"ಈಗಲೇ ನಿಜವೆಂದು ಹೇಗೆ ಅನ್ನುವುದು ?"

"ಅದಕ್ಕೇನು, ಮೂರು ತಿಂಗಳಲ್ಲಿ ತಿಳಿಯದಿರುವುದೆ ?"

ಸರಸ್ವತಿ ಸ್ವಲ್ಪ ತಡೆದು, "ಉಳಿದವರೆಲ್ಲರು ನೆಟ್ಟಗಿದ್ದಾರಂತ ಏನು ?" ಎಂದು ಕೇಳಿದಳು.

"ಇದಾರೆ" ಎಂದರು ಮಾಸ್ತರರು, ಏನೋ ವಿಷಯ ಮುಚ್ಚಿಡುವವರಂತೆ ಅವರ ಮುಖಭಾವವಿತ್ತು. ಕೊಂಚ ಕಾಲ ತಡೆದು, "ಮನೆಯವರಿಗೆ ಈಗಲೇ ತಿಳಿಸಬೇಡಿರಿ. ಅಲ್ಲಿಂದ ಕಾಗದ ಬಂದ ಮೇಲೆಯೇ ಗೊತ್ತಾಗಲಿ" ಎಂದರು.

ಹಿಂದೆ ಪತ್ರಗಳ ಸಂಗತಿಯನ್ನೆಲ್ಲ ಮಾಸ್ತರರೇ ಮನೆಯಲ್ಲಿ ಹೇಳುತ್ತಿದ್ದರು. ಈ ಸಲ ಏಕೆ ಬೇಡೆನ್ನುವರೋ ಹೊಳೆಯಲಿಲ್ಲ ಅವಳಿಗೆ. ಇಂದಿನ ಹಬ್ಬದ ಊಟ ಅವಳಿಗೆ ನಿಜವಾಗಿಯೂ ಹರುಷದ ಊಟವೆನಿಸಿತು. ಆಗಿನ ಅವಳ ಉತ್ಸಾಹ ಮನೆಯವರಿಗೆಲ್ಲ ಒಂದು ಒಗಟವಾದಂತಿತ್ತು!

## ೧೦

ಅಜಿತ ಸಿದ್ದನ ಕೈಯಲ್ಲಿ ಎರಡು ರೂಪಾಯಿಗಳನ್ನು ಇಟ್ಟಾಗ ಅವನದನ್ನು ಕಂಡು ಆಶ್ಚರ್ಯಚಕಿತನಾಗಿ ಅಜಿತನನ್ನೇ ದಿಟ್ಟಿಸಿ ನೋಡ ತೊಡಗಿದ.

"ತಗೋ ಸಿದ್ದ."

"............"

"ಏನೂ ದಿಗಿಲು ಪಡಬೇಡ ತಗೊ."

"ಬ್ಯಾಡಪ್ಪಾ!"

"ಯಾಕೋ?"

"ಇಷ್ಟ ಕೊಡತೀರೀ ಅಣ್ಣಾ?"

"ಕೊಡತೇನ ತಗೋ."

"ಅದ್ಯಾಕಣ್ಣ?"

"ನೀ ತಗೋ ನಾ ಹೇಳತೇನಿ."

ಸಿದ್ದ ಕೈಯೊಡ್ಡಿದ. ನೆಟ್ಟ ದಿಟ್ಟಿಯಿಂದ ಅಜಿತನ ಮುಖವನ್ನೇ ನೋಡಿದ.

"ಇದ ತಗೋ ಹೋಗು. ಮತ್ತೆ ಒಂದೆರಡು ದಿನಕ್ಕ ಒಂದು ಕಾಣು." ಸಿದ್ದ ಹಿಂಜರಿದ.

"ಏನ ಹೆದರಬೇಕಿಲ್ಲ ಜಾ, ಇದೇ ನಿನ್ನ ಸುಧೀರನ ಮನೆ" ಎಂದ ಅಜಿತ.

ಸಿದ್ದ ಬೆಕ್ಕಸ ಬೆರಗಾದ. ಒಂದು ಕ್ಷಣ ಇಂದಿರೆಯ ಮುಖವನ್ನು ನಿರೀಕ್ಷಿಸಿದ. ಆ ದೃಷ್ಟಿಯಲ್ಲಿ ಮಗುವು ತಾಯಿಯ ಮುಖವನ್ನು ನಿರೀಕ್ಷಿಸುವ ಭಾವವಿದ್ದಿತೇನೋ. ಹಾಗೇ ಭಾರವಾದ ಹೆಜ್ಜೆಗಳಿಂದ ಹಿಂದಿರುಗಿದ. ಅಲ್ಲಿಂದ ಹೋಗಬೇಕಾದರೂ ಮನಸ್ಸು ಹಿಂದೆಳೆಯ ಹತ್ತಿತು. ಇಂಥ ಸಂದರ್ಭವನ್ನು ಅವನೆಂದೂ ಪಡೆದುದಿಲ್ಲ. ಮೆಲ್ಲ ಮೆಲ್ಲನೆ ಹೋಗಿಬಿಟ್ಟ.

ಅಜಿತ ಹೊರೆಳಿ ಒಳಗೆ ಬಂದಾಗ ಇಂದಿರೆ ಗೋಡೆಗೆ ಆನಿಸಿ ಕುಳಿತಿದ್ದಳು. ಕಣ್ಣೀರು ದಳದಳ ಹೋಗುತ್ತಿದ್ದುವು. ಅವುಗಳನ್ನು ಒರಸುವ

ಗೋಜಿಗೆ ಕೈಗಳು ಹೋದಂತೆ ತೋರಲಿಲ್ಲ. ನಿಶ್ಚಲ ನಯನಗಳು ಎದುರಿಗಿರುವ ಪತಿಯ ಭಾವಚಿತ್ರದಲ್ಲಿ ನೆಲೆನಿಂತಿದ್ದುವು. ಹೋಗು ವಾಗ ಸುಧೀರ ಹತ್ತರ ಕರೆದು—

"ನೀ ಹೆದರಬೇಡ. ಎರಡು ದಿನಗಳಲ್ಲಿ ಬಿಟ್ಟು ಬರುವೆ. ಅಜಿತನ ಹೆಸರಿನಿಂದ 'ಲಾಯಿಟ್' ಆಫೀಸಿನಲ್ಲಿ ಒಂದು ಕಾಗದ ಬರೆದಿಟ್ಟಿದೇನೆ. ಅದರಂತೆ ಆತ ವ್ಯವಸ್ಥೆ ಮಾಡುವ, ಸತ್ಯಕ್ಕೆ ಯಾವಾಗಲೂ ಗೆಲವಿದೆ."

"ಅದೇನೋ ನಿಮಗೇ ಗೊತ್ತು! ಆ ಅರಿಯದ ಹುಡುಗನ ಜೊತೆ ನಾ ಹೇಗೆ ಇರಬೇಕು?"

ನಿಜವಾಗಿಯೂ ಅಜಿತ ವ್ಯವಹಾರವನ್ನು ಅರಿಯದ ಮನುಷ್ಯನೇ.

"ಅವನೂ ಕೆಲ ದಿನ ನಿನ್ನ ಜೊತೆ ಇರುವುದು ಬೇಡ. ಅದರ ಎಲ್ಲ ವ್ಯವಸ್ಥೆ ಅವನೇ ಮಾಡುವನು. ನೀ ಚಿಂತಿಸಬೇಡ. ಬಡವರ ಸಾವು ನೋಡಿ ಸುಮ್ಮನಿರಲಿಕ್ಕಾಗದು."

ಇಂದಿರೆ ತುಂಬ ಹೆದರಿದಳು. ದುಃಖ ಒತ್ತರಿಸಿ ಬಂತು. ಗಂಟಲ ಸಿರಗಳು ಬಿಗಿದುವು. ಬಾಯಿ ಜಿಗುಟಾಯಿತು. ಏನೇನೋ ಕೇಳ ಬೇಕೆಂದೆನಿಸಿತು. ಆದರೆ ಬಾಯಂಗಳದಲ್ಲಿ ನಾದವೇ ಇಲ್ಲ. 'ಅಯ್ಯೋ' ಎಂದು ಉಸುರುಗರೆಯುವಳು. ಈ ಸ್ಥಿತಿಯಲ್ಲಿಯೇ ಹತ್ತೆಂಟು ನಿಮಿಷ ಗಳು ಕಳೆದುವು. ಆದರೂ ಅವಳ ಬಾಯಿಂದ ತಟ್ಟನೆ ಮಾತು ಹೊರಡಲಿಲ್ಲ.

"ಮನೆಯೊಳಗ ಹೆಂಡತಿ ಇದ್ದಾಳಲ್ಲ ಇನ್ನೂ! ದೆವ್ವನಂಥ ಈ ಊರೊಳಗ ನಾ ಒಬ್ಬಾಕೇ ಹೇಗಿರಬೇಕು?" ದುಃಖ ಮಾತನ್ನು ತಡೆಯುತ್ತಿರಲು ನುಡಿದಳು. ಸುಧೀರನಿಗೆ ಹೆಂಡತಿಗೆ ಹೇಗೆ ಸಮಾಧಾನ ಹೇಳಬೇಕೆಂಬದು ತಿಳಿಯದಾಯಿತು. ಹೇಳಲು ಅವಕಾಶವೂ ಇರಲಿಲ್ಲ. ಪೋಲೀಸರ ಒತ್ತಡ ಜೋರಾಗಿದ್ದಿತು. ಹೋಗಿಬಿಟ್ಟ. ಅವಳಲ್ಲೇ ಕುಳಿತಳು. ಅದೆಷ್ಟೋ ಕಾಲ ಕುಳಿತಿ ದ್ದಳು. ಹುಚ್ಚು ಕಳೆಯಿಂದ ಹಾಗೇ ಕುಳಿತಿದ್ದಳು. "ಏನ ಹೇಳಿರುವ ಸುಧೀರಮಾವ?" ಎಂದು ಅಜಿತ ಎರಡು ಮೂರು ಸಲ ಕೇಳಿದರೂ ಅವಳಿಗೆ ಪರಿವೆಯಿಲ್ಲ. ಬಹಳ ಹೊತ್ತಿನ ಮೇಲೆ ಉಸ್ಸೆಂದು ಉಸಿರ್ಗರೆ ದಳು. ಕಣ್ಣಿನಿಂದ ದಳದಳ ನೀರು ಹರಿಯುತ್ತಲಿದ್ದುವು. ದೃಷ್ಟಿಯು

ಎಲ್ಲಿಯೋ ಲೀನವಾಗಿದ್ದಿತು. ಮುಂದಿನ ದಿನಗಳೆಲ್ಲ ಅವಳಿಗೆ ಭೀಕರವೆನಿಸಿದುವು. ಅದೇನೋ ಭ್ರಮೆಯಾದವರಂತೆ ಏನೇನೋ ಬಡಬಡಿಸತೊಡಗಿದಳು. "ಅಯ್ಯೋ! ಅವರನ್ನ ಪೋಲೀಸರು ಹಿಡಿದು ಒಯ್ದರಲ್ಲ! ನಾ ಹೇಗೆ ಇರಲಿ ಈ ಮನೆಯೊಳಗೆ!" ಎಂದು ಚೀರಿ ನೆಲಕ್ಕೆ ಬಿದ್ದು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಪತಿಯು ಯಾವ ಕೆಲಸದಿಂದ ಉತ್ಸಾಹಭರಿತಳಾಗಿ ಇಲ್ಲಿಯ ವರೆಗೆ ಸಮಾಜಸೇವೆಯಲ್ಲಿ ಮುನ್ನುಗ್ಗುತ್ತಿದ್ದಳೋ ಆ ಕೆಲಸಗಳೆಲ್ಲ ಈಗ ಭಯಂಕರವಾಗಿ ತೋರತೊಡಗಿದುವು. "ಅಯ್ಯೋ ಇವರಿಗೇಕೆ ಈ ಕೆಲಸ ಬೇಕಾಯಿತು? ಯಾರು ಮಾಡು ಅಂದಿದ್ದರಪ್ಪ ಇಂಥ ದೇಶಸೇವೆ· ತನ್ನ ಮನೆಯ ಮೇಲೆ ಕಿಚ್ಚ ಇಟ್ಟುಕೊಂಡು ಇನ್ನೊಬ್ಬರ ಮನೆ ಉಳಿಸಲಿಕ್ಕೆ ಹೋದಂತಾಯಿತಲ್ಲ! ಅಯ್ಯೋ ದೇವಾ! ಎಂಥ ಕೆಟ್ಟ ಹೊತ್ತ ತಂದೆಯಪ್ಪ!" ಎಂದು ಏನೇನೋ ಅನ್ನುವುದು, ಅಳುವುದು, ಒಂದೇಸವನೆ ನಡೆಯಿತು.

ಅಜಿತ ಹತ್ತರ ಹೋಗಿ ಪರಿಪರಿಯಿಂದ ಅಕ್ಕನಿಗೆ ಸಮಾಧಾನ ಹೇಳಿದ. ಆದರೂ ಅವಳ ಮನಸ್ಸು ಬಹಳ ಹೊತ್ತಿನ ವರೆಗೆ ಸ್ಥಿಮಿತಕ್ಕೆ ಬರಲಿಲ್ಲ. ಸ್ವಲ್ಪ ಹೊತ್ತು ಸುಮ್ಮನೆ ಕೂಡುವಳು. ಮತ್ತೆ ನಡುವೆಯೇ ಹುಚ್ಚಿಯಂತೆ ಏನೇನೋ ಅನ್ನುವಳು. ಕೂತಲ್ಲಿಯೇ ತೇಕುವಳು. ವಿವಿಧ ಭಾವನೆಗಳು ಹೃದಯದಲ್ಲಿ ಎದ್ದು ಕಲಮಲಗೊಳಿಸುವವು. ಮದಿವೆಯಾದ ಮೇಲೆ ಪತಿಯನ್ನಗಲಿ ಅವಳೆಂದೂ ಇದ್ದವಳಲ್ಲ. ನಾಲ್ಕು ದಿನ ತವರು ಮನೆಗೆ ಹೋದರೂ ಆರು ಪತ್ರಗಳನ್ನು ಬರೆದ ಹೆಣ್ಣು ಹೃದಯವದು. ಈಗ ಒಮ್ಮೆಲೇ ಈ ರೀತಿ ಸುಧೀರನನ್ನು ಹಿಡಿದು ಒಯ್ದುದ್ದರಿಂದ ಅವಳಿಗೆ ಅತ್ಯಂತ ದುಃಖವಾಗಿದ್ದಿತು. ಏನೂ ತಿಳಿಯದಂತಾಯಿತು. ಒಮ್ಮೆಲೆ ಹಲ್ಲುಕಡಿದು ಏನೇನೋ ಒದರಾಡುವಳು, ಅಳುವಳು. ಅದರ ಜೊತೆಗೆ ಹೃದಯ ಕೊಂಚ ಹಗುರಾಯಿತೇನೋ, ಆದರೆ ಇನ್ನೂ ಮಾತು ಬರಲೊಲ್ಲವು. ಕೊನೆಗೆ ಹೇಗೋ ಕೇಳಿದಳು.

"ಅಲ್ಲಾ, ಅಜಿತ! ಏಕೆ ಹಿಡಿದರವರನ್ನ?"

"ಹಿಡಿದರೆ ಏನಾಯ್ತು?" ಎಂದ ಅಜಿತ.

"ಅದೇಕೆ ಹಿಡಿದರು?"

" ಅಂದರೆ ? "

" ಏನ ತುಡಗ ಮಾಡಿದ್ದಾರೆ? " ಕಳವು ಮಾಡಿದವರನ್ನು ಹಿಡಿಯುವರೆಂಬುದೇ ಹೆಚ್ಚಾಗಿ ಗೊತ್ತವಳಿಗೆ.

" ಹೌದು ! "

" ಏನು ತುಡಗ ಮಾಡಿದ್ದಾರೆ ? "

" ಹತ್ತು ಸಾವಿರ ಹಣ ಎತ್ತಿ ಹಾಕಿದಾನ ತನ್ನ ಕೃತಿಯಿಂದ. "

" ಯಾರಿಂದ ? "

" ಮಿಲ್ಲಿನ ಮಾಲಕರಿಂದ. "

" ಎಲ್ಲಿದ, ಆ ಹಣ ? " ತುಂಬ ಬೆರಗಿನಿಂದ ಕೇಳಿದಳು ಇಂದಿರೆ.

" ಹೋಗಿ ಬಿಟ್ಟಿತು ! "

" ಎಲ್ಲಿ ? "

" ಇದ್ದಲ್ಲಿ. "

" ಆ ಮೇಲೇಕೆ ಹಿಡಿದರು ? "

" ಬರಬೇಕಾದ ದುಡ್ಡು ಬರಲಿಲ್ಲವಲ್ಲ ! "

" ಅದರಲ್ಲಿ ಇವರದೇನು ತಪ್ಪು ? "

" ತಪ್ಪು ಇಲ್ಲದಿದ್ದರೂ ಹಿಡಿಯುವರು. "

" ಅದೇಕೆ ? "

" ಒಳ್ಳೆಯ ಕೆಲಸ ಮಾಡುವವರನ್ನೂ ಪೋಲೀಸರು ಬಂಧಿಸುವರು."

" ಕಳ್ಳನನ್ನು ಹಿಡಿದಂತೆ. "

" ಹೌದು; ಹಾಗೇ. "

" ಹಾಗೆಂದಿಗೂ ಆಗಲಿಕ್ಕಿಲ್ಲ. ಒಳ್ಳೆಯ ಕೆಲಸ ಮಾಡುವವರನ್ನು ಪೋಲೀಸರು ಎಂದಾದರೂ ಹಿಡಿಯುವರೇ ? "

" ಅದು ಸತ್ಯಯುಗದ ಮಾತು. ಬ್ರಿಟಿಷ ರಾಜ್ಯದಲ್ಲಿ ಒಳ್ಳೆಯ ಕೆಲಸ ಮಾಡುವುದೂ ಒಂದು ಅಪರಾಧ. ಅದು ನಿನಗೆ ತಿಳಿಯದು. "

" ನೀವು ಇಂಥ ಉದ್ಯೋಗದೊಳಗೇ ಹೋಗಬಾರದು."

'ಬಡಜನರ ಸೇವೆ, ದೇಶದ ಹಿತ, ಶಿಕ್ಷಣ ಪ್ರಸಾರಗಳನ್ನು ಮಾಡು ವಾಗೇನೋ ಸುಲಭವೆನಿಸಿತಾದರೂ ಇವಳಿಗೆ ಅದರಿಂದ ಮುಂದೊದಗ ಬಹುದಾದ ಸಂಕಟ ಪರಂಪರೆಗಳ ಕಲ್ಪನೆ ಇರಲಿಲ್ಲವಲ್ಲ!' ಎಂದು ಅಜಿತ ಮನದಲ್ಲಿಯೇ ಅಂದುಕೊಂಡ.

ಅಜಿತ ಒಲೆಯ ಕಡೆಗೊಮ್ಮೆ ನೋಡಿದ. ಅನ್ನ ಜೀಯಿಸಿ ಇಡ ಲಾಗಿತ್ತು.

"ಏಳು, ನನಗೂ ಸ್ವಲ್ಪ ಬಡಿಸು, ನೀನೂ ಉಣ್ಣು. ಭಾವನಿಗೆ ಏನಾಗುವುದು? ಅದಕ್ಕಿಷ್ಟು ಚಿಂತಿಸಬೇಕಿಲ್ಲ. ಸಂಪಿನ ನಿರ್ಣಯ ವಾದನಂತರ ಒಂದೆರಡು ದಿನಗಳಲ್ಲಿ ಬಿಟ್ಟಾರು. ನಾ ಈಗ ಹೋಗಿ 'ಲಾಯಿಟ್' ಆಫೀಸಿನಲ್ಲಿ ಗೆಳೆಯರಿಂದ ಎಲ್ಲ ಸಂಗತಿ ತಿಳಿದುಕೊಂಡು ಬರುವೆ."

ಇಂದಿರೆಗೆ ಈಗ ನೆನಪಾಯಿತು. "ಹೋಗಿ ಬಾ ಮೊದಲ. ಅಲ್ಲೇನೋ ನಿನಗೆ ಪತ್ರ ಒಂದ ಇಟ್ಟ ಬಂದೇನಿ ಅಂತ ಹೇಳಿದರು." ಎಂದಳು.

"ಹಾಗೇ ಮಾಡುವೆ. ನೀ ಬಾಗಿಲ ಹಾಕಿಕೋ, ಹನ್ನೊಂದು ಹೊಡೆದು ಹೋಯಿತು" ಎಂದು ಹೇಳಿ ಅಜಿತ ಆಫೀಸಿಗೆ ಹೋದ.

ಅಲ್ಲಿ ಎಲ್ಲ ಸಂಗತಿ ತಿಳಿಯಿತು. ಸುಧೀರ ಹಾಗೂ ಅವನ ಜೊತೆ ಯಲ್ಲಿ ಕೆಲಸ ಮಾಡುವ ಇನ್ನಿಬ್ಬರ ಮೇಲೆ ಕೋರ್ಟಿನಲ್ಲಿ ಕೇಸಾಗಿತ್ತು, ಕೂಲಿಕಾರರಿಂದ ಲಂಚ ತಿಂದ ಅಪರಾಧಕ್ಕೆ. ಆದರಿಂದ ಒಮ್ಮೆಲೇ ಹಿಡಿಯಲಾಯಿತು. ಉಳಿದ ಕೂಲಿಕಾರ ಸಂಘದ ಕಾರ್ಯಕರ್ತರೆಲ್ಲ ಕೂಡಿ ಮರುದಿನ ಜಾಮೀನಿನ ಮೇಲೆ ಆ ಮೂವರನ್ನೂ ಬಿಡಿಸಿ ತರುವ ಯೋಜನೆಯಲ್ಲಿದ್ದರು. ಆದರೂ ಇನ್ನೂ ಹಲವರ ಮೇಲೆ ಬೇರೆ ಬೇರೆ ಅಪರಾಧ ಹೊರಿಸಿ ಕೇಸುಗಳನ್ನು ಸಿದ್ಧಪಡಿಸುತ್ತಿರುವರೆಂದೂ 'ಲಾಯಿಟ್' ಪತ್ರಿಕೆಯ ಮೇಲೂ ಭಾಂಡವಲ ಪಕ್ಷದ ಕೈಗೊಂಬೆ ಯಾದ ಸರಕಾರದ ಕಣ್ಣು ಬೀಳುವುದರಲ್ಲಿದೆಯೆಂದೂ ಇಷ್ಟರಲ್ಲಿಯೇ ಸುದ್ದಿ ಹರಡಿದ್ದಿತು. ಆದರಿಂದ ಅಜಿತನು ಸದ್ಯಕ್ಕೆ ಕಾಲೇಜಿನ ಹಾಸ್ಟೇಲಿ ನಲ್ಲಿಯೇ ಇರಬೇಕು, ಸುಧೀರನ ಮನೆಯ ವ್ಯವಸ್ಥೆ ಸಂಘದವರು

ಯಾರಾದರೂ ನೋಡಬೇಕು ಎಂದೂ ನಿರ್ಣಯವಾಗಿದ್ದಿತು. ಕೆಲ ಕಾರ್ಯಕರ್ತರೂ ಅಜಿತನೂ ಈ ಕೆಲಸದಿಂದ ತೀರ ಅಲಿಪ್ತರಾಗಿಯೇ ಉಳಿಯಬೇಕು. ಪತ್ರಿಕೆಯ ಆಫೀಸಿಗೂ ಕೂಡ ಬರಕೂಡದು. ಶಕ್ಯ ಎದ್ದರೆ ಲೇಖನ ಬರೆದು ಕಳಿಸುವುದು, ಎಂದು ಸೂಚಿಸಿದರು. ಮರುದಿನ ಬೇರೊಂದು ಮನೆಯಲ್ಲಿ ಬಂದು ಕಾಣಲು ಅಜಿತನಿಗೆ ಹೇಳಿ ಸುಧೀರನ ಪತ್ರವನ್ನು ಕೊಟ್ಟರು. ಅದರಲ್ಲಿಯೂ ಅದೇ ಸಂಗತಿ ಇದ್ದಿತು ಮನೆ ಬಿಟ್ಟು ಕಾಲೇಜ ಹಾಸ್ಟೇಲಿನಲ್ಲಿರಲು ಆಗ್ರಹಪೂರ್ವಕ ಹೇಳಲಾಗಿತ್ತು. ಇಂದಿರೆಗೆ ಸಮಾಧಾನ ಹೇಳಲೂ ವಿವರಣೆಯಿತ್ತು. ಅಜಿತ ಕಾಗದ ತಕ್ಕೊಂಡು ಕಾರ್ಯಾಲಯದಿಂದ ಹೊರಬಿದ್ದ. ಅಜಿತನ ಮನಸ್ಸು ಅವನಿಗೆ ಕೇಳಿತು. ನ್ಯಾಯ, ಕೋರ್ಟು, ಕಚೇರಿ, ಪೋಲೀಸ ಖಾತೆ ಯಾರಿಗಾಗಿವೆ? ಬಡವರಿಗಾಗಿ ಒಂದೂ ಇಲ್ಲ. ನಿಜವಾಗಿಯೂ ಇಲ್ಲ.

ಅಂದ ಮೇಲೆ ?

ಇವೆಲ್ಲವುಗಳ ಉಚ್ಚಾಟನೆ ಮಾಡಿಬಿಡಬೇಕು, ಎಂದು ನಿರ್ಧರಿಸಿದ ಅಜಿತ. ಸುತ್ತಲೂ ಎಲ್ಲರ ಮನೆಗಳಲ್ಲೂ ದೀಪಗಳು ಆರಿದ್ದುವು. ಎಲ್ಲೆಡೆಗೂ ಶಾಂತತೆ ಇದ್ದಿತು. ಎಂಥ ಶಾಂತತೆ? ಮನೆಯ ಮುದುಕನ ಪ್ರಾಣ ಹೋಗುವ ಮುಂಚೆ ಸುತ್ತಲೂ ನೆರೆದ ಮಕ್ಕಳು ಮೊಮ್ಮಕ್ಕಳುಗಳಿಗೆ ನಾಲ್ಕು ಜನರು ಹೇಳಿ ಕೊಂಚ ಕಾಲ ಶಾಂತವಾಗಿ ಕೂಡಿಸಿರುವುದಿಲ್ಲವೇ, ಸಾಯುವಾಗಲಾದರೂ ಸಮಾಧಾನದಿಂದ ಸಾಯಲೆಂದು? ಅಂಥ ಶಾಂತತೆಯದು. ರಾಜಮಾರ್ಗದಲ್ಲಿ ಅಲ್ಲಿ ಇಲ್ಲಿ ಒಬ್ಬಿಬ್ಬರು ಕಾಣುತ್ತಿದ್ದರು. ಅಜಿತ ಭಾರವಾದ ಮನಸ್ಸಿನಿಂದ ಮುನ್ನಡೆದ.

ಇಂದಿರೆಯ ಬಸಿರು ದಿನದಿನಕ್ಕೆ ಬೆಳೆಯತೊಡಗಿತು. ಸದ್ಯಕ್ಕೆ ಮೈಯಲ್ಲಿ ಅಷ್ಟೇನೂ ಉತ್ಸಾಹವಿರಲಿಲ್ಲ. ಅವಳಿಗೆ ಒಂದು ಕಡೆಗೆ ಹಿಡಿಸಲಾರದಷ್ಟು ಹಿಗ್ಗು. ಇನ್ನೊಂದು ಕಡೆಗೆ ತಡೆಯಲಾರದಷ್ಟು ದುಃಖ.

ಪತಿ ಮನೆಯಲ್ಲಿದ್ದರೆ ಮೊದಲ ಬಸಿರು, ಬಯಕೆಗಳ ಕಾಲ ಎಂಥ ಸಂತಸದ ಕಾಲವೋ! ಆದರೆ ಅವನೇ ಇಲ್ಲವಲ್ಲ! ಊರಿಗೆ ಏನೆಂದು ಕಾಗದ ಬರೆಯುವದು? ಹಿರಿಯರಿಗೆ ಮುಖ ಹೇಗೆ ತೋರಿಸುವದು?

ಎಂದು ಮನದಲ್ಲಿಯೇ ಮರಗುವಳು, ಕೊರಗುವಳು. ಹೊರಗೂ ಒಳಗೂ ಹೋದಲ್ಲಿ ಸುಧೀರನ ನೆನಪೇ ಅವಳಿಗೆ. ನಲ್ಲನ ಬಿಡುಗಡೆಗಾಗಿ ವ್ರತ ನಿಯಮಗಳು ನಡೆದವೀಗ ಅಜಿತನಿಗೆ ಇವು ಸೇರುತಿರಲಿಲ್ಲ. ಆದರೆ ಅಕ್ಕ ಏನೋ ಮನಸ್ಸಿಗೆ ಸಮಾಧಾನ ಮಾಡಿಕೊಳ್ಳುತ್ತಾಳೆಂದು ತಿಳಿದು ಸುಮ್ಮನಿದ್ದ.

ಸುಧೀರನ ಬಿಡುಗಡೆ ಜಾಮೀನಿನ ಮೇಲೆಯೂ ಆಗದಿರಲು ಅಜಿತ ಊರಿಗೆ ಕಾಗದ ಬರೆದಿದ್ದ. ಅದರಲ್ಲಿ ಸುಧೀರನ ವಿಷಯ ಕಾಣಿಸಿರ ಲಿಲ್ಲ. ಕೇವಲ ಅಕ್ಕನ ಬಸಿರಿನ ಮಾತೆತ್ತಿ ಉದ್ದವಾದ ಕಾಗದ ಬರೆದಿದ್ದ. ' ಅಕ್ಕನನ್ನು ಕರೆದುಕೊಂಡು ಬಾ ' ಎಂದು ಮಾರೋಲೆ ಬಂದೀತೆಂದು ಬಗೆದ. ಅವಳನ್ನಷ್ಟು ಊರಿಗೆ ಕಳುಹಿಸಿ ಬಂದು ತಾನು ಕಾಲೇಜ ಹಾಸ್ಟೇಲಿನಲ್ಲಿರಲು ಅಡ್ಡಿಯಿಲ್ಲ, ಎಂದು ವಿಚಾರಿಸಿಯೂ ಇಟ್ಟಿದ್ದ. ದಿನಗಳೆದಂತೆ ಊರಿನ ಪತ್ರವೂ ಇಲ್ಲ. ಇತ್ತ ಸುಧೀರನ ಬಿಡುಗಡೆಯೂ ಇಲ್ಲ. ಅಜಿತ ಕಾಗದದ ದಾರೀ ಕಾಯ್ದು ಕಾಯ್ದು ಬೇಸತ್ತ. ಇಂದಿರೆಯ ಮನದಲ್ಲಿ ಇನ್ನೊಂದು ಚಿಂತೆ ಹಣಿಕಿಕ್ಕಿತು. ' ಊರ ಕಡೆಗೆ ಎಲ್ಲರೂ ಸುಖವಾಗಿರಬಹುದೆ? ಅವ್ವನಿಗೆ ಏನಾದರೂ ಆಗಿರಬೇಕೆ? ಅವಳು ಕ್ಷೇಮವಾಗಿದ್ದರೆ ಕಾಗದ ಬಾರದೆ ಇರುತ್ತಿತ್ತೇ?' ಎಂದು ಆ ಚಿಂತೆ ಎತ್ತೆತ್ತ್ತೋ ಬೆಳೆಯುತೊಡಗಿತು.

ಏನಾದರೂ ಮಾಡಿ ಸುಧೀರನನ್ನು ಒಮ್ಮೆ ಕಂಡುಬರಬೇಕೆಂದರೆ ಅಜಿತನಿಗೆ ಧೈರ್ಯ ಸಾಲದು. ಅಂದರೆ ಆತ ಸೆರೆಮನೆಗೆ ಹೆದರುತ್ತಿದ್ದ ನೆಂದಲ್ಲ. ಸುಮ್ಮನೆ ಭಾಂಡವಲದಾರರ ವಕ್ರದೃಷ್ಟಿಗೆ ಶುತ್ತಾಗಿ ಇಲ್ಲದ ಅಪರಾಧ (?) ಗಳಿಗೆ ಗುರಿಯಾಗಿ ಕೋರ್ಟಿಗೆ ಎಡತಾಕುವದು ಅವನಿಗೆ ಬೇಡಾಗಿತ್ತು. ಮೇಲಾಗಿ ಅಕ್ಕನ ಮನೆಯ ಹೊಣೆಗಾರಿಕೆಯೊಂದು ಅವನ ಮೇಲೆಯೇ ಇತ್ತು. ಈಗೀಗ ಇದಕ್ಕಿಂತ ಮಿಗಿಲಾದ ಹೊಣೆ ಗಾರಿಕೆಯೊಂದನ್ನು ಹೊರಲೆಂದೇ ತಾನು ಜನ್ಮಿಸಿದಂತೆ ಅವನಿಗೆ ಭಾಸ ವಾಗುತ್ತಿದ್ದಿತು. ದಿನಗಳೆದಂತೆ ಈ ಒಂದು ಸಣ್ಣ ಮನೆತನದ ಸುಖ ಶಾಂತಿಯನ್ನು ನೋಡುತ್ತ ಕೂಡುವದಕ್ಕಿಂತ ದೇಶದ ಸ್ವಾತಂತ್ರ್ಯ ಸಂಪಾದನೆಗೆ ಹೋರಾಡುವುದು ಒಳಿತೆಂದೆನಿಸಹತ್ತಿತು. ಆ ಕೆಲಸ ಮಾಡ

ಬೇಕಾದವ ಈ ಕೆಲಸದಲ್ಲಿ ತೊಡಗುವುದು ಅನುಚಿತ ಎಂದು ತಿಳಿದ. ಆದರೂ ಅಕ್ಕನ ಮುಖದ ಕಡೆಗೆ ಕಂಡಾಗ ಇದೆಲ್ಲ ತಿಳಿವು ಎಲ್ಲಿಯೋ ಮಾಯವಾಗಿಬಿಡುವುದು. ಆ ಕ್ಷಣದಲ್ಲಿ ಈ ಭಗಿನೀ ಪ್ರೇಮಕ್ಕೆ ತುತ್ತಾಗಿಯೇ ತನ್ನ ವ್ಯಕ್ತಿತ್ವವೆಲ್ಲ ಹಾಳಾಗಿ ಹೋಗುತ್ತಿದೆಯಲ್ಲ! ಎಂದು ಮರಗುವನು. ಅವನನ್ನು ಅಕ್ಕನ ಅಕ್ಕರೆಯು ಅಡಕೊತ್ತು ಒತ್ತಿ ಹಿಡಿದಿತ್ತು. ನಿರ್ಮಲ ಮಮತೆಯ ಇಂದಿರೆಯ ಕಣ್ಣೊಳಗಿನ ನೀರನ್ನು ಹರಿಸುವುದೋ ಇಲ್ಲವೆ ತನ್ನ ಧ್ಯೇಯದ ಮೇಲೆ— ವ್ಯಕ್ತಿತ್ವದ ಮೇಲೆ ತಿಲಾಂಜಲಿಯನ್ನು ಬಿಡುವುದೋ!

ಅಜಿತ ತನ್ನ ಧ್ಯೇಯವನ್ನೂ ಬಿಡಲು ಸಿದ್ಧನಾದ. ಆದರೆ ಅದರಿಂದ ಏನು ಸಿದ್ಧಿಸುವುದು? ಒಬ್ಬ ಬಡವನ ಕಲ್ಯಾಣವಾಗುವುದೆ? ದೇಶವನ್ನು ಸ್ವಾತಂತ್ರ್ಯದ ಕಡೆಗೆ ಒಂದೇ ಹೆಜ್ಜೆಯನ್ನಾದರೂ ಮುನ್ನಡೆಯಿಸಿದ ಶ್ರೇಯ ಸಿಕ್ಕುವುದೆ? ಇಲ್ಲ. ಆದರೆ ಈ ತ್ಯಾಗದಲ್ಲಿ ಅರ್ಥವೇನಿದೆ? ತನ್ನ ಅಕ್ಕ ಏಕಾಕಿಯಾಗಿ ಕೆಲ ದಿನ ಕಷ್ಟ ಸಹಿಸಬೇಕಾಗುವುದು. ಈ ಸಣ್ಣ ಸ್ವಾರ್ಥಕ್ಕಾಗಿ ದೇಶಸೇವೆಯನ್ನು ಬಿಡುವುದೆ? ಇದೇ ವಿಚಾರ ಸರಣಿಯಲ್ಲಿ—

"ಅಕ್ಕಾ, ನಾನು ಹಾಸ್ಟೇಲಿನಲ್ಲಿದ್ದರೆ ನಡೆಯದೋ?" ಎಂದು ಅಜಿತ ಕೇಳಿದ.

"ಊಂ ಹೂಂ!"

"ಇಲ್ಲಿ ನಿನಗೆ ಎಲ್ಲ ವ್ಯವಸ್ಥೆ ಮಾಡಿ ಕೊಡತೇನಲ್ಲ! ಮತ್ತು ಆಗಾಗ ಬಂದು ಹೋಗತಿರುತ್ತೇನೆ."

"ಹಾಗೇಕೆ ಮಾಡುವಿ?"

"ಭಾವ ಹೇಳಿದ್ದಾರೆ; ಮನೆಯೊಳಗೆ ಇದ್ದರ...."

"ಮನೆಯೊಳಗ ಇದ್ದರೆ ಏನು?" ನಡುವೆಯೇ ಕೇಳಿದಳು ಇಂದಿರೆ.

"ನನ್ನನ್ನೂ ಹಿಡಿದೊಯ್ಯುವ ಸಂಭವವಿದೆಯಂತೆ."

"ನಿನ್ನನ್ನೂ! ಅವರನ್ನು ಒಯ್ದಂತೆ?" ಒಂದು ಕ್ಷಣ ನಡುಗಿದಳು ಆಕೆ. ಅಜಿತನನ್ನೂ ಒಯ್ದರೆ ಏನು ಗತಿ? ನನ್ನ ಸ್ಥಿತಿಯೇನು? ತಾನು

ಇರುವುದು ಹೇಗೆ? ಅಂಥ ಕೆಲಸವನ್ನಾದರೂ ಇವರು ಏನು ಮಾಡಿರುವರು? ಎಂಬ ಪ್ರಶ್ನೆಗಳೆಲ್ಲ ಅವಳ ದೃಷ್ಟಿಪಥದೆದುರಿಗೆ ಹಾಯ್ದು ಹೋದುವು.

"ಹೆದರಬೇಡ. ನಾನೊಬ್ಬ ತಮ್ಮ ಹೋದರೆ ಸಾವಿರ ಜನ ಅಣ್ಣತಮ್ಮಂದಿರು ನಿನಗಾಗಿ ಜೀವ ಕೊಡಲೂ ಸಿದ್ಧರಾಗಿ ಬರುವರು."

ಈ ವೇದಾಂತ ಈಗ ಅವಳಿಗೆ ತಿಳಿಯುವುದು ಅಷ್ಟರಲ್ಲೇ ಇತ್ತು. ಅದರಿಂದ ಅಜಿತನನ್ನು ಮನೆಯಲ್ಲಿ ಇಟ್ಟುಕೊಂಡು ಅವನನ್ನೂ ಪೋಲೀಸರ ಕೈಗೆ ಒಪ್ಪಿಸುವುದು ಸರಿಯೆನಿಸಲಿಲ್ಲ ಅವಳಿಗೆ. ಈ ಸಂಗತಿ ಅವಳಿಗೆ ಇನ್ನೂ ಗೊತ್ತಿರಲಿಲ್ಲ. ಸುಧೀರನ ಸಂಬಂಧಿಕರನ್ನೂ ಪ್ರಸಂಗ ಬಂದರೆ ಹಿಡಿಯುವರೆಂಬುದು ಗೊತ್ತಾಗಿದ್ದರೆ ಅವಳು ಇಷ್ಟರಲ್ಲೇ ತಮ್ಮನನ್ನು ಹೊರಗೆ ಹಾಕಿಬಿಡುತ್ತಿದ್ದಳು. ಇಷ್ಟೇ ಅಲ್ಲ ಇನ್ನು ಅವನನ್ನು ಒಂದು ಕ್ಷಣವೂ ಮನೆಯಲ್ಲಿ ಇರಗೊಡಲೂ ಅವಳು ಸಿದ್ಧಳಿರಲಿಲ್ಲ. ಅವಳ ದೇಹದಲ್ಲಿ ಸಂಚರಿಸುವ ರಕ್ತ ಕನ್ನಡ ಗೌಡ ಕುಲದ್ದಾದುದರಿಂದ ಅವಳ ಮನಸ್ಸು ಎಷ್ಟು ಮೃದುವಿತ್ತೋ ಪ್ರಸಂಗಕ್ಕೆ ಅಷ್ಟು ಕಠಿಣವೂ ಆಗುವುದು. ಧೈರ್ಯವನ್ನೂ ತಂದುಕೊಳ್ಳುವುದು. ಅಂತಲೇ ಅವಳು ಮುಂಬಯಿಗೆ ಬಂದ ಕೆಲ ದಿನಗಳಲ್ಲಿ ಬಡಮಕ್ಕಳ ಶಿಕ್ಷಣ ಸುಧಾರಣೆಗಳಲ್ಲಿ ಗಂಡನ ಮಾತಿನಂತೆ ತನ್ನ ದೈಹಿಕಕಷ್ಟವನ್ನೂ ಲೆಕ್ಕಿಸದೆ ದುಡಿಯುತ್ತಿದ್ದಳು. ಗಂಡನ ಸಾರ್ವಜನಿಕ ಕೆಲಸಗಳಲ್ಲಿ ಸಮನಾಗಿ ಹೆಗಲು ಕೊಟ್ಟಿದ್ದಳು. ಪಾಪ! ಇಂಥ ಕೆಲಸಗಳಿಗೂ ಸರಕಾರ ಸೆರೆಮನೆಯನ್ನು ತೋರಿಸುವುದೆಂದು ಅವಳಿಗೇನು ಗೊತ್ತು? ಬ್ರಿಟಿಷ ಸಾಮ್ರಾಜ್ಯದಲ್ಲಿ ಜನತೆ ತನ್ನ ಹಿತವನ್ನೂ ತಾನು ತಿಳಿದುಕೊಳ್ಳುವುದೂ ತಿಳಿಸಿಕೊಡುವುದೂ ಅಪರಾಧವಾಗುವದೆಂಬುದು ಅವಳ ಕಲ್ಪನೆಯಲ್ಲಿಯೂ ಇರಲಿಲ್ಲ.

ಈಗ ಅಜಿತನ ಮನಸ್ಸು ಕಾಲೇಜಿನ 'ಅಭ್ಯಾಸ ಮಂಡಲ'ದ ಕಡೆಗೆ ಹರಿಯುತ್ತಿದ್ದಿತು. ಅದರಲ್ಲೂ 'ಲಾಯಿಟ್' ಪತ್ರಿಕೆಯ ಕೆಲಸ ತಪ್ಪಿದಾಗಿನಿಂದಂತೂ ಮನಸ್ಸಿನ ಎಲ್ಲ ಶಕ್ತಿಯೂ ಒಂದೇ ಕಡೆಗೇ ವೆಚ್ಚವಾಗತೊಡಗಿತು. ಕೂತರೂ ನಿಂತರೂ ಅದೇ ಧ್ಯಾನ. ಮಂಡಲವು

ಮಾಡಲಿರುವ ಕ್ರಾಂತಿಯ ಕಲ್ಪನೆಯನ್ನು ನೆನೆನೆನೆದು ಸಂತಸಗೊಳ್ಳು ವುದು. ದೇಶದ ತುಂಬ ಕ್ರಾಂತಿಯನ್ನೆಬ್ಬಿಸಲಿಕ್ಕೆ ಅಭ್ಯಾಸ ಮಂಡಲವೇ ತಕ್ಕ ಸಾಧನ. ಆ ಕ್ರಾಂತಿಯಲ್ಲಿ ಈಗ ತಾವು ಮಾಡುತ್ತಿರುವ ಚಿಕ್ಕ ಪುಟ್ಟ ಕೆಲಸಗಳೆಲ್ಲವೂ ಬರುವವು, ಎಂಬುದೂ ಅವನಿಗೆ ಹೊಳೆಯ ತೊಡಗಿತು. ಸ್ವಲ್ಪ ತಡವಾಗಿಯಾದರೂ ಅಡ್ಡಿಯಿಲ್ಲ. ಅಭ್ಯಾಸ ಮಂಡಲದ ಕ್ರಾಂತಿಯೇ ಭಾರತಕ್ಕೆ ಸ್ವಾತಂತ್ರ್ಯ ಸೌಖ್ಯಗಳನ್ನು ಒದಗಿಸುವುದು ಎಂದು ಅಜಿತನ ಮನಸ್ಸು ಮೇಲಿಂದ ಮೇಲೆ ಒತ್ತಿ ಒತ್ತಿ ಅವನಿಗೆ ಹೇಳ ಹತ್ತಿತು. ಅವನು ಮಲಗಿದಲ್ಲಿಂದಲೇ ಕಿಡಕಿಯೊಳಗಿಂದ ದೃಷ್ಟಿಯನ್ನು ಹೊರಗೆ ಬೀರಿದ. ಆಕಾಶ ನಿರಭ್ರವಾಗಿತ್ತು. ದೂರದ ಒಂದು ಮೂಲೆ ಯಲ್ಲಿ ಚಿಕ್ಕೆಯೊಂದು ಮಿನಗುತಲಿತ್ತು. ಬೆಳಗಿನ ಮುನ್‌ಸೂಚನೆ ಯನ್ನು ತೋರಿಸುತ್ತಿತ್ತೇನೋ ಅದು.

ಅಜಿತ ಎದ್ದ. ಕೋಣೆಯೊಳಗಿಂದ ಹೊರಗೆ ಬಂದ. ಅಕ್ಕ ಇನ್ನೂ ಎದ್ದಿರಲಿಲ್ಲ. ಇರಲಿ ಎಂದುಕೊಂಡು ಒಲೆ ಹೊತ್ತಿಸಿ ಸ್ನಾನಕ್ಕೆ ನೀರಿಟ್ಟ. ಮನದಲ್ಲಿ ಶಾಂತಿ ಇರಲಿಲ್ಲ. ಹೊರಗೂ ಒಳಗೂ ಎರಡು ಸಲ ಸುತ್ತಾ ಡಿದ. ತಂಗಾಳಿ ತೀಡಿತು. ಮೈಗೆ ಪುಳಕನ್ನೆಬ್ಬಿಸಿತು. ಹಾಗೇ ಬಾಯಲ್ಲಿ ಏನೋ ಗುಣಗುಣಿಸುತ್ತ ಅಕ್ಕನ ಹಾಸಿಗೆಯ ಬಳಿಗೆ ಬಂದ. ಅಕ್ಕನನ್ನು ಎಚ್ಚರಿಸಿದ. ಯಾವದೋ ಕನಸಿನಲ್ಲಿ ಇದ್ದಳೇನೋ ಆಕೆ, ಚಿಟ್ಟನೆ ಚೀರಿದಳು. ಅಜಿತನ ಎದೆ ನಡುಗಿತು. ಗಾಬರಿಯಾದ. ಅಷ್ಟರಲ್ಲಿ ಅವಳೇ ಎದ್ದು ಕುಳಿತಳು ಕಣ್ಣು ತಿಕ್ಕುತ್ತ.

“ ಹೀಗೇಕೆ ? ” ಎಂದು ಕೇಳಿದ ಅಜಿತ.

“ ಕನಸು ಬಿದ್ದಿತ್ತು. ”

“ ನಿಜವೇನು ? ಸುಧೀರ ಭಾವ ಬಂದಿದ್ದ ! ” ನಕ್ಕು ನಗಿಸಲು ಹೋದ ಅಜಿತ.

“ ಇಲ್ಲ ; ನಿನ್ನನ್ನೂ ಹಿಡಿದೊಯ್ದಂತೆ ಆಯಿತು. ” ಮುಖ ಮ್ಲಾನ ವಾಗಿದ್ದಿತು.

“ ಈಗಂತೂ ನಿನ್ನ ಎದುರಿಗೆ ಇದ್ದೇನಲ್ಲ ? ”

“ ಅಂತಲೇ ಎದ್ದು ಕುಳಿತೆ. ”

"ಇಲ್ಲವಾದರೆ?" ಸ್ವಲ್ಪ ತಡೆದು ಅಜಿತ ಹೇಳಿದ. "ಬಹಳ ಹೊತ್ತಾಯಿತು. ನಿನ್ನನ್ನು ಎಚ್ಚರಿಸಬೇಕೆಂದು ಮಾಡಿದ್ದೆ."

"ಈಗ ಎಷ್ಟು ಹೊಡೆದಿರಬೇಕು?"

"ಏಳು ಗಂಟೆ ಆಯ್ತಲ್ಲ!"

"ಹೇಗೊ? ನನಗೆ ಎಚ್ಚರಿಕೆಯೇ ಆಗಲಿಲ್ಲವಲ್ಲ!"

ಹೀಗೆ ಮಾತುಕತೆ ನಡೆದಿರುವಷ್ಟರಲ್ಲಿಯೇ ಒಬ್ಬ ಹೆಂಗುಸು ಇಬ್ಬರು ಚಿಕ್ಕ ಹುಡುಗರೊಡನೆ ಮನೆಯನ್ನು ಪ್ರವೇಶಿಸಿದಳು. ಅವರ ಉಡಿಗೆ ತೊಡಿಗೆಗಳೆಲ್ಲ ಸಾಮಾನ್ಯ ತರಗತಿಯವಿದ್ದುವು. ಆದರೂ ಆ ಸ್ತ್ರೀಯ ಮುಖದಲ್ಲಿ ವಿಲಕ್ಷಣ ತೇಜಸ್ಸಿತ್ತು. ಅದರೊಡನೆ ಒಂದು ತರದ ಆಕರ್ಷಕ ಸೌಮ್ಯಕಳೆಯಿತ್ತು. ಅಜಿತ ಬಂದ ಆಗಂತುಕರ ಕಡೆಗೆ ಒಂದು ಕ್ಷಣ ಬೆರಗಿನ ದೃಷ್ಟಿಯಿಂದ ನೋಡಿದ. ಇಂದಿರೆಯೂ ಮುಂಗುರುಳುಗಳನ್ನು ಸರಿಪಡಿಸಿಕೊಳ್ಳುತ್ತ ಕೇಳಿದಳು.

"ಯಾರು ಬೇಕು ನಿಮಗೆ?"

"ನೀವೇ ಬೇಕು." ಎಂದು ನಸುನಗುತ್ತ ಅವಳು ಒಳಗೆ ಬಂದಳು. ಇನ್ನೂ ಚಿರಪರಿಚಿತಳಂತೆ ಅವಳ ನಡತೆಯಿತ್ತು.

ಹಿಂದಿನಿಂದಲೇ ಒಬ್ಬ ಮನುಷ್ಯ ಬಂದು ಅಜಿತನ ಕೈಯಲ್ಲಿ ಪತ್ರವೊಂದನ್ನು ಕೊಟ್ಟು ಬದಿಗೆ ಸರಿದು ನಿಂತ. ಅಜಿತ ಆತುರತೆಯಿಂದ ಮಡುಚೋಲೆಯನ್ನು ತೆರೆದು ಓದತೊಡಗಿದ. ಓದುತ್ತ ಹೋದಂತೆ ಅವನ ಮುಖ ಅರಳುತ್ತ ನಡೆಯಿತು. ಏನು ಹೇಳಬೇಕೆಂಬುದನ್ನರಿಯದೆ ಬೆರಗಿನಿಂದ ಕುಳಿತ. ಅಕ್ಕನ ಕಡೆಗೆ ಹೊರಳಿ ಹೇಳಿದ, ನಡುವೆಯೇ ಕಾಗದ ಓದುವುದನ್ನು ನಿಲ್ಲಿಸಿ,—

"ಚಲೋ ಆಯಿತು. ನಿನಗೂ ಜೋಡೀ ಸಿಕ್ಕರು. ಇವರ ಮನೆಯವರನ್ನೂ ಮೊನ್ನೆಯೇ ಹಿಡಿದಿರುವರು. ಅವರೂ ಸುಧೀರಭಾವನ ಜೊತೆಯಲ್ಲಿಯೇ ಕೆಲಸ ಮಾಡುತ್ತಿದ್ದರು. ಒತ್ತಟ್ಟಿಗೇ ಇರುವುದು ಇಬ್ಬರಿಗೂ ಹಿತವೇ ಆಯ್ತು."

"ನಮ್ಮ ಹಿತವನ್ನು ನಾವೇ ನೋಡಿಕೊಳ್ಳಲಿಕ್ಕೆ ಬೇಕಲ್ಲ?" ಆ ಹೊಸಬಳ ಮಾತಿದು. ಸ್ವಲ್ಪ ತಡೆದು, "ನಮ್ಮಲ್ಲಿಯೇ ನಿಮ್ಮನ್ನು

ಕಲಿಯಿಸಬೇಕಂತ ಮಾಡಿದೆ. ಆದರೆ ನೀವು ಬಸಿರು.... ಇರಲಿಕ್ಕೆ, ಅಲ್ಲಿ ಅನುಕೂಲವಾಗುವುದೋ ಇಲ್ಲೋ ಅಂತ ನಾವೇ ಇತ್ತ ಬಂದಿವಿ ಆಯ್ತು" ಎಂದಳು.

"ಇಲ್ಲೇ ಬಂದ್ರಿ, ಒಳ್ಳೇದಾಯ್ತು" ಎಂದು ಸ್ವಲ್ಪ ಸಂತಸದಿಂದಲೇ ಎದ್ದು ಒಳಗೆ ಒಲೆ ಹೊತ್ತಿಸಲು ಹೋದಳು, ಇಂದಿರೆ.

"ಈಗ ನಾವೆಲ್ಲ ಚಹ ಕುಡಿದೇ ಬಂದಿದೇವು ಅಂ?" ಅವಳೂ ತನ್ನ ಹುಡುಗರೊಡನೆ ಒಳಗೆ ಹೋದಳು.

ಅಜಿತ ಕಾಗದ ತಂದವನಿಗೆ "ಸಾಮಾನು ಯಾವಾಗ್ಗೆ ತರುವಿ?" ಎಂದ.

"ಇನ್ನೊಂದು ತಾಸೆರಡು ತಾಸಿನಲ್ಲಿ ತಂದು ಬಿಡತೇನೆ."

"ಇಲ್ಲಿ ಎಲ್ಲ ಅದೆ. ಹೆಚ್ಚಿಗೇನೂ ತರಬೇಕಿಲ್ಲ."

"ಹೆಚ್ಚಿಗೇನೂ ತರಿಸುವದಿಲ್ಲ. ಮನೆಯಂತೂ ನಮ್ಮ ಸ್ವಾಧೀನವೇ ಇರುವುದು. ಬರೇ ಹಾಸಿಗೆ ಹೊದಿಗೆ ಉಡುತೊಡು ಅರಿವೆ ಅಷ್ಟು ತರಿಸುವೆ" ಎಂದಳು ಒಳಗಿನಿಂದ ಅವಳು.

ಗಿರಣಿಯಲ್ಲಿ ಬರೆಯುವ ಕೆಲಸ ಹಿಡಿದ ಮನುಷ್ಯನ ಮನೆಯಲ್ಲಿ ಒಂದಿಬ್ಬರು ಕೆಲ ದಿನ ನಿಲ್ಲಲು ಬಂದರೆ ಇವಿಷ್ಟನ್ನಾದರೂ ತರಲೇ ಬೇಕೆಂಬುದು ಅವರಿಗೂ ಗೊತ್ತೇ ಇದ್ದಿತು. ಇದನ್ನು ಅವರ ಸ್ಥಿತಿಯೇ ಅವರಿಗೆ ಕಲಿಸಿದ್ದಿತು ಇನ್ನೆಲ್ಲಿಯಾದರೂ ಸಿರಿವಂತರ ಮನೆಗೆ ಹೋಗುವುದಾದರೆ ಹೇಗೆ ಹೋದರೂ ನಡೆಯುವದು.

"ಪ್ರಸಾದ್?"

"ಏನಮ್ಮ?"

"ಲಗೂನೆ ಇಷ್ಟು ಸಾಮಾನು ತಂದು ಕೊಟ್ಟುಬಿಡು. ಅಂದರೆ ನಿನ್ನ ಕೆಲಸ ತೀರಿತು."

"ಇಂದಿನ ದಿನ ಇಲ್ಲಿ ಸಾಗ್ತದೆ ಅಲ್ಲ? ಸಾವಕಾಶ ತರಲಿ. ಅವರಿಗೇನಷ್ಟು ಆತುರ?" ಎಂದಳು ಇಂದಿರೆ.

"ಅದೇಕೆ? ತರಲಿ, ಯಾವಾಗಾದರೂ ತರುವುದೇ ಅಲ್ಲ? ಸ್ನಾನದ ಹೊತ್ತಿಗೆ ತಂದೇಬಿಡಲಿ."

" ಚಹ ತಗೊಂಡ ಹೋಗಲಿಕ್ಕೆ ಹೇಳು ಅಜಿತಾ, ಅವರಿಗೆ." ಒಳಗಿನಿಂದ ಇಂದಿರೆ ಹೇಳಿದಳು.

ಅಜಿತ ಪ್ರಸಾದನಿಗೆ ಚಹ ಕುಡಿದು ಹೋಗಲಿಕ್ಕೆ ಹೇಳಿದ. ತಾನು ಸ್ನಾನದ ಮನೆಗೆ ಹೋಗಿ ಲಗುಬಗೆಯಿಂದ ಜಳಕ ತೀರಿಸಿಕೊಂಡ. ಅವನ ಮೈ ಮನಗಳಲ್ಲಿ ಒಂದು ತರದ ಉತ್ಸಾಹವೆನಿಸುತ್ತಿದ್ದಿತೀಗ. ಅಕ್ಕನ ವಿಷಯದ ಚಿಂತೆ ಎಷ್ಟೋ ಕಡಿಮೆಯಾಯಿತವನಿಗೆ. ಎಲ್ಲರೂ ಚಹ ಕುಡಿದರು. ಪ್ರಸಾದ ಸಾಮಾನು ತರಲಿಕ್ಕೆ ಹೋದ. ಅಜಿತ ಈಗಲೇ ಹೊರಗೆ ಹೋಗುವುದು ಉಚಿತವೋ ಎಂದು ವಿಚಾರಿಸುತ್ತ ಕೆಲಸವಿಲ್ಲದೆ ಅಲ್ಲಿ ಇಲ್ಲಿ ನಿಲ್ಲತೊಡಗಿದ.

" ನೀವು ಹೋಗಬಹುದು, ನಿಮ್ಮ ಕೆಲಸವಿದ್ದರೆ. ನಮ್ಮದೇ ಮನೆ ಅದೆ. ನಾವು ಇರತೇವಿ ಇಲ್ಲಿ " ಎಂದು ಹೊಸಬಳು ಸೂಚಿಸಿದಳು.

ಅಜಿತನಿಗೆ ಆಶ್ಚರ್ಯವಾಯಿತು, ಅವಳ ಧೋರಣೆಯನ್ನು ಕಂಡು.

" ಈಗ ಸಾಮಾನು ತಂದರಂದರ ಅಷ್ಟು ವ್ಯವಸ್ಥೆ ಮಾಡಿ ಆಮೇಲೆ ಬೇಕಾದಲ್ಲಿ ಹೋಗು. ಅಕ್ಕ ಬಂದಾಳೆ, ಇಬ್ಬರೂ ಕೂಡಿ ನಾವು ಇರ್ತೇವೆ. ನೀ ಅಲ್ಲೇ ಹಾಸ್ಟೇಲಿನೊಳಗೇ ಏಕಿರವಲ್ಲೆ. "

" ಸಾಮಾನು ಇಡಲಿಕ್ಕೆ ಏನ ಬೇಕಾಗಿಲ್ಲ. ಪ್ರಸಾದ ಎಲ್ಲ ವ್ಯವಸ್ಥೆ ಮಾಡುವ. ನೀವು ಹೋಗಲಿಕ್ಕೆ ಅಡ್ಡಿಯಿಲ್ಲ. "

ಸ್ವಲ್ಪ ಹೊತ್ತಿನಲ್ಲಿ ಹೆಂಗಸರಿಬ್ಬರೂ ಒಂದೇ ಮನೆಯವರಂತೆ ಕೂಡಿ ನಡೆಯುವದನ್ನು ನೋಡಿ ಅಜಿತನಿಗೆ ಸಮಾಧಾನವೆನಿಸಿತು. ಅದರ ಜೊತೆಗೆಯೇ 'ಗುಲಾಮರು ಬಂದಾಗಡೆ ಮಾಡುವರೇನು ?' ಎಂಬ ಪ್ರಶ್ನೆಯೂ ಉದ್ಭವಿಸಿತು. ಗುಲಾಮ ಶಬ್ದ ನೆನಪಾದೊಡನೆಯೇ ಅಭ್ಯಾಸ ಮಂಡಲದ ಕ್ರಾಂತಿ ಕಣ್ಣ ಮುಂದೆ ಸುಳಿಯಿತು. ಒಳಗೆ ಹೋಗಿ ಕೋಟು ಟೊಪ್ಪಿಗೆಗಳನ್ನು ಹಾಕಿಕೊಂಡು :

" ಅಕ್ಕಾ, ನಾನೂ ಕಾಲೇಜಿನ ಕಡೆಗೆ ಹೋಗಿ ಬರ್ತೇನೆ " ಎಂದು ಹೇಳಿದವನೇ ಹೊರಟು ಬಿಟ್ಟ.

ಅಜಿತನ ಗೆಳೆಯರಿಗೆಲ್ಲ ಅವನು ಹಾಸ್ಟೇಲಿನಲ್ಲಿ ಇರಲು ಬರುವನೆಂದು ಕೇಳಿ ಸಂತಸವಾಯಿತು. ಕೂಡಲೇ ಚಂದ್ರಕಾಂತ ಹಾಗೂ

ನಾಲ್ಕಾರು ಗೆಳೆಯರು ಕೂಡಿ ಹಾಸ್ಟೇಲಿನ ಸುಪರಿಂಟೆಂಡಂಟರ ಕಡೆಗೆ ಧಾವಿಸಿದರು. ಆ ಉತ್ಸಾಹದ ಭರದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಗುವ ವರಗೆ ಅಜಿತನ ಹಾಸ್ಟೇಲಿನ ವೆಚ್ಚ ತಾನೇ ವಹಿಸುವೆ, ಅವನು ಆಪ್ತರ ಮನೆಯಲ್ಲಿ ಇರುವುದೇ ಬೇಡವೆಂದು ಚಂದ್ರಕಾಂತ ಹೇಳಿಯೇ ಬಿಟ್ಟ. ಇನ್ನು ತಮ್ಮ ಮಂಡಲದ ಕೆಲಸ ಬಹಳ ಜೋರಿನಿಂದ ನಡೆಯುವದೆಂದು ಎಲ್ಲರಿಗೂ ಅನ್ನಿಸಹತ್ತಿತು. ಅವರಲ್ಲಿ ಒಂದು ನವಚೈತನ್ಯವೇ ಬಂದು ಸೇರಿದಂತಾಯಿತು. ಆ ಚೈತನ್ಯದ ಮುಂಗುರುತಿಗಾಗಿ ಒಮ್ಮೆ ಎಲ್ಲರೂ ಚಹದಂಗಡಿಗೆ ಹೋಗಿ ಚಹ ಕುಡಿದೇ ಪ್ರೊಫೆಸರರ ಕಡೆಗೆ ಹೋದರು.

" ಅಜಿತನಿಗೆ ಹಾಸ್ಟೇಲಿನಲ್ಲಿರಲು ಒಪ್ಪಿಗೆ ಕೊಡಬೇಕು. " ಚಂದ್ರಕಾಂತನೇ ಮುಂದಾಗಿ ಕೇಳಿದ.

ಪ್ರೊಫೆಸರರು ಹಣೆ ಏರಿಸಿ ಸ್ವಲ್ಪ ಹೊತ್ತು ನಿಂತರು. ಆಮೇಲೆ ಮೆಲ್ಲನೆ,

" ಈ ಮೊದಲು ಎಲ್ಲಿದ್ದರು ? " ಎಂದು ಕೇಳಿದರು. ಇನ್ನೂ ವಿಚಾರದ ತೂಗಾಟದಲ್ಲಿಯೇ ಮಾತು ಇತ್ತು.

" ಊರೊಳಗೆ ಆಪ್ತರ ಮನೆಯಲ್ಲಿದ್ದರು. ಈಗ ಪರೀಕ್ಷೆ ಸಮೀಪಕ್ಕೆ ಬಂದಿದೆ. ಹೋಗಿ ಬಂದು ಅಭ್ಯಾಸ ಚನ್ನಾಗಿ ಆಗುವದಿಲ್ಲಂತ. "

ಅಜಿತ ಏನೂ ಹೇಳಲಿಲ್ಲ. ಇಂಥ ಸಣ್ಣ ಸಣ್ಣ ಕೆಲಸಗಳಿಗಾಗಿಯೂ ಇಷ್ಟು ಸುಳ್ಳು ಹೇಳಬೇಕಾಗುತ್ತದಲ್ಲ, ಎಂದುಕೊಂಡನೇನೋ! ಸತ್ಯವು ಎಂದೂ ಸಾಯದೆನ್ನುವರು. ಆದರೆ ಸತ್ಯ ನುಡಿದರೆ ಉಳಿಗಾಲವೇ ಇಲ್ಲವಲ್ಲ ! ಇದಕ್ಕೇನನ್ನಬೇಕು ? ಈ ವಿಚಾರದ ಗೊಂದಲದಲ್ಲಿಯೇ ಅಜಿತ ಸಿಕ್ಕುಬಿದ್ದಿದ್ದ.

" ಅಭ್ಯಾಸ ಆಗದಿದ್ದರೆ ಬೇರೆ ಕೋಣೆ ಮಾಡಿಕೊಂಡಿರಬೇಕು. " ಪ್ರೊಫೆಸರರು ಮಾರ್ಗ ತೋರಿಸಿದರು.

" ಕೋಣೆ ಮಾಡಿದರೆ ಹಾಸ್ಟೇಲಿನಂತೆ ಬರುವುದೆ ? "

" ಇಂಥ ಸಂದರ್ಭದಲ್ಲಿ ಎಲ್ಲರೂ ಹಾಸ್ಟೇಲಿನ ಕೋಣೆ ಬೇಡಿದರೆ ಹೇಗೆ ಸಿಕ್ಕಬೇಕು ? "

ಹುಡುಗರು ಸುಮ್ಮನೆ ನಿಂತರು. ಒಬ್ಬರ ಮುಖವನ್ನೊಬ್ಬರು ನೋಡ ತೊಡಗಿದರು. ಎಲ್ಲರ ಮುಖದ ಮೇಲೆಯೂ ನಿರಾಶೆಯ ತೆರೆ ಇಳಿ ಬಿದ್ದಿತು. ಇನ್ನೇನು ಅಜಿತನಿಗೆ ಹಾಸ್ಟೇಲಿನಲ್ಲಿ ಇರಲು ಶಕ್ಯವಾಗುವ ದಿಲ್ಲವೆಂದು ಭಾವಿಸಿದರು. ಅದರೊಡನೆಯೇ ತಮ್ಮ ಅಭ್ಯಾಸ ಮಂಡಲದ ಚಟುವಟಿಕೆಗಳೂ ಕುಂದುವವೆಂದು ಯೋಚಿಸಿದರು. ಇಲ್ಲಿಯ ವರೆಗೆ ಅಜಿತನೇನೂ ಹಾಸ್ಟೇಲಿನಲ್ಲಿ ಇರಲಿಲ್ಲ. ಆದರೂ ಮಂಡಲದ ಕೆಲಸ ಯಥಾಪ್ರಕಾರ ಸಾಗಿಯೇ ಇದ್ದಿತು. ಆದರೆ ಈಗ ಒಂದು ತಾಸಿನ ಲ್ಲಿಯೇ ಅಜಿತ ತಮ್ಮೊಡನೆ ಇರಲು ಬರುವನೆಂದೊಡನೆ ಗೆಳೆಯರೆಲ್ಲ ಕಲ್ಪನೆಯ ಕುದುರೆಯನ್ನು ಹತ್ತಿ ಬಹುದೂರ ಪ್ರಯಾಣ ಬೆಳೆಸಿದ್ದರು. ಇಷ್ಟರಲ್ಲಿ ತಿರುಗಿ ಮೊದಲಿನ ಸ್ಥಳಕ್ಕೆ ಬರಬೇಕಾದರೆ ಅವರ ಮನಸ್ಸು ಒಪ್ಪದಾಯಿತು. ಅದರಿಂದ ಚಂದ್ರಕಾಂತ ಮುಂದಾಗಿ ಮತ್ತೆ ಕೇಳಿದ.

" ಏನು ಮಾಡಿದರೂ ಹಾಸ್ಟೇಲಿನಲ್ಲಿ ಸ್ಥಳ ದೊರೆಯಲು ಶಕ್ಯ ವಿಲ್ಲವೆ ? "

ಪ್ರೊಫೆಸರರು ಕೊಂಚ ಯೋಚಿಸಿ,—

" ಕೋಣೆ ತೆರವಿಲ್ಲವಲ್ಲ ? " ಎಂದರು.

" ನನ್ನ ಕೋಣೆಯಲ್ಲಿಯೇ ಇರಲಿ ಸದ್ಯಕ್ಕೆ. ಪರೀಕ್ಷೆ ಮುಗಿದ ಮೇಲೆ ನೋಡಲಿಕ್ಕೆ ಬಂದೀತು." ಚಂದ್ರಕಾಂತ ಯುಕ್ತಿ ಸೂಚಿದ.

" ನಿಮಗೆ ತೊಂದರೆಯಾಗದೆ ? "

" ಇಲ್ಲ. ಅವರೂ ಇಂಗ್ಲೀಷ ತಕ್ಕೊಂಡಿದ್ದಾರೆ. ನಾನೂ ಅವರೂ ಕೂಡಿಯೇ ಓದಿಕೊಳ್ಳುತ್ತೇವೆ. "

" ಹಾಗಾದರೆ ನನ್ನ ಅಡ್ಡಿಯಿಲ್ಲ. " ನಿರ್ವಾಹವಿಲ್ಲದೆ ಪ್ರೊಫೆಸರು ಒಪ್ಪಿದರು.

ತರುಣರೆಲ್ಲ ಹಿಗ್ಗಿ ಹೊರಗೆ ಬಂದರು.

## ೧೧

ಈಗ ಅಜಿತನಿಗೆ ಹಗಲಿರುಳೂ ಅಭ್ಯಾಸ ಮಂಡಲದ ಚಿಂತೆಯೇ ಚಿಂತೆ. ಅದರ ಸದಸ್ಯರನ್ನು ಹೆಚ್ಚಿಸುವುದು, ಮುಂದಿನ ಕಾರ್ಯಕ್ರಮವನ್ನು ಗೊತ್ತುಪಡಿಸುವುದು ಇದರಲ್ಲಿಯೇ ಅವನ ವೇಳೆಯೆಲ್ಲ ಹೋಗುತ್ತಿದ್ದಿತು. ಪರೀಕ್ಷೆ ಮುಗಿದು ಹೋದುದರಿಂದ ಅಷ್ಟೇನು ಅಭ್ಯಾಸ ಮಾಡಬೇಕಾಗುತ್ತಿರಲಿಲ್ಲ. ಎಂದಾದರೊಮ್ಮೆ ಪುಸ್ತಕ ಕೈಯಲ್ಲಿ ತಕ್ಕೊಂಡರೂ ತಲೆಯಲ್ಲಿ ಇದೇ ವಿಚಾರ. ಆಗ ಪುಸ್ತಕ ಒಗೆದು ಕೈಯಲ್ಲಿ ಕಾಗದ ಲೆಕ್ಕಣಿಕೆ ತಕ್ಕೊಳ್ಳುವ. ತನ್ನ ಮಂಡಲದ ಧ್ಯೇಯ ನಿಯಮಗಳನ್ನೂ ಕಾರ್ಯ ಯೋಜನೆಯನ್ನೂ ಕುರಿತು ಬರೆಯುವ. ನೋಡುನೋಡುವಷ್ಟರಲ್ಲಿ ಒಂದೆರಡು ಹಾಳೆ ಬರೆದು ತೆಗೆಯುವ. ಓದಿ ನೋಡುವ; ತಿರುತಿರುಗಿ ಓದಿ ನೋಡುವ. ತನ್ನ ವಿಚಾರ, ಲೇಖನ ಕಲೆಗಳಿಗೆ ತಾನೇ ಮೆಚ್ಚಿ ತಲೆದೂಗುವ. ಹಾಗೆಯೇ ಚಿಕ್ಕ ಚಿಕ್ಕ ಬರಹಗಳನ್ನು ಬರೆದು 'ಲಾಯಿಟ್' ಪತ್ರಿಕೆಗೆ ಕಳುಹಿಸುವ. ಅಚ್ಚಾದ ಲೇಖನಗಳನ್ನು ಮಂಡಲದ ಸದಸ್ಯರ ಮುಂದೆ ಓದಿ ತೋರಿಸುವ. ವಿವರಿಸಿ ಹೇಳುವ. ಸಮಯ ಸಿಕ್ಕಾಗ ಅಕ್ಕನನ್ನೂ ಕಂಡು ಬರುವ. ಬರಬರುತ್ತ ಈ ಕಾಲೇಜ ಶಿಕ್ಷಣ ಅವನಿಗೆ ಸೇರದಾಯಿತು. ಇದರಲ್ಲಿ ವಿದ್ಯಾರ್ಥಿಗಳ ಒಲವನ್ನು ಗಮನಿಸುವದಿಲ್ಲ. ಎಲ್ಲರಿಗೂ ಒಂದೇ ಶಿಕ್ಷಣ, ಒಂದೇ ಮಾರ್ಗ, ಒಂದೇ ಕ್ರಮ, ಇದು ದೊಡ್ಡ ತಪ್ಪು. ಎಂದು ಅವನ ಮನಸ್ಸು ಎಂದೋ ನಿರ್ಧರಿಸಿಬಿಟ್ಟಿತ್ತು. ಅನಿವಾರ್ಯ ಪಕ್ಷಕ್ಕೆ ಕ್ಲಾಸಿಗೆ ಹೋಗಿ ಬರುವ. ಹೀಗೆ ಯಾವದಾದರೊಂದು ಕಾಲೇಜಿನಲ್ಲಿದ್ದೇ—ಕಲಿಯುವ ಸೋಗು ಹಾಕಿಯೇ—ಕ್ರಾಂತಿ ಮಾಡಲಿಕ್ಕೆ ಬೇಕು, ಎಂದು ಅವನ ಮನಸ್ಸು ನುಡಿಯುವದು. ಅಂತೇ ಅವನು ಇನ್ನೂ ಕಾಲೇಜಿನಲ್ಲಿದ್ದ.

ಅಂದು ಸಾಯಮನ್ ಕಮೀಶನಕ್ಕೆ ವಿರೋಧ ಪ್ರದರ್ಶಿಸಲಿಕ್ಕೆಂದು ಹರತಾಳ ಪಾಲಿಸಿ ಕಾಲೇಜ ನಿಯಮವನ್ನು ಮುರಿದ ವೀರ ವಿದ್ಯಾರ್ಥಿಗಳು ಈಗೀಗ ಇರುಳು ಕಳ್ಳತನದಿಂದ ಚಲಚಿತ್ರಗಳನ್ನು ನೋಡಲಿಕ್ಕೆ

ಹೋಗುವುದರಲ್ಲಿಯೂ ಹಾಸ್ಟೇಲಿನ ನಿಯಮ ಮುರಿದು ತಮ್ಮ ಶೌರ್ಯ ತೋರಿಸದೆ ಇರುತಿರಲಿಲ್ಲ. ಈ ಹೊತ್ತು 'ಮೆಟ್ರೋ' ಥೇಟರಿನಲ್ಲಿ ಒಳ್ಳೆಯ ಚಿತ್ರ ಆರಂಭವಾಗಿದೆಯೆಂಬುದನ್ನು ಕೇಳಿ ಚಂದ್ರಕಾಂತ ಹೊರಟೇ ನಿಂತ. ಅಜಿತನಿಗೂ ಬರಲಿಕ್ಕೆ ಆಗ್ರಹ ಮಾಡಿದ. ಆದರೆ ಅಜಿತ ಹೋಗಲಿಲ್ಲ.

ಸಿನೇಮಾ ನೋಡಲಿಕ್ಕೆ ಅಜಿತ ಹೋಗುತ್ತಿರಲಿಲ್ಲವೆಂತಲ್ಲ. ಆದರೆ ಬಹಳಷ್ಟು ಚಿತ್ರಪಟಗಳಲ್ಲಿಯ ಭಾವ ವಿಚಾರಗಳು ಅವನಿಗೆ ಸೇರುತ್ತಿರಲಿಲ್ಲ. ಅವು ಅವನ ತಲೆಯಲ್ಲಿ ಒಂದು ವಿಚಾರಚಕ್ರವನ್ನೇ ಉದ್ಭವಿಸುತ್ತಿದ್ದುವು. ಸುಶಿಕ್ಷಿತರಿರಲಿ ಅಶಿಕ್ಷಿತರಿರಲಿ ಎಲ್ಲ ವರ್ಗದ ಜನರಲ್ಲಿಯೂ ಚಿತ್ರವನ್ನು ನೋಡುವ ಪ್ರವೃತ್ತಿ ಇದ್ದೇ ಇರುತ್ತದೆ. ಪ್ರತಿಯೊಬ್ಬನ ಮನಸ್ಸನ್ನೂ ಆಕರ್ಷಿಸುವ ಈ ಚಿತ್ರಪಟಗಳಲ್ಲಿ ಅಂಥದೇನಿರಬೇಕು?

ಈ ಪ್ರೇಮ ಪ್ರಣಯಗಳಿಂದ ತುಂಬಿದ ಚಿತ್ರಪಟಗಳನ್ನು ಜನ್ಮತಃ ಯಾವ ಜನತೆಯು ನೋಡುತ್ತ ಬಂದಿರುವುದೋ ಅದರಲ್ಲಿ ಲೈಂಗಿಕ ಭಾವನೆ ಬೇಗ ಬೆಳೆಯುತ್ತ ಹೋಗುವುದರಲ್ಲಿ ಆಶ್ಚರ್ಯವೇನು?

ಇಡೀ ಭಾರತದ ಜನಾಂಗವೆಲ್ಲ ಒಂದು ಚಮತ್ಕಾರಿಕ ಚಳವಳಿಯಲ್ಲಿ ಹೊಯ್ದಾಡುತ್ತಿದೆ. ಜನರಲ್ಲಿ ಚೇತರಿಸುತ್ತಿರುವ ಈ ಕಾಮುಕ ಭಾವ! ಇದರಿಂದ ಉತ್ಪನ್ನವಾದ ಈ ಸ್ವೈರವೃತ್ತಿ! ಇವುಗಳಿಗೆಲ್ಲ ಈ ಚಿತ್ರಪಟಗಳೇ ಕಾರಣ. ಯಾವ ದೇಶದಲ್ಲಿ 'ವಂದೆ ಮಾತರಂ' ಶಬ್ದ ಉಚ್ಚರಿಸಲಿಕ್ಕೆ ಕೂಡ ಸ್ವಾತಂತ್ರ್ಯವಿಲ್ಲವೋ ಅಲ್ಲಿ ಚಿತ್ರಪಟಗಳು ಇನ್ನೇನನ್ನೂ ಮಾಡಬಲ್ಲವು?

ಚಲಚಿತ್ರಪಟಗಳು ಇಂಥ ಪ್ರವೃತ್ತಿಯಲ್ಲಿಯೇ ಮುಂದೊರಿದು ದುಡ್ಡು ಸಂಪಾದನೆಯೇ ತಮ್ಮ ಧ್ಯೇಯವೆಂದು ಎಲ್ಲಿಯ ವರೆಗೆ ಭಾವಿಸಿರುವವೋ ಅಲ್ಲಿಯ ವರೆಗೆ ಚಿತ್ರಗಳಿಂದ ಜನರಲ್ಲಿ ಕ್ರಾಂತಿ ಹೇಗೆ ಉಂಟಾದೀತು? ಎಲ್ಲಿಯಾದರೂ ತಪ್ಪಿ "ವಂದೆ ಭಾರತಂ" ದಂಥ ಪಟ ನಿರ್ಮಾಣವಾದರೆ ಸರಕಾರ ಪ್ರದರ್ಶಿಸಗೊಡುವದೆಲ್ಲಿ? ಪರಕೀಯ ಸರಕಾರ ಜನತೆಯಲ್ಲಿ ಲೈಂಗಿಕ ಭಾವನೆಯನ್ನು ಬೆಳಸಿ ಸ್ಥೈರ್ಯ ಶೌರ್ಯಗಳನ್ನು ನಷ್ಟಗೊಳಿಸುವ ಚಿತ್ರಪಟಗಳಿಗೇನೇ ಗೌರವ ಮಾಡುವದು.

ಚಂದ್ರಕಾಂತನನ್ನು ಸಿನೇಮಾಕ್ಕೆ ಕಳುಹಿ, ಬಾಗಿಲ ಹಾಕಿಕೊಂಡು ಸ್ವಲ್ಪ ಸಮಾಧಾನದಿಂದಲೇ ಹಾಸಿಗೆಯ ಮೇಲೆ ಹೊರಳಿದ ಅಜಿತ. ಈಗಾಗಲೇ ಅವನ ಅಭ್ಯಾಸ ಮಂಡಲಕ್ಕೆ ಐವತ್ತು ಜನ ವಿದ್ಯಾರ್ಥಿಗಳು ಸಭಾಸದರಾಗಿದ್ದರು. ಅವರೆಲ್ಲರೂ ಅಂದು ಸಾಯಮ-' ಕಮಿಶನಕ್ಕೆ ಒಕ್ಕಟ್ಟಿನಿಂದ ವಿರೋಧ ಪ್ರದರ್ಶಿಸಿದ ದೃಶ್ಯ ಇನ್ನೂ ಅವನ ಕಣ್ಣೆದುರಿಗೆ ಕಟ್ಟಿದಂತಿತ್ತು. ಕಾಲೇಜದ ಹರತಾಳಕ್ಕ ಅವರೇ ಮುಖ್ಯ ಕಾರಣರು. ಸಾವಿರ ವಿದ್ಯಾರ್ಥಿಗಳಲ್ಲಿ ಇನ್ನೂರರಷ್ಟು ವಿದ್ಯಾರ್ಥಿಗಳು ನಿಜವಾದ ಕ್ರಾಂತಿಕಾರಕರು ಹೊರಟರೂ ಸಾಕು. ಭಾರತದ ಮೇಲೆ ಸ್ವಾತಂತ್ರ್ಯದ ಧ್ವಜ ಹಾರಾಡಲಿಕ್ಕೆ ಹೆಚ್ಚು ಅವಕಾಶ ಬೇಕಿಲ್ಲ. ಅಭ್ಯಾಸ ಮಂಡಲಕ್ಕೆ ಇನ್ನೂರು ಜನ ಸದಸ್ಯರಾಗಿ ಪ್ರತಿಯೊಬ್ಬನೂ ನೂರು ನೂರು ಜನ ಹೊಸ ಸದಸ್ಯರನ್ನು ಸಂಪಾದಿಸಿ ಕೊಟ್ಟರೆ ನೋಡು ನೋಡುವಷ್ಟರಲ್ಲಿ ಇಪ್ಪತ್ತು ಸಾವಿರ ಸದಸ್ಯರ ಸಂಸ್ಥೆಯಾಗುವದು. ಆಮೇಲೆ ಸ್ವಾತಂತ್ರ್ಯ ಸಂಪಾದಿಸಲು ಪ್ರಬಲ ಸಾಧನವಾದೀತೀ ಸಂಘ. ಎರಡು ವರ್ಷಗಳಲ್ಲಿ ಆ ಇಪ್ಪತ್ತು ಸಾವಿರ ಜನರೂ ಪ್ರತಿಯೊಬ್ಬರು ನೂರು ನೂರು ಸದಸ್ಯರನ್ನು ಕೂಡಿಸಿ ಕೊಟ್ಟರೆ ಇಪತ್ತು ಲಕ್ಷ ಪ್ರಗತಿಶೀಲ ಸೈನ್ಯ !—

ಇಪ್ಪತ್ತು ಲಕ್ಷ ಸೈನಿಕರು ಏನು ಮಾಡಲಿಕ್ಕಿಲ್ಲ ? ಜಗತ್ತಿನ ಮಾನವ ಜೀವನವನ್ನೇ ತಲೆ ಕೆಳಗೆ ಮಾಡುವ ಶಕ್ತಿ ಇರುವುದು ಅವರಲ್ಲಿ! ಪಂಚ ವಾರ್ಷಿಕ ಯೋಜನೆಯೊಂದಿಟ್ಟುಕೊಂಡು ಮುಂದೆ ಸಾಗಿದರೆ ಕೆಲ ದಿನಗಳಲ್ಲಿಯೇ ಭಾರತ ವಿಶ್ವದ ದೃಷ್ಟಿಯನ್ನೆಲ್ಲ ತನ್ನೆಡೆಗೆ ಸೆಳೆದಂ ಬಿಡುವುದು !

ವಿಶ್ವದ ಸುಖಶಾಂತಿ ! ಭಾರತದಿಂದ ಜಗತ್ತಿಗೆ ಸಿಕ್ಕ ಸುಖಶಾಂತಿ ! ಕೇವಲ ಏಳು ವರ್ಷದ ಪ್ರಯತ್ನ! ಅಜಿತನಿಗೆ ಒಬ್ಬನಿಗೇ ಏಕೆ ಯಾರಿಗಾದರೂ ಈ ಕಲ್ಪನೆಯಿಂದ ಆನಂದ ಆಗುತ್ತಿದ್ದಿತು. ಆದರೆ ಇದು ಅಜಿತನಿಗೆ ಕೇವಲ ಕಲ್ಪನೆಯಾಗಿರಲಿಲ್ಲ. ಅವನಿಗಿದು ಸಂಪೂರ್ಣ ಸತ್ಯವೆಂದೇ ತೋರುತ್ತಿದ್ದಿತು. ಬರೇ ಗಾಂಧೀವಾದದ ಕಡೆಗೆ ಕಣ್ಣಿಟ್ಟು ಈಗೆರಡು ವರ್ಷ ಅವನ ದಿನಗಳು ವ್ಯರ್ಥ ಹೋದುವೇನೊ !

ನಿಜ! ಗಾಂಧೀವಾದ ಅವನ ಜೀವನದ ಪೂರ್ವರಂಗವೆಂದೇ ಹೇಳ

ಬೇಕು. ಅದಕ್ಕೆ ಆಗುವ ಪ್ರತಿಕ್ರಿಯೆಯ ಅರಿವು ಅವನಿಗೆ ಇಷ್ಟು ಬೇಗ ಆದುದು ಒಂದು ಭಾಗ್ಯವೆಂದೇ ತಿಳಿಯಬೇಕು! ವಿಶ್ವ ಶಾಂತಿಗೆ ಸಾಧನ, ಸ್ವತಂತ್ರ ಭಾರತದ ಆದರ್ಶ ಅಹಿಂಸೆ! ಹಿಂಸೆಯ ಪ್ರತಿಕಾರ ಅಹಿಂಸೆಯಿಂದ? ಎಂಥ ಅವ್ಯವಹಾರ್ಯವಿದು!

ಅಹುದು. ಗಾಂಧೀವಾದ ಖಾದಿ ತತ್ವದ ತಳಹದಿಯ ಮೇಲೆ ನಿಂತಿದೆ. ಚರಕ ತಿರುಗಿಸಿ, ಈ ಇಪ್ಪತ್ತನೆಯ ಶತಮಾನದಲ್ಲಿ ಗಿರಣಿಗಳ ಹಾವಳಿಯನ್ನು ನಿಲ್ಲಿಸಲಾದೀತೆ? ಶಕ್ಯವಿಲ್ಲ. ಎಂದೂ ಶಕ್ಯ ವಿಲ್ಲ. ಇದು ಭಾರತದ ಪುರಾತನ ಸಂಸ್ಕೃತಿಯ ದ್ಯೋತಕವಷ್ಟೆ. ಇದ ರಿಂದ ಜಗತ್ತಿನ ಕಾರ್ಮಿಕರ ಸಮಸ್ಯೆ ಬಗೆಹರಿಯದು!

ಅಂದ ಮೇಲೆ ಈ ಖಾದಿಯನ್ನೇಕೆ ತೊಡಬೇಕು? ಖದ್ದರ ಶುಭ್ರ ಪವಿತ್ರ. ಮನಸ್ಸಿನಂತೆ ವೇಷಭೂಷಣ, ವೇಷಭೂಷಣದಂತೆ ಅಂತರಂಗ. ಅಂತರಂಗ ಶುದ್ಧಿಯಿಂದ ರಾಜಕಾರಣದಲ್ಲಿ ಕೈಯಿಕ್ಕಬಹುದೇ? ರಾಜ ಕಾರಣಿ, ತಂತ್ರಗಾರ, ಮಾಟಗಾರ! ಅವನಿಗೂ ಅಂತರಂಗಶುದ್ಧಿಗೂ ಬಹುದೂರ ಅಂತರ. ಇದು ಧರ್ಮದ ವಿಷಯ, ಮೋಕ್ಷದ ದಾರಿ, ಈಗ ನಮಗೆ ಮೋಕ್ಷ ಬೇಕಿಲ್ಲ. ಬಂಧವಿಮೋಚನ ಬೇಕಾಗಿದೆ. ಅದಕ್ಕಾಗಿ ಧರ್ಮ ನೀತಿಗಳನ್ನೇನೂ ನೋಡಬೇಕಿಲ್ಲ. ಪಾರತಂತ್ರ್ಯ ದಲ್ಲಿದ್ದವರು ಸ್ವಾತಂತ್ರ್ಯವನ್ನು ಸಂಪಾದಿಸಲು ಬೇಕಾದ ಕಾರ್ಯ ಮಾಡಿದರೂ ಅವೆಲ್ಲ ಅವರ ಧರ್ಮ ಕಾರ್ಯಗಳೇ. ಮುಕ್ತಿಗೆ ಸಾಧನೆ ಗಳೇ.

ನಾಳೆಯಿಂದ ಈ ಖಾದಿಯ ಉಡಿಗೆ ತೊಡಿಗೆಗಳನ್ನೇ ಬದಲಿಸಿ ಬಿಡಬೇಕು. ಕೈನೂಲಿನ ಬಟ್ಟೆಯಿಂದ ನನ್ನ ಕ್ರಾಂತಿಯಾಗದು. ಈ ಅಹಿಂಸೆಯ ಸೋಗಿನಿಂದ ಕ್ರಾಂತಿ ಕೈಗೆ ಬಂದರೂ ಬೇಡ. ಖದ್ದರದಲ್ಲಿ ಜಗತ್ತು ಇಟ್ಟ ನಂಬಿಗೆಯನ್ನು ಕೆಡಿಸುವದು ಬೇಡ. ಹಾಲಿನಲ್ಲಿ ಬಿದ್ದ ನೊಣವು ಹಾಲನ್ನೂ ಕೆಡಿಸಿತಂತೆ. ತಾನೂ ಸತ್ತಿತಂತೆ. ಯಾರೋ ಗಹಗಹಿಸಿ ನಕ್ಕಂತೆ ಭಾಸವಾಯಿತೇನೋ ಅವನಿಗೆ? ಇನ್ನೂ ಅಷ್ಟು ರಾತ್ರಿಯಾಗಿರಲಿಕ್ಕಿಲ್ಲ. ಇಲ್ಲಿಯ ವರೆಗೂ ಕೆಲವು ವಿದ್ಯಾರ್ಥಿಗಳು ಎಚ್ಚರಿರುವ ಸಂಭವೂ ಇತ್ತು.

ಆ ದಿನ ಮಲಗುವ ವರೆಗೂ ಇದೇ ವಿಷಯವನ್ನೇ ಚರ್ಚಿಸಿ ಗೆಳೆಯರೆಲ್ಲ ಇದೀಗ ತಮ್ಮ ತಮ್ಮ ಕೋಣೆಗೆ ಹೋಗಿದ್ದರು. ಅವರೆಲ್ಲರಿಗೂ ನಿದ್ದೆ ಹೇಗೆ ಹತ್ತಬೇಕು? ಎಲ್ಲರಿಗೂ ಸ್ವಾತಂತ್ರ್ಯದ ಚಿಂತೆ ಇದ್ದೇ ಇರುವುದಲ್ಲ! ಕಾಲೇಜದ ನಿಯಮವನ್ನೇ ಕಾಲನಿಂದ ತುಳಿದು ಹರತಾಳ ಪಾಲಿಸಿ ವಿಜಯಿಗಳಾದ ಸ್ವಾತಂತ್ರ್ಯವೀರರಿಗೆ ವಿಶ್ರಾಂತಿ ಎಂಬುದಿದೆಯೇ? ಅವರು ತಮ್ಮ ಕೋಣೆಯಲ್ಲಿ ಯಾವಾಗ ನಕ್ಕರೂ ಅವರನ್ನು ಕೇಳುವವರಾರು? ತನ್ನನ್ನು ನೋಡಿ ಉಳಿದ ಗೆಳೆಯರು ನಗುತ್ತಿರುವುದೇ ನಿಜ! ಅವನು ಯಾವ ಕ್ಷಣಕ್ಕೆ ಮೈಮೇಲಿನ ಶರಟು ತೆಗೆದು ಬೀಸಾಡಿದನೋ ಅದೇ ಕ್ಷಣಕ್ಕೆ ಜಗತ್ತಿನ ಶ್ರಮಜೀವಿಗಳೆಲ್ಲರ ಏಕೀಕರಣ ರಶಿಯನ್ ಕೂಲಿಕಾರ ವರ್ಗದಲ್ಲಿ ಆದುದರ ಅನುಭೂತಿಯನ್ನು ಅವನಿಗೆ ಅನುಭವಿಸಲಿಕ್ಕೆ ಸಿಕ್ಕಿತು. ತನ್ನ ಸಂಕುಚಿತ ದೃಷ್ಟಿಗೇ ಅಂಜನವಾದಂತಹ ಈ ಕ್ಷಣವೇ ಅವನಿಗೆ ಅಪೂರ್ವವಾದುದೆನಿಸಿತು.

ಅಜಿತ ಈ ಮಗ್ಗಲಿನಿಂದ ಇನ್ನೊಂದು ಮಗ್ಗಲಿಗೆ ಹೊರಳಿದ. ತನ್ನ ನೆರೆಯಲ್ಲಿಯೇ ಯಾರೋ ನಕ್ಕಂತೆ ಅನಿಸಿತವನಿಗೆ. ಅಜಿತ ಒಮ್ಮೆಲೇ ಗಡಬಡಿಸಿದ. ಎದ್ದು ಕುಳಿತ. ವಿದ್ಯುತ್ತಿನ ದೀಪ ಹಚ್ಚಿದ. ಅವನ ಕೋಣೆಯಲ್ಲಿಯೂ ಯಾರೂ ಇರಲಿಲ್ಲ. ಚಂದ್ರಕಾಂತನಂತೂ ಸಿನೇಮಾಕ್ಕೆ ಹೋಗಿದ್ದ. ಸಮೀಪದ ಕೋಣೆಯಲ್ಲಿಯೂ ಯಾರೂ ಎಚ್ಚರವಿದ್ದಂತಿರಲಿಲ್ಲ. ಎಲ್ಲೆಡೆಗೂ ಕತ್ತಲೆಯ ಗಭೀರ ಶಾಂತಿ!

'ಯಾರು ನಗುತ್ತಿರಬೇಕು?

ನಗಲಿ; ಯಾರ ನಗೆಗೂ ನಾನು ಸೊಪ್ಪು ಹಾಕುವದಿಲ್ಲ.' ಎಂದು ಅಜಿತ ದೀಪ ತೆಗೆದು ಹಾಸಿಗೆಯ ಮೇಲೆ ಹೊರಳಿದ. ಎಷ್ಟು ವೇಳೆ? ಅವನಿಗೇ ಗೊತ್ತು. ಅವನಿಗೂ ಅದರ ಅರಿವಿರಲಿಲ್ಲ! ಒಮ್ಮೆ ಅಜಿತನಿಗೆ ಅನ್ನಿಸಿತು. ತನಗೆ ನಿದ್ರೆಯೇ ಹತ್ತಿಲ್ಲ. ಅವನ ಕೋಣೆಯಲ್ಲಿ ಭೂತ ಇದ್ದುದರ ಭಾಸವಾಗಹತ್ತಿತು. ಶಾಸ್ತ್ರೀಯ ಯುಗದ ಈ ಇಪ್ಪತ್ತನೆಯ ಶತಮಾನದಲ್ಲಿ ಭೂತಗಳೇ ಇಲ್ಲವೆಂಬುದು ಅವನಿಗೆ ಗೊತ್ತಿದ್ದಿತು. ಆದರೂ ಕೆಲ ವರ್ಷಗಳ ಹಿಂದೆ ಮಂತ್ರ ಕಲಿಯಲಿಕ್ಕೆ ಹೋಗಿ ಸ್ಮಶಾನದಲ್ಲಿ ಹೆದರಿ ಉರಿ ಬಂದು ಮಲಗಿದ ಸಂಗತಿ ನೆನಪಾಯಿತು. ಅದಕ್ಕೆ

ಸಣ್ಣಂದಿರುವಾಗ ಕೇಳಿದ ಭೂತಗಳ ಕಥೆಗಳೂ ಸ್ಮೃತಿಪಥಕ್ಕೆ ಬಂದು ಪುಷ್ಟಿಯನ್ನಿತ್ತುವು. ಆದರೂ ಅದೆಲ್ಲ ಸುಳ್ಳು, ಕೇವಲ ಕಲ್ಪನೆ, ಭೀತಿಯೇ ಭೂತ ಎಂದು ಅವನಿಗೆ ಮನದಟ್ಟಾಗಿತ್ತೆಂದೇ ಇನ್ನೂ ಅವನು ಹಾಸಿಗೆಯ ಮೇಲೆ ಮಲಗಿದ್ದ. ಅಂದರೂ ಆ ಭೂತಗಳ ಕಾಲ್ಪನಿಕ ಚಿತ್ರ ಅವನ ಮನದೆದುರಿಗೆ ನಿಂತೇ ಇದ್ದಿತು.

ಕತ್ತಲೆಯಲ್ಲಿ ಯಾರೋ ಅಜಿತನ ಹಾಸಿಗೆಯ ಸುತ್ತಲೂ ಇದ್ದ ಸೊಳ್ಳೆಯ ಪರದೆಯನ್ನು ತಡವರಿಸುತ್ತ ತಿರಗುತ್ತಿರುವಂತೆ ತೋರಿತು. ಆ ವ್ಯಕ್ತಿಯ ಉಸಿರಾಡುವ ಸದ್ದೂ ಘನವಾಗಿ ಕೇಳಿಸುವಂತಿತ್ತು. ಅದು ಏನೋ ಹುಡುಕುತ್ತಿದೆ. ಸಿಕ್ಕದಾಗಿದೆ. ಇವೆಲ್ಲ ನಿದ್ರೆಯಿಲ್ಲದೆ ಕಾಯ್ದ ಮಿದುಳಿನ ಕಲ್ಪನೆಗಳೆಂದು ಒಮ್ಮೆ ಅಜಿತನಿಗೆ ಅನ್ನಿಸಿತು. ತನ್ನ ಹೃದಯದ ಧಮನಿಗಳಲ್ಲಿ ದೇಹದೊಳಗಿನ ನಾಡಿನಾಡಿಗಳಲ್ಲಿ ವೇಗವಾಗಿ ಚಲಿಸುವ ರಕ್ತದ ಶಬ್ದವೇ ಹೀಗೆ ಹೆಜ್ಜೆ ಸಪ್ಪಳದಂತೆ ಭಾಸವಾಗುವದೆಂದೂ ತೋರಿತು. ಆದರೂ ಮೈ ಜುಮ್ಮೆನ್ನುತ್ತಿದ್ದಿತು. ಈ ಹೆದರಿಕೆಯನ್ನು ಹೋಗಲಾಡಿಸುವದಕ್ಕೆ—

"ಯಾರವರು ?" ಎಂದು ಕೇಳಿದ ಅಜಿತ.

ಆಗ ಅವನಿಗೆ ಒಮ್ಮೆಲೇ ಜೋರಿನಿಂದ ನಕ್ಕ ಸದ್ದು ಕೇಳಿಸಿತು. ತನ್ನ ಕಲ್ಪನಾ ಚಿತ್ರದ ಬೊಂಬೆಗೆ ತಾನೇ ಹೆದರುವ್ರದು ಒಳಿತಲ್ಲವೆಂದು ನಿಶ್ಚಯಿಸಿ ಅಜಿತ ಕಣ್ಣು ತೆರೆದ. ಅವನು ಕಣ್ದೆರೆಯುವದೇ ತಡ ಎದುರಿಗೆ ದಶವದನ! ರಾವಣನು ನಿಂತು ನಗುವದು ಕಾಣಿಸಿತವನಿಗೆ. ಹತ್ತೂ ಮುಖಗಳ ನಗೆಯ ಮಹಾಧ್ವನಿಯೇ ಅದು.

"ಯಾರು, ರಾವಣಾಸುರ ?" ಅಜಿತ ಕೊಂಚ ಹೆದರಿಯೇ ಕೇಳಿದ.

"ಹೌದು."

"ನೀ ಇನ್ನೂ ಇರುವೆಯಾ ?"

"ಇರುವೆನೋ ಇಲ್ಲೋ ಎಂಬುದನ್ನು ಕಣ್ದೆರೆದು ನೋಡು."

"ನನ್ನ ಕೋಣೆಯಲ್ಲೇಕೆ ಬಂದಿರುವೆ ?"

"ರಾಮನನ್ನು ಹುಡುಕಲಿಕ್ಕೆ."

" ರಾಮ ? ನನ್ನ ಕೋಣೆಯಲ್ಲಿ ರಾಮ ? "

" ಅಹುದಹುದು. ನಿನ್ನೀ ಕೋಣೆಯಲ್ಲಿಯೇ ರಾಮ ಅಡಗಿರುವ."

" ನನ್ನ ಹೊರತಾಗಿ ಇಲ್ಲಿ ಯಾರೂ ಇಲ್ಲವಲ್ಲ! "

" ನಿನ್ನಲ್ಲಿಯೇ ರಾಮನಿರಬೇಕು. "

" ನನ್ನಲ್ಲಿಯಂತೂ ಇಲ್ಲ. ಪುರಾಣಪುರುಷನಾದ ರಾಮನನ್ನು ಆದರ್ಶವೆನ್ನಲೂ ನಾನು ಸಿದ್ಧನಿಲ್ಲ. "

" ಆದರೆ ನಿನ್ನ ಹೃದಯದಲ್ಲಿ ನನಗೆ ರಾಮನಂತೆ ಯಾರೋ ಕಾಣಿಸುತ್ತಾರಲ್ಲ. ? "

" ಮಹಾತ್ಮರು ರಾಮರಾಜ್ಯದ ಹುಚ್ಚು ಹುಯಿಲು ಎಬ್ಬಿಸಿದ್ದಾರೆ. ನನಗೆ ರಾಮನೂ ಒಪ್ಪಿಗೆಯಿಲ್ಲ. ರಾಮರಾಜ್ಯವೂ ಒಪ್ಪಿಗೆಯಿಲ್ಲ. ಅದಕ್ಕಿಂತ ನನ್ನ ಯೋಚನೆಯು ಪ್ರಗತಿಪರವಿದೆ. "

" ಎಚ್ಚರದಿಂದಿರು! ರಾಮನ ಹೆಸರು ಉಚ್ಚರಿಸಿದರೆ ನಾಲಿಗೆಯನ್ನು ಕಿತ್ತೇನು. ವಾಲ್ಮೀಕಿಯು ಪಕ್ಷಪಾತದ ಪ್ರಚಾರವನ್ನು ನಂಬಬೇಡ. ರಾಮ ನನ್ನನ್ನು ಕೊಂದನಂತೆ. ಹಃ ! ಹಃ ! ಹಃ ! ಹಃ ! "

" ನನಗೂ ರಾಮನಿಗೂ ಏನೂ ಸಂಬಂಧ ಇಲ್ಲವಲ್ಲ ! "

" ಅಂದರೆ ನೀನು ನನ್ನ ಪಕ್ಷದವನೋ ? "

" ಪಕ್ಷ, ಪಾರ್ಟಿ ಅದು ನನಗೆ ಗೊತ್ತೇ ಇಲ್ಲ. "

" ಎಲ್ಲಿರುವೆ ನೀನು ? ಇದಾವ ಕಾಲ ಗೊತ್ತಿದೆಯೇ ? "

" ಹೀಗೇಕೆನ್ನುವಿ ? "

" ಹೀಗೇಕೆನ್ನುವಿ ! ಭಾರತದಲ್ಲಿ ಬಹು ಜನರು ನನ್ನ ಪಕ್ಷದವರು."

" ಇರಬೇಕು, ಯಾವಾಗಲೂ ಅನ್ಯಾಯಿಗಳ ಪಕ್ಷವೇ ದೊಡ್ಡದು, ಆದರೆ ನ್ಯಾಯದ ಮುಂದೆ ಅದರ ಆಟ ಸಾಗದು. "

" ಸತ್ತೆಯ ಮುಂದೆ ನ್ಯಾಯ ನೀತಿಗಳ ಆಟ ಸಾಗದೆಂದು ಹೇಳು. ಸುಮ್ಮನೇ ಇಲ್ಲದ ಶಾಸ್ತ್ರ ಹೇಳಲಿಕ್ಕೆ ಹೋಗಬೇಡ. "

" ಅದೇನೋ ನಿಜ. "

" ಸತ್ತೆಯ ಸ್ವಾಧೀನ ಸಮಾಜ. ಅರ್ಥಾತ್ ಬಹುಜನ. "

" ಹೌದು. ನಿಮ್ಮ ಪಕ್ಷ ದೊಡ್ಡದು. ನಿಮ್ಮ ವಿದ್ಯೆ, ಸತ್ತೆ, ಕಲೆ

ಎಲ್ಲವೂ ದೊಡ್ಡದು."

"ಸಾಕು ಮಾಡು ನಿನ್ನ ಹೊಗಳಿಕೆ. ನನ್ನ ಗುಣ ನನಗೆ ಗೊತ್ತಿಲ್ಲವೆ? ನನ್ನ ಸತ್ತ್ವ, ವಿದ್ಯೆ, ಕಲೆಗಳನ್ನೆಲ್ಲ ಭಾರತೀಯರನ್ನು ನಷ್ಟಗೊಳಿಸಲೇ ಉಪಯೋಗಿಸುತ್ತಿದ್ದೇನೆ."

ಮಾತಿನ ಮುಡಿಯೊಡನೆಯೇ ರಾವಣನ ಕ್ರೂರ ಮೂರ್ತಿ ಕಣ್ಮರೆಯಾಯಿತು. ಅಜಿತ ಎದ್ದು ಕುಳಿತ. ಅಜಿತ ಶೂರ ತರುಣ, ಶೂರ ಸೈನಿಕನಾಗಲು ಸಿದ್ಧನಾಗಿದ್ದಾನೆ. ಆದರೂ ಕೂಡ ಅವನ ಹೃದಯ ನಡುಗಿತು. ಎದುರಿಗಿನ ಕಿಡಕಿಯಿಂದ ತಣ್ಣಗಿನ ಗಾಳಿಯು ಒಳಗೆ ಬರುತ್ತಲಿದ್ದಿತು. ಅದರಿಂದ ಅಜಿತನ ಮೈಮೇಲೆ ಮುಳ್ಳೆದ್ದುವು. ಆಕಾಶದ ಕಡೆಗೆ ದೃಷ್ಟಿಯನ್ನು ಹರೆಯಿಸಿದ. ನಿರಭ್ರವಾದ ಮುಗಿಲಿನಲ್ಲಿ ಸಾವಿರಾರು ಚಿಕ್ಕೆಗಳು ಮಿನುಗುತಲಿದ್ದುವು. ಅಧಿಕಾರದ ದರ್ಪದಿಂದ ರಾವಣನು ಸಾವಿರಾರು ಕಣ್ಣುಗಳಿಂದ ಭಾರತವನ್ನು ನಿರೀಕ್ಷಿಸುತ್ತಿರುವಂತೆ ಅವನಿಗೆ ಭಾಸವಾಯಿತು. ಅಜಿತನ ಕನಸಿನಲ್ಲಿ ರಾವಣನು ಬಂದುದಕ್ಕೂ ಒಂದು ಕಾರಣವಿದ್ದಿತು. ನಿನ್ನೆಯೇ ಮಹಾತ್ಮಾ ಗಾಂಧೀಜಿಯವರು 'ರಾಮರಾಜ್ಯ'ಕ್ಕೆ ಪ್ರತಿಯಾಗಿ ಈಗ ಅಸ್ತಿತ್ವದಲ್ಲಿರುವ ಸಾಮ್ರಾಜ್ಯಕ್ಕೆ 'ರಾವಣರಾಜ್ಯ'ವೆಂದು ಹೆಸರಿಟ್ಟು "ಲಾಯಿಟ್" ಪತ್ರಿಕೆಯಲ್ಲಿ ಲೇಖನವೊಂದನ್ನು ಬರೆದಿದ್ದ. ಅದರಿಂದ ಭಾರತ ಬಿಡುಗಡೆ ಹೊಂದಲು ಯೋಜನೆಯೊಂದನ್ನು ಯೋಚಿಸುತ್ತ ಮಲಗಿದ್ದ ಅಜಿತ. ಅದೆಲ್ಲವೂ ನೆನಪಾಗಿ ಅವನ ತುಟಿಗಳಲ್ಲಿ ನಗೆಯೊಂದು ಮಿನುಗಿತು. ಅಷ್ಟರಲ್ಲಿ ಚಂದ್ರಕಾಂತ ಸಿನೇಮಾದಿಂದ ಬಂದು ಕೂಗಿದ. ಅಜಿತ ಹೋಗಿ ಬಾಗಿಲ ತೆರೆದು ಬಂದು ಮಲಗಿದ. ಗೆಳೆಯ ಬಂದ. ಇನ್ನೇನು ರಾವಣನ ಹೆದರಿಕೆ ಇಲ್ಲವಲ್ಲ!

'ನಿದ್ರೆಯೆಂದರೆ ಸುಖದ ಸೆಲೆ. ಒಂದು ತಾಸು ನಿದ್ರೆಗಾಗಿ ಇಡೀ ರಾಜ್ಯ ಸುಖವನ್ನೂ ನಿವಾಳಿಸಿ ಚಲ್ಲಬಲ್ಲೆ' ಎಂದು ಯಾವನೋ ಪಾಶ್ಚಾತ್ಯ ಜ್ಞಾನಿಯೊಬ್ಬನು ಹೇಳಿದ್ದಾನಂತೆ. ಅಜಿತ ಚಂದ್ರಕಾಂತರಿಬ್ಬರೂ ಇನ್ನೂ ಸುಖವಾದ ನಿದ್ರೆಯಲ್ಲಿದ್ದರು. ಯಾರೋ ಬಹಳ ಹೊತ್ತಿನಿಂದ ಬಾಗಿಲ ತಟ್ಟುತ್ತಿದ್ದಾರೆ. ಅಜಿತನಿಗೆ ಎಚ್ಚರವಾಗಲಿಲ್ಲ. ಬಾಗಿಲ ಸಪ್ಪಳ ಜೋರಾಯಿತು. ಆಗ ಅಜಿತನಿಗೆ ಎಚ್ಚರಾಯಿತು.

"ಯಾರವರು? ಯಾಕೆ ಬಾಗಿಲ ಬಡಿಯುವಿರಿ?" ಅಜಿತ ಕೇಳಿದ ತ್ರಸ್ತ ಸ್ವರದಲ್ಲಿ, ಎದ್ದು ಬಾಗಿಲ ತೆರೆಯುತ್ತ.

ಹೊರಗೆ ಹೂಬಿಸಿಲು ಬಿದ್ದಿತ್ತು. ಸೃಷ್ಟಿಯಲ್ಲೆಲ್ಲ ಸುಂದರ ನವ ಚೇತನವು ತುಂಬಿತ್ತು. ಎದುರಿಗಿನ ಗಿಡದಲ್ಲಿ ಗುಲಾಬಿಗಳರಳಿದ್ದುವು. ಅದರಂತೆ ಅವನ ಮನಸ್ಸೂ ಅರಳಿತು.

"ಪೋಲೀಸರು ಬರುತ್ತಲಿದ್ದಾರೆ. ಕೋಣೆಯೊಳಗಿಂದ ಏನಾದರೂ ತೆಗೆದಿಡುವುದಿದ್ದರೆ ನೋಡು" ಮೋಹದಿನ ಕೇಳಿದ. ಅವನು ಅಜಿತನ ಅಭ್ಯಾಸ ಮಂಡಲದೊಳಗಿನ ಮುಖ್ಯ ಸದಸ್ಯನೊಬ್ಬ.

"ಏನಿಲ್ಲ, ಬರಲಿ" ಎಂದು ಅಜಿತ ಹೇಳಿದ.

ಇಷ್ಟರಲ್ಲಿ ಕಾಲೇಜಿನ ಪ್ರಿನ್ಸಿಪಾಲರೂ ಪೋಲೀಸ ಅಧಿಕಾರಿಗಳೂ ಬಂದರು ಅವರ ಸಂಗಡ ಹತ್ತೆಂಟು ಹುಡುಗರೂ ಇದ್ದರು.

ಪ್ರಿನ್ಸಿಪಾಲರಿಗೆ ನಮಸ್ಕಾರ ಮಾಡಿದ. ಅವರು ಇವನ ನಮಸ್ಕಾರ ಸ್ವೀಕರಿಸಲಿಲ್ಲ. ನಮಸ್ಕಾರದ ಕಡೆಗೆ ಲಕ್ಷ್ಯ ಕೊಡದೆ ಪ್ರಿನ್ಸಿಪಾಲರು ರೋಷದಿಂದ ಕೇಳಿದರು.

"ಅಜಿತ್, ನೀನು ಹಾಸ್ಟೇಲಿನಿಂದ ಹೊರಗೆ ಹೋಗು!"

"ನನ್ನ ಅಪರಾಧವೇನು ಸರ್?" ಅಜಿತ ಕೇಳಿದ.

"ಅಪರಾಧ? ಇಲ್ನೋಡು, ಪೋಲೀಸರು ನಿನ್ನ ಕೋಣೆಯನ್ನು ಶೋಧಿಸಲಿಕ್ಕೆ ಬಂದಿದ್ದಾರೆ!"

"ನನ್ನ ಕೋಣೆಯಲ್ಲಿ ಅಂಥ ಆಕ್ಷೇಪಾರ್ಹವಾದದ್ದು ಏನೂ ಇಲ್ಲ."

"ಬಾಯ್ಮುಚ್ಚು! ಅವರು ಬೇಕಾದುದನ್ನು ನೋಡಿಕೊಳ್ಳಲಿ. ನಿನ್ನಲ್ಲಿ ರಶಿಯದ ರಾಜಕೀಯ ಸಾಹಿತ್ಯವಿಲ್ಲವೇ?"

"ಇದೆ ಸರ್. ಕಾಲೇಜಿನಲ್ಲಿ ಸಮಾಜವಾದದ ಬಗ್ಗೆ ಕಲಿಸುವದಿಲ್ಲವೆ? ನಮ್ಮ ದೇಶದ ಜವಾಹಿರಲಾಲರಂತಹ ಮುಂದಾಳುಗಳು ರಶಿಯಕ್ಕೆ ಹೋಗಿ ನೋಡಿ ಬರುತ್ತಲಿದ್ದಾರೆ. ನಾವು ಪುಸ್ತಕಗಳನ್ನೂ ಓದಬಾರದೆ?"

ಪ್ರಿನ್ಸಿಪಾಲರು ಪೋಲೀಸ ಅಧಿಕಾರಿಯ ಕಡೆಗೆ ನೋಡಿ, ಅಜಿತನಿಗೆ

ಉತ್ತರ ಕೊಟ್ಟರು.

"ಅವರು ನಿನ್ನ ಕೂಡ ಚರ್ಚೆ ಮಾಡಲು ಬಂದಿಲ್ಲ. ನಿನ್ನ ಕೋಣೆಯನ್ನು ತಪಾಸಿಸಲು ಹುಕುಂ ತಕ್ಕೊಂಡು ಬಂದಿದ್ದಾರೆ."

"ನಾನೇನು ಅಡ್ಡಿ ಮಾಡುವುದಿಲ್ಲ."

ಅಜಿತ ಬಾಗಿಲದೊಳಗಿಂದ ಸರಿದು ಹೊರಗೆ ಬಂದ. ಪ್ರಿನ್ಸಿಪಾಲರೂ ಪೋಲೀಸ ಅಧಿಕಾರಿಗಳೂ ಕೋಣೆಯನ್ನು ಹೊಕ್ಕರು. ಆ ಕಾಲಕ್ಕೆ ವಿದ್ಯಾರ್ಥಿಗಳಿಗೆ ಹಿಂದಿನ ಪ್ರಿನ್ಸಿಪಾಲರ ನೆನಪಾಯಿತು. ಅವರು ಇಂಥದೇ ಒಂದು ಪ್ರಸಂಗದಲ್ಲಿ ಪೋಲೀಸರಿಗೆ ಕಾಲೇಜದ ಆವಾರದಲ್ಲಿ ಕಾಲಿಡ ಗೊಟ್ಟಿರಲಿಲ್ಲ. ಈ ಪ್ರಿನ್ಸಿಪಾಲರು ತಾವು ಸ್ವತಃ ಮುಂದೆ ನಿಂತು ವಿದ್ಯಾರ್ಥಿಗಳ ಕೋಣೆಯನ್ನು ತಪಾಸು ಮಾಡಿಸುತ್ತಿದ್ದಾರೆ! ಇವರ ಪ್ರಾಮಾಣಿಕತನದ ಮೇಲೆಯೇ ಬ್ರಿಟಿಷ ಸತ್ತೆ ಸ್ಥಿರಪಟ್ಟಿರುವುದೇನೊ!

ಅಜಿತನ ಕೋಣೆಯಲ್ಲಿ ರಶಿಯಾ, ಕಮ್ಯುನಿಝಂ, ಸೋಸ್ಯಾಲಿಝಂಗಳ ಮೇಲೆ ಕೆಲ ಪುಸ್ತಕಗಳು ದೊರೆತುವು. ಅವೆಲ್ಲ ಕಾಲೇಜ ಲಾಯಬ್ರರಿಯ ಪುಸ್ತಕಗಳೇ. ಅಜಿತನ ಆಕ್ಷೇಪಾರ್ಹ ಲೇಖನದ ಹಸ್ತ ಪ್ರತಿ ಹಾಗೂ 'ಲಾಯಿಟ್' ಪತ್ರಿಕೆಯ ಪ್ರತಿಗಳು ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ಕೋಣೆಯ ಮೂಲೆ ಮೂಲೆಗಳನ್ನೆಲ್ಲ ಶೋಧಿಸಿಯಾಯಿತು. ಅಜಿತನನ್ನು ಪೋಲೀಸ ಅಧಿಕಾರಿ ಒಳಗೆ ಕರೆದು, ಎಲ್ಲ ಪುಸ್ತಕಗಳನ್ನೂ ಅವನ ಮುಂದಿಟ್ಟ. ಅಜಿತ ಅವೆಲ್ಲ ಕಾಲೇಜ್ ಲಾಯಬ್ರರಿಯ ಹೊತ್ತಿಗೆಗಳೆಂದು ಹೇಳಿದ. ಆ ಮಾತನ್ನು ಕೇಳಿ ಗೌರವರ್ಣದ ಪ್ರಿನ್ಸಿಪಾಲರ ಮುಖ ಕೆಂಪಾಯಿತು.

"ನೀನು ಕೆಲ ಪುಸ್ತಕ ಬೇರೆ ಕಡೆಗೆ ತೆರೆದಿಟ್ಟರಬೇಕು" ಪ್ರಿನ್ಸಿಪಾಲರಂದರು.

"ಅಂದರೆ?" ಅಜಿತ ಕೇಳಿದ.

"ಅಂದರೆ ಇವಲ್ಲದೆ ಇನ್ನೂ ಕೆಲವು ಪುಸ್ತಕಗಳು ನಿನ್ನಲ್ಲಿವೆ. ಅವುಗಳನ್ನು ನೀನು ಕಾಲೇಜ ವಿದ್ಯಾರ್ಥಿಗಳಿಗೆ ಓದಲು ಕೊಡುತ್ತಿರುವೆ."

"ಸರ್, ನಾನು ಬಡ ವಿದ್ಯಾರ್ಥಿ ಎಂಬುದು ನಿಮಗೆ ಗೊತ್ತಿದೆ."

"ಹೌದು, ಬಡವನೆಂದೇ ನಿನಗೆಲ್ಲ ಇಂಥ ಬುದ್ಧಿ ಬೇಗ ಹುಟ್ಟು

ವುದು. ಹೊಟ್ಟೆಗೆಯೇ ಇಲ್ಲದವನಿಗೆ ಹೊಣೆಗಾರಿಕೆಯಾದರೂ ಎಲ್ಲಿಂದ ಬರಬೇಕು ? "

ಅಜಿತನು ನಿನ್ನೆಯೇ ಕೆಲ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ತೆಗೆದು ಬೇರೆ ಕಡೆಗೆ ಇಟ್ಟಿದ್ದೇನೋ ನಿಜ. ಆದಕ್ಕೇ ಇಂಥ ಮಾತುಗಳನ್ನು ಕೇಳಬೇಕಾಗಿ ಬಂತು.

" ಪ್ರಿನ್ಸಿಪಾಲ್ ಸಾಹೇಬ, ನೀವು ಇಂಥ ಪುಸ್ತಕಗಳನ್ನು ಲಾಯಬ್ರರಿಯಲ್ಲಿ ಏಕೆ ಇಡುವಿರಿ ? " ಪೋಲೀಸ ಅಧಿಕಾರಿ ಕೇಳಿದ.

" ರೆಫ್ರೆನ್ಸ ಬುಕ್ಕುಗಳೆಂದು ಕೆಲ ಪುಸ್ತಕಗಳನ್ನು ಇಡಲೇಬೇಕಾಗುವುದು. "

" ಅದಿರಲಿ. ನನಗೆ ಈ ಪುಸ್ತಕಗಳನ್ನು ಒಯ್ಯಬೇಕಾಗಿದೆ. "

" ನೀವು ಇವುಗಳನ್ನೊಯ್ದರೆ ನಮ್ಮ ಕೆಲಸಕ್ಕೆ ಅಡ್ಡಿಯಾಗುವುದಲ್ಲ ? "

" ಅದಕ್ಕುಪಾಯವಿಲ್ಲ ! "

" ಇನಸ್ಪೆಕ್ಟರ ಸಾಹೇಬರೇ, ಈ ಪುಸ್ತಕಗಳನ್ನು ಏತಕ್ಕೆ ಒಯ್ಯುವಿರಿ? ಸರಕಾರದಿಂದಲೇ ಕಾಲೇಜ ಲಾಯಬ್ರರಿಗೆಂದು ಮಂಜೂರಾದ ಪುಸ್ತಕಗಳಿವು! " ಅಜಿತ ನಡುವೆಯೇ ಹೇಳಿದ. ಸ್ವರ ತಿರಸ್ಕಾರಕ್ಕೆ ತಿರುಗಿದ್ದಿತು.

" ನೀ ಏನೂ ಮಾತಾಡಬೇಡ. ನಮ್ಮ ಕಾಲೇಜಿನಿಂದಲೇ ಹೊರಟು ಹೋಗು. " ಪ್ರಿನ್ಸಿಪಾಲರು ಆಜ್ಞಾಪಿಸಿದರು.

" ನನ್ನ ಅಪರಾಧವೇನೂ ಇಲ್ಲದೆ, ಕಾಲೇಜದಿಂದ ಹೊರಗೆ ಹಾಕುವಿರಾ ? "

" ನನಗೆ ಗೊತ್ತಿದೆ, ನಿನ್ನ ಅಭ್ಯಾಸ ಮಂಡಲದ ಸುದ್ದಿಯೆಲ್ಲ. ಆ ಐವತ್ತು ವಿದ್ಯಾರ್ಥಿಗಳನ್ನೂ ಕಾಲೇಜಿನಿಂದ ಹೊರಗೆ ಹಾಕಿಬಿಡುತ್ತೇನೆ."

ಅಜಿತ ಬೆದರಿದ. ಅವನ ಅಭ್ಯಾಸ ಮಂಡಲದ ಸುದ್ದಿಯನ್ನು ಪ್ರಿನ್ಸಿಪಾಲರಿಗೆ ಯಾರು ಹೇಳಿದರು ? ಅವನ ಮಂಡಲ ಬಹಳ ಗುಪ್ತವಾಗಿದ್ದಿತು. ಅದರಲ್ಲಿ ಪ್ರವೇಶಿಸುವ ಪ್ರತಿಯೊಬ್ಬ ವಿದ್ಯಾರ್ಥಿಗಳಿಂದಲೂ ಕೂಡ ಪ್ರತಿಜ್ಞೆ ಮಾಡಿಸಿಯೇ ಕರಕೊಳ್ಳುತ್ತಿದ್ದರು.

" ನಿಮಗಾರು ಹೇಳಿದರು ? " ಅಜಿತ ಗಂಭೀರ ಸ್ವರದಿಂದ ಕೇಳಿದ.

" ನನ್ನ ಹತ್ತಿರ ಸಬಲ ಸಾಕ್ಷಿಗಳಿಲ್ಲದೆ ನಾನು ಮಾತಾಡುವದಿಲ್ಲ." ಆಢ್ಯತೆಯಿಂದ ಅಂದರು ಪ್ರಿನ್ಸಿಪಾಲರು.

"ವಿದ್ಯಾರ್ಥಿಗಳು ಕಾಲೇಜಿನಲ್ಲಿ ಸಂಘಗಳನ್ನು ಸ್ಥಾಪಿಸಬಾರದೋ?" ಅಜಿತನ ಮುಖ ಉಗ್ರವಾಗಿತ್ತಾಗ.

" ನನ್ನ ಒಪ್ಪಿಗೆಯಿಲ್ಲದೆ ಏನೂ ಮಾಡಕೂಡದು. "

ಇದೆಂಥ ಸರ್ವಾಧಿಕಾರ ! ರಾವಣ ರಾಜ್ಯದ ಅನುಕರಣೆಯಲ್ಲವೇ ಇದು ?

ಪೋಲೀಸ ಅಧಿಕಾರಿಯೂ ಪ್ರಿನ್ಸಿಪಾಲರೂ ಪುಸ್ತಕಗಳನ್ನೂ ತಕ್ಕೊಂಡು ಹೋದರು !

## ೧೨

ರಾವಸಾಹೇಬನ ಅಭ್ಯಾಸ ಹಾಗೇ ಕುಂಟುತ್ತ ಸಾಗಿದ್ದಿತು. ಇದೊಂದು ವರ್ಷ ಪರೀಕ್ಷೆಗೆ ಕೂಡುವುದು. ಪಾಸಾದರೆ ಆಯಿತು, ಇಲ್ಲವಾದರೆ ಇಲ್ಲ. ಅಂತೂ ಸಾಲೆಗೆ ಶರಣು ಹೊಡೆದುಬಿಡುವುದು, ಎಂದು ಮನದಲ್ಲಿಯೇ ಆತ ನಿಶ್ಚಯಿಸಿ ಬಿಟ್ಟಿದ್ದ. ವರ್ಷದಂತೆ ಈ ಸಲವೂ ಪರೀಕ್ಷೆಗೆ ಕುಳಿತ. ಪರಿಣಾಮವಂತೂ ಗೊತ್ತೇ ಇತ್ತು.

" ಲಕ್ಷ್ಯಗೊಟ್ಟು ಓದಿದರೆ ಪಾಸಾದೀತು. ಸುಮ್ಮನೆ ಆ ಪುಸ್ತಕ ಈ ಪುಸ್ತಕ ಓದುತ್ತ ತಿರುಗಿದರೆ ವಿದ್ಯೆ ಬಂದೀತೆ ? " ಎಂದು ಆದ ಗೌಡನು ಕಠೋರವಾಗಿ ನುಡಿದ.

ಮುಂದೆ ರಾವಸಾಹೇಬನ ಶಿಕ್ಷಣವಂತೂ ಇಲ್ಲಿಗೇ ನಿಂತಿತೆಂಬುದು ನಿರ್ವಿವಾದವಾದ ವಿಷಯ. ಮನೆಯಲ್ಲಿಯೂ ಕೆಲಸವೇನೂ ಇಲ್ಲ. ಪರೀಕ್ಷೆಯಿಲ್ಲ. ಅಭ್ಯಾಸವಿಲ್ಲ. ಉದ್ಯೋಗವೂ ಇಲ್ಲ. ಮನೆಯ ತೋಟಪಟ್ಟಿಗಳ ಮೇಲ್ವಿಚಾರಣೆ ಮಾಡಬೇಕೆಂಬ ವಿಚಾರವೂ ಇಲ್ಲ. ಆಸಕ್ತಿಯೂ ಇಲ್ಲ. ಇದ್ದುದೆಲ್ಲ ಮನೆಯಲ್ಲಿ ಅಜ್ಜಿಯ ಆಡಳಿತ, ಹೊರಗೆ ತಂದೆಯ ಅಧಿಕಾರ.

ಈಗ ನಿರುದ್ಯೋಗಿಯಾದ ರಾವಸಾಹೇಬನ ಹೃದಯವು ವಿಶ್ವವ್ಯಾಪೀ ಸ್ತ್ರೀ ರೂಪದ ಹಗಲುಗನಸುಗಳನ್ನು ಕಾಣತೊಡಗಿತು. ಆಕಾಶದಲ್ಲಿ ಅವಳ ದೃಷ್ಟಿ, ವಾಯುವಿನಲ್ಲಿ ಅವಳ ಉಚ್ಛ್ವಾಸ, ಗಿಡಗಳ ಮರಮರ ಸ್ವರ ದಲ್ಲಿ ಅವಳ ಗುಪ್ತ ಮಾತು ಕತೆಗಳು, ಇವು ರಾವಸಾಹೇಬನ ಮನಸ್ಸನ್ನು ಸ್ಪರ್ಶಿಸುತ್ತಿದ್ದುವು.

ಮುರದೇವಿಯ ಮನಸ್ಸಿನಲ್ಲಿ ಒಂದು ದೊಡ್ಡ ಚಿಂತೆ. ಮಗನ ಮುಂದೆ ಆ ವಿಷಯವನ್ನು ಎಷ್ಟು ಸಲ ಹೇಳಿದರೂ ಅವನು ಕಿವಿಯ ಮೇಲೇ ಹಾಕಿಕೊಳ್ಳುತ್ತಿರಲಿಲ್ಲ. ತನ್ನ ಚಾವಡಿಯ ಕೆಲಸ, ಅಧಿಕಾರಿ ಗಳ ಸರಬರಾಯಿ ಇವುಗಳಲ್ಲಿಯೇ ಮಗ್ನನಾಗಿದ್ದನು. ಮಕ್ಕಳು ಎದೆ ಯುದ್ದ ಬೆಳೆದು ನಿಂತರೂ ಅವರ ಮದಿವೆಯ ವಿಚಾರವೇ ಅವನ ತಲೆ ಯಲ್ಲಿ ಹೋಗದು. ಮುರದೇವಿಯು ಮಾತೆತ್ತಿದಾಗ—

"ನೀನು ಹೇಳಬೇಕಿಲ್ಲ ತಾಯೀ, ಅದೆಲ್ಲ ನನಗೆ ತಿಳೀತದೆ" ಎಂದು ಹೇಳಿ ಮುಗಿಸುತ್ತಿದ್ದರು. ಅದರಿಂದ ಮುರದೇವಿ ಗಂಗವ್ವನ ವಸೀಲಿ ಹಚ್ಚಬೇಕಾಯಿತು. ಆಗ ಗೌಡರ ಹೃದಯದೊಳಗಿನ ಮಾತು ಹೊರಬಿತ್ತು. ರಾವಸಾಹೇಬನ ಮದುವೆ ಮಾಡುವ ಆತುರ ಮನೆಯ ವರೆಲ್ಲರಿಗಿಂತ ಗೌಡರಿಗೇ ಹೆಚ್ಚಾಗಿದ್ದಿತಾದರೂ ತನ್ನ ಮಗನಕಿಂತಲೂ ಹಿರಿಯನಾದ ಅಜಿತನ ಮದಿವೆಯನ್ನು ಹಿಂದಿಟ್ಟು ರಾವಸಾಹೇಬನ ಮದಿವೆ ಮಾಡಿದರೆ ಮನೆಯಲ್ಲಿ ಸರಸ್ವತಿ ಏನೆಂದಾಳು? ಊರ ಜನ ಏನೆಂದೀತು? ಎಂದುಕೊಂಡು ಸುಮ್ಮನಿದ್ದರು.

"ಹೀಗಂದರೇನು? ಜನರ ಮಾತಿಗಂಜಿ ಮಗನ ಮದಿವೆ ಮಾಡದೆ ಇರೋದು ಎಲ್ಲಿಯ ನ್ಯಾಯ? ನಮ್ಮ ಮನೆ ಮಕ್ಕಳ ಮದಿ ವೆಗೆ ಕಂಡಕಂಡವರು ಹೊಣೆಗಾರರೇ? ಅಜಿತ ಕಲಿತು ಬಂದ ಮೇಲೆ ಅವನದು ಮಾಡಲಿಕ್ಕೆ ಬಂದೀತು. ಈಗೇನ ಅದರೊಳಗ? ನಾವೇನು ಅವನಿಗೆ ಮಾಡಬಾರದಂತ ಬಿಟ್ಟೆದೇವು?" ಎಂದು ಮುರದೇವಿ ಎಲ್ಲರೂ ಇರುವಾಗ ಮಗನಿಗೆ ಅಂದೇಬಿಟ್ಟಳು.

"ಕಲಿಯಲಿಕ್ಕೆ ಹತ್ತಿದಾನೆ; ಅವನರೇ ಕಲಿಯಲಿ. ಅವನ ಸಲು ವಾಗಿ ನಿಮ್ಮ ಹುಡುಗನ ಮದಿವೆ ಮುಂದೇಕೆ ಹಾಕುವಿರಿ?" ಎಂದು

ಸರಸ್ವತಿಯಂತೂ ಸಲಹೆ ಕೊಟ್ಟಳು. ಮುಂದಿನ ಮಾತು ಅವಳ ಹೃದಯ ಗುಹೆಯಲ್ಲಿಯೇ ಮೊಳಗಿ ಮುಳುಗಿತು. "ಅಜಿತನಿಗೆ ಮನೆ ಅವ್ನ ಮದಿವೆ ಅನ್ನುವುದರ ಮೇಲೆ ಚಿತ್ತ ಇದ್ದರೆ ಹೀಗೇಕೆ ಆಗತಿತ್ತು ನನ್ನ ಜನ್ಮ? ನಾಳಿನ ಯುಗಾದಿಗೆ ಮೂರು ವರ್ಷ ಆಯ್ತು. ಮುಂಬಯಿಗೆ ಹೋದವ ನಡುವೆ ಹನ್ನೆರಡು ಪತ್ರ ಬರೆದ ಮೇಲೆ ಒಂದೆರಡು ಸಾರೆ ಬಂದು ಹೋಗಬೇಕಾದರ ಹೆಚ್ಚಾಯ್ತು ಅವನಿಗೆ. ನಾ ಇವರಿಗೆ ಅಂದರೆ ಏನಾಗೋದು ?"

ಸರಸ್ವತಿಯ ಬಾಯಿಂದ ಒಪ್ಪಿಗೆಯ ಮಾತು ಹೊರಬೀಳುವುದೇ ತಡ. ಗಂಗವ್ವ ಮಗನ ಮದಿವೆಗಾಗಿ ಗಂಡನ ದುಂಬಾಲ ಬಿದ್ದಳು. ಅವನಿಗೆ ಸ್ವಲ್ಪವೂ ನೆಟ್ಟಿದಾಡಗೊಡದಾದಳು. ಹೆಂಡತಿಯ ಕಿಟಕಿಟಿಗೆ ಗೌಡ ಹೇಳಿದ.

"ಮದಿವೆ ಮದಿವೆ ಅಂದರೆ ಸುಮ್ಮನೆ ಆಗ್ತದೇನು? ಯೋಗ್ಯ ಮನೆತನದ ಹೆಣ್ಣ ಸಿಗಲಿಕ್ಕೆ ಬೇಡವೇನು? ನಿನ್ನ ಸೊಸೆಯಾಗಿ ಬರುವ ಹುಡುಗಿ ಲಕ್ಷಣವಾಗಿ ಇರಬೇಡವೆ ?"

"ನೀವು ಹೀಗೆ ಮನೆಗೆ ಬಂದ ಹುಡುಗಿಯರನ್ನೆಲ್ಲ ತಿರುಗಿಸಿ ಬಿಟ್ಟರೆ ಮದಿವೆಯಾಗುವ ಬಗೆ ಹೇಗೆ? ಇದೊಂದ ಆದರೆ ಆಯ್ತನ್ನುವ ಹಾಗಿದೆಯೇ? ಇನ್ನೂ ಅಜಿತನದೂ ಆಗಬೇಕು. ಸಣ್ಣ ಹುಡುಗರ ಮದಿವೆಯೂ ಆಗಬೇಕು. ನಾಲ್ಕಾರು ಹೆಣ್ಣ ಹುಟ್ಟಿದರೆ ಹೇಗೆ ಮಾಡುತಿದ್ದಿರೋ ಏನೋ ?"

"ನನಗೆ ಏನ ಮಾಡಂತೀ ?"

"ಬಂದದರೊಳಗ ಒಂದ ಚಲೋ ನೋಡಿ ನಿಶ್ಚಯಿಸಿಬಿಡರಿ ಅಲ್ಲ!"

"ಮೊನ್ನೆ ಬಂದ ಹುಡುಗೀನ ನೋಡಿದೆಲ್ಲ ?"

"ಎಲ್ಲಾರೂ ಅಂಥವರೇ ಬರತಾರೇನು ?"

ಈಗ ತಿಂಗಳ ಹಿಂದೆ ಒಂದು ಮನೆತನದ ಹುಡುಗೆ ಬಂದಿತ್ತು. ಗೌಡರು ಸೂಚಿಸುವ ಮೊದಲೇ ಕಾರ್ ತಗೊಂಡು ಹುಡಿಗೆಯನ್ನು ತೋರಿಸಲು ಕರಕೊಂಡೇ ಬಂದುಬಿಟ್ಟಿದ್ದರು. ಕಾರು ಬಾಗಿಲಲ್ಲಿ ಬಂದು ನಿಂತೊಡನೆಯೇ ಗೌಡರ ಮೊಗವರಳಿತು. ಮನದಲ್ಲಿಯೇ "ನೂರು

ಎಕರೆ ಜಮೀನು ಮುಲಕಿ ಪೋಲೀಸ ಎರಡೂ ಗೌಡಕಿಗಳಿರುವ ಹುಡುಗ. ಕಾರ ತಕ್ಕೊಂಡು ಬರದೆ ಏನು ?" ಎಂದುಕೊಂಡರು. ಅದರಂತೆಯೇ ಜರದ ರುಮಾಲು ಸುತ್ತಿಕೊಂಡು, ನಡುವಿನ ಚೌಕಿನ ವರೆಗೆಯೇ ಹೋಗಿ ಸ್ವಾಗತಿಸಿದರು ಗೌಡರು. ಗಂಡಿನ ಪಕ್ಷದವರಲ್ಲವೇ ಅವರು ?

ಹೊಸ ಕಾಲದ ಹುಡುಗೆ ಬೆಡಗಿನಿಂದಿಳಿದು, ತಲೆತಗ್ಗಿಸದೆ ಸುತ್ತಲೂ ನಿರೀಕ್ಷಿಸುತ್ತ ಕರದಲ್ಲಿ ಕರವಸ್ತ್ರವೊಂದನ್ನು ಹಿಡಿದು ವೈಚಳಿ ಬಿಟ್ಟು ಒಳಗೆ ಬರುವುದನ್ನು ಕಂಡು ಗೌಡರ ಮುಖ ಮುದುರಿತು. ಅವಳನ್ನೇ ಒಂದು ಕ್ಷಣ ದಿಟ್ಟಿಸಿ ನೋಡಿದರು. ಹುಡುಗೆಯ ವಯಸ್ಸು ಹದಿನಾರೋ ಹದಿನೇಳೋ ಇರಬಹುದು. ಆದರೂ ನವಯುವ್ವನವು ಹೊರಹೊಮ್ಮಿತ್ತಿಲ್ಲ. ಹಳ್ಳಿಯ ಹುಡುಗೆಯರಂತೆ ನಡಿಗೆ ಸಹಜ, ದೃಷ್ಟಿ ನಿರ್ಮಲ, ತೀಕ್ಷ್ಣ, ಚಪಲ, ಮೈಯಲ್ಲಿ ಸ್ವಲ್ಪವೂ ಜಡತೆಯಿಲ್ಲ.

ಕೂಡಲೆ ಗೌಡರು ಮನದಲ್ಲಿ 'ಮರ್ಯಾದೆಯಸ್ಥರ ಹುಡಿಗೆಯಲ್ಲ' ಎಂದು ನಿಶ್ಚಯಿಸಿದರು. ಮಗನ ಮದುವೆಯ ವಿಷಯಲ್ಲಿ ಗೌಡನದೊಂದು ವಿಶಿಷ್ಟ ಅಭಿಪ್ರಾಯವಿತ್ತು. ತಮ್ಮ ಜೋಡಿಯವರ—ಅದರಲ್ಲೂ ತಮಗಿಂತ ಕೊಂಚ ಉತ್ಪನ್ನ ಕಡಿಮೆ ಇದ್ದವರ—ಹುಡುಗೆಯರನ್ನು ಅವನು ನೋಡಲಿಕ್ಕೂ ಕೂಡ ಹೋಗುತ್ತಿರಲಿಲ್ಲ. ಅಲ್ಲದೆ ತನ್ನ ಮನೆ ಸೇರುವ ಹೆಣ್ಣು ತಲೆತಗ್ಗಿಸಿಕೊಂಡು ಬರಬೇಕೆಂಬುದು ಅವನ ಇಷ್ಟ. ಸೊಸೆ ಖುದ್ದ ಗೌಡನ ಮಗಳಾಗಿರದಿದ್ದರೂ ಒಂದು ವೇಳೆ ನಡೆದೀತು. ಆದರೆ ಸಾಕಷ್ಟು ಸಂಪತ್ತುಳ್ಳವರೂ ಗೌಡರ ಮನೆತನದಲ್ಲಿ ಹುಟ್ಟಿ ಅಧಿಕಾರದ ಸ್ಥಾನದಲ್ಲಿದ್ದವರೂ ಆಪ್ತರಿರಬೇಕು. ಎಂಬುದು ಅವನ ನಿರೀಕ್ಷೆ. ಯಾರಿಂದ ಕಡೆತನಕ ಪ್ರಯೋಜನವಾಗುವದೋ ಅವರನ್ನೇ ಹಿಡಿಯಬೇಕೆಂದು ಅವನ ಅಭಿಲಾಷೆ. ಮನೆಯಲ್ಲಿ ಧಾರ್ಮಿಕ ಪೂಜೆ ಪುನಸ್ಕಾರಗಳೆಲ್ಲ ಬಲ್ಲವಳಿರಬೇಕು. ಕಲಿತವಳಿರಬೇಕೆಂದೇನೂ ಅವನ ಹಟವಿರಲಿಲ್ಲ.

ಹುಡುಗೆಯನ್ನು ಕಾರಿನೊಳಗಿಂದ ಇಳಿಯುವಾಗಲೇ ಗೌಡನು ನೋಡಿದ್ದನು. ಆದರೂ ಪರಿಪಾಠದಂತೆ ಒಮ್ಮೆ ನೋಡಬೇಕಾಯಿತು. "ಈಗೆರಡು ವರ್ಷಗಳ ಹಿಂದೆ ಕನ್ನಡ ಮುಲ್ಕಿ ಆಗಿದೆ. ಈಗ ಇಂಗ್ಲೀಷ

ಐದನೆಯ ತರಗತಿಯಲ್ಲಿ ಓದುತ್ತಾಳೆ'' ಎಂದು ಕನ್ಯೆಯ ತಂದೆ ಆದ ಗೌಡರ ಕಡೆಗೆ ಹೊರಳಿ ಹೇಳಿದರು.

" ಹೆಣ್ಣು ಮಕ್ಕಳಿಗೆ ಇಷ್ಟೇನು ಅವಶ್ಯ? ಹೆಚ್ಚಾಗಿ ಹೋಯಿತು." ಎಂದು ಗೌಡರು ಹೇಳಲು ಅಷ್ಟಕ್ಕೇ ಇವರ ಮನೋಭಾವವನ್ನು ತಿಳಿದು ಅವರುಸುಮ್ಮನಾದರು. ಆದರೆ ಜೊತೆಗೆ ಬಂದ ಇನ್ನೊಬ್ಬ ತರುಣ ಸುಮ್ಮನಿರದೆ,

" ಸುಲೋಚನೆಗೆ ಹಾಡಲಿಕ್ಕೂ ಬರುವುದು. ಪೇಟಿ ಇದ್ದರೆ ತರಸರಿ ಬೇಕಾದರೆ!" ಎಂದು ಹೇಳಿಯೇ ಬಿಟ್ಟ. ರಾವಸಾಹೇಬನ ಕಡೆಗೆ ನೋಡುತ್ತ,

ಸುತ್ತಲೂ ಸ್ವಚ್ಛವಾಗಿ ಸುಣ್ಣ ಸವರಿದ ಗೋಡೆಗಳು. ಅವುಗಳ ಮೇಲೆ ಆಪ್ತರು ಬರುವರೆಂದು ಅಚ್ಚುಕಟ್ಟಿನಿಂದ ಭಾವಚಿತ್ರಗಳನ್ನು ಹಚ್ಚಿದರು. ಭಾವೀ ಆಪ್ತರನ್ನು ಕೂಡಿಸುವ ಸ್ಥಳದ ಎದುರಿಗಿನ ಗೋಡೆಯ ಮೇಲೆಯೇ ಸರಟೀಫಿಕೇಟುಗಳಿಂದ ಅಲಂಕೃತವಾದ ಗೌಡನ ತಂದೆಯ ಭಾವಚಿತ್ರ ತೂಗುಹಾಕಲ್ಪಟ್ಟಿದ್ದಿತು. ಮನೆ ತುಂಬ ಊದಬತ್ತಿಯ ಘಮುಘಮು ವಾಸನೆ ಇಡುಗಿತ್ತು. ದಿನ ಬಳಕೆಗೆ ಎಂದೂ ಉಪಯೋಗಿಸದ ಕುತನಿಯ ಮೆತ್ತೆಗಳು ಜಮುಖಾನೆಯ ಮೇಲೆ ದೊಡ್ಡಸ್ತನದ ಪ್ರತೀಕವಾಗಿ ಕುಳಿತಿದ್ದುವು. ರಾವಸಾಹೇಬ ತೆಕ್ಕೆಗೆ ಆನಿಸಿ ಕುಳಿತಿದ್ದ. ಉಟ್ಟದ್ದು ಶುಭ್ರ ಫಿನೆ ಮದ್ರಾಸರಾಯಿಜ್ಞ ದೋತರ, ತೊಟ್ಟಿದ್ದು ಶಿಲ್ಕಿನ ಶರಟು, ಕೊರಳಲ್ಲಿ ಒಂದು ಚಿಕ್ಕ ಲಾಕೆಟ್ಟು, ಕೈಯಲ್ಲಿ ಬಂಗಾರದ ಜೇನಿನ ಚಿಕ್ಕ ಗಡಿಯಾರ, ಆಪ್ತರು ಬರುವದಕ್ಕಿಂತ ಸ್ವಲ್ಪ ಮುಂಚೆ ತಂದೆ ಮಕ್ಕಳ ವಾದ ನಡೆದಿತ್ತು.

ಗೌಡರು, " ನೊಡಲಿಕ್ಕೆ ಬರುವರು, ಜರದ ರುಮಾಲು ಸುತ್ತು. ಕೋಟು ಹಾಕಿಕೋ" ಎಂದು ಅನ್ನುವರು.

" ಏನೊಲ್ಲೆ. ಸ್ವಚ್ಛ ಬಾಚಿಕೊಂಡು ಬೈತಲೆ ತೆಗೆದು ದಿನ ಮನೆಯಲ್ಲಿರುವಂತೆಯೇ ಇರುವವ" ಎಂದು ರಾವಸಾಹೇಬನ ಮನೀಷೆ.

ಕೊನೆಗೆ ಅಜ್ಜಿಯ ಒತ್ತಾಯಕ್ಕೆ ಟೊಪ್ಪಿಗೆ ಹಾಕಿಕೊಂಡು ಕುಳಿತಿದ್ದ ಮಾತ್ರ. ಆದರೂ ಹುಡುಗೆ ಎದುರಿಗೆ ಬಂದು ಕೂಡಲು ಬೆವರು ಒರಸಿ.

ಕೊಳ್ಳುವ ನೆವದಿಂದ ಟೊಪ್ಪಿಗೆ ತೆಗೆದು ಇಡದೆ ಬಿಡಲಿಲ್ಲ ಶ್ರೀವಿಯಿಂದ.

ಆದಗೌಡನ ಇಷ್ಟೆ ಇರದಿದ್ದರೂ ಕೂಡ ರಾವಸಾಹೇಬನ ಒಳಬಯಕೆಯಂತೆ ಸುಲೋಚನೆಯು ಸಿನೇಮಾದೊಳಗಿನ ದೇಶಭಕ್ತಿಪರವಾದ ಒಂದು ಪದ ಹಾಡಿದಳು. ಜೊತೆಗೆ ಸ್ವರಪೆಟ್ಟಿಗೆ ಇಲ್ಲದುದರಿಂದ ಅಷ್ಟಕ್ಕೆಯೇ ತಡೆದಳು ಆಮೇಲೆ ಉಡಿಯಲ್ಲಿ ಫಲ ಹಾಕಲು ಎದ್ದು ಎಲ್ಲರಿಗೂ ನಮಸ್ಕಾರ ಮಾಡಿ ಒಳಗೆ ಹೋದಳು.

ಇದೆಲ್ಲ ಆಗುವ ವರೆಗೆ ಜಾಧವ ಮಾಸ್ತರರು ಅಲ್ಲೇ ಇದ್ದರು. ಇನ್ನೂ ಗೌಡರ ಮನೆಯಲ್ಲಿ ಆಪ್ತರ ಊಟಕ್ಕೆ ಅವಕಾಶವಿತ್ತು. ಗೌಡರ ಮನೆಯು ರಾಜೋಪಚಾರವಾಗಬೇಕಲ್ಲ. ಅದರಲ್ಲೂ ಆ ಊಟದ ಮೇಲಿಂದಲೇ ವರದಕ್ಷಿಣೆಗೆ ಕೈಸಡಿಲುಗೊಳ್ಳಬೇಕು ಬಂದವರದು. ಅಲ್ಲಿಯ ವರೆಗೆ ಹೇಗೂ ಹುಡಿಗೆಯ ತಂದೆ ವಿದ್ಯಾಧಿಕಾರಿಗಳಿರುವರು. ಕಾರೂ ಇದೆ. ಹಾಯ್ ಸ್ಕೂಲು ನೋಡಿಕೊಂಡು ಬಂದರೆ ಒಳಿತು, ಎಂದು ಮಾಸ್ತರರು ಮಾತೆತ್ತಿದರು. ಅದರಂತೆ ಎಲ್ಲರೂ ಹೊರಡಲು ಸಿದ್ಧರಾದರು. ರಾವಸಾಹೇಬನನ್ನೂ ಜೊತೆಯಲ್ಲಿ ನಡೆಯಿರೆಂದು ಆಪ್ತರೆ ಕರೆದರು. ಅವನೂ ಉಬ್ಬಿನಲ್ಲಿ ಹೋಗಿ ಕಾರು ಹತ್ತಿದ. ಗೌಡರಿಗೂ ಸಂತಸವಾಯಿತು. 'ಅವರ ಹೆಣ್ಣನ್ನು ಮಾಡಲಿ' ಬಿಡಲಿ, ಕಾರು ತಕ್ಕೊಂಡು ತನ್ನ ಮಗನಿಗೆ ಹುಡಿಗೆ ತೋರಿಸಲು ಬಂದಿದ್ದರೆಂಬ ಸಂಗತಿ ಊರ ಜನರಿಗಾದರೂ ತಿಳಿಯುವದಲ್ಲ' ಎಂದು, ಅವರ ಪ್ರಸನ್ನತೆಯನ್ನು ಕಂಡು ಬಂದವರು ಏನು ಭಾವಿಸಿದರೋ ಏನೋ ಅವರ ಮುಖಗಳೂ ಅರಳಿದುವು. ಕಾರು ಹೊರಡಲು ಸಿದ್ಧವಾದೊಡನೆಯೇ ತಂದೆ ಒಂದೇ ಮಾತು ಕರೆದುದಕ್ಕೆ ಸುಲೋಚನೆಯೂ ಹೋಗಿ ಕಾರಿನಲ್ಲಿ ರಾವಸಾಹೇಬನ ಹತ್ತರ ಕುಳಿತಳು. ಆಗಂತೂ ಗೌಡರು ಮುಖದಿರುವಿದರು. ಆ ಅಸಹ್ಯತೆಯ ಭರದಲ್ಲಿ ಮನೆಯೊಳಗೆ ಬಂದು "ಸಣ್ಣಕ್ಕಿ ಅನ್ನ ಮಾಡಬೇಡಿರಿ, ಆಗೋದಿಲ್ಲ ಹೋಗೋದಿಲ್ಲ ಬಂದವರಿಗೆಲ್ಲ ಹೀಗೆ ಸಣ್ಣಕ್ಕಿ ಎಲ್ಲಿಂದ ತರುವುದು ?" ಎಂದು ಅಡಗಿಯ ಮನೆಯಲ್ಲಿ ಹೋಗಿ ಹೆಂಗಸರಿಗೆ ಸೂಚಿಸದೆ ಇರಲಿಲ್ಲ.

ಮುರದೇವಿಗೆ ಹುಡಿಗೆಯ ರೂಪೇನೋ ಒಪ್ಪಿಯೂ ಒಪ್ಪದಂತಿತ್ತು. ಮೋಟಾರಿನಲ್ಲಿ ರಾವಸಾಹೇಬನ ಹತ್ತರವೇ ಹೋಗಿ ಕುಳಿತುಕೊಂಡ

ಳೆಂಬುದನ್ನು ಕೇಳಿ, ಹುಡಿಗೆಗೆ ಮಾನ ಮರ್ಯಾದೆ ಇಲ್ಲ. ಎಂದು ಕೊಂಡಳು.

ಗಂಗವ್ವ ಮನದಲ್ಲಿ ಈ ಹುಡಿಗೆಗೆ ವಯಸ್ಸಾಗಿದೆ. ಆದರೂ ಸರಿಯಾಗಿ ಯಾರೂ ಬದ್ಧಿ ಕಲಿಸಿಲ್ಲ. ಮನೆಯಲ್ಲಿ ತಾಯಿ ಇರಲಿಕ್ಕಿಲ್ಲವೇನೋ! ಅಂದುಕೊಂಡಳು. ಅವಳಿಗೆ ಹುಡಿಗೆಯ ಪೂರ್ವೋತ್ತರಗಳನ್ನೆಲ್ಲ ಕೇಳಿಕೊಳ್ಳಬೇಕೆಂದು ಬಹು ಆಶೆಯಿತ್ತು. ಆದರೆ ಅವಳೂ ಕಾರಿನಲ್ಲಿ ಕುಳಿತು ಸಾಲೆಗೆ ಹೋದಳೆಂದು ತಿಳಿದು ನಿರಾಶೆಗೊಂಡಳು. ಮನಸ್ಸೂ ತೆಗೆದಳು. ಸರಸ್ವತಿಗಂತೂ ಹೀಗೆ ಓರೆ ಬೈತಲೆ ತೆಗೆದುಕೊಳ್ಳುವ ಸೊಸೆಯು ಸೇರುತ್ತಿರಲಿಲ್ಲ.

ಹೊರಗಿರುವಾಗಲೇ ಗೌಡರ ವರದಕ್ಷಿಣೆಯ ಹಾರಿಕೆ ಐದು ಸಾವಿರವರೆಗೂ ಇದೆಯೆಂಬುದನ್ನು ಅಪ್ಪರು ಮಾಸ್ತರರಿಂದ ತಿಳಿದುಕೊಂಡರು ಆಗ.

" ಮನೆಯಲ್ಲಿ ಅಡಿಗೆಯ ಆಳು ಇದೆಯೇ ? " ಎಂದರು ಅಪ್ಪರು.

" ಇಲ್ಲ. "

" ಇಷ್ಟು ವರದಕ್ಷಿಣೆ ಕೊಟ್ಟು ಇವರ ಮನೆಯಲ್ಲಿ ಅಡಿಗೆ ಮಾಡಲಿಕ್ಕೆ ಮಗಳನ್ನು ಕಳಿಸಲು ನಾವೇನು ಹುಚ್ಚರಿಲ್ಲ ! "

ರಾವಸಾಹೇಬನಿಗೆ ವರದಕ್ಷಿಣೆ ಏನೂ ಬೇಕಿರಲಿಲ್ಲ. ಸಂಲೋಚನೆಯ ಕೈಹಿಡಿಯುವುದೇ ಒಂದು ಭಾಗ್ಯವೆಂದು ತಿಳಿದಿದ್ದ. ಅಂತೇ ಒಂದೆರಡು ದಿನಗಳಲ್ಲಿ ಗೆಳೆಯರ ಮುಂದೆ ಹೀಗೆ ಹೇಳಿದ.

" ನನಗೆ ಅವಳ ವಿಷಯಕ್ಕೆ ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ. ಅಷ್ಟೇಕೆ ಅವಳು ಯಾವ ಬಣ್ಣದ ಒಟ್ಟೆಯನ್ನು ಯಾವ ರೀತಿಯಲ್ಲಿ ಉಟ್ಟಿದ್ದಳೆಂಬುದನ್ನು ಹೇಳಲೂ ನನಗೆ ಅಸಾಧ್ಯ. ಅವಳ ಉಡಿಗೆ ತೊಡಿಗೆಗಳಲ್ಲಿ ನನ್ನನ್ನು ತನ್ನ ಕಡೆಗೆ ಸೆಳೆಯುವಂಥ ಆಕರ್ಷಕತೆ ಇತ್ತು. ಅವಳು ಸುತ್ತುಮುತ್ತಲಿನವರಿಗಿಂತ ಮೇಲಿನಳು. — ಮಲ್ಲಿಗೆಯ ಮೊಗ್ಗಿನ ಹಾಗೆ—ತಿಳುವಾದ ಯಾವ ಬಳ್ಳಿಯ ಕುಡಿಯಲ್ಲಿ ಅರಳಿದ್ದಳೋ ಅದನ್ನೇ ಅತಿಕ್ರಮಿಸಿ ಅರಳಿದಂತಿದ್ದಳು. ಅವಳ ಮಾತುಕತೆ, ಹಾಸ್ಯ ನಗೆಗಳಿಗೆ ಕೊನೆ ಮೊದಲಿರಲಿಲ್ಲ. ಅವಳ ಸುಧಾಕಂಠದ ಮಾಯೆಯ ಕೋಲಿನಿಂದ

ಮುಟ್ಟಿದ್ದೆಲ್ಲ ಸುವರ್ಣವಾಗುತ್ತಿದ್ದಿತು. ಸುಲೋಚನೆಯ ಅಂಗಾಂಗಗಳು–ಮನಸ್ಸು–ಕಣ್ಣು ಎಲ್ಲವೂ ಒಂದು ಜೀವಕಳೆಯಿಂದ ತುಂಬಿದ್ದಿತು. ಅವಳ ಉತ್ಸಾಹದಿಂದ ತುಂಬಿದ ಸಹವಾಸವು ಅಂದಿನ ಕಾರಿಗೆ ಹೆಚ್ಚು ವೇಗ ಕೊಟ್ಟಿದ್ದಿತು. ಹೆಚ್ಚಿಗೇನು? ನನ್ನ ಮದುವೆಗಾಗಿ ಈಗಾಗಲೇ ಮೂವತ್ತೆರಡು ಹುಡುಗೆಯರು ಬಂದು ಹೋದರು. ನೋಡಿದೆ, ಅವರೆಲ್ಲರಲ್ಲೂ ಮೇಲಿನವಳು! ಆದರೆ.... " ಎಂದು ನಿಟ್ಟುಸುರುಗರೆದು ಮಾತು ಮುಗಿಸಿದ್ದ.

ಒಳ್ಳೆಯ ಮನೆತನ. ಅಧಿಕಾರ ಸಂಪತ್ತುಗಳೆರಡೂ ಇದ್ದುವು. ಅದರಿಂದ ರಾವಸಾಹೇಬನಿಗೆ ಹುಡುಗೆಯರ ಸಂತೆಯೇ ನೆರೆಯುತ್ತಲಿದ್ದಿತು. ನೋಡಲಿಕ್ಕೆ ಕರೆಯುವವರೂ ಅಷ್ಟೇ. ತಮ್ಮ ಹುಡುಗಿಯರ ಭಾವಚಿತ್ರಗಳನ್ನು ಕಳಿಸುವವರೂ ಅಷ್ಟೇ. ಆದರೂ ಗೌಡರ ವಿಶಿಷ್ಟ ದೃಷ್ಟಿಯಿಂದ ಯಾವದೂ ಹೊಂದಲಿಲ್ಲ. ಬರುವ ಹುಡುಗೆಯರ ಸಂಖ್ಯೆ ಬೆಳೆದಂತೆ ಇವರ ಚಿಕಿತ್ಸೆ, ವರದಕ್ಷಿಣೆಯ ಮಾನಗಳು ಬೆಳೆಯುತ್ತಲೇ ನಡೆದಿದ್ದುವು. ಹಗಲಿರುಳೂ ಮನೆಯಲ್ಲಿ ಕುಲಕರ್ಣಿಯ ಹತ್ತರ 'ಆ ಹುಡಿಗೆ ಹೀಗೆ ಈ ಹುಡಿಗೆ ಹಾಗೆ' ಎಂಬ ವಿವರಣೆಯನ್ನೇ ಗೌಡರ ಬಾಯಿಂದ ಕೇಳಬೇಕು. ತಾವು ಹೆಣ್ಣು ಹೆತ್ತಿದ್ದು, ಅವಳಿಗೆ ವರಪಕ್ಷದವರು ಹೀಗೆ ಹೇಳುತ್ತಿದ್ದರೆ ತಿಳಿಯುತ್ತಿದ್ದಿತವರಿಗೆ!

ಈ ವಧು ನಿರೀಕ್ಷಣೆಯ ಸುಗ್ಗಿಯ ಕಾಲದಲ್ಲಿ ಗೌಡರಿಗೆ ಒಂದು ಕಾಗದ ಬಂದಿತು. ಮುಂಬಯಿ ಕಾಲೇಜ ಪ್ರಿನ್ಸಿಪಾಲರಿಂದ. ಪ್ರಿನ್ಸಿಪಾಲರು 'ರಾಜಕಾರಣದಲ್ಲಿ ಭಾಗ ವಹಿಸುವ ವಿದ್ಯಾರ್ಥಿಗಳ ಹೊಣೆಗಾರಿಕೆ ಅವರವರ ಪಾಲಕರ ಮೇಲೆಯೇ' ಎಂದು ತಿಳಿಸಿದ್ದರು. ಅಜಿತನ ವಿಷಯಕ್ಕೆ ಇದನ್ನಲ್ಲದೆ ಇನ್ನೇನನ್ನು ತಿಳಿಸುವರು? ಅಂಚೆಯಾಳು ಕಾಗದ ತಂದು ಕೊಟ್ಟಾಗ ಜಾಧವ ಮಾಸ್ತರರೂ ಅಲ್ಲೇ ಇದ್ದರು. ಇಂಗ್ಲೀಷಿನಲ್ಲಿಯೇ ಬರವಣಿಗೆ ಇದ್ದುದರಿಂದ ಅವರ ಕೈಯಲ್ಲಿಯೇ ಇತ್ತರು ಗೌಡರು. ಇಂಗ್ಲೀಷ ಭಾಷೆ ಅವರಿಗೆ ಅಪರಿಚಿತವಾದುದರಿಂದ ಅನಿವಾರ್ಯವಾಗಿ ಮಾಸ್ತರರಿಗೆ ತೋರಿಸಬೇಕಾಯಿತು. ಮಾಸ್ತರರು ಓದಿಕೊಂಡು ಸ್ವಲ್ಪ ಹೊತ್ತು ಸ್ತಬ್ಧರಾದರು. ಅಜಿತನ ಸ್ವಭಾವ ಮೊದಲಿ

ನಿಂದಲೂ ಅವರಿಗೆ ಗೊತ್ತು. ಅವರೇ ನೆಟ್ಟ ಸಸಿ. ಬೆಳೆದು ಮರ ವಾಗುತ್ತಲಿತ್ತು.

" ಏನಿದೆ ? " ಎಂದರು ಗೌಡರು

" ಏನಿಲ್ಲ; ಹುಡುಗನ ಮನೆತನದ ಸ್ಥಿತಿಗತಿ ಹೇಗಿದೆ ಕೇಳಿದ್ದಾರೆ. ನಾಲ್ಕೈದು ದಿನಗಳಲ್ಲಿ ಬರೆದು ತಿಳಿಸೋಣ " ಎಂದು ಏನೋ ಬುರುಡೆ ಯುರುಳಿಸಿದರು.

" ಅದೇಕೊ ? " ಸಾಶಂಕದೃಷ್ಟಿಯಿಂದ ಕೇಳಿದರು ಗೌಡರು.

" ಕಾಲೇಜಿನಲ್ಲಿ ಸ್ಕಾಲರಶಿಪ್ಪು ಸಿಗತಿರಬೇಕು. "

ಯೋಚನೆಯಲ್ಲಿದ್ದರು ಮಾಸ್ತರರು. ಅಜಿತನಿಗೇ ತಾನೊಂದು ಕಾಗದ ಬರೆದರಾಯಿತು. ಎಲ್ಲ ಸರಿಹೋಗುವುದು. ಇವರಿಗಾದರೂ ನಿಜ ವಿಷಯ ತಿಳಿಸುವ ಕಾರಣವಾದರೂ ಏನು ? ಎಂದು ಭಾವಿಸಿದರು.

" ಉತ್ಪನ್ನ ಸಾಧಾರಣವೆಂದು ತಿಳಿಸಿ ಬಿಡಿರಿ! " ಎಂದರು ಗೌಡರು.

" ಹೂಂ! " ಅನ್ನುತ್ತ ಕಾಗದವನ್ನು ಜೇಬಿಗೆ ಇಳಿಸಿದರು ಮಾಸ್ತರರು.

ಮಗನ ಮದುವೆಯ ಗೊಂದಲದಲ್ಲಿ ಆ ಕಾಗದಕ್ಕೆ ಉತ್ತರ ಬರೆ ಯಿಸುವ ನೆನಪು ಗೌಡರಿಗೆ ಉಳಿಯಲಿಲ್ಲ. ನಗಾರೆಯ ಸಪ್ಪಳದಲ್ಲಿ ವೀಣೆಯ ಸ್ವರ ಅಡಗಿಹೋಗುವಂತೆ ಸ್ಮೃತಿಪಥದಿಂದ ನುಸುಳಿಹೋಯಿತು. ಮಾಸ್ತರರಿಗೂ ನೆನಪು ಮಾಡುವುದು ಬೇಕಿರಲಿಲ್ಲ.

ಮೊನ್ನೆ ಬೆಳಗಾಂವಿಗೆ ಹೋಗಿ ಹುಡಿಗೆಯೊಂದನ್ನು ನೋಡಿ ಬಂದಿದ್ದಾರೆ. ಗೌಡರಿಗೆ ಎಲ್ಲ ಬಗೆಯಿಂದಲೂ ಒಪ್ಪಿಗೆಯಾದಂತಿದೆ, ಈ ಮನೆತನ. ಅಪ್ಪರು ಬಹು ಸಿರಿವಂತರಂತೆ. ಅದರಲ್ಲೂ ಅವರೂ ಒಂದು ಹಳ್ಳಿಯ ಗೌಡರ ಮನೆತನದವರೇ. ಹಾಲೂ ಸಕ್ಕರೆ ಬೆರಸಿ ದಂತಾಯಿತು. ಮನೆಯಲ್ಲಿ ವ್ರತ ನಿಯಮ ಮಡಿಗಳೂ ಬಹಳಂಬುದನ್ನು ಆದಗೌಡನೇ ಸ್ವತಃ ಕಂಡಿದ್ದನು. ಅಲ್ಲದೆ ಊರಲ್ಲಿಯೂ ನಾಲ್ಕು ಜನ ರಿಗೆ ಬೇಕಾದವರು. ಕಲೆಕ್ಟರರವರೆಗೂ ಅವರ ಮಾತು ನಡೆಯುವದು. ನಮ್ಮ ಹುಡುಗನಿಗೆ ತಿಳವಳಿಕೆ ಕಡಿಮೆ. ನಾಳೆ ಕೆಲಸ ಮಾಡುವಾಗ ಒಂದಿಲ್ಲೊಂದು ಪ್ರಸಂಗದಲ್ಲಿ ಅಪ್ಪರ ಉಪಯೋಗ ಬೀಳುವದು.

ಎಂದು ಗೌಡರು ಒಪ್ಪಿದಂತೆಯೇ ಮಾಡಿ ಬಂದಿದ್ದರು. ಇಂದು ಅವರು ವರನ ಮನೆಯನ್ನು ನೋಡಿಕೊಳ್ಳುವಿಕೆಯ ವಿಚಾರಕ್ಕೆ ಬರುವವರಿದ್ದರು. ಆ ವ್ಯವಸ್ಥೆಗಾಗಿಯೇ ಇಂದು ಗೌಡರು ಇಷ್ಟು ಮುಂಜಾನೆ ಚಾವಡಿಗೆ ಬಂದಿದ್ದರು.

ಇದೀಗ ಮೋಡಗಳ ಮರೆಗಿದ್ದ ಸೂರ್ಯ ಭುವಿಯನ್ನು ಇಣಿಕಿ ನೋಡು ವುದರಲ್ಲಿದ್ದ. ಎಳೆಬಿಸಿಲು—ಅದರಲ್ಲೂ ಮುಂಜಾನೆಯ ಮೃದು ಬಿಸಿಲು— ಎಷ್ಟು ಸೊಗಸಾಗಿರುವುದೆಂಬುದನ್ನು ಬೇರೆ ಹೇಳಬೇಕಿಲ್ಲ. ಆದರೆ ಚಾವಡಿಯಲ್ಲಿ ಓಲೇಕಾರನ ದಾರಿ ಕಾಯುತ್ತ ಕುಳಿತ ಗೌಡರಿಗೆ ಇದಾವು ದರ ಕಡೆಗೂ ಲಕ್ಷ್ಯವಿರಲಿಲ್ಲ. ಸುಳಿಗಾಳಿಯೊಂದು ಸುಳಿಯಿತು. ಚಾವಡಿಯೊಳಗಿನ ಧೂಳು ಮುಖದ ಮೇಲೆ ಹಾರಿತು. ಅಂತೇ ಅವರ ದೃಷ್ಟಿ ಹೊರಗೆ ಹರಿಯಿತು. ಒಮ್ಮೊಂದೊಮ್ಮೆ ಮೋಡಮುಸುಕಿದೆ. ಉದಯ ವಾಗುತ್ತಿರುವ ರವಿಯ ಕಿರಣಗಳು ಶಕ್ತಿ ಸಾಲದೆ ಮುದುರಿಕೊಳ್ಳುತ್ತಿವೆ. ಏನೋ ಧೇನಿಸುತ್ತ ಎಲೆ ಅಡಿಕೆಯ ಚೀಲದತ್ತ ಅವರ ಕೈ ಹೋಯಿತು. ಕೈಗೊಂದು ಕೆಲಸವಾದರೆ ಮನಸ್ಸಿಗೆಲ್ಲ ಸುಮ್ಮನೆ ಕೂಡುವದಾಗುತ್ತದೆ? ಅದೂ ವಿಚಾರದ ಸುರುಳಿಯೊಂದನ್ನು ಬಿಚ್ಚಿ ನೋಡಹತ್ತಿತು. 'ಈ ಮನೆತನ ಹೊಂದಿಬಿಟ್ಟಿತೆಂದರೆ ರಾವಸಾಹೇಬನಿಗೆ ಒಂದು ಒಳ್ಳೆಯ ಆಧಾರ ಮಾಡಿಕೊಟ್ಟಂತಾಯಿತು. ಏನು ಮನೆತನ ಬೆಳಗಾಂವಿಯ ಊರನ್ನೇ ವ್ಯಾಪಿಸಿ ಬಿಟ್ಟಿದ್ದಾರಲ್ಲ ಅವರು ! ನನ್ನ ಬೀಗ ದೊಡ್ಡ ಸಾವುಕಾರ. ಅವನ ತಮ್ಮ ದೊಡ್ಡ ವಕೀಲ. ಇನ್ನೊಬ್ಬ ವಸ್ತ್ರದಂಗಡಿಯ ಒಡೆಯ. ಅವರ ಮಕ್ಕಳಾದರೂ ಏನು ಸಾಮಾನ್ಯರೇ ? ಒಬ್ಬ ಕಾಲೇಜಿನಲ್ಲಿ ಕಲಿಯುತ್ತಿ ದ್ದಾನೆ. ಇನ್ನೊಬ್ಬ ಎಲ್ಲಿಯೋ ಸೊಲ್ಲಾಪುರ ಜಿಲ್ಹೆಯಲ್ಲಿ ಮಾಮಲೇದಾರ ನಂತೆ. ವಃ ನಾಳೆ ಅವನೇ ವರ್ಗಾಗಿ ನಮ್ಮ ತಾಲೂಕಿಗೆ ಬಂದರೆ ಊರಲ್ಲಿ ನನ್ನ ಮಗ ನಿಜವಾಗಿಯೂ ರಾವಸಾಹೇಬನೇ ಆಗುವ.' ಹೀಗೆ ಮುಂಬರುವ ಆಪ್ತರ ಕುರಿತು ಏನೇನೋ ವಿಚಾರಿಸುತ್ತಿರುವಲ್ಲಿ ಗೌಡರ ಹಸ್ತಕರಲ್ಲೊಬ್ಬ ಚಾವಡಿಯ ಮೆಟ್ಟಲುಗಳನ್ನೇರುತ್ತ—

"ನಮಸ್ಕಾರರೀ ! ಗೌಡರ ಸ್ವಾರಿ ಹರಿಹೊತ್ತಿಽ ಚಾವಡಿ ಕಡೆಗೆ ಬಂದಿತ್ತು ?" ಎಂದು ಕೇಳುತ್ತ ಅಲ್ಲೇ ದೂರ ಕಂಬದ ಹತ್ತರ ಕುಳಿತು

ಬಿಟ್ಟ.

"ಏನ ಸುಡತಿ ಬಾರಪ್ಪ. ಮನೆಗೆ ಇಂದಽ ನಮ್ಮ ರಾವಸಾಹೇಬನಿಗೆ ಹೆಣ್ಣ ಕೊಡಲಿಕ್ಕೆ ಬರ್ತಾರೆ. ಬೆಳಗಾಂವಿಯ ಕಡೆಯ ಗಾಡಿಗೆ ಸ್ಟೇಶನಕ್ಕ ಬಂಡಿ ಒಂದ ಹೂಡಿಸಿ ಕಳಸಬೇಕಂದರೆ ಹಳಬರು ಒಬ್ಬರೂ ಚಾವಡಿಯೊಳಗ ಇಲ್ಲ. ರೈತರ ಹೊಲಗಳಿಗೆ ಹೋದ ಮೇಲೆ ಬಂಡಿ ಎಲ್ಲೇದ ಸಿಕೀತು ?" ಎಂದು ಎಲೆಯನ್ನು ಮಡಚಿ ಬಾಯಲ್ಲಿ ಹಾಕುತ್ತ ಹೇಳಿದರು.

"ಈಗ ಬಂದಾರ ತಗೋರಿ ಸೂ— ಮಕ್ಕಳ. ಮೋಡ ಆಗೇದ. ಇನ್ನಽ ಹೊತ್ತ ಉದಯ ಆಗಿಲ್ಲಂತ ಮಲಗಿದಾರೋ ಯಾರಿಗೆ ಗೊತ್ತು?"

"ಹರಿಹೊತ್ತ ನಾ ಚಾವಡಿಯ ಕಡೆಗೆ ಬಂದಾಗ್ಗೆ ಒಂದ ಆಂಗ್ಯೆಯಷ್ಟೇ ಮೋಡದ ತುಣುಕಿತ್ತು ನೋಡು ಭೀಮಾ."

"ಮೋಡ ಚಲೋ ಅಲ್ಲರೀ, ನಾಲ್ಕ ಹನಿ ಉದುರಿದು ಅಂದರೆ ಹತ್ತೀ ಬೆಳಿ ಎಲ್ಲಾ ಹಾಳಾಗಿ ಹೋಗ್ತದರೀ" ಎಂದು ಅಲ್ಲೇ ಬಿದ್ದ ಕಸಬರಿಗೆಯ ಕಡ್ಡಿಯೊಂದನ್ನು ಮುರಿದು ಚಿಲುಮೆಯಲ್ಲಿ ಸೇರಿಸುತ್ತ ಹೇಳಿದ ಭೀಮ.

ಗೌಡರ ಮನದಲ್ಲಿ ಮುಂದೆ ಬರಬಹುದಾಗಿದ್ದ ಹತ್ತಿಯ ಬೆಳಿಗಿಂತ ಇಂದೇ ಬರಲಿರುವ ಆಪ್ತರ ವಿಚಾರವೇ ಹೆಚ್ಚು ಸುತ್ತುತ್ತಿದ್ದಿತು.

"ಇಂದ ಬರುವ ಆಪ್ತರು ಬಹಳ ಸಾವಕಾರ ನೋಡೋ! ಬೆಳಗಾಂವಿ ಇಂಥಾ ದೊಡ್ಡ ಊರಂದರೂ ಎಲ್ಲಾನೂ ಅವರ ಕೈಯೊಳಗಽ. ಈ ಮನೆ ದೊರೆಯಿತಂದರೆ ಕಲೆಕ್ಟರ ಮಾಮಲೇದಾರ ಎಲ್ಲಾರೂ ಬರುವರೇ ನೋಡು, ನಮ್ಮ ರಾವಸಾಹೇಬನ ಮದಿವೆಗೆ." ಮುಖವರಳಿಸಿ ಹೇಳಿದರು ಗೌಡರು.

"ಅಂತೂ ಗುದಮುರಿಗೆ ಹತ್ತಿತ ಅನ್ನರಿ ನಿಮ್ಮ ಸುತ್ತ ?" ಚಿಲಿಮೆಯಲ್ಲಿ ತಂಬಾಕ ತುಂಬುತ್ತ ಭೀಮ ಕೇಳಿದ.

ಗೌಡ ಮೋರೆ ಕಿವುಚುತ್ತ ಎದ್ದು ಉಗುಳಿ ಬಂದು "ಗುದಮುರಿಗೆ ಎತರದೋ ಮಳ್ಳ ? ನಾವು ವರಪಕ್ಷದವರು. ವಧುವಿನ ಮನೆಯೊಳಗೇ ಮದಿವೆ ಆಗೋದ. ಅವರ ಓಡಾಡಲಿ ಬಿಡಲಿ ನಮ್ಮದೇನ ಹೋಳಿಗೆ.

ಹೊಡೀತ ತಿರಗೋದು" ಎಂದು ತಿಳಿಸಿಕೊಡಹೋದರು.

"ಹಾಂಗಾದರ ನಮ್ಮ ಹೋಳಿಗೆ ತಪ್ಪಸತೀರಿ ಬಿಡರಿ ಗೌಡರ ನೀವೂ?" ಬಾಯಿಂದ ಹೊಗೆ ಹೋಗುತ್ತಿರಲು ಭೀಮ ನುಡಿದ.

"ಅದ್ಯಾಕೋ; ಬರುವಿಯಂತೆ ನೀನೂ? ನಿನ್ನ ಬಿಟ್ಟ ಗೌಡರಿಗೆ ಹೋಳಿಗೆ ಹೇಗೆ ಸವೀ ಹತ್ತತಾವೋ? ಮಧ್ಯಾಹ್ನದೊಳಗ ಬಾ ಅಲ್ಲ ಮನೆಯ ಕಡೆಗೆ. ಆಪ್ತರೂ ಬರ್ತಾರ; ನಿಶ್ಚಯ ಆಗೋದ ಅದ ಇಂದ." ಆಪ್ತರು ಬಂದಾಗ ಕೈಯಲ್ಲೊಂದು ಆಳನ್ನು ಹಿಡಿಯುವ ಬಲೆ ಬೀಸಿದರು, ಮುಂದೆ ಮದುವೆಗೆ ಒಯ್ಯುವ ಆಶೆ ಬೇರೆ.

ಹಾಗೆಯೇ "ಹಳಬರ ಸತ್ಯಾ ಇದ್ದರ ಇತ್ತ ಕರೆ." ಎಂದು ಆಜ್ಞಾಪಿಸಿದರು.

ಭೀಮ ತಂಬಾಕು ಸೇದಿ ಕೆಮ್ಮುತ್ತ ಎದ್ದು ಹೋದ. ಗೌಡ ಮತ್ತೆ ವಿಚಾರಕ್ಕೆ ಒಳಗಾದ. 'ರಾವಸಾಹೇಬ ಮುಂದ ಕಲಿತಿದ್ದರ ನೆಟ್ಟಗ ಆಗತಿತ್ತು. ಇಂತಹ ನೆಂಟರ ಲಾಭ ಹೊಂದಲಿಕ್ಕೆ ಬರತಿತ್ತು. ಆದರೆ ಏನು ಮಾಡುವುದು ಹುಡುಗನಿಗೆ ತಿಳಿಯಲಿಲ್ಲ? ಇರಲಿ ಬಿಡು. ಕಲಿಯದಿದ್ದರೇನಾಯ್ತು? ಅಷ್ಟೇ ಇಂಗ್ಲೀಷ ಮಾತಾಡುವಷ್ಟ ಆಗೇದ. ಇನ್ನೂ ಎರಡೂ ಹೊಲ ಮನೆ ಕೂಡಿ ಇರುವಾಗನೂ ಮತ್ತ ಹತ್ತೆಂಟ ಕೂರಿಗೆ ಆಡವಿ ಕೊಂಡಬಿಡತೇನೆ. ಒಬ್ಬ ಜಮೀನದಾರನ ಮಗನಂತೆ ತಿಂದ ತಿರಗಾಡಲಿ ಹುಡುಗ ಎಂಬ ವಿಚಾರದ ಗಾಳಿಗೆ ಗೌಡರ ತಲೆದೂಗುತ್ತಿದ್ದಿತು. ಹೀಗೆ ಎಷ್ಟು ಹೊತ್ತು ಕಳೆಯಿತೋ ಏನೋ ಅವರಿಗೆ ಅತ್ತ ಲಕ್ಷ್ಯವಿರಲಿಲ್ಲ.

ಅಷ್ಟರಲ್ಲಿ ಪೋಲೀಸ ಠಾಣೆಯ ಹವಾಲದಾರನೊಬ್ಬ "ಸಲಾಂ"ರೀ ಎಂದು ಚಾವಡಿಯ ಕಟ್ಟೆಯನ್ನು ಏರುತ್ತ ಮೇಲೆ ಬಂದು ಗೌಡರ ವಿಚಾರ ಝುರಿಗೆ ತಡೆಯೊಡ್ಡಿದ. ಗೌಡರು ಕುತೂಹಲ ಬೆರೆತ ದೃಷ್ಟಿಯಿಂದ ನೋಡುತ್ತ ಹವಾಲದಾರನನ್ನು ಸ್ವಾಗತಿಸಿದರು.

"ಬರ್ರಿ! ಮುಂಜಾನೆ ಯಾವ ಕಡೆಯಿಂದ ಬಂತ ಸ್ವಾರೀ?"

"ಠಾಣೆಯಿಂದೇ ಬಂದೆ. ನಿಮ್ಮ ಕಡೆಗೆಯೇ ಅರ್ಜೆಂಟ ಕೆಲಸ ಇತ್ತು. ಫೌಜದಾರ ಸಾಹೇಬರೇ ಬರುವವರಿದ್ದರು. ಅವರಿಗೆ ಬೇರೆ ಕಡೆಗೆ

ಹೋಗಬೇಕಾಗಿತ್ತಂತ ಇತ್ತ ನಾನೇ ಬಂದೆ. ”

“ ಮತ್ತೇನ ಬೇಟಿ ಎಬ್ಬಿಸಿದಿರಿಲ್ಲಿ ? ”

“ ನಾವೇತಕ್ಕೆ ಬೇಟಿ ಎಬ್ಬಿಸಲು ಬೇಕು ? ತಾವೇ ಏಳುವವು. ” ಸ್ವಲ್ಪ ತಡೆದು, “ ಸಾಹೇಬರು ಹತ್ತೆಂಟ ಲಿಂಬೆಯ ಹಣ್ಣ ಎಳಿ-ವೀಳ್ಯದ ಎಲೆ ಬೇಡಿದಾರೆ ” ಎಂದು ಬೇಡಿಕೆಯನ್ನು ಮುಂದಿಟ್ಟ.

“ ಇಷ್ಟೇ ಅಲ್ಲೇನು ? ಹೇಳಿ ಕಳಿಸಿದ್ದರ ಆಗ್ತಿತ್ತಲ್ಲ ! ಏನ ಮತ್ತೇನರ ಅದ ? ” ಎಂದರು ಗೌಡರು.

ಫೌಜದಾರರು ತಮ್ಮಲ್ಲಿಂದ ಹಣ್ಣು, ಎಲೆಗಳನ್ನು ಬೇಡಿದ್ದೊಂದು ದೊಡ್ಡಸ್ತಿಕೆಯೆಂದು ಭಾವಿಸುತ್ತ, ಹಾಗೆಯೇ “ ಚಹ ಒಂದ ಕಪ್ಪ ತಗೊಳ್ಳಿರಿ ! ” ಎಂದು ಹೊರಳಿ ನೋಡಿದರು

ಇಷ್ಟರಲ್ಲಿ ಓಲೇಕಾರ ಬಂದು ಕುಳಿತಿದ್ದ. ಅವನಿಗೆ ಏನೋ ಹೇಳಬೇಕೆಂದಿದ್ದ ಗೌಡರು ಹೇಳದೆ ಎದ್ದು ಅವನ ಸಮೀಪಕ್ಕೆ ಹೋಗಿ ಮೆಲ್ಲಗಿನ ದನಿಯಲ್ಲಿ ಚಹ ತರಲಿಕ್ಕೆ ಹೇಳಿ ಕಳಿಸಿಕೊಟ್ಟರು.

ಚಾವಡಿಯಲ್ಲಿ ಯಾರೂ ಇಲ್ಲದ್ದನ್ನು ಕಂಡು ಹವಾಲದಾರನು ಗೌಡರನ್ನೇ ಬದಿಗೆ ಕರೆದು, ಮೆಲ್ಲನೆ ಎಲ್ಲ ಸಂಗತಿ ವಿವರಿಸತೊಡಗಿದ. ಹವಾಲದಾರನ ಹಾವಭಾವ, ವಿಷಯಗಳನ್ನು ವಿವರಿಸುವಲ್ಲಿಯ ಹೆದರಿಕೆಯ ಪ್ರದರ್ಶನಗಳನ್ನು ಕಂಡರೆ ಯಾರೂ ಹೆದರುವಂತಿತ್ತು. ಅವನ ಮಾತುಗಳು ಮುಂದೊರಿದಂತೆ ಗೌಡರ ಕೈಕಾಲೇ ತಣ್ಣಗಾಗುತ್ತ ನಡೆದುವು. ಅನ್ಯರ ಮೇಲೆ ಪ್ರಸಂಗ ಬಂದಾಗ ಮುಂದು ಮುಂದಾಗಿ ಓಡಾಡಿ ಕೆಲಸ ಮಾಡುತ್ತಿದ್ದ ಅವರಿಗೆ ತಮ್ಮ ಮೇಲೆಯೇ ಪ್ರಸಂಗ ಹೊರಳಿದಾಗ ಏನು ಗತಿಯಾಗುವುದೆಂಬುದು ಗೊತ್ತಾಯಿತು. ಎಲ್ಲವನ್ನೂ ಕೇಳಿಕೊಂಡು ನಿಟ್ಟುಸುರೊಂದನ್ನು ಬಿಟ್ಟರು. ಹಣೆಯ ಮೇಲೆ ಕೈಯೊಂದನ್ನಿಟ್ಟುಕೊಂಡು ಕಂಬಳಿಯ ಮೇಲೆ ಉಸ್ಸೆಂದು ಕುಳಿತರು. ಸ್ವಲ್ಪ ಹೊತ್ತಿನ ಮೇಲೆ ಜಗ್ಗಿದ ಸ್ವರದಲ್ಲಿ ನುಡಿದರು.

“ ಏನೇ ಆಗಲಿ, ಮಣ್ಣ ಮುಚ್ಚ ಬಡುವುದು ನಿಮ್ಮ ಕೈಯೊಳಗೇ ಇದೆ. ಈ ಮಾತು ಕಥೆ ಇಲ್ಲಿ ಬೇಡ. ಚಹ ಇಷ್ಟ ಕುಡಿಯಿರಿ ? ವಾಡೇದ ಕಡೆಗೇ ಹೋಗೋಣ ನಡೆಯಿರಿ ! ”

ಇಷ್ಟರಲ್ಲಿ ಭೀಮನು ಇನ್ನೊಬ್ಬ ಓಲೇಕಾರನನ್ನು ಕರೆದುಕೊಂಡು ಬಂದ. ಆತನಿಗೆ "ಹೋಗೋ ಜಾಧವ ಮಾಸ್ತರರಿಗೆ ಸ್ವಲ್ಪ ನಮ್ಮ ವಾಡೆಯ ಕಡೆ ಬರ್ರಿ ಅಂತ ಹೇಳು. ನಾನೇ ಕರೆದಿರುವೆ ಅಂತ ಹೇಳು. ಹಾಗೇ ಹೆಡ್‌ಮಾಸ್ತರರಿಗೂ ಸ್ವಲ್ಪ ಬಂದು ಹೋಗಲಿಕ್ಕೆ ಹೇಳು ಆಣ್ಣಾ?" ಸ್ವಲ್ಪ ತಡೆದು "ಲಗೂನೆ ಕಾಲೆತ್ತಲ್ಲ! ವಾಡೆಯ ಕಡೇನ ಕರಕೊಂಡ ಬಾ ಏನ?" ಎಂದು ಆತುರದಿಂದ ಹೇಳಿದರು. ಧ್ವನಿಯಲ್ಲಿ ಹೆದರಿಕೆಯಿತ್ತು.

ಚಹ ತಂದ ಹಳಬನಿಗೆ "ರಾವಸಾಹೇಬರಿಗೆ ಚಹಾ ಕೊಡು ಮತ್ತ ನೀ ಹೋಗು. ಯಾವ್ದರೆ ಒಂದ ಬಂಡಿ ನೋಡಿ, ಸಿಸ್ತಿನಿಂದ ಸವಾರಿ ಕಟ್ಟಿಕೊಂಡ ಗಾದಿ ತೆಕ್ಕೆ ಇಟ್ಟು ಸ್ಟೇಶನಕ್ಕೆ ತಗೊಂಡು ಹೋಗು. ಬೆಳಗಾಂವಿಯಿಂದ್ಕ ಬರುವ ಗಾಡಿಗೆ ಅಪ್ತರು ಬರ್ತಾರ." ಭೀಮನ ಕಡೆಗೆ ಹೊರಳಿ, "ಭೀಮಾ ನೀನೂ ಹೋಗಪ್ಪಾ! ಹಳಬರಿಗೆ ಏನ ತಿಳಿತದ? ಎಲ್ಲಾ ಶಿವಪೂಜೆಯೊಳಗ ಕರಡಿ ಬಿಟ್ಟಂತೆ ಆಗೇದ" ಎಂದು ಹೇಳಿ ಹವಾಲದಾರರನ್ನು ಕರೆದುಕೊಂಡು ಮನೆಯ ಹಾದೀ ಹಿಡಿದರು.

ಮುಂಬಯಿಯ ಟೌನ ಠಾಣಾ ಪೋಲೀಸ ಇನಸ್ಪೆಕ್ಟರ ಆಫೀಸಿನಿಂದ 'ಅಜಿತನ ಮನೆತನ ಎಂಥದು? ಅವನ ಮನೆಯಲ್ಲಿ ಹಿಂದೆ ಯಾರಾದರೂ ರಾಜಕೀಯ ಚಳವಳಿಯಲ್ಲಿ ಭಾಗ ವಹಿಸಿರುವರೋ? ನಡತೆ ಹೇಗೆ? ಸಾಮ್ರಾಜ್ಯ ಸರಕಾರದ ವಿಷಯಕ್ಕೆ ಮನೋಭಾವ ಎಂಥದು?' ಎಲ್ಲವನ್ನೂ ವಿವರವಾಗಿ ಬರೆದು ಕೂಡಲೆ ಕಳಿಸಬೇಕೆಂದು ಇಲ್ಲಿಯ ಪೋಲೀಸ ಠಾಣೆಗೆ ಆಜ್ಞೆಯಾಗಿತ್ತು. ಅದಕ್ಕಾಗಿ ಸ್ವತಃ ಸಬ್-ಇನಸ್ಪೆಕ್ಟರರೇ ಬರಬೇಕಾಗಿದ್ದಿತು. ಆದರೂ ಹವಾಲದಾರರೇ ಬಂದಿದ್ದರು. ಅದಕ್ಕಾಗಿ ಮನೆಯಲ್ಲಿ ಮಾಸ್ತರರೂ ಗೌಡರೂ ವಿಚಾರವಿನಿಮಯ ಮಾಡಿ ಹವಾಲದಾರನ ಕೈಯಿಂದ ಗೌಡರ ಮನೆತನ ರಾಜನಿಷ್ಠವೆಂದೂ ಹಿಂದೆ ಯಾವ ಚಳವಳಿಯಲ್ಲಿ ಭಾಗವಹಿಸಿಲ್ಲವೆಂದೂ ಬರೆಯಿಸಿದರು. ಅದರಲ್ಲಿ ಗೌಡರ ತಂದೆಗೆ ಮೇಲಧಿಕಾರಿಗಳಿಂದ ಸಿಕ್ಕ ಇಪ್ಪತ್ತೊಂದು ಸರಟಿಫಿಕೇಟುಗಳ ಉಲ್ಲೇಖವನ್ನೂ ಮಾಡದೆ ಇರಲಿಲ್ಲ. ಇದೆಲ್ಲ ಕೈಗೂಡಬೇಕಾದರೆ ಗೌಡರ ಮನೆಯಲ್ಲಿ ಬರಲಿರುವ ಅಪ್ತೇಗಾಗು-

ವದಕ್ಕಿಂತ ಮಿಗಿಲಾದ ಮೇಜವಾನಿಗೆ ಮೊದಲೇ ಹವಾಲದಾರನಿಗೆ ಮಾಡಿಸಿಯಾಯಿತು.

ಹವಾಲದಾರರನ್ನು ಕಳಿಸಿಯಾದನಂತರ ರಾತ್ರಿಯ ರೇಲಿಗೆ ಜಾಧವ ಮಾಸ್ತರರನ್ನೂ ಮುಂಬಯಿಗೆ ಕಳಿಸುವುದು. ಅಲ್ಲಿಯ ನಿಜವಾದ ಪರಿಸ್ಥಿತಿಯನ್ನು ವಿಚಾರಿಸಿಕೊಂಡು, ಅವಶ್ಯವೆನಿಸಿದರೆ ಅಜಿತನನ್ನೇ ಊರ ಕಡೆಗೆ ಕರೆದು ತರುವುದು ಎಂದು ಮನೆಯಲ್ಲಿ ಕೂಡಲೆ ನಿಶ್ಚಯಿಸಿದರು.

ಆಮೇಲೆ ಆಪ್ತರ ಆದರಾತಿಥ್ಯದ ಸಿದ್ಧತೆ ನಡೆಯಿತು. ಬೀಗರ ಸತ್ಕಾರ, ರಾವಸಾಹೇಬನ ವರದಕ್ಷಿಣೆಯ ಏರಾಟ, ಉಡುಗೊರೆಯ ಕೊಡಕೊಳ್ಳುವಿಕೆ ಮೊದಲಾದ ಗೊಂದಲದಲ್ಲಿಯೂ ಸರಸ್ವತಿಗೊಂದು ಗಡಬಿಡಿ. ಅದರಲ್ಲೂ ಮಾಸ್ತರರನ್ನು ಸಂಧಿಸಿ ಹೇಳಿದಳು.

"ಹೇಗಾದರೂ ಮುಂಬಯಿಗೆ ಹೋಗುವಿರಿ. ಇಂದರಕ್ಕನಿಗೆ ಈಗ ಏಳರೊಳಗ ಇರಬೇಕು. ದೂರ ಇದ್ದಾರೆ ಅಂತ ಬುತ್ತೀ ರೊಟ್ಟಿ ಮಾಡಿ ಕೊಡಲಿಕ್ಕೆ ಆಗಲಿಲ್ಲ. ಅವಳನ್ನೂ ಕರಕೊಂಡ ಬರ್ರಿ! ಇಲ್ಲೇ ರಾವಸಾಹೇಬನ ಮದಿವೆಯೂ ಆಯ್ತು, ಹರಿಗೆಯೂ ಆಯ್ತು. ಇವರಿಗೇನು? ತಮ್ಮದನ್ನಷ್ಟೇ ನೋಡಿಕೊಳ್ಳುವರು. ಇನ್ನೊಬ್ಬರ ಚಿಂತೆ ಏಕೆ ಮಾಡಿಯಾರು? ಇದೇ ಮದಿವೆ ಕಾಲಕ್ಕೆ ಇಂದಿರೆಯ ಗಂಡನನ್ನೂ ಕರೆಯಿಸೋಣ. ಎರಡ ತೊಲೆ ಬಂಗಾರ ಹಾಕಿ ಕಳಿಸಲಿಕ್ಕೆ ಬಂದೀತು. ಮದಿವೆ ಮಾಡಿಕೊಂಡ ಹೋದವ ಸುಧೀರ ತಿರುಗಿ ನಮ್ಮ ಮನೆ ಕಟ್ಟಿ ಕಲ್ಲ ಏರಿಲ್ಲ. ಮಗಳಿಗೆ ಅಲ್ಲಿ ಹನ್ನೆರಡ ಸಾರೆ ಹಂಗಿಸಿರಬೇಕಲ್ಲ. 'ನಿಮ್ಮ ತವರಮನೆಯವರಿಗೆ ಕರೆದ ಒಯ್ಯೋದ ಆಗಿಲ್ಲ ಇನ್ನೂ' ಅಂತ. ಅವರೇ ಇದ್ದಿದ್ದರೆ ಅಳಿಯನನ್ನು ಇಷ್ಟ ದಿವಸ ಬಿಡತಿದ್ದರೇನು? ಹೇಗೂ ಅಜಿತ ಅಂತೂ ಮುಂದೆ ಮದಿವೆಗೆ ಬರತಾನು, ಮೂರು ನಾಲ್ಕು ವರುಷ ಆಯ್ತು ಹೋಗಿ ಹುಡುಗ ತಣ್ಣಗ ಹತ್ತೆಂಟ ದಿನಾ ಊರೊಳಗ ಬಂದ ನಿಂತ ಹಾಗೇನ ಇಲ್ಲ. ಬರ್ತಾನ ಬರ್ತಾನ ಅನ್ನುವುದರೊಳಗ ಬಂದ ಒಂದೆರಡು ದಿನಾನ ನಿಂತ ಹೋಗಿ ಬಿಡತಾನು."

ಇದೆಲ್ಲವನ್ನೂ ಕೇಳಿಕೊಂಡು ಜಾಧವ ಮಾಸ್ತರರು ಬೆಚ್ಚಗಿನ ಉಸಿರೊಂದನ್ನು ಬಿಟ್ಟರು. ಅದರಲ್ಲಿ ಸುಧೀರ ಇನ್ನೂ ಎಲ್ಲಿಯೋ ಜೇಲಿ

ನಲ್ಲಿರಬೇಕು. ಅಜಿತ ಯಾವ ಚಕ್ರವ್ಯೂಹದಲ್ಲಿ ಸಿಕ್ಕಿರುವನೋ ಏನೋ! ಎಂಬ ಕಾವು ಹೊರಸೂಸಿತು. ಆದರ ಬಿಸಿಪು ಪಾಪ ಸರಸ್ವತಿಯ ಹೃದಯಕ್ಕೆ ಹೇಗೆ ಹತ್ತಬೇಕು?

೧೩

ನ್ಯಾಯದೇವತೆ ಏನೇ ನುಡಿಯಲಿ ಒಂದು ವ್ಯಕ್ತಿಗೆ ಶಿಕ್ಷೆ ವಿಧಿಸೇ ತೀರುವುದೆಂದರೆ ಬ್ರಿಟಿಷ ಸಾಮ್ರಾಜ್ಯದಲ್ಲಿ ಬಹು ಸುಲಭ. ಇಲ್ಲಿ ನ್ಯಾಯದೇವಿಯ ರಥವನ್ನೆಳೆಯುವ ಜನರ ಹಿಂಡುಗಳೆರಡು. ದುಡ್ಡು ಕೊಟ್ಟಂತೆ ಮಾತು ಕಲಿಸಿಯೂ, ಸ್ವತಃ ಮಾತಾಡಿಯೂ ರಥ ತಮ್ಮ ಕಡೆಗೆ ಹೊರಳಿಸಿಕೊಳ್ಳುವ ವಕೀಲರ ಪಕ್ಷವೊಂದು; ವಕೀಲರು ಕಲಿಸಿದಂತೆ ಕೋರ್ಟಿನಲ್ಲಿ ನುಡಿದು ವಹಿಸಿದ ಪಕ್ಷಕ್ಕೆ ನ್ಯಾಯ ಸಂಪಾದಿಸಿ ಕೊಡುವ ಸಾಕ್ಷ್ಯದಾರರ ಗುಂಪು ಇನ್ನೊಂದು. ಈ ಎರಡೂ ಹಿಂಡುಗಳು ಕೂಡಿ ಮಾಡಿಸಿದ್ದೇ ಸತ್ಯ, ನ್ಯಾಯ. ಎಲ್ಲಿಯೋ ಒಂದು ಕತೆಯಿದೆಯಲ್ಲ ಅವಿವೇಕಿಯ ರಾಜ್ಯದಲ್ಲಿ ನಾಲ್ಕು ಜನ ಹುಚ್ಚರು ಕೂಡಿ ಒಬ್ಬ ಜೀವಂತ ಮನುಷ್ಯನನ್ನೇ ಸ್ಮಶಾನಕ್ಕೆ ಅಂತ್ಯವಿಧಿಗೆಂದು ಒಯ್ಯುತ್ತಿದ್ದರಂತೆ. ಎದುರಿಗೆ ಆ ರಾಜ್ಯದ ನ್ಯಾಯಾಧೀಶನು ಬಂದ. ಅವನಿಗೆ ಆತ ತನಗೆ ಆದ ಅನ್ಯಾಯವನ್ನು ಹೇಳಿಕೊಂಡ, ಮೇಲಾಗಿ 'ತಾನು ಸತ್ತಿಲ್ಲ. ಇವರು ಎಷ್ಟು ಹೇಳಿದರೂ ಕೇಳರು. ಸುಡಲಿಕ್ಕೆ ಒಯ್ಯುತ್ತಿರುವರು' ಎಂದು ಸತ್ಯವನ್ನು ಸಾವಿರ ಸಲ ನುಡಿದ. ಆದರೂ ಉಳಿದ ನಾಲ್ವರೂ ಪುಂಡರು 'ಈತ ಸತ್ತಿದ್ದಾನೆ.' 'ಅಯ್ಯೋ ಸತ್ತೆ' ಎಂದು ಚೀರಿದ್ದನ್ನು ನಾವೆಲ್ಲರೂ ಕೇಳಿದ್ದೇವೆ. ಅದಕ್ಕಂತೇ ಅಂತ್ಯವಿಧಿಗೆ ಒಯ್ಯಲು ಸಿದ್ಧರಾಗಿದ್ದೇವೆ' ಎಂದು ಸಾಕ್ಷ್ಯ ನುಡಿದರು. ಇವರೆಲ್ಲರ ಮಾತುಗಳನ್ನೂ ನಿದಾನವಾಗಿ ಕೇಳಿಕೊಂಡು ಆ ನ್ಯಾಯಾಧೀಶ ಕೊನೆಯ ನಿರ್ಣಯ ಕೊಟ್ಟುದೇನು ಗೊತ್ತೇ? 'ಈ ಮನುಷ್ಯ ಸ್ವತಃ ತಾನು ಸತ್ತಿಲ್ಲವೆಂದು ಹೇಳುತ್ತಿದ್ದರೂ ಕೂಡ ಸಾಕ್ಷ್ಯಗಳೆಲ್ಲ ಏಕಮುಖವಾಗಿ ಸತ್ತದ್ದು ನಿಜವೆಂದೇ ನುಡಿಯುತ್ತಿರುವುದರಿಂದ ಅಂತ್ಯಸಂಸ್ಕಾರ ತೀರಿಸಿಯೇ ಬಿಡಬೇಕು' ಎಂದು.

ಹೀಗೆಯೇ ಸುಧೀರನ ಮೇಲೆ ಹಾಕಿದ ಕೇಸಿನ ನಿರ್ಣಯವಾಯಿತು. ಅದರ ಫಲವಾಗಿ ಸೆರೆಮನೆಯ ಬಾಗಿಲು 'ಆ'ಯೆಂದು ಬಾಯ್ದೆರೆದು ಸುಧೀರನನ್ನು ನುಂಗಿಬಿಟ್ಟಿತು!

ಜನಜೀವನಕ್ಕೆ ಎರಡು ಅಂಗಗಳು. ಒಂದು ಮಗ್ಗಲಿಗೆ ಕಲೆ ಸಾಹಿತ್ಯ ಸಂಗೀತ-ಕಚೇರಿ ತತ್ವಜ್ಞಾನಿಗಳ ಸಭೆ ಸಮ್ಮೇಲನಗಳಾದರೆ ಇನ್ನೊಂದು ಮಗ್ಗಲಿಗೆ ಸೆರೆಮನೆ ಆಸ್ಪತ್ರೆ ಕಾರಖಾನೆ, ಕೂಲಿಕಾರರು ಮಧ್ಯಾಹ್ನದ ಅನ್ನದ ಚರ್ಚೆ! ಬಹು ಜನರು ಎರಡೂ ಅಂಗಗಳಲ್ಲಿ ವಿಹರಿಸುತ್ತಾರೆ. ಈಗ ಸುಧೀರ ಎರಡನೆಯ ಮಗ್ಗಲಿನಲ್ಲಿ ಬಂದು ಸೇರಿದ.

ಸೆರೆಮನೆಯಲ್ಲಿ ಮಾನವರಿರಲಿಲ್ಲ. ಮಾನವ ರೂಪದ ಪಶುಗಳು ಮಾತ್ರ ಇದ್ದರು. ಅವುಗಳಲ್ಲೊಬ್ಬ ಸುಧೀರನೀಗ!

ಅವನ ಕೈಕಟ್ಟಿ ತರಲಾಗಿತ್ತು. ಇಲ್ಲಿ ಕಾಲುಗಳನ್ನೂ ಕಟ್ಟಲಾಯಿತು. ಅವನ ಅರಿವೆ ಬದಲಿಸಲಾಯಿತು. ಕಣ್ಣಿಂದ ನೋಡಲೂ ಕೂಡ ಅಸಹ್ಯವೆನಿಸುವ ಅರ್ಧ ಚೊಣ್ಣ, ಅಂತಹದೇ ಒಂದು ಅಂಗಿ, ಟೊಪ್ಪಿಗೆ ಕೊಟ್ಟರು. ಸಂಪೂರ್ಣ ಭಾರತದ ಜನತೆಯೇ ಹೀಗಿದೆ ಎಂದೇನೋ ಮಹಾತ್ಮಾ ಗಾಂಧಿಯವರು ಆ ಖಾದಿಯ ವೇಷವನ್ನು ಧರಿಸಿರಬೇಕಷ್ಟೆ?

ಕೈಯಲ್ಲಿ ತಗಡಿನ ಪಾಟು. ಉಣ್ಣಲಿಕ್ಕೊಂದು ಅಂಥ ತಗಡಿನದೇ ಮಾಡಿದ್ದೊಂದು ಥಾಲಿ! ಎಲ್ಲರ ಊಟವೂ ಒತ್ತಟ್ಟಿಗೆ! ಆ ಊಟವೆಂದರೇನದು!

ಸುಧೀರ ಬೀಸಿದ; ಜಮಖಾನೆಯನ್ನು ನೆಯ್ದ; ಚಾಪೆಗಳನ್ನು ಹೆಣೆದ; ರೊಟ್ಟಿಯನ್ನೂ ಕೂಡ ಮಾಡಿದ, ಬೂಟುಗಾಲಿನ ಒದೆತದ ಭೀತಿಯಿಂದ! ತೀರ ಸ್ವಲ್ಪ ದಿನಗಳಲ್ಲಿಯೇ ಅವನ ಮುಖದ ಮೇಲೆ, ಕಣ್ಣುಗಳಲ್ಲಿ ವ್ಯಾಕುಲತೆಯು ಕಾಣತೊಡಗಿತು. ಅವನ ಸುತ್ತಲೂ ಅನೇಕ ಸೆರೆಯಾಳುಗಳಿದ್ದರು. ಆದರೆ ಅವರು ಮಾನವರಲ್ಲ! ಅವರಲ್ಲಿಯ ಮಾನವೀಯತೆಯು ಎಂದೋ ನಷ್ಟವಾಗಿದೆ! ಆದರೂ ಅದು ಎಂದಾದರೊಮ್ಮೆ ಜಾಗ್ರುತವಾಗುತ್ತಿದ್ದಿತು!

ಹಗಲೆಲ್ಲ ಹೇಳಿದ ಕೆಲಸಕ್ಕೆ ಎದುರಾಡದೆ ದುಡಿಯುವದು. ಇರುಳು ಒಂದು ಕಂಬಳಿ ಹಾಸಿಕೊಂಡು ಬೀಳುವುದು, ಇದು ಸುಧೀರನ ದಿನಚರಿಯಾಗಿತ್ತು!

ಹೊರಗಿನ ಜಗತ್ತಿನಿಂದ ಸುಧೀರ ಸುದೂರನಾಗಿದ್ದ. ಅವನಿಗೆ ನೋಡಲು ವರ್ತಮಾನಪತ್ರ ಪುಸ್ತಕಗಳಾವುವೂ ಸಿಗುತ್ತಿರಲಿಲ್ಲ. ಓದು ಬರಹದ ಚಟವನ್ನು ತೊರೆಯುವದು ಬಹು ಕಷ್ಟವಾಯಿತವನಿಗೆ ಸಂಜೆಗೆ ಬರಾಕಿನಲ್ಲಿ ಹಾಕಿದ ಮೇಲೆ ವೇಳೆಯನ್ನಾದರೂ ಹೇಗೆ ಕಳೆಯುವುದು? ಜೇಲಿನೊಳಗಿನ ಏಕಾಂತವಾಸದ ಪರಿಪಾಠ ಇನ್ನೂ ಅವನಿಗೆ ಆಗಿರಲಿಲ್ಲ. ಅದರಲ್ಲೂ ಇಂದಿರೆ, ಮನೆ, ಅಜಿತ, ಕಾರ್ಯ ನೆನಪಾದೊಡನೆ ದುಃಖಾತಿರೇಕದಲ್ಲಿ ನಾಲಿಗೆ ಕಿತ್ತುಕೊಂಡು ಜೀವ ಬಿಡಬೇಕೆಂದು ಸುಧೀರನಿಗೆ ಅನ್ನಿಸುವುದು.

ಕೆಲದಿನಗಳಲ್ಲಿ ಮತ್ತೆ ಕೆಲ ಕಾರ್ಯಕರ್ತರನ್ನು ಜೇಲಿಗೆ ತರಲಾಯಿತು. ಅವರಲ್ಲಿ ಸುಧೀರನ ಜೊತೆಯ ಕೆಲಸಗಾರರೂ ಇದ್ದರು. ದೂರಿನಿಂದಲೇ ನೋಡಿದ ಸುಧೀರ. ಒಮ್ಮೆಲೇ ಅವರ ಹತ್ತರ ಹಾರಿ ಹೋಗಿ ಮಾತಾಡಬೇಕೆಂದು ಬಯಸಿದ. ಆದರಿದು ಸೆರೆಮನೆಯೆಂಬ ಅರಿವನ್ನು ಮೇಲಿನ ಸಿಪಾಯಿ ಕೂಡಲೆ ತಂದುಕೊಟ್ಟ, ಅವನಿಗೆ.

ಅದರೂ ಮುಂದೆ ಮೂರು ನಾಲ್ಕು ದಿನಗಳಲ್ಲಿ ಹುಲ್ಲು ಕೆತ್ತಲು ಹೋದಾಗ ಸಂಗಡಿಗರ ಕೂಡ ಮಾತಾಡಲು ಸಿಕ್ಕಿತು. ಮನೆಯ ಜನರನ್ನು ಒತ್ತಟ್ಟಿಗೆ ಇಟ್ಟುದು ತಿಳಿಯಿತು. ಅಜಿತ ಕಾಲೇಜಿನ ಹಾಸ್ಟೇಲಿನಲ್ಲಿದ್ದುದೂ ಗೊತ್ತಾಯಿತು. ಮೆಲ್ಲನೆ 'ಲಾಯಿಟ್' ಪತ್ರಿಕೆಯ ಸಂಚಿಕೆಯೊಂದನ್ನು ತೆಗೆದು ಗೆಳೆಯ ಸುಧೀರನಿಗೆ ಮುಚ್ಚಿ ಕೊಟ್ಟ. ಸುಧೀರ ಬೆರಗಿನಿಂದ ನೋಡಿದ, ತಕ್ಕೊಂಡ. ಏನೋ ಅರ್ಥಪೂರ್ಣ ದೃಷ್ಟಿಯಿಂದ ಅವನ ಕಡೆಗೆ ನೋಡಿದ. ಅವನು ಮೆಲ್ಲಗೆ ಹೇಳಿದ, 'ಜೇಲಿನಲ್ಲಿ ಎಲ್ಲವೂ ಬರುತ್ತಿದೆ. ಇಲ್ಲಿಂದ ಪತ್ರಗಳನ್ನು ಕಳಿಸಬಹುದು. ಜಪ್ಪಿಸಿ ಓದು, ಶೌಚಕ್ಕೆ ಹೋದಾಗ' ಎಂದ. ಸುಧೀರನಿಗೆ ಸ್ವಲ್ಪ ಉಸುರಾಡಿಸಲು ದೊರೆತಂತಾಯಿತು. ಶಾಂತನಾದ. ತುಸು ಹೊತ್ತು ಕೆಲಸ ಮಾಡಿದ ಮೇಲೆ—

"ಮನೆಯವರಿಗೆ ಏನಾದರೂ ಬರೆದು ತಿಳಿಸುವಿಯಾ?" ಎಂದ ಜೊತೆಗಾರ.

"ಬರೆಯಬೇಕೆನ್ನುವೆ. ಕಾಗದ ಪೆನ್ಸಿಲುಗಳು ಬೇಕಲ್ಲ?" ಎಂದ ಸುಧೀರ, ಏನೋ ಧೇನಿಸುತ್ತ. ಇನ್ನೂ ಏನನ್ನಾದರೂ ಕೇಳಬೇಕೆಂದು ತವಕಗೊಳ್ಳುತ್ತಿದ್ದನಾದರೂ ಮುಂದೆ ಮಾತಾಡಲು ಸಾಧ್ಯವಾಗಲಿಲ್ಲ.

ಸಂಜೆ ಬರಾಕಿನಲ್ಲಿ ಮಲಗಿದಾಗ ಒಬ್ಬ ಕದ್ದು ಬೀಡಿ ಹೊತ್ತಿಸಿದ್ದುದನ್ನು ಸುಧೀರ ಕಂಡ. ಅವನಿಗೆ 'ಅವನಿಗೆ ಹೇಗೆ ಬಂತು ಬೀಡಿ! ಎಂದು ಕಳ್ಳದನಿಯಿಂದ ಕೇಳಿದ. ಅದಕ್ಕೆ ಆತ ನಕ್ಕು ನುಡಿದ:

"ಸೆರೆಮನೆಗೆ ದಾರಿಗಳೇನು ಕಡಿಮೆ? ಗರಸು ಹಡ್ಡಲಿಕ್ಕೆ ಹೋದಾಗ ಎಲ್ಲವೂ ಹೊರಗಿನಿಂದ ಬರುವುದು" ಎಂದು ನಕ್ಕು ಆನಂದದಿಂದ ಬೀಡಿಯ ಝುರುಕೆ ಎಳೆದ. ಬೆಳೆದ ಕರೇ ಗಡ್ಡ, ನಡುವೆ ಎದ್ದು ಕಾಣುವ ಬಿಳಿ ಹಲ್ಲುಗಳು, ನೋಡಿ ಸುಧೀರ ಮನದಲ್ಲಿಯೇ "ವಿಚಿತ್ರ ಪ್ರಾಣಿ" ಎಂದುಕೊಂಡು ಸುಮ್ಮನಾದ.

ಎಷ್ಟೋ ಸಲ ಜೇಲದರ್ಶನಕ್ಕಾಗಿ ಹೊರಗಿನ ಎಷ್ಟೋ ಜನ ಸಿರಿವಂತರು ಬರುತ್ತಿದ್ದರು. ಅವರನ್ನು ನೋಡಿ ಸುಧೀರನಿಗೆ ಅನ್ನಿಸುವುದು: 'ಇವರೇಕೆ ಇಲ್ಲಿ ಬರುತ್ತಿರಬೇಕು? ನಮ್ಮ ಪಶುವೃತ್ತಿಯನ್ನು ನಮಗೆ ಕನ್ನಡಿಸಿ ತೋರಿಸಲು ಬರುತ್ತಿರಬಹುದೆ? ಹೊರಗೆ ಅಡ್ಡಾಡುವ ಅವರಿಗೂ ಒಳಗಿರುವ ನಮಗೂ ನಡುವೆ ಕಬ್ಬಿಣ ಸಲಾಖೆಯು ಅಂತರವಷ್ಟೇ. ಅವರಲ್ಲಿಯೂ ಎಂಥೆಂಥ ಅಪರಾಧಿಗಳಿಲ್ಲ?'

ಜೇಲಿನ ಅಧಿಕಾರಿಗಳು ಎಲ್ಲ ಕಡೆಗೂ ತಿರುಗಾಡಿ ಹೋಗುತ್ತಿದ್ದರು. ಆಗ ಕೈದಿಗಳೆಲ್ಲರೂ ಎದ್ದು ನಿಂತು ಅವರಿಗೆ ನಮಸ್ಕಾರ ಮಾಡಲಿಕ್ಕೇ ಬೇಕು. ಹಾಗೆ ಮಾಡದಿದ್ದರೆ ಮೇಲೆ "ಘಟಕಿ" ಸಿದ್ಧವಾಗಿಯೇ ಇರುವುದು!

ಆದರೆ ಅವರಿಗೇಕೆ ನಮಸ್ಕಾರ ಮಾಡಬೇಕು?

ನಾವು ನೀರು ಹಾಕಿ ಬೆಳಸಿದ ಕಾಯಿಪಲ್ಲೆ ಒಯ್ಯುವರೆಂದೋ?

ನಾವು ನೆಯ್ದ ಜಮಖಾನೆಗಳನ್ನು ಒಯ್ದು ಉಪಯೋಗಿಸುವರೆಂದೋ?

ನಾವು ಬೆತ್ತದಿಂದ ಹೆಣೆದ ಕುರ್ಚಿಗಳನ್ನೊಯ್ದು ತಮ್ಮ ಮನೆಗಳನ್ನಲಂಕರಿಸಿಕೊಳ್ಳುವರೆಂದೋ ?

ಎಂದಾದರೊಮ್ಮೆ ನಿರೀಕ್ಷಕ ಸಮಿತಿಯ ಮೆಂಬರರು—ಉಂಡುಟ್ಟು ಸುಖದಲ್ಲಿದ್ದ ಮಹಾಜನಗಳು— ಕೈದಿಗಳ ಸುಖದುಃಖವನ್ನು ವಿಚಾರಿಸಲು ಬರುತ್ತಿದ್ದರು.

" ನಿಮಗೆ ಇಲ್ಲಿ ಏನಾದರೂ ತ್ರಾಸವಿದೆಯೆ ? "

ಈ ರೀತಿ ಅವರಿಂದ ಪ್ರಶ್ನೆ ಕೇಳಲಾಗುವುದು. ಇಂಥ ನಿರ್ದಯ ಅಪಹಾಸ್ಯಕ್ಕೆ ಒಂದೇ ಉತ್ತರ. ಅವರನ್ನು ಒಂದು ವರ್ಷ ಜೇಲಿನಲ್ಲಿಡುವುದು !

" ನಿಮ್ಮದೇನಾದರೂ ದೂರು ಹೇಳುವದಿದೆಯೆ ? "

ಎಂದು ಇನ್ನೊಂದು ಪ್ರಶ್ನೆ ಕೇಳುವರು. ಸೆರೆಮನೆಯ ವಾಸವೇ ಎಲ್ಲಿ ಒಂದು ದೊಡ್ಡ ತಕರಾರವೆಂದಿದೆಯೋ ಅಲ್ಲಿ ಇನ್ನುಳಿದ ಚಿಕ್ಕ ಪುಟ್ಟ ಹೇಳಿಕೆಗಳಿಗೆ ಮಹತ್ವವೇನು ?

" ರಾವಸಾಹೇಬರೇ, ಇಲ್ಲಿ ಎಲ್ಲವೂ ಸುಖವಾಗಿದೆ ! "

ನಿರ್ಲಜ್ಜತನದಿಂದ ಕೆಲವರು ಉತ್ತರ ಕೊಡುವರು. ಒಂದು ವೇಳೆ ಏನಾದರೂ ಒಬ್ಬಿಬ್ಬರು ತಕರಾರು ಹೇಳಿದರೆ ಅವರಿಗೆ ಸಿದ್ಧವಾಗಿದೆಯಲ್ಲ ಹಿಂದಿನಿಂದ 'ಫಟಕಿ !'

ಅಂದು ಸಾಯಂಕಾಲದ ವರೆಗೆ ಸುಧೀರನಿಗೆ ಶಾಂತಿಯಿಲ್ಲ. ಈ ಜಗತ್ತಿನ ವಿಕಟವೃತ್ತಿಗೆ ಮಾಡಬೇಕಾದರೂ ಏನು ? ಎಂದು ತಳಮಳಿಸಿದ, ಯೋಚಿಸಿದ, ರಾತ್ರಿ ಬಹಳಕಿನಲ್ಲಿ ನಿದ್ದೆ ಬಾರದೆ ಹೊರಳಾಡಿದ, ಉರುಳಾಡಿದ. ಕೊನೆಗೆ ಹತ್ತರದವನಿಗೆ ಹೇಳಿದ. " ನಾನು ಮೂರು ಸಾರೆ ಲಬೋ ಲಬೋ ಎಂದು ಬೊಬ್ಬೆ ಹೊಡೆಯುವೆ. ನೀವೆಲ್ಲರೂ ಒಮ್ಮೆಲೇ ಹೊಡೆಯಿರಿ ! ಈ ಅನ್ಯಾಯದ ವಿರುದ್ಧ ಎಲ್ಲರೂ ಬೊಬ್ಬೆಯನ್ನಾದರೂ ಹಾಕುವ" ಎಂದು. ಆತ ಮೊದಲು ಹೆದರಿದ. ಅದನ್ನರಿತು ಸುಧೀರನೆಂದ·

" ಇದಕ್ಕಿಂತ ಹೆಚ್ಚಿನ ಕಷ್ಟ ನಮಗೇನು ಕೊಟ್ಟಾರು ? "

ಕೊಂಚ ಕಾಲದಲ್ಲಿ ಆತನು ಒಪ್ಪಿದ. ತನ್ನ ಹತ್ತಿರದವನಿಗೆ ಹೇಳಿದ.

ಹೀಗೆ ಇಡೀ ಒಂದು ಬರಾಕಿನ ಜನರೆಲ್ಲರೂ ಸಿದ್ಧರಾದರು. ಎಲ್ಲರೂ ಸುಧೀರನ ಶಂಖನಾದದ ಧ್ವನಿಗೆ ಕಿವಿಗೊಟ್ಟು ಕುಳಿತರು. ನಿರೀಕ್ಷಿಸ ತೊಡಗಿದರು.

ಗಡಿಯಾರದಲ್ಲಿ ಹನ್ನೆರಡು ಹೊಡೆದು ಹೋಯಿತು. ಬುರುಜಿನ ಮೇಲಿನ ಕಾವಲುಗಾರರು ಗಸ್ತಿಯ ಕೂಗು ಹೊಡೆದು ತಾವು ಎಚ್ಚರಿರು ವುದನ್ನು ಪ್ರದರ್ಶಿಸಿದರು. ಅದೇ ಸಮಯಕ್ಕೆ ಸುಧೀರ ಬೊಬ್ಬೆಯಿಕ್ಕಿದ. ದೊಡ್ಡ ಬರಾಕಿನಲ್ಲೆಲ್ಲ 'ಲಬೊ! ಲಬೊ! ಲಬೊ!' ಎಂಬ ವಿಚಿತ್ರ ಧ್ವನಿಯು ಪ್ರತಿಧ್ವನಿತವಾಯಿತು.

ಕೂಡಲೆ ಜೇಲಿನ ಅಧಿಕಾರಿಗಳೆಲ್ಲ ಅಲ್ಲಿ ಸೇರಿದರು. ವಿದ್ಯು ದ್ದೀಪಗಳು ಹೆಚ್ಚು ಪ್ರಕಾಶಮಾನವಾಗಿ ಉರಿಯುತೊಡಗಿದುವು. ಈ ಕಾರ್ಯದ ಮೂಲಪ್ರೇರಕರನ್ನು ಗೊತ್ತುಹಚ್ಚಿಯೂ ಆಯಿತು. ಬಿಳಿ ವರ್ಣದ ಕೈಯ ಸ್ಪರ್ಶಸುಖವನ್ನು ಸುಧೀರ ಸವಿಯಲೂ ಬೇಕಾಯಿತು. ಅಲ್ಲದೆ ಕತ್ತಲೆಯ ಏಕಾಂತಕೋಣೆಯ ವಾಸದ ಶಿಕ್ಷೆ ಬೇರೆ ವಿಧಿಸ ಲಾಯಿತು. ಮರುದಿನ ಬೆಳಗಿನ ಊಟ ದೊರೆಯಲಿಲ್ಲ. ಉಪ್ಪಿಲ್ಲದ ಗಂಜಿ ಕುಡಿಯಬೇಕಾಯಿತು. ದಂಗೆಗಾರ ಸೆರೆಯಾಳುಗಳ ಟೊಪ್ಪಿಗೆ ಕೊಡಲ್ಪಟ್ಟಿತು. ಆದರೂ ಸುಧೀರನ ಸಿಟ್ಟು ಶಾಂತವಾಗಲಿಲ್ಲ. ಸುತ್ತಲೂ ಭಯಾನಕ ಶಾಂತತೆ ಪಸರಿಸಿತ್ತು. ಜಗವೆಲ್ಲವೂ ಅವನನ್ನು ಒತ್ತಿ ಕತ್ತಲೆ ಕೋಣೆಯ ಮೂಲೆಯೊಂದರಲ್ಲಿ ನುಗಿಸಿತು. ಆ ಕೋಣೆಯ ನೆರೆಯ ಕೋಣೆಗಳೂ ತೆರವಿದ್ದುವು. ಒಮ್ಮೊಂದೊಮ್ಮೆ ಕೋಣೆಯ ಬಾಗಿಲು ಗಳನ್ನು ಹಿಡಿದು ಅಗಳಾಡಿಸಿದ. ಗೋಡೆಗೆ ಒದ್ದ, ಉಗುಳಿದ, ನೆಲದ ಗರಸು ಕೆದರಿ ತೆಗೆಯಲು ಪ್ರಯತ್ನಿಸಿದ. ಅದೆಲ್ಲ ನಿಷ್ಫಲವಾಯಿತಾಗ. ವಿಲಕ್ಷಣವಾಗಿ ಕೂಗಿದ. ಸುಧೀರನಿಗೆ ಅನ್ನಿಸಿತು, 'ತನ್ನ ಹೃದಯವೇ ಹರಿದು ಹೋಗುತ್ತಿರುವುದೇನೋ!' ಎಂದು.

ಅಲ್ಲಿ ಹಗಲು ರಾತ್ರಿಗಳ ಅರಿವಾಗುವಂತಿಲ್ಲ.

"ಎಲೋ ರಾಕ್ಷಸ, ಏಕೆ ಒದರಾಡುವಿ? ನಿನಗೇನು ಹುಚ್ಚುಗಿಚ್ಚು ಹಿಡಿಯಿತೆ?"

ಸುಧೀರ ಸ್ವಲ್ಪ ಶಾಂತನಾದ. ಅವನ ಹೃದಯದ ಹಾರುವಿಕೆಯು

ಕೊಂಚ ಕಡಿಮೆಯಾಯಿತು. ಬೇರಾವದಾದರೂ ಮನುಷ್ಯ ಪ್ರಾಣಿ ಯೊಂದು ಸಮೀಪದಲ್ಲಿದೆಯಲ್ಲ! ಎಂಬ ಅರಿವಿನಿಂದಲೇ ಸ್ವಲ್ಪ ಸಮಾ ಧಾನವಾಗಿರಬೇಕು.

" ಹೀಗೆ ಒಬ್ಬನನ್ನೇ ಇಟ್ಟರೆ ಹುಚ್ಚನಾಗದೆ ಹೇಗೆ ? "

" ಹುಚ್ಚನಾದರೆ ಹುಚ್ಚರ ಆಸ್ಪತ್ರೆ ಇಲ್ಲವೆ ನಿನಗಾಗಿ ! "

ಸರಕಾರ ಎಂಥ ದಯಾಳು! ಮಾನವನಿಗೆ ಹುಚ್ಚು ಹಿಡಿದ ಮೇಲೆ ಅದು ಹಾಗೆಯೇ ಬೆಳೆಯುತ್ತ ಹೋಗಲೆಂದು ಹುಚ್ಚರ ಸಮೂಹದಲ್ಲಿ ಅವನನ್ನು ಒಯ್ದು ಇಡುವುದು! ಹುಚ್ಚು ಹಿಡಿಸುವರೆಂದ ಮೇಲೆ ಅದರ ಬೆಳವಣಿಗೆಗೆ ತಕ್ಕ ವ್ಯವಸ್ಥೆ ಬೇಡವೆ ?

ಸುಧೀರನು ಆ ಎಲ್ಲ ವಿಚಾರವನ್ನೂ ಬದಿಗಿಟ್ಟ. ಅವನು ತನ್ನ ಮಿತ್ರರ ಮಾತು ನೆನೆಸಿದ. ತಾವೆಲ್ಲರೂ ಕೂಡಿ ಕೂಲಿಕಾರರ ಹಿತ ಸಾಧಿಸಲೆತ್ನಿಸಿದ ಬಗೆ, ಆಗ ಭಾಂಡವಲದಾರರ ಮಾತು ಕೇಳಿ ಕೆಲ ಕೂಲಿ ಕಾರರೇ ತಮ್ಮ ಮೇಲೆ ತಿರುಗಿ ಬಿದ್ದ ಸಂದರ್ಭಗಳೆಲ್ಲ ಒಂದೊಂದೇ ಸ್ಮೃತಿಪಟಲದ ಮೇಲಿಂದ ಹಾಯ್ದು ಹೋದುವು. ಇಲ್ಲಿಯ ಕೆಲಸ ಗಾರರ ಜೊತೆಗೆ ರಶಿಯನ್ ಕೆಲಸಗಾರರನ್ನಿಟ್ಟು ಹೋಲಿಸಿದ. ಅಲ್ಲಿಯ ಸ್ಥಿತಿಯನ್ನು ತಾನೇ ರಶಿಯದ ಮಂತ್ರಿಯೋ ಏನೋ ಅನ್ನುವಂತೆ ವಿಚಾರಿ ಸಿದ. ಹಾಗೇ ಹೆಂಡತಿಯ ನೆನಪೂ ಬಂದುಹೋಯಿತು. ಅವಳು ಎಷ್ಟು ನೊಂದುಕೊಂಡಿರಬೇಕು! ಅಜಿತ ಊರಿಗೆ ಬರೆದು ತಿಳಿಸಿರಬೇಕೆ ? ಅದರೊಡನೆಯೇ ಗೆಳೆಯನೊಬ್ಬ ಮನೆಗೆ ಏನಾದರೂ ಬರೆದು ತಿಳಿಸ ಬಹುದೆಂದು ಹೇಳಿದ ಸಂಗತಿ ನೆನಪಾಯಿತು! ಮರುದಿನ ಏನಾದರೂ ಬರೆದು ತಿಳಿಸಬಹುದಿತ್ತು. ಈ ಗೊಂದಲವೆಬ್ಬಿಸಿ ಅದನ್ನೆಲ್ಲ ಕಳೆದು ಕೊಂಡೆ! ಆಗ ಅವನ ಹೃದಯ ಜೋರಿನಿಂದ ಹಾರಹತ್ತಿತು. ಕೋಣೆ ಯಲ್ಲಿಯೇ ಬಾಗಿಲಿನ ಸಮೀಪಕ್ಕೆ ಹೊರಳಿದ. ಕೋಣೆಯಲ್ಲಿ ಕಗ್ಗತ್ತಲೆ. ಬಾಗಿಲ ಸಂದಿಯೊಳಗಿಂದ ಹೊರಗೆ ದೂರದಲ್ಲಿ ವಿದ್ಯುದ್ದೀಪದ ಮಂದ ಪ್ರಕಾಶ ಕಾಣಿಸುತ್ತಿದ್ದಿತು. ಅದರ ಹಿಂದೆ ಆಕಾಶದ ಕೊಂಚ ಭಾಗವೂ ಕಾಣುತ್ತಿದ್ದಿತು. ಅದರಲ್ಲಿ ಕೆಲವು ಚಿಕ್ಕೆಗಳೂ ಮಿನುಗುತ್ತಿದ್ದುವು.

ಹಾ ! ಸುಧೀರನಿಗೆ ಸ್ವಲ್ಪ ಆನಂದವಾಯಿತು. ಹೊರಗಿನ ವಿಶಾಲ

ವಿಶ್ವದ ತುಂಬೆಲ್ಲ ಅವನ ಆತ್ಮಪಕ್ಷಿ ಹಾರಿಬಂದಿತು, ಒಂದರಕ್ಷಣದಲ್ಲಿ.

"ಸತ್ಯ!" ಸುಧೀರ ನಕ್ಕ. ಎಲ್ಲಿಯ ಈ ಕತ್ತಲ ಕೋಣೆ, ಎಲ್ಲಿಯ ಆ ಸತ್ಯ. ಇನ್ನೂ ಕೂಡ ಸತ್ಯ ನ್ಯಾಯಗಳ ವಿಚಾರ ಬರಬೇಕೆ?

ಇದು ಸಾಧ್ಯವೆ? ತತ್ವ? ವಿಚಾರ? ಕಾರ್ಯ? ಇವು ಮೂರರಲ್ಲಿಯೂ ಹೊಂದಿಕೆ ಇರುವುದೆ?

ತತ್ವಜ್ಞಾನಿಗಳಂತೆ ವಿಚಾರಿಸಿ ಪ್ರಶ್ನೆಗಳನ್ನು ಬಿಡಿಸುವ ಶಕ್ತಿ ಸುಧೀರನಲ್ಲಿ ಇರಲಿಲ್ಲ. ಅವನಿಗೆ ಹವೆ ಬೇಕಾಗಿದ್ದಿತು.—ಸ್ವಚ್ಛ ಹವೆ! ದೃಷ್ಟಿ ಬೇಕಾಗಿದ್ದಿತು—ವಿಶಾಲ ವಿಶ್ವವನ್ನೆಲ್ಲ ಒಂದೇ ಭಾವದಿಂದ ನೋಡಲು ದೃಷ್ಟಿ!

ಚಿಕ್ಕೆಯ ಕಿರಣವೊಂದನ್ನು ಹಿಡಿದು ಅವನ ಭಾವನೆಯು ಆಕಾಶಕ್ಕೆ ಏರಿತು. ಆದರೆ ಅವನ ದೇಹವು ಕೋಣೆಯ ಹೊರಗೆ ಬರುವುದು ಅಷ್ಟರಲ್ಲೇ ಇತ್ತು!

ಈ ಕೋಣೆಯಿಂದ ಹೊರಗೆ ಹೋಗಲಿಕ್ಕೆ ಬರಲಿಕ್ಕಿಲ್ಲವೇ? ಗೋಡೆ ಒಡೆಯಲಿಕ್ಕೆ ಬಾರದೆ? ಜೇಲಿನ ಗಡಿಯಾರದಲ್ಲಿ ಒಂದು ಎರಡು ಮೂರು ಹೊಡೆಯಿತು. ಆದರೆ ಅದರ ಅರಿವು ಅವನಿಗೆ ಇಲ್ಲ. ಹೇಗೆ ಇದ್ದೀತು? ನಿದ್ದೆಯ ವಿಲಕ್ಷಣ ಆವರಣ ಆತನ ಕಣ್ಣನ್ನು ಮುಚ್ಚಿಸಿತು. ಚಿಕ್ಕೆಯ ಕಡೆಗೆ ನೋಡುತ್ತ ಮಲಗಿದ ಅವನಿಗೆ ಅದಾವಾಗಲೋ ನಿದ್ರೆ ಹತ್ತಿತು. ಜೇಲಿನ ಒಂದು ಕತ್ತಲೆಯ ಕೋಣೆಯಲ್ಲಿ ಬಿದ್ದಿರುವೆನೆಂಬ ತಿಳಿವೂ ಕೂಡ ಅವನಿಗೆ ಇರಲಿಲ್ಲ.

ಆ ನಾಲ್ಕು ದಿವಸವೆಂದರೆ ನಾಲ್ಕು ವರ್ಷಗಳಂತೆ ಆಯಿತು ಸುಧೀರನಿಗೆ. ಹೊರಗೆ ಬಂದೊಡನೆಯೇ ಮಿತ್ರನಿಂದ ಕಾಗದ ಪೆನ್ಸಿಲು ದೊರಕಿಸಿ ಮನೆಗೊಂದು, ಅಜಿತನಿಗೊಂದು ಹೀಗೆ ಎರಡು ಕಾಗದ ಬರೆಯಬೇಕೆಂದು ನಿಶ್ಚಯಿಸಿದ. ಮರುಕ್ಷಣದಲ್ಲಿ ಅವನ ನಿಶ್ಚಯವನ್ನು ನೆನೆದು ಅವನಿಗೇ ನಗೆ ಬಂದಿತು. ಇಲ್ಲೇನು ಪೋಸ್ಟ ಆಫೀಸು ಇದೆಯೋ? ಕೊನೆಗೆ ಅಜಿತನಿಗೊಂದೇ ಕಾಗದ ಕೊಡುವುದು. ಆದರಿಂದ ಮನೆಗೂ ತಿಳಿಯುವದಲ್ಲ, ಎಂದು ಯೋಚಿಸಿದ. ಅದರಂತೆ ಶೌಚಕೂಪದಲ್ಲಿ ಕುಳಿತು ಎರಡು ದಿನಗಳಲ್ಲಿ ಕಾಗದ ಬರೆದು ಕಳಿಸಿಯೂ ಆಯಿತು.

ಆಮೇಲೆ ಅವನ ಮನಸ್ಸಿಗೆ ಸ್ವಲ್ಪ ಹಗುರೆನಿಸಿತು.

ಆಗಾಗ ಜೇಲಿನಲ್ಲಿ ಅಪರಾಧಿಗಳನ್ನು ಸುಧಾರಿಸುವ ಸದಿಚ್ಛೆಯಿಂದ ಉಪದೇಶಕರನ್ನು ಕಳಿಸಲಾಗುತ್ತದೆ.

ಅಹುದು; ಸುಧಾರಿಸುವ ಸದಿಚ್ಛೆ! ಜಗತ್ತಿಗೆ—ಹೊರಗಿನಿಂದ ಜಗತ್ತನ್ನು ಮೊದಲು ಸುಧಾರಿಸಿರಿ. ಅಂದರೆ ಈ ಸೆರೆಮನೆಯೆಂಬುದೇ ಇರಲಿಕ್ಕಿಲ್ಲ. ಉಪದೇಶಕನನ್ನು ಕಂಡೊಡನೆಯೇ ಸುಧೀರನ ಮನಸ್ಸಿನಲ್ಲಿ ಈ ವಿಚಾರ ಹೊಳೆಯಿತು. ಸಾಲಾಗಿ ಎಲ್ಲ ಅಪರಾಧಿಗಳೂ ಕುಳಿತರು. ಉಪದೇಶಕ ಹಲವು ಮಾತುಗಳನ್ನು ಹೇಳಿದ. ಕೊನೆಗೆ "ಕದಿಯಬಾರದು, ಅನ್ಯರ ಕೇಡು ಮಾಡಬಾರದು, ವ್ಯಭಿಚಾರ ಮಾಡಕೂಡದು" ಎಂದೂ ಬೋಧಿಸಿದ. ಮೇಲಾಗಿ "ಕಾರಾಗ್ರಹದಿಂದ ಹೊರಗೆ ಹೋದೊಡನೆಯೇ ಈ ರೀತಿಯಿಂದ ನಡೆದರೆ ದೇವರು ನಿಮಗೆ ನೆರವು ನೀಡುವನು' ಎಂದೂ ಹೇಳಿದ.

"ದೇವರು ನೆರವಾಗದಿದ್ದರೆ?" ಸುಧೀರ ಸಂಶಯವನ್ನು ಪ್ರದರ್ಶಿಸಿದ.

"ದೇವರಲ್ಲಿ ಶ್ರದ್ಧೆಯಿಲ್ಲದ್ದಕ್ಕೆ ನಿಮ್ಮ ಮೇಲೆ ಇಂಥ ಸಂಕಟಗಳು ಬರುತ್ತವೆ." ಉಪದೇಶಕ ಹೇಳಿದ.

"ನೀವು ದೇವರ ಮೇಲೆ ಶ್ರದ್ಧೆ ಇಟ್ಟಿರುವಿರಾ?"

"ಸಂಪೂರ್ಣ; ಶ್ರದ್ಧೆಯಿಲ್ಲದೆ ಬದುಕುವದೆಂತು?"

"ನಾವು ಬದುಕಿಲ್ಲವೆ?"

ಪಾದ್ರಿಯು ಸುಮ್ಮನಾದ

"ನಿಮಗೆ ಈ ಉಪದೇಶಕ್ಕಾಗಿ ಸಂಬಳ ಸಿಕ್ಕುವುದೆ?"

"ಹೌದು; ಸಂಬಳವಿಲ್ಲದೆ ಕೆಲಸವೇ ಆಗದು."

"ನಿಮ್ಮಷ್ಟೇ ಸಂಬಳ ನಮಗೂ ದೊರೆತರೆ ನಾವು ಅಪರಾಧವನ್ನೇ ಮಾಡಲಾರೆವು! ನಿಮ್ಮ ದೇವರಿಗಷ್ಟು ಹೇಳು!"

"ಅವನಿಗೆಲ್ಲ ಗೊತ್ತಿದೆ."

"ಹಾಗೆಲ್ಲ ಅವನಿಗೆ ಗೊತ್ತಿದ್ದರೆ ನಿಮ್ಮನ್ನೂ ಕಾರಾಗ್ರಹದಲ್ಲಿಯೇ ಇಡುತ್ತಿದ್ದ!"

“ ಏಕೆ ? ”

“ ಚನ್ನಾಗಿ ತಿಂದುಂಡು, ಸಿರಿವಂತಿಕೆಯಲ್ಲಿ ಬಾಳಿ ಹೀಗೆ ಉಪದೇಶ ಮಾಡಲು ಬಂದಿರುವಿರೆಂದು. ದೇವರನ್ನೂ ಕರೆದು ಕೇಳು. ನಮ್ಮಲ್ಲಿ ಯಾರಾದರೂ ನಿನ್ನಂಥ ಮಹಾಪರಾಧಿಗಳು ಇದ್ದೇವೆಯೋ ಹೇಗೆ ? ”

“ ದೇವರು ಇಲ್ಲಿ ಬರಬಲ್ಲನೆ ? ”

“ ನಿರ್ದೋಷಿಗಳನ್ನು ಬಿಡಿಸಲಿಕ್ಕೆ ಬಾರದ ದೇವರಿದ್ದರೂ ಬೇಡ ನಮಗೆ. ”

“ ನಾಸ್ತಿಕ ! ”

“ ಬಾಯ್ಮುಚ್ಚು ! ದೇವರ ಹೆಸರು ಹೇಳುತ್ತಾನೆ. ಕರ್ಮದ ಪುರಾಣ ಬಿಚ್ಚುತ್ತಾನೆ. ಸಂಬಳ ತಿಂದು ಧನಿಕರ ಸುಲಿಗೆಯಾಗದಂತೆ ಬಡ ಜನರನ್ನು ಶಾಂತಗೊಳಿಸಲು ಕರ್ಮ ಧರ್ಮಗಳನ್ನು ಮುಂದಿಡುತ್ತಿದ್ದಾನೆ, ಆಚಾರವಂತನೀತ. ನಾವು ಪೂರ್ವಜನ್ಮದಲ್ಲಿ ಪುಣ್ಯ ಮಾಡಿಲ್ಲವಂತೆ. ಬಡವರಾಗಿ ಹುಟ್ಟಿದೇವಂತೆ, ಈ ಜನ್ಮದಲ್ಲಿ ಇದ್ದುದರಲ್ಲಿ ಬಾಳಿ, ದುಡಿದರೆ ಮುಂದಿನ ಜನ್ಮದಲ್ಲಿ ಸೌಖ್ಯ ಸಿಗುವದಂತೆ. ಸಿರಿವಂತರು ಪುಣ್ಯ ಮಾಡಿ ಪಡೆದವರಂತೆ, ವಹವ್ವ! ಇವರ ಪುಣ್ಯದ ಪುರಾಣ! ಕರ್ಮದ ಪ್ರಭಾವ ! ಸಿರಿವಂತರಿಂದ ಯಥೇಚ್ಛ ಸಂಬಳ ಹೊಡೆದು ತಮ್ಮ ಮಾತುಗಾರಿಕೆಯನ್ನು ಮಾರುವ ಧರ್ಮಗುರುಗಳೇ, ಸಾಕು ನಿಮ್ಮ ಆಸ್ತಿಕವಾದ ! ಯಾರಿಗೆ ಬೋಧಿಸುವಿರೀ ತತ್ವವನ್ನು ? ಭಾಂಡವಲದಾರರಿಗೆ ಹೊರಗೆ ಬರಲು ಹೇಳಿ ಶ್ರಮಜೀವಿಗಳೊಡನೆ ಆಗ ದುಡಿದಾಗ ತಿಳಿಯುವುದು, ಯಾರು ಪುಣ್ಯ ಮಾಡಿ ಬಂದವರೆಂಬುದು. ”

ಎಂದು ಅಣಕದ ಸ್ವರದಲ್ಲಿ ಬಡಬಡ ನುಡಿದು ಕೈಯೊಳಗಿನ ಟಂಬ್ರೇಲನ್ನು ಬೀಸಾಡಿದ, ಸುಧೀರ ಆ ಪಾದ್ರಿಯ ಮುಖದ ಮೇಲೆ.

ಉಪದೇಶಕನು ತನ್ನ ದೇವನನ್ನು ಶೋಧಿಸಲು ಓಡಿದ.

ಅದಕ್ಕೂ ಮತ್ತೆ ಸುಧೀರನಿಗೆ ಕತ್ತಲೆ ಕೋಣೆಯ ವಾಸ ! ಸುಧೀರನು ಭಾವನಾವಶನಾದನೆಂದರೆ ಏನು ಮಾಡಲೂ ಸಿದ್ಧ. ಅವನ ಹುಟ್ಟುಗುಣವೇ ಅಂಥದು. ತಾನೆಲ್ಲಿ ? ತನ್ನ ಕಾರ್ಯ ಹೇಗೆ ಸಾಧಿಸೀತು ? ಎಂಬುದರ ಕಡೆಗೆ ಅವನ ಲಕ್ಷ್ಯವೇ ಹೋಗುತ್ತಿರಲಿಲ್ಲ. ಸತ್ಯ ! ಸತ್ಯ !

ಸತ್ಯ! ಎಂಬುದೊಂದನ್ನೇ ಜಪಿಸಿದರೆ ಬ್ರಿಟಿಷ ಸತ್ತೆಯಲ್ಲಿ ಸಾವು ತಪ್ಪೀತೆ?

ಮತ್ತೆ ಸಂಜೆಯು ಊಟವಿಲ್ಲ. ಅನಶನ ವ್ರತ! ಸ್ವಲ್ಪ ದಿನಗಳಲ್ಲಿಯೇ ಜೇಲಿನ ಅಧಿಕಾರಿಗಳಿಗೆಲ್ಲ ಗೊತ್ತಾಗಿಹೋಯಿತು, ಈತ ತಕ್ರಾರಿ ಕೈದಿಯೆಂದು. ಕೈದಿಗಳಲ್ಲಿ ತಪ್ಪುಕಲ್ಪನೆಯನ್ನು ಬೆಳೆಸುವವನೆಂದೂ ಜೇಲ ನಿರೀಕ್ಷಕರ ಕಡೆಗೆ ದೂರು ಕೊಡುವವನೂ ಕೊಡಿಸುವವನೂ ಎಂದು ಪ್ರಸಿದ್ಧಿಯೇ ಆಯಿತು. ಅದರಂತೆ ಅವನ ಮೇಲೆ ವಿಶೇಷ ಲಕ್ಷ್ಯವನ್ನು ಪೂರಯಿಸಲಾಯಿತು.

ಅದೆಂತೋ—ಇವನ ಭಾವಾತಿರೇಕವನ್ನು ಕಂಡೋ ಏನೋ—ಆ ಭಾಗದ ವಾರ್ಡರನಿಗೆ ದಯೆ ಬಂದಿತು.

"ಹಸಿವೆ ಆಗಿದೆಯೋ? ಇದನ್ನು ತಗೋ ತಿನ್ನು" ಎಂದು ರೊಟ್ಟಿಯ ತುಣುಕು ತೋರಿದ. ಪಂಜರದ ಹೊರಗೆ ನಿಂತು.

"ತಿನ್ನಲಿಕ್ಕೆ ಕೊಡಕೂಡದೆಂದು ಕಾಯಿದೆಯಿದೆಯಲ್ಲ! ಹೇಗೆ ತಕ್ಕೊಳ್ಳಲಿ?"

"ಕಾಯಿದೆಯಂತೆ ನಡೆದರೆ ಸತ್ತುಹೋಗುವಿ!" ವಾರ್ಡರ ಎಂದ.

"ಕಾಯಿದೆ ಭಂಗದಿಂದಲೇ ಬದುಕುವದೆನ್ನಿ?"

"ಅಲ್ಲ; ಕಾಯಿದೆಯಲ್ಲಿ ಸಿಗದಂತೆ ಅಪರಾಧ ಮಾಡಿದರೆ ಬಾಳಬಹುದು!"

ವಾರ್ಡರನ ಈ ಮಾತನ್ನೇ ಹಲವು ಸಲ ತಿರುತಿರುಗಿ ತನ್ನಲ್ಲಿಯೇ ಉಚ್ಚರಿಸಿದ ಸುಧೀರ. ಆ ಅಧಿಕಾರಿಗೆ ಗೊತ್ತು, ಹೊಸ ಕೈದಿಗಳು ಹೀಗೆ ಮಾಡುವರೆಂಬುದು. ಆದೇಕೆ ಒಮ್ಮೆ ಇಂಥ ಶಿಕ್ಷೆಯನ್ನೂ ಆತ ಅನುಭವಿಸಿದವನಿದ್ದ. ಆದಕ್ಕೆಂದೇ ಸುಧೀರನಿಗೆ ರೊಟ್ಟಿ ಕೊಡಲಿಕ್ಕೆ ಬಂದಿದ್ದನಾತ.

ಸಿಟ್ಟಿನ ಕ್ಷಣ ಸರಿದು ಹೋಗಿದ್ದಿತು. ಸುಧೀರನಿಗೆ ಹಸಿವೂ ಆಗಿದ್ದಿತು. ಅಂಥ ರೊಟ್ಟಿಯೂ ಅವನಿಗೆ ಸವಿಯೆನಿಸಿತು. ತಿನ್ನುವಾಗ ಮನಸ್ಸಿಗೂ ಸಮಾಧಾನವಾಯಿತೇನೊ!

ಹತ್ತಿರ ಇಟ್ಟ ಟಂಬ್ರೇಲದಿಂದ ನೀರನ್ನು ಕುಡಿದ. ಮೂತ್ರವಿಸರ್ಜನೆಗೆಂದು ಇಟ್ಟ ಪಾತ್ರೆಯದು !

## ೧೪

ಅಜಿತನ ಅಭ್ಯಾಸ ಮಂಡಲದ ಸದಸ್ಯರಲ್ಲಿ ಹಲವರು ಆಫೀಸಿನಲ್ಲಿ ಪ್ರಿನ್ಸಿಪಾಲರ ಮುಂದೆ ತಲೆಬಾಗಿಸಿ ಕ್ಷಮೆ ಕೇಳಿಕೊಳ್ಳುತ್ತಿದ್ದರು. ಆಗ ವಿದ್ಯಾರ್ಥಿಗಳ ಕಡೆಗೆ ಪ್ರಿನ್ಸಿಪಾಲಸಾಹೇಬರು ತುಂಬ ಗೆಲುವಿನ ಮುದ್ರೆಯಿಂದ ನೋಡುತ್ತಿದ್ದರು. ಅದರಲ್ಲೂ ಪ್ರಿನ್ಸಿಪಾಲರ ಮನಧರಣೆಗಾಗಿ ಹಾತೊರೆಯುವ ಹುಡುಗರು ಅಲ್ಲಿಯೇ ಸುಳಿದಾಡುತ್ತಿದ್ದರು. ಕೊನೆಗೂ ಪ್ರಿನ್ಸಿಪಾಲರಿಗೆ ಜಯ ಸಿಕ್ಕಿತೆಂಬ ಭಾವ ಬೀರುತ್ತ, ತರುಣರು ಆತ್ಮವಂಚನೆಯನ್ನು ಮಾಡಿಕೊಂಡು ಮೆಲ್ಲನೆ ಕಾಲೇಜಿನಲ್ಲಿ ಸೇರಿದರು. ನಡುವೆಯೇ ಪ್ರೊಫೆಸರರೊಬ್ಬರಂದರು.

" ಎಲ್ಲರೂ ಕ್ಷಮೆ ಕೇಳಿಕೊಂಡರಾದರೂ ಅಜಿತ ಹಾಗೂ ಅವನ ಐವರು ಮಿತ್ರರು, ಮಾತ್ರ ಇನ್ನೂ ಬಂದಂತಿಲ್ಲ."

" ಆ ಆರು ಜನರನ್ನೇ ನಾನು ಕಾಲೇಜಿನಲ್ಲಿ ಬರಗೊಡುವದಿಲ್ಲ."

" ಹಾಗೆ ಮಾಡಿದರೆ ಮತ್ತೂ ಒಂದು ಸಂಕಟ ಉಪಸ್ಥಿತವಾಗುವದು."

ಪ್ರಿನ್ಸಿಪಾಲರು ಸ್ವಲ್ಪ ವಿಚಾರಿಸಿ ನುಡಿದರು. "ಅಜಿತನಿಗಂತೂ ಕಾಲೇಜಿನ ಕಟ್ಟೆಯನ್ನೂ ಸಹ ತೋರಿಸುವದಿಲ್ಲ. ಉಳಿದವರನ್ನು ಪೋಲೀಸರ ವಶಕ್ಕೆ ಕೊಟ್ಟು ಹಣ್ಣಿಗೆ ತರಬೇಕು."

" ಪ್ರಸಂಗ ಅತಿರೇಕಕ್ಕೆ ಹೋದೀತಲ್ಲ! ಶೀತಲನ ತಂದೆ ವರ್ಷ ವರ್ಷವೂ ಕಾಲೇಜಿಗೆ ೫೦೦ ರೂಪಾಯಿ ಕೊಡುವನು. ಚಂದ್ರಕಾಂತನ ತಂದೆಯಂತೂ ದೊಡ್ಡ ಅಧಿಕಾರಿಯೇ ಇರುವನು."

ಪ್ರಿನ್ಸಿಪಾಲರು ಗಂಭೀರವಾಗಿ ಒಂದು ಕ್ಷಣ ಕುಳಿತರು. ಮುಖದ ಮೇಲೆ ಕರವಸ್ತ್ರವೊಮ್ಮೆ ಆಡಿಸಿ ಹೇಳಿದರು. " ಅವರ ಸಲುವಾಗಿ ಇನ್ನೊಮ್ಮೆ ವಿಚಾರ ಮಾಡೋಣ."

ಅದೇ ದಿನ ಇಳಿಹೊತ್ತಿನಲ್ಲಿ ಅಜಿತ ಹಾಗೂ ಅವನ ಮಿತ್ರರು ವಿಚಾರ ಮಾಡುತ್ತ ಕುಳಿತಿದ್ದರು.

“ ಇಂಗ್ಲೀಷದೊಳಗಿನ ಪ್ರಾಯಿಜ ಮಾತ್ರ ನಮ್ಮ ಕಾಲೇಜದಿಂದ ಹೋಗುವುದು ಹೀಗಾದರೆ. ”

ಚಂದ್ರಕಾಂತನಿಂದ, ಅವನ ಇಂಗ್ಲೀಷ ಬಹಳ ಚನ್ನಾಗಿತ್ತು. ಅವನಿಗೆ ಎಲಿಸ್ ಪ್ರಾಯಿಜ್ ಸಿಗುವದೆಂದು ಪ್ರಿನ್ಸಿಪಾಲರೂ ಹೇಳುತ್ತಿದ್ದರು. ಸ್ವತಃ ಪ್ರಿನ್ಸಿಪಾಲರಿಗೂ ಆ ಬಕ್ಷೀಸು ಸಿಕ್ಕದ್ದು ತನ್ನ ಶಿಷ್ಯನಿಗೂ ಸಿಕ್ಕರೆ ಪತ್ರಿಕೆಯಲ್ಲಿ ತಮ್ಮ ಪರಿಚಯ ಕೊಡಲಿಕ್ಕೆ ಒಳ್ಳೆಯ ಸಂಧಿಯೆಂದು ಭಾವಿಸಿದ್ದರು.

“ ಎಲೆ ಹುಚ್ಚಾ ! ನಿನಗೆ ಬಕ್ಷೀಸಿನ ಚಿಂತೆ ಹತ್ತಿದೆ. ಕಾಲೇಜಿಗೆ ಭೂಷಣ ತಂದುಕೊಳ್ಳಬೇಕಾಗಿದ್ದರೆ ನಮ್ಮನ್ನು ಕಾಲೇಜಿನಲ್ಲಿ ಕರಕೊಳ್ಳಲಿ. ” ಮೋಹದೀನನೆಂದ.

“ ನಮ್ಮನ್ನಂತೂ ಕರಕೊಳ್ಳುವರು. ಆದರೆ ಅಜಿತನದೇ ಕಷ್ಟ ” ಚಂದ್ರಕಾಂತ ಹಣೆಯೇರಿಸಿ ವಿಚಾರಮುದ್ರೆಯಿಂದ ನುಡಿದ.

“ ಅಜಿತನನ್ನು ಕಾಲೇಜಿನಲ್ಲಿ ಕರಕೊಳ್ಳದಿದ್ದರೆ, ಅವನು ಚಿಂತಿಸುವ ಕಾರಣವಿಲ್ಲ. ನಮ್ಮ ತಂದೆ ಹೇಳಿದ್ದಾರೆ ಅವನಿಗೆ ಗಿರಣಿಯಲ್ಲಿ ನೂರು ರೂಪಾಯಿ ಸಂಬಳದ ಕೆಲಸ ಕೊಡಿಸುವೆನೆಂದು ’ ಸೀತಲ ಹೇಳಿದ.

ಸೀತಲನು ಸಿರಿವಂತನಾಗಿಯೂ ಕೂಡ ದೇಶಸೇವೆಯತ್ತ ಮನಸ್ಸು ಹಾಕುತ್ತಿದ್ದ. ಸ್ವಾತಂತ್ರ್ಯಕ್ಕಾಗಿ ಬೇಕಾದದ್ದನ್ನು ತ್ಯಾಗ ಮಾಡಲೂ ಸಿದ್ಧನಾಗಿದ್ದ. ತಮ್ಮ ಗಿರಣಿಗಳಲ್ಲಿ ಕೂಲಿಕಾರರ ಹಿತಸಾಧನೆಯನ್ನು ಸಾಧಿಸುವೆನೆಂದು ಆಗಾಗ ಹೇಳುವನು.

“ ನಾನು ಮತ್ತೊಂದು ಉಪಾಯ ಸೂಚಿಸುವೆ. ಕೊನೆಗೂ ಅಜಿತನನ್ನು ಕಾಲೇಜಿನಲ್ಲಿ ಕರಕೊಳ್ಳದಿದ್ದರೆ— ನಾವಿಷ್ಟೇ ಅನಿವಾರ್ಯವಾಗಿ ಕಾಲೇಜಿನಲ್ಲಿ ಹೋಗುವ ಪ್ರಸಂಗ ಬಂದರೆ—ಅಜಿತನನ್ನು ಊರಿಗೆ ಕಳಿಸುವಂತಿಲ್ಲ. ಇಲ್ಲಿಯೇ ಅವನು ಬೇಕಾದ ಕಡೆಗೆ ಇರಲಿ. ಅವನಿಗೆ ನಾವೆಲ್ಲ ಖರ್ಚು ಕೊಡೋಣ ” ಶೇಷಾದ್ರಿ ಸೂಚಿಸಿದ.

“ ಎಲ್ಲಿಯವರೆಗೆ ? ” ಯಶವಂತ ಕೇಳಿದ. ಅವನಿಗೆ ಮನೆಯಿಂದ

ದುಡ್ಡು ಬರುವದು ಕಡಿಮೆ.

" ಸ್ವಾತಂತ್ರ್ಯ ಸಿಕ್ಕು ಶಿಕ್ಷಣ ಸಮಾಜಗಳ ಪುನರ್‌ರಚನೆಯಾಗುವ ವರೆಗೆ. "

" ಆಮೇಲೆ? " ಅಜಿತ ನಕ್ಕು ಕೇಳಿದ

" ಆಮೇಲೇನು ? ಯಾರಿಗೂ ದುಡ್ಡಿನ ಕೊರತೆಯೇ ಇರುವದಿಲ್ಲ ವಲ್ಲ ! "

ಎಲ್ಲರೂ ನಕ್ಕರು. ಅಜಿತ ಗಂಭೀರವದನನಾಗಿ ಕುಳಿತ. ಅವನ ಅತ್ಯಂತ ಜೀವದ ಗೆಳೆಯರೂ ಕೂಡ ಕಾಲೇಜಿನಲ್ಲಿ ಹೋಗುವದನ್ನೇ ಬಯಸುತ್ತಿದ್ದಾರೆ! ಕ್ರಾಂತಿಯ ಬಗ್ಗೆ ಮಾತೇ ಇಲ್ಲ! ಎಂಬುದು ಅವನಿಗೆ ಹೊಳೆಯಿತು. ಯಾರ ಆಧಾರದ ಮೇಲೆ ಐವತ್ತು ಜನ ಸದಸ್ಯರನ್ನು ಕೂಡಿಸಿ, ಭಾರತದ ಸ್ವಾತಂತ್ರ್ಯ ಸಾಧನೆಗೆ ಒಂದು ಪ್ರಬಲವಾದ ಸಂಸ್ಥೆಯನ್ನು ಕಟ್ಟಲೆತ್ನಿಸಿದ್ದನೋ ಅವರೇ ಹೀಗೆಂದ ಮೇಲೆ ಉಳಿದವರಿಗೆ ಹೆಸರಿಡುವುದರಲ್ಲಿ ಏನರ್ಥ? ಮಂಡಲದೊಳಗಿನ ಕೆಲವು ಹುಡುಗರು ಪ್ರಿನ್ಸಿಪಾಲರಿಗೆ ಎಲ್ಲ ಗುಪ್ತ ಸಂಗತಿಯನ್ನರುಹಿದ್ದರು. ಆದರೂ ಅಜಿತನ ಉತ್ಸಾಹ, ಆತ್ಮವಿಶ್ವಾಸದ ಸೆಲೆಯು ಇನ್ನೂ ಅಖಂಡವಾಗಿಯೇ ಇತ್ತು. ಕಾಲೇಜಿನಿಂದ ತನ್ನನ್ನು ಹೊರಗೆ ಹಾಕಿದುದಕ್ಕೂ ಅವನಿಗೆ ಅಷ್ಟು ಖೇದವೆನಿಸಿರಲಿಲ್ಲ. ಆದರೆ ಆ ಸಂಘದ ಮುಖಂಡರು—ಆಪ್ತ ಕಾರ್ಯದರ್ಶಿಗಳೂ—ಧ್ಯೇಯವಾದಿ ಗೆಳೆಯರೂ—ತನ್ನನ್ನು ಬಿಟ್ಟು ಕೂಡ ಕಾಲೇಜನ್ನು ಸೇರಿ, ಆ ಪ್ರಿನ್ಸಿಪಾಲನೆದುರಿಗೆ ತಲೆತಗ್ಗಿಸಲೂ ಹಿಂದೆ ಮುಂದೆ ನೋಡರಲ್ಲ! ಎಂಬುದೇ ಅವನಿಗೆ ಅಸಹನೀಯ ದುಃಖವನ್ನುಂಟುಮಾಡಿದ್ದಿತು. ಕೆಲ ಹೊತ್ತಿನ ಮೇಲೆ—

" ನೀವು ನನ್ನನ್ನು ನಿಮ್ಮ ಆಶ್ರಿತನೆಂದು ತಿಳಿದಿರುವಿರಾ ? " ಎಂದ ಅಜಿತ.

ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡಹತ್ತಿದರು.

" ನಿನ್ನ ಅಭಿಪ್ರಾಯವೇನು ? " ಶೇಷಾದ್ರಿ ಕೇಳಿದ.

" ನಾನು ನೀವು ಕೊಟ್ಟ ದುಡ್ಡಿನ ಮೇಲೆ ಜೀವಿಸಲಿ ? "

" ಸೀತಲ ಚಂದ್ರಕಾಂತರು ಸಿರಿವಂತರಿದ್ದಾರೆ. ಪ್ರೇಮದಿಂದ

ಕೊಡುತ್ತೇವೆನ್ನುವರು.”

“ಈ ಪ್ರೇಮ ಅಭಿಮಾನ ಎಲ್ಲ ಗೊತ್ತಿದೆ ನನಗೆ. ನಾನೇನು ಭಿಕ್ಷುಕನಲ್ಲ!” ಎಂದು ಅಜಿತ ಸೆಡವಿನಿಂದ ಎದ್ದು ಹೊರಹೊರಟ. ಆಗಿನ ಅವನ ನಡತೆ ನೋಡಿ ಯಾರೂ ಏನೂ ಮಾತಾಡುವಂತಿರಲಿಲ್ಲ.

ಅಷ್ಟರಲ್ಲಿ ಕಾಲೇಜಿನ ಆಳು ಬಂದು “ನಿಮ್ಮಿಬ್ಬರನ್ನೂ ಪ್ರಿನ್ಸಿಪಾಲರು ಕರೆಯುತ್ತಾರೆ.” ಎಂದು ಸೀತಲ ಚಂದ್ರಕಾಂತರರಿಗೆ ಹೇಳಿದ.

“ಇಬ್ಬರೇಕೆ? ನಾವು ಆರು ಜನರಿದ್ದೇವೆ.”

“ಇಬ್ಬರಿಗಷ್ಟೇ ಬರಹೇಳಿದ್ದಾರೆ.”

ಸ್ವಲ್ಪ ಹೊತ್ತು ಸ್ತಬ್ಧರಾಗಿ ಕುಳಿತರು. ಆಮೇಲೆ ಚಂದ್ರಕಾಂತ ಉಳಿದವರ ಕಡೆಗೆ ಹೊರಳಿ “ನಾವೀಗ ಬರುತ್ತೇವೆ. ನೀವಿಲ್ಲೇ ಇರ್ರಿ!” ಎಂದು ಮೆಲ್ಲನೆ ಸೀತಲನ ಕಡೆಗೆ ನೋಡಿದ. ಇಬ್ಬರೂ ಅನುಮಾನಿಸುತ್ತಲೇ ಎದ್ದು ಹೋದರು.

ಇದನ್ನು ಕೇಳಿಯೂ ಅಜಿತ ಅಲ್ಲಿ ನಿಲ್ಲಲಿಲ್ಲ, ಹೊರಹೊರಟ. ಎಲ್ಲಿಗೆ? ಅದರ ಅರಿವು ಅವನಿಗೇ ಇಲ್ಲ. ಕಾಲೇಜಿನಲ್ಲಿಯಂತೂ ಅವನಿಗೆ ಪ್ರವೇಶವಿರಲಿಲ್ಲ. ಅರ್ಥಾತ್ ಕಾಲೇಜ ಹಾಸ್ಟೇಲಿನಲ್ಲಿಯೂ ಅವನಿಗೆ ಸ್ಥಳವಿಲ್ಲದಾಗಿತ್ತು. ಸೀತಲನ ಮನೆಯವರು ಕಾರಿನಲ್ಲಿ ಬಂದು ಪ್ರಿನ್ಸಿಪಾಲರಿಗೆ ಹೇಳಿ ಹೋಗುವಂತೆ ಅಜಿತನಿಗೆ ಯಾರೂ ಇರಲಿಲ್ಲ. ಅವನ ಪುಸ್ತಕ ಅರಿವೆಗಳಂತೂ ಇನ್ನೂ ಹಾಸ್ಟೇಲಿನ ಕೋಣೆಯಲ್ಲಿಯೇ ಇದ್ದುವು. ಅವುಗಳನ್ನು ತರುವುದಕ್ಕಾಗಿ ಮಾತ್ರ ಅಲ್ಲಿ ಹೋಗಲು ಅವನಿಗೆ ಅಧಿಕಾರವಿತ್ತು. ಆದರೂ ಅದರ ಸುಪರಿಂಟೆಂಡಂಟರು ಕೂಡಲೇ ‘ಇಲ್ಲಿಂದ ಹೋಗು’ ಎಂದು ಆಜ್ಞಾಪಿಸಲೂಬಹುದಿತ್ತು. ಅದರಲ್ಲೂ ಅವನಿಗೆ ಅಂಗಲಾಚಿದರೆ ಒಂದೆರಡು ದಿವಸ ಅಲ್ಲಿ ನಿಲ್ಲಬಹುದಾಗಿತ್ತು. ಆದರೆ ಅದರ ಉಪಯೋಗ ವೇನು?

ಅಭ್ಯಾಸವಂತೂ ನಿಂತಿತು. ಅಕ್ಕನ ಮನೆಯಲ್ಲಿ ಅವಳಿಗೇ ಆಧಾರವಿಲ್ಲ. ಸುಧೀರ ಬಿಟ್ಟು ಬರಲಿಕ್ಕೆ ಇನ್ನೂ ಕೆಲ ದಿನಗಳು ಬೇಕು. ನಾನು ಊರಿಗೆ ಹೋಗಲೆ? ಅಕ್ಕನನ್ನು ಇಲ್ಲಿ ಹೀಗೆಯೇ ಬಿಟ್ಟು! ಛೆ! ಅದೆಂದಿಗೂ ಆಗದು. ಅವಳನ್ನು ಕರೆದುಕೊಂಡೇ ಹೋಗಬಹುದು. ಆದರೆ

ಮನೆಯಲ್ಲಿ ಏನೆಂದು ಹೇಳುವುದು? ಜಾಧವ ಮಾಸ್ತರರು ಹೇಳಿರ ಬೇಕೆ? ಹೇಳಿರಲಿಕ್ಕಿಲ್ಲ. ಹೇಳಿದ್ದರೆ ಸುಮ್ಮನಿರುತ್ತಿದ್ದರೆ? ಅವ್ವ ಅಳಿಯನ ಈ ಸುದ್ದಿಯನ್ನು ಕೇಳಿದರೆ ಬಹಳ ಮರಗುವಳು. ಅವಳಿಗೆ ಇಂಥ ಕೆಲಸ ಗೊತ್ತಿಲ್ಲ. ನಾಲ್ಕು ವರ್ಷಗಳಲ್ಲಿ ಇಂದಿನಷ್ಟು ತಾಯಿಯ ನೆನಪು ಎಂದೂ ಅವನಿಗೆ ಆಗಿರಲಿಲ್ಲ. ಸೂರ್ಯ ಮುಳುಗಿದ ಮಬ್ಬು ಕವಿ ಯಿತು. ಅಜಿತ ಹಾಗೇ ವಿಚಾರಿಸುತ್ತಿದ್ದ. ಮುಂದೆ ಕಷ್ಟದ ಪರ್ವತವೇ ಅಜಿತನಿಗೆ ಕಾಣುತ್ತಿದ್ದಿತು.

ಬಸ್ಸಿನಿಂದ ಇಳಿದು ಅಜಿತ ಅಕ್ಕನ ಮನೆಗೆ ನಡೆದ. ಮುಂದೆ ಯಾರೋ ಕೇಳುತ್ತಿದ್ದರು, ' ಶಿವಾಜಿ ಪಾರ್ಕ ಯಾವುದೆಂದು'. ಅಜಿತನಿಗೆ ಹೊರಗಿನ ಜಗತ್ತಿನ ಕಡೆಗೆ ಲಕ್ಷ್ಯವೇ ಇರಲಿಲ್ಲ. ಆ ವ್ಯಕ್ತಿ ಮತ್ತೊಮ್ಮೆ ಕೇಳಿತು. ಆದರೂ ಅದರ ಅರ್ಥ ಅಜಿತನಿಗೆ ಆಗಲಿಲ್ಲ.

ಈಗ ಅಜಿತ ಒಂದು ದಾರಿಯ ದೀಪದ ಸಮೀಪಕ್ಕೆ ಬಂದ. ಅವನ ಮೇಲೆ ಬೆಳಕು ಚನ್ನಾಗಿ ಬೀಳುತ್ತಲೇ ಯಾರೋ " ಅಜಿತಾ ! " ಎಂದು ಕೂಗಿದರು.

ಅಜಿತನ ಕಿವಿಯಲ್ಲಿ ಅಮೃತದ ರಸಧಾರೆ ಇಳಿದುಬಂದಂತಾಯಿತು. ಈ ನಡುದಾರಿಯಲ್ಲಿ—ಮುಂಬಯಿ ನಗರದಲ್ಲಿ— ಹೆಸರುಗೊಂಡು ಕರೆ ಯುವಿಕೆ! ಅದೂ ಪರಿಚಿತ ಧ್ವನಿ! ಗುರುತಿಸಲು ಸ್ಮೃತಿಪಟವನ್ನು ತಿರು ವಿದ ಆ ಕ್ಷಣದಲ್ಲಿ. ಹಾಗೆಯೇ ಹೊರಳಿ ನೋಡಿದ. ಎದುರಿಗೇ ಅವನ ಗುರುಗಳು! ಜಾಧವ ಮಾಸ್ತರರು ! ಅಜಿತನಿಗೆ ಪರಮಾನಂದವಾಯಿತು. ಮುಳುಗುವವನಿಗೆ ಒಂದು ದೊಡ್ಡ ಆಧಾರ ಸಿಕ್ಕಂತಾಯಿತು. ' ಕೊನೆಯ ಗಳಿಗೆಯಲ್ಲಿ ದೇವರು ನೆರವಾಗುತ್ತಾನೆ ' ಎಂಬ ಮಹಾತ್ಮರ ಮಾತು ನೆನಪಾಯಿತು. ತುಸು ಹೊತ್ತು ಎಲ್ಲವನ್ನೂ ಮರೆತ. ಕೂಸು ತಾಯಿ ಯನ್ನು ಕಂಡು ಹೋಗುವ ಹಾಗೆ ಗುರುಗಳ ಕಡೆಗೆ ಧಾವಿಸಿದ. ಬಹು ದಿನಗಳ ಮೇಲೆ ನಚ್ಚಿನ ಗುರುಗಳ ದರ್ಶನ. ಅದೂ ಇಂಥ ಇಕ್ಕಟ್ಟಿನ ಸಂದರ್ಭದಲ್ಲಿ. ಮೇಲಾಗಿ ಅಕಲ್ಪಿತ! ಸ್ವಲ್ಪ ಹೊತ್ತು ಅಜಿತನ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಸಂತಸದ ಆವೇಗ ಕೊಂಚ ಇಳಿದ ನಂತರ ಕೇಳಿದ :

"ಮುಂಚಿತ ನನಗೆ ಕಾಗದ ಬರೆಯಬಾರದೆ? ನಾನು ಸ್ಟೇಶನಕ್ಕೆ ಬರುತ್ತಿದ್ದೆನಲ್ಲ?"

"ಕಾಗದ ಬರೆಯಲಿಕ್ಕೆ ಅವಕಾಶವೆಲ್ಲಿದೆ?"

"ಅವಕಾಶವೇಕಿರಲಿಲ್ಲ?"

ಇಬ್ಬರೂ ನಿರುತ್ತರರಾದರು. ಅಜಿತನಿಗೆ ಎಲ್ಲ ಸಂಗತಿ ಗೊತ್ತಿರಬೇಕೆಂದು ಜಾಧವ ಮಾಸ್ತರರ ಕಲ್ಪನೆ. ಅವನ ಮೇಲೆ ಪೋಲೀಸರು ಇಟ್ಟ ಲಕ್ಷ್ಯ ಅವನಿಗೇ ಗೊತ್ತಿರದೆ ಇರುತ್ತದೆಯೇ? ಎಂದು ಅವರು ಭಾವಿಸಿದ್ದರು. ಆದರೆ ಅಜಿತನಿಗೆ ಇದಾವುದೊಂದೂ ಗೊತ್ತಿರಲಿಲ್ಲ. ಇಲ್ಲಿಯೇ 'ಲಾಯಿಟ್' ಪತ್ರಿಕೆ ಜಪ್ತಾಯಿತು, ತನ್ನ ಲೇಖನ ಪ್ರಕಟಿಸಿದ್ದಕ್ಕಾಗಿ. ದೂರ ಹಳ್ಳಿಯಲ್ಲಿ ಇದರ ಗೊಡವೆ ಮನೆಯವರಿಗೇನು? ನನ್ನ ಕಾರ್ಯಕ್ಕೂ ಮನೆಯವರಿಗೂ ಸಂಬಂಧವೇನು? ದೇಶದ ಸ್ವಾತಂತ್ರ್ಯ ಸಂಪಾದಿಸಲು ಹೊರಟ ಆತನು ಎಂದೋ ಮನೆತನದ ಬಂಧನದಿಂದ ಬಿಡುಗಡೆ ಹೊಂದಿರುವೆನೆಂದು ತಿಳಿದಿದ್ದ.

ಮನೆಗೆ ಹೋದೊಡನೆಯೇ ಇಂದಿರೆಗೆ ಗುರುಗಳ ಪರಿಚಯ ಮಾಡಿಕೊಟ್ಟ. 'ಆಗಾಗ ನಾನು ಹೇಳುತ್ತಿದ್ದ ಮಾಸ್ತರರು ಇವರೇ' ಎಂದೂ ಸೂಚಿಸಿದ. ಸಿದ್ಧಾಪುರದವರೆಂದೊಡನೆ ಅವಳ ಮುಖ ಮತ್ತೂ ಬಾಡಿತು. ಊರ ಕಡೆಯ ದರ್ಶನವೇ ಅವಳಿಗೆ ಬೇಡಾಗಿತ್ತು. ಇಲ್ಲಿಯ ಸುದ್ದಿ ಅವರಿಗೆ ತಿಳಿಯುವದೂ ಬೇಡ. ಕಕ್ಕ ಏನೆಂದುಕೊಂಡಾನು? ಗಂಗವ್ವ, ತಾಯಿಗೆ ಹದಿನಾರು ಸಲ ಹಂಗಿಸಬಹುದು. ಆದರಿಂದ ಇಲ್ಲಿಯ ಸುದ್ದಿಯನ್ನು ಅತ್ತ ತಿಳಿಸಲೇಬಾರದು. ಇನ್ನೂ ಕೆಲ ದಿನ ಕಳೆದರೆ ಸುಧೀರ ಬಿಟ್ಟು ಬರುವ. ಆಮೇಲೆ ಮೊದಲಿನಂತೆ ಎಲ್ಲವೂ ಸರಿಹೋಗುವುದು, ಎಂದವಳ ಕಲ್ಪನೆ. ಪತಿಗೆ ಶಿಕ್ಷೆಯಾದುದಕ್ಕಾಗಿ ಹಗಲಿರುಳೂ ಚಿಂತಿಸಿ ಕಡ್ಡಿಯಂತಾಗಿದ್ದಳು ಇಂದಿರೆ. ಅದರಲ್ಲಿಯೂ ಬಸಿರು ಬೇರೆ. ಅವಳ ಚಿಂತೆಯ ಕಾರಣವನ್ನು ಊಹಿಸಿ, ಮಾಸ್ತರರ ನಿಜವಾದ ಪರಿಚಯವನ್ನೂ ಮಾಡಿಕೊಟ್ಟ. ಆ ದಿನ ರಾತ್ರಿ ಯಾರಿಗೂ ನಿದ್ರೆಯಿಲ್ಲ. ಮಾತೇ ಮಾತು. ಮುಂಬಯಿಗೆ ತಾನು ಬಂದಾಗಿನಿಂದ ನಡೆದ ಸಂಗತಿಯನ್ನೆಲ್ಲ ವಿವರಿಸಿದ ಅಜಿತ. ಕಾಲೇಜಿನ ಸ್ಥಿತಿಗತಿಯನ್ನೂ ಹೇಳಿದ.

ಜಾಧವ ಮಾಸ್ತರರೂ ಊರ ಕಡೆಯ ಪರಿಸ್ಥಿತಿಯನ್ನೂ ರಾವಸಾಹೇಬನಿಗೆ ಬೆಳಗಾಂವಿಯ ಹುಡುಗಿಯೊಡನೆ ಲಗ್ನ ನಿಶ್ಚಯವಾದುದನ್ನೂ ತಾನು ಬಂದ ಕಾರಣವನ್ನೂ ಸ್ವಲ್ಪದರಲ್ಲಿ ಹೇಳಿ ಮುಗಿಸಿದರು.

ಜಾಧವ ಮಾಸ್ತರರಿಗೆ ಮುಂಬಯಿಯು ತೀರ ಅಪರಿಚಿತವಲ್ಲ. ಹಿಂದಕ್ಕೆ ಬಿ. ಟಿ. ಕಾಲೇಜಿನ ಅಭ್ಯಾಸಕ್ಕೆಂದು ಬಂದಾಗ ಸುಮಾರು ಒಂದು ವರ್ಷ ಅಲ್ಲಿ ಕಳೆದವರಿದ್ದರು. ಮರುದಿನ ಮುಂಜಾನೆ ಅವರು ನೆಟ್ಟಗೆ ಕಾಲೇಜಿನ ಆಫೀಸಿಗೆ ಹೋದರು. ಯೋಗ್ಯ ಹೊತ್ತಿಗೆ ಪ್ರಿನ್ಸಿಪಾಲರನ್ನು ಕಂಡರು. ಮಾತನಾಡಿದರು. ತಮ್ಮ ಪತ್ರವನ್ನು ಕಂಡು ಬಂದಿರುವೆನೆಂದು ಸೂಚಿಸಿದರು. ಪ್ರಿನ್ಸಿಪಾಲರೂ ಅಜಿತನ ಗುಪ್ತ ಸಂಘದ ಧ್ಯೇಯವನ್ನೂ ಅವನ ಬರಹದ ವಿಷಯಗಳನ್ನೂ ವಿವರಿಸಿದರು. ಅದರಲ್ಲಿ ಎಷ್ಟೋ ವಿಷಯ ಜಾಧವ ಮಾಸ್ತರರಿಗೆ ಗೊತ್ತೇ ಇತ್ತು. ಎಲ್ಲವನ್ನೂ ಕೇಳಿಕೊಂಡರು. ಅಜಿತನಿಗೇ ನಾಲ್ಕು ಮಾತು ಬಿರುಸಾಡಿದರು. ಆದರೂ ಪ್ರಿನ್ಸಿಪಾಲರು ಖಾದಿ ವೇಷವನ್ನು ಕಂಡು ಏನು ಭಾವಿಸಿದರೋ ಏನೋ. "ಇನ್ನೂ ನಾಲ್ಕು ದಿನ ಹೋಗಲಿ" ಎಂದು ಕೊನೆಗೆ ಹೇಳಿ ಕಳಿಸಿದರು. "ಆಗಲಿ; ನಾಲ್ಕು ದಿನವೇಕೆ ಹತ್ತು ದಿನಗಳೂ ಕಳೆಯಲಿ! ಪ್ರಿನ್ಸಿಪಾಲರ ತಲೆಯೊಳಗಿನ ಗುಂಗೂ ಇಳಿಯಲಿ!" ಎಂದುಕೊಂಡು ಮನೆಗೆ ಬಂದರು.

ಹಾಗೆಯೇ ,ಅವರ ತಲೆಯಲ್ಲಿ ಅಜಿತನ ಕಾರ್ಯಸಾಧನೆಯ ವಿಷಯಕ್ಕೆ ಸ್ವಲ್ಪ ಸಂಶಯ ಬಂದಿತು. ನಿಜಪರಿಸ್ಥಿತಿಯ ಅರಿವಿಲ್ಲದೆ ಕಲ್ಪನಾಸಾಮ್ರಾಜ್ಯದಲ್ಲಿ ಆತ ವಿಹರಿಸುತ್ತಿರಬೇಕು. ರಾಜಕೀಯ ಅನೇಕ ತತ್ವಜ್ಞಾನಗಳ ಅಭ್ಯಾಸದಿಂದ ಅವನ ವಿಚಾರದಲ್ಲಿ ಗೊಂದಲ ವುಂಟಾಗಿರಬೇಕು, ಉಂಟಾಗುವುದೂ ಸಹಜ. ರಶಿಯನ್ ರಾಜ್ಯಕ್ರಾಂತಿಯ ಪುಸ್ತಕಗಳನ್ನು ಓದಿ ಅವನ ತಲೆ ತಿರುಗಿದೆ. ಯಾವುದನ್ನೂ ತಿಳಿದುಕೊಂಡು ಸ್ವತಃ ವಿಚಾರಿಸಿ, ತನ್ನ ಮತವನ್ನೂ ಪ್ರದರ್ಶಿಸುವ ಸ್ಥೈರ್ಯ ಉಳಿದಂತಿಲ್ಲ ಎಂಬುದನ್ನು ಒಂದೆರಡು ದಿನಗಳಲ್ಲಿ ಅವನ ಸಹವಾಸದಲ್ಲಿ ಕಳೆದುದರಿಂದ ತಿಳಿದುಕೊಂಡರು. ಹಾಗೆಯೇ ಮಾತಿಗೆ ಮಾತು ಹೊರಟು ಅಜಿತನು—

" ನಾನು ಒಂದಿನ ರಾತ್ರಿ ಖಾದಿ ತೊಡಬಾರದೆಂದೇ ನಿಶ್ಚಯಿಸಿದ್ದೆ. ಅದೇ ನಿಶ್ಚಯದ ಭರದಲ್ಲಿ ಗಾದಿಯ ಮೇಲಿನ ಖಾದಿ ಹೊದಿಕೆಯನ್ನು ಕೂಡ ತೆಗೆದು ಬೀಸಾಡಿದೆ. ಆ ದಿನ ಇರುಳು ಬಹಳ ಹೊತ್ತಿನ ವರೆಗೆ ಗೆಳೆಯರೆಲ್ಲ ಕೂಡಿ ಗಾಂಧೀಜಿಯವರ 'ರಾಮರಾಜ್ಯ'ದ ಮೇಲೂ ಖಾದೀ ತತ್ವದ ಮೇಲೂ ಚರ್ಚಿಸಿದ್ದೆವು. ಏನೋ ಅರ್ಧ ನಿದ್ರೆಯಲ್ಲಿ ಹಾಗೆ ವಿಚಾರ ಬಂದು ಬಿಟ್ಟಿತೇನೋ " ಎಂದ.

ಅದಕ್ಕೆ ಜಾಧವ ಮಾಸ್ತರರು ಕೂಡಲೆ ತಡೆಯೊಡ್ಡಿ, " ಹಾಗಲ್ಲ; ಖಾದಿಯನ್ನು ಮಹಾತ್ಮರು ಪ್ರೀತಿಸುವರೆಂದು ನಾವು ತೊಡಬೇಕಿಲ್ಲ. ಅದ ರಂತೆ ನಮ್ಮ ಕಲಾಪ್ರವೃತ್ತಿಗಾಗಿಯೂ ಅಲ್ಲ. ರಾಜಕೀಯ ರಂಗದಲ್ಲಿ ಕಾಪಾಡಬೇಕಾದ ಶಿಸ್ತಿನ ಪಾಲನೆಗೂ ಅಲ್ಲ. ಖಾದಿಯು ನಮ್ಮ ನಾಡಿನ ಆರ್ಥಿಕಸ್ಥಿತಿಗೆ ಅನುಕೂಲವಾಗಿದೆ. ಅದರಲ್ಲಿ ಆರ್ಥಿಕಜೀವನ ಮಹತ್ವವಿದೆ ಎಂದು ಉಪಯೋಗಿಸುವುದು " ಎಂದು ಸ್ಪಷ್ಟವಾಗಿ ಹೇಳಿದರು.

ಹಾಗೆಯೇ ನಾಲ್ಕಾರು ದಿನಗಳ ಸಹವಾಸದಲ್ಲಿ ಅಜಿತನ ವಿಚಾರ ಗಳನ್ನು ಹೊರಳಿಸಲು ಯತ್ನಿಸಿದರು. ಅದಕ್ಕಿಂತಲೂ ಹೆಚ್ಚಾಗಿ ಪ್ರಚಾ ರಕ್ಕೆ ಬಲಿಬೀಳದೆ ಸ್ವತಂತ್ರ ವಿಚಾರಶಕ್ತಿಯನ್ನು ಉಪಯೋಗಿಸಲೂ ಕಲಿಸಿದರು. ಅದರಲ್ಲಿಯೇ ಸುಧೀರನನ್ನು ಕಾಣಲೂ ಪ್ರಯತ್ನ ಪಟ್ಟರು. ಆದರೆ ಅದು ಸಾಧ್ಯವಾಗಲಿಲ್ಲ. ಕೊನೆಗೆ ಮಾಸ್ತರರು ಇಂದಿರೆಯನ್ನು ಕರೆದುಕೊಂಡು ಊರಿಗೆ ಹೋಗುವದೆಂದೂ, ಅಜಿತ ಮುಂಬಯಿಯ ಲ್ಲಿಯೇ ನಿಂತು ಕಾಲೇಜ ಸೇರಿ ಅಭ್ಯಾಸ ಸಾಗಿಸುವದೆಂದೂ, ಸುಧೀರನ ಬಿಡುಗಡೆಯಾದೊಡನೆಯೇ ರಾವಸಾಹೇಬನ ಮದುವೆಗೆ ಇಬ್ಬರೂ ಹೊರಟು ಬರಬೇಕೆಂದೂ ಗೊತ್ತಾಯಿತು. ಈಗ ಮದುವೆ ನಿಶ್ಚಯ ವಾಗಿದೆ. ದೊಡ್ಡ ಪ್ರಮಾಣದಲ್ಲಿ ಆಗತಕ್ಕದ್ದು. ಆದರಲ್ಲೂ ಜೇಷ್ಠ ಮಾಸದಲ್ಲಿ. ಹಿರಿಯ ಮಗನಾದುದರಿಂದ ಮದುವೆ ಮಾಡುವಂತಿಲ್ಲ. ಅದರಿಂದ ದೀವಳಿಗೆಯ ನಂತರವೇ ಆಗುವುದು. ಅಷ್ಟರಲ್ಲಿ ಸುಧೀರನೂ ಬಿಟ್ಟು ಬಂದೇ ಬರುವ, ಎಂದೂ ಯೋಚಿಸಿದರು. ಆದರೆ ಮೊದಮೊದಲು ಇಂದಿರೆ ಊರಿಗೆ ಹೋಗಲು ಒಪ್ಪಲಿಲ್ಲ. ಊರ ಜನರಿಗೆ ಮುಖ

ತೋರಿಸುವುದೇ ಅವಳಿಗೆ ಬೇಡವಾಗಿತ್ತು. ಅವರ ಬಿಡುಗಡೆಯಾದ ಮೇಲೆ ಬರುವೆನೆಂದು ಹೇಳಿದಳು. "ಎಷ್ಟು ಸತ್ಯಮಾರ್ಗದಲ್ಲಿ ನಡೆದರೂ ಲಂಚ ತಿಂದ ಅಪರಾಧ ಅವರ ಮೇಲೆ ಬಂತಲ್ಲ!" ಎಂದು ಗೋಳೋ ಎಂದು ಅತ್ತಳು. ಅದಕ್ಕೆ ಜಾಧವ ಮಾಸ್ತರರು "ದೇಶಸೇವೆ ಮಾಡುವಾಗ ಇವೆಲ್ಲ ಇರತಕ್ಕುವೇ. ಸರಕಾರವಾಗಲಿ ಧನಿಕರಾಗಲಿ ಒಬ್ಬ ವ್ಯಕ್ತಿಯನ್ನು ಅಪವಾದಕ್ಕೆ ಗುರಿಪಡಿಸಿ ಜೇಲಿನಲ್ಲಿಡಬೇಕೆಂದು ಒಯುಸಿದರೆ ಹೇಗೋ ಮಾಡಿ ಇಡಬಹುದು. ಲೋಕಮಾನ್ಯ ತಿಲಕರ ಕತೆ ಕೇಳಿಲ್ಲವೆ?" ಎಂದು ಮೊದಲಾಗಿ ಸಮಾಧಾನ ಹೇಳಿದರು. ಇಂದಿರೆ ಆಮೇಲೆಯೂ ಒಪ್ಪದಿರಲು "ಈ ಸುದ್ದಿಯನ್ನು ಊರಲ್ಲಿ ಯಾರಿಗೂ ಹೇಳುವದಿಲ್ಲವೆಂದೂ, ಮದುವೆಯ ಹೊತ್ತಿಗೆ ಸುಧೀರ ಅಜಿತರಿಬ್ಬರೂ ಕೂಡಿಯೇ ಬರುವರೆಂದೂ ಹೇಳೋಣ" ಎಂದು ಮಾಸ್ತರರು ಸ್ಪಷ್ಟವಾಗಿ ಹೇಳಿದನಂತರ ಇಂದಿರೆಯೂ ಹೊರಡಲು ಸಿದ್ಧಳಾದಳು. ಮನೆಯ ಒಂದು ಕೋಣೆಯಲ್ಲಿ ಎಲ್ಲ ಸಾಮಾನು ಹಾಕಿ ಬೀಗ ಹಾಕಲಾಯಿತು. ಉಳಿದ ಭಾಗದಲ್ಲಿ ಇಂದಿರೆಯ ಜೊತೆಗೆ ಇರಲು ಒಂದವರು ಇರುವುದೆಂದು ಗೊತ್ತಾಯಿತು. ಅವರು ಇಂದಿರೆಯನ್ನು ಊರಿಗೆ ಕಳಿಸಲು ಮನಸ್ಸು ಮಾಡಿರಲಿಲ್ಲವಾದರೂ 'ಅವಳು ಬಸಿರೆ, ಮೇಲಾಗಿ ದಿನ ದಿನಕ್ಕೆ ಅಶಕ್ತಳಾಗುತ್ತ ನಡೆದಿದ್ದಾಳೆ. ಅದರಿಂದ ಹೋಗಲಿ' ಎಂದುಕೊಂಡು ಸುಮ್ಮನಾದರು.

ಉಗಿಬಂಡಿ ಬಿಡುವ ವರೆಗೂ ಇಂದಿರೆಯು ಒಂದೇಸವನೆ ಕಣ್ಣೀರು ಸುರಿಸುತ್ತಿದ್ದಳು. ಹಿಂದೊಮ್ಮೆ ತಾನು ಅಜಿತ ಬೇನೆ ಬಿದ್ದಿರುವನೆಂದು ಕಾಗದ ಬಂದಾಗ ಹೀಗೆಯೇ ಕಣ್ಣೀರು ಸುರಿಸುತ್ತ ಊರಿಗೆ ಹೊರಟದ್ದು ನೆನಪಾಯಿತವಳಿಗೆ. ಆದರೆ ಆಗ ಗಾಡಿಯಲ್ಲಿ ಕೂಡಿಸಲು, ಪುಣೆಯ ವರೆಗೆ ಯಾರನ್ನಾದರೂ ಜೊತೆ ಮಾಡಿಕೊಡಲು ಸುಧೀರ ಬಂದಿದ್ದ. ಎಚ್ಚರದಿಂದ ಹೋಗಲು ಎಷ್ಟು ಸಲ ಹೇಳಿದ್ದ. ಅದೆಲ್ಲವನ್ನೂ ನೆನೆದು ಅವಳ ಹೃದಯ ನೀರಾಗಿ ಕಣ್ಣಿನಿಂದ ಹರಿಯುತ್ತಿದ್ದಿತು. ಗಾಡಿಯೊಳಗಿನ ಸುತ್ತಲಿನ ಜನರು ತಿರುತಿರುಗಿ ಅವಳನ್ನೇ ನೋಡುತ್ತಿದ್ದರು. ಅವಳು ಅಳುವುದನ್ನು ಕಂಡು ಹೊಸ ಸಂಸ್ಕಾರದ ಕೆಲ ಪೋರರಿಗಳು

ನಗುತ್ತಿದ್ದರು ಕೂಡ. ಅಜಿತನಿಗೆ ಅದನ್ನು ಕಂಡು ಸಿಟ್ಟು ತಾಳದಂತಾಯಿತು.

"ಅಳುವವರನ್ನು ನೋಡಿ ನಗುವುದೂ ಒಂದು ಸುಧಾರಣೆಯೆಂದು ತಿಳಿದಿರುವರೊ ? ಇದೇ ಏನು ಜಗತ್ತಿನ ಸುಧಾರಣೆಯ ಚಿನ್ಹ!'' ಎಂದ.

ಅದಕ್ಕೆ ಜಾಧವ ಮಾಸ್ತರು, "ಹೀಗೆ ಒಮ್ಮೆಲೆ ಹರಿಹಾಯಬೇಡ. ಯಾವಾಗಲೂ ಸಮಾಜದ ಮುಖದಲ್ಲಿ ವಿಕಟಹಾಸ್ಯ ನಲಿಯುತ್ತಲಿದೆ. ಪುರೋಗಾಮಿ ಅದಕ್ಕೆ ಸೊಪ್ಪು ಹಾಕುವಂತಿಲ್ಲ!" ಎಂದು ತಾಳ್ಮೆಯನ್ನು ಬೋಧಿಸಿ ಕೊನೆಗೆ "ನಾಳೆ ಪ್ರಿನ್ಸಿಪಾಲರಿಗೆ ಹೋಗಿ ಭೆಟ್ಟಿಯಾಗು" ಎಂದು ಎಚ್ಚರಿಕೆಯನ್ನೂ ಕೊಟ್ಟರು.

ಉಗಿಬಂಡಿ ಕೂಗು ಹೊಡೆದು ಹೊರಟಿತು. ಬಾಗಿಲಲ್ಲಿ ಜಾಧವ ಮಾಸ್ತರರು ಬಾಗಿ ನಿಂತಿದ್ದಾರೆ. ತಮ್ಮನಿಗೆ ಇಂದಿರೆ ಮನೆಗೆ ಹೋಗಲು ಕೈಸನ್ನೆಯಿಂದ ಸೂಚಿಸಿದಳು. ಗಾಡಿ ಮರೆಯಾಗುವ ವರೆಗೂ ಅಜಿತ ನಿಂತಲ್ಲಿಯೇ ನಿಂತಿದ್ದ. ಅವನ ಕಿವಿಯಲ್ಲಿ "ನಾಳೆ ಪ್ರಿನ್ಸಿಪಾಲರನ್ನು ಕಾಣು!" ಎಂಬ ಮಾತು ಇನ್ನೂ ಸುತ್ತುತ್ತಲಿದ್ದಿತು. ಕೊನೆಗೆ ನಿಟ್ಟುಸುರೊಂದನ್ನು ಬಿಟ್ಟು ಭಾರವಾದ ಹೆಜ್ಜೆಗಳಿಂದ ಸ್ಟೇಶನದ ಹೊರಗೆ ಬಂದ.

ನಾಲ್ಕು ದಿನ ಜಾಧವ ಮಾಸ್ತರರ ಸಹವಾಸದಲ್ಲಿ ಅಜಿತನ ಮನಸ್ಸು ಸ್ವಲ್ಪ ಪ್ರಫುಲ್ಲವಾಯಿತು. ಎಲ್ಲಿಯೋ ನಂದನವನದ ಸ್ವಚ್ಛಂದ ಹವೆಯಲ್ಲಿ ಆನಂದದಿಂದ ವಿಹರಿಸುತ್ತಿದ್ದಿತು. ಈಗ ಮತ್ತೆ ಚಿಂತೆಯು ಚಿತೆಯಲ್ಲಿ ಸೇರಿತು. ಮತ್ತೆ ನಾಳೆ ಆ ಪ್ರಿನ್ಸಿಪಾಲರನ್ನು ಕಾಣಬೇಕು. ಆ ಪಾರತಂತ್ರ್ಯಪ್ರಿಯ ಪ್ರಿನ್ಸಿಪಾಲನ ನೆನಹೂ ಕೂಡ ಅವನಿಗೆ ಅಸಹ್ಯವಾಗಿತ್ತು. ಆತ ಕರಕೊಳ್ಳದಿದ್ದರೆ?

ಜೇಬಿನಲ್ಲಿ ಜಾಧವ ಮಾಸ್ತರರು ಅಂದೇ ಕೊಟ್ಟ ಐವತ್ತು ರೂಪಾಯಿಗಳಿದ್ದುವು. ಅವು ತೀರುವಷ್ಟರಲ್ಲಿ ಎಲ್ಲಿಯಾದರೂ ಒಂದು ಕೆಲಸ ಹಿಡಿಯುವುದು. ನವಕರಿ ಮಾಡುವುದು! ನವಕರಿ ಮಾಡುವುದೆ? ಒಬ್ಬರ ಆಳಾಗಿ ಬಾಳುವುದೇ? ದೇಶ ಸೇವೆಯನ್ನು ಮರೆಯುವುದೆ? ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡುವ ನಾನೇ ಇನ್ನೊಬ್ಬರ ಆಳಾಗಿ

ಹೊಟ್ಟೆಹೊರಕೊಳ್ಳುವ ಯೋಚನೆಯೇ ?

ಅವನು ಮಾರ್ಗದಿಂದ ಮುಂದೆ ಮುಂದೆ ಸಾಗುತಲಿದ್ದ. ಸುತ್ತ ಲಿನ ಜನರು ಓಡಿ ಹೋಗಿ ಎಲ್ಲಿಯಾದರೂ ಅಡಗಲು ಪ್ರಯತ್ನ ಮಾಡು ತ್ತಿದ್ದರು. ಅದರ ಕಲ್ಪನೆಯೂ ಅಜಿತನಿಗೆ ಬಂದಿರಲಿಲ್ಲ. 'ತಿರುಗು! ಓಡು! ಅಡಗು!' ಹೀಗೆ ಒದರುವ ಜನರ ಕೂಗು ಅವನ ಕರ್ಣರಂಧ್ರ ದಲ್ಲಿ ಸೇರುತ್ತಿದ್ದಿತು. ನಿಂತು ಸುತ್ತಲೂ ನೋಡುವ. 'ಇದೇನು ಜನರ ಕೂಗಾಟ? ಗೊಂದಲಕ್ಕೆ ಆರಂಭವಾಗಿರಬೇಕೆ? ಅಹುದು, ಅದೇ ಗೊಂದಲ, ಹಿಂದು ಮುಸಲ್ಮಾನರ ಗದ್ದಲ. ಇದಕ್ಕೇನು ಮಾಡುವುದು! ಈಗ ನಮ್ಮ ಮಂಡಲವಿರುತ್ತಿದ್ದರೆ ಏನಾದರೂ ಮಾಡಬಹುದಿತ್ತಲ್ಲ' ಎಂದೇನೇನೋ ವಿಚಾರಿಸುತ್ತ ಮುಂದೆ ಸಾಗುವನು. ಅವನು ಚಿಕ್ಕ ಓಣಿಯೊಂದನ್ನು ಯಾವಾಗ ಹೊಕ್ಕನೋ ಆಗ ಸ್ವಲ್ಪ ಮಬ್ಬಾಗುತ ಲಿದ್ದಿತು. ಮನೆ ಮನೆಗಳಲ್ಲಿ ದೀಪಗಳು ಹತ್ತಿದ್ದವು.

ಆಗ ಒಮ್ಮೆಲೇ ಯಾರೋ ಅವನ ಕೈಹಿಡಿದು ಎಳೆದರು. ಅಜಿತ ಚಕಮಕಿಸಿದ. ಹಿಂತಿರುಗಿ ನೋಡಿದ. ಅವನ ಮಿತ್ರ ಶೇಷನಿದ್ದ.

"ಎಲ್ಲಿ ತಿರುಗುತ್ತಿರುವಿ? ನಿಮ್ಮ ಮನೆಗೆ ಹೋಗಿ ಬಂದೆವಲ್ಲ?" ಶೇಷ ಕೇಳಿದ. ಧ್ವನಿಯಲ್ಲಿ ಗಾಬರಿ ಇದ್ದಂತಿತ್ತು.

"ಏಕೆ?"

"ಕೆಲಸವಿಲ್ಲ ನಮಗೆ!"

ಅಷ್ಟರಲ್ಲಿ ಆರ್ತಸ್ವರವೊಂದು ಕೇಳಬಂತು. ಓಡಿ ಹೋಗುತ್ತಿ ರುವ ಒಬ್ಬ ಮನುಷ್ಯನು ಮೈಯಿಂದ ರಕ್ತ ಸುರಿಯುತ್ತಿರಲು ಇವರ ಎದುರಿಗೆಯೇ ನೆಲಕ್ಕೆ ಬಿದ್ದ, "ಅರೆ ಅಲ್ಲಾ!" ಬೀಳುವಾಗ ಆತ ಉಚ್ಚ ರಿಸಿದ ಶಬ್ದವಿದು!

ಇನ್ನೊಬ್ಬ ಗಾಬರಿಯಿಂದ ಓಡುತ್ತಿದ್ದ. ಅವನಿಗೆ ಹಿಂದಿನಿಂದ ಯಾರೋ ಚೂರಿಯಿಂದ ಇರಿದರು.

"ಸಿಕ್ಕವನಂತೂ ಪಾರಾದ. ಅವನ ಬದಲು ನೀ ಸಾಯಿ!"

ಮಾತಿನ ಮುಡಿಯೊಡನೆಯೇ ಗಾಯಗೊಂಡವನು ಚೀರಿದ್ದ. "ಹಾ! ರಾಮಾ!"

ಜನತೆ ದಿಕ್ಕೆಟ್ಟು ಓಡುತ್ತಿದೆ. 'ಅರೇ ಅಲ್ಲಾ !' 'ಹಾ! ರಾಮಾ!' ಈ ಕರುಣ ಸ್ವರದ ಜೊತೆಯಲ್ಲಿಯೇ ಒಬ್ಬ ಮುಸಲ್ಮಾನ ಒಬ್ಬ ಹಿಂದುವೂ ಮೃತ್ಯುಮುಖದಲ್ಲಿ ಬೀಳುತ್ತಿದ್ದಾರೆ. ಇವರಿಬ್ಬರ ದೋಷವೇನು? ಒಬ್ಬ ಹಿಂದುವಾಗಿ ಹುಟ್ಟಿದ್ದು ತಪ್ಪಾದರೆ ಇನ್ನೊಬ್ಬ ಮುಸಲ್ಮಾನನಾದುದೇ ತಪ್ಪು!

ಇದನ್ನು ಕಂಡು ಅಜಿತ ಮುಂದೆ ಧಾವಿಸಿದ. ಶೇಷನೂ ಸಂಗಡ ಇದ್ದ. ಚೂರಿಯಿಂದ ಇರಿದವನೂ ಎಲ್ಲಿಯೋ ಮಾಯವಾಗಿದ್ದ. ಉಳಿದವರೂ ಓಡಿದ್ದರು. ಅಜಿತ ದಂಗುಬಡಿದು ನಿಂತ.

"ಹೀಗೇಕೆ ನಿಂತೆ?" ಶೇಷ ಕೇಳಿದ.

"ಏನು ಮಾಡಲಿ ಈ ಮೂರ್ಖ ಜನರಿಗೆ ಅನ್ನುವೆ." ಸಂತ್ರಸ್ತ ಸ್ವರದಲ್ಲಿ ಅಜಿತ ನುಡಿದ.

"ಇದಕ್ಕೇನು ಮಾಡುವೆ. ಹಿಂದು ಮುಸಲ್ಮಾನರ ಗೊಂದಲ ಆರಂಭವಾಗಿದೆ."

"ಅದಂತೂ ಕಾಣಿಸುತ್ತದಲ್ಲ! ಇದಕ್ಕೆ ಉಪಾಯವೇನು?"

"ಉಪಾಯ ಹಿಂದಿನಿಂದ ಯೋಚಿಸೋಣ ನಡೆ ಈಗ."

"ಎಲ್ಲಿ?"

"ಇಲ್ಲೇ ಸಮೀಪದಲ್ಲಿ ಪರಿಚಯಸ್ಥರ ಮನೆಯಿದೆ. ಅಲ್ಲಿ ಗೆಳೆಯರೆಲ್ಲರೂ ಇದ್ದಾರೆ. ಅಲ್ಲಿಯೇ ಹೋಗೋಣ."

"ಸುಮ್ಮನೆ ಮನೆಯಲ್ಲಿ ಕೂಡುವುದೇ?"

"ಮತ್ತೇನು ಮಾಡುವುದು?" ಸ್ವಲ್ಪ ದನಿಯಿಳಿಸಿ "ಬಾಗಿಲಲ್ಲಿ ಮೊಹದೀನನೂ ನಿಂತಿದ್ದಾನೆ. ಇದಂತೂ ಹಿಂದುಗಳ ಹಿಂಡು ಕಾಣಿಸುತ್ತಿದೆ. ಮತ್ತೇನಾದರೂ ಅನರ್ಥವಾಗುವುದೇನೋ! ಬೇಗ ನಡೆ!" ಎಂದ.

"ಕಾಲೇಜಿನ ಆ ನಮ್ಮ ಸಂಘದ ಐವತ್ತು ಜನರೂ ಹಾಗೇ ಒಕ್ಕಟ್ಟಿನಿಂದ ಇರುತ್ತಿದ್ದರೆ ಈಗ ಎಲ್ಲರೂ ಹೊರಬಿದ್ದು ಈ ದಂಗೆಯನ್ನು ನಿಲ್ಲಿಸಲು ಪ್ರಯತ್ನಿಸಬಹುದಾಗಿತ್ತಲ್ಲ! ನಮ್ಮ ತರುಣರಿಗೆ ಇಂಥ ಯಾವ ಕೆಲಸವೂ ಬೇಡ. ಕೇವಲ ತಮ್ಮ ತಮ್ಮ ಜೀವರಕ್ಷಣೆಗೆಯೇ ತೊಡಗು

ವರು. ಇಷ್ಟರಲ್ಲಿ ಒಂದು ಬದಿಯಿಂದ ಪೋಲೀಸರು ಓಡಿ ಬಂದುದ ರಿಂದ ಅವನ ವಿಚಾರ ಅಲ್ಲಿಯೇ ನಿಂತಿತು.

"ಬೇಗೂನ ಓಡಿರಿ!" ಒಬ್ಬ ಪೋಲೀಸ ಒದರಿದ, ಹೆದರಿಕೆಯಿಂದ.

"ಪೋಲೀಸರಿದ್ದ ಮೇಲೆ ಹೆದರಿಕೆಯೇನು?"

"ಏ, ಪೋಲೀಸರಿಗೂ ಜೀವವಿದೆ; ಅತ್ತ ಅಧಿಕಾರಿಗಳ ಕಾಟ. ಇತ್ತ ನಿಮ್ಮಂತಹ ಜನರ ಕಾಟ. ನಡುವೆ ನಾವೇ ಸಾಯಬೇಕು!" ಇನ್ನೊಬ್ಬ ಪೋಲೀಸ ಅಸಹಾಯ ಸ್ಥಿತಿಯಲ್ಲಿ ಹೇಳಿದ.

"ಇರಲಿ ಹೋಗರಪ್ಪ! ಹಿಂದ ದೊಡ್ಡ ಟೋಳಿ ಬಂತು!" ಬೇಸರದ ಸ್ವರದಲ್ಲಿ ಮತ್ತೊಬ್ಬ ನುಡಿದ.

"ಯಾರ ಗುಂಪದು?" ಶೇಷ ಕೇಳಿದ.

"ಯಾರದದೆಯೋ ಏನೋ!" ಸ್ವಲ್ಪ ತಡೆದು, "ಯಾರದಿದ್ದ ರೇನು ಎಲ್ಲರೂ ಒಂದೇ! ಹೋಗಿ ಅಡಗಿರಿ! ಓಡಿರಿ!" ಎಂದವನೇ ತಾನೇ ಮೊದಲು ಕಾಲ್ದೆಗೆದು ಪಾಠ ಹಾಕಿಕೊಟ್ಟ, ಆಳರಸರ ಎದೆಗಾರ ಪೋಲೀಸ

ದೂರಿನಿಂದ ಗೊಂದಲ ಕೇಳುತ್ತಿದ್ದಿತು.

ಶೇಷನು ಅಜಿತನನ್ನು ಎಳೆದುಕೊಂಡು ಓಡಿದ. ಒಂದು ದೊಡ್ಡ ಮನೆಯ ಕಟ್ಟೆಯ ಮೇಲೆ ನಿಂತು ಬಾಗಿಲ ಬಡಿದ. ಬಾಗಿಲ ತೆರೆಯಲು ಕೊಂಚ ವಿಲಂಬವಾಯಿತು. ಅಷ್ಟರಲ್ಲಿ ಗುಂಪಿನ ಗೊಂದಲ ತೀರ ಸಮೀ ಪಕ್ಕೆ ಬಂತು. ಬಡಿಗೆ ಹಿಡಿದ ಐವತ್ತು ಅರವತ್ತು ಜನರು "ಹೊಡೆಯಿರಿ! ಕೊಲ್ಲಿರಿ!" ಎಂದು ಹುಚ್ಚೆದ್ದು ಚೀರುತ್ತ ಬರುತ್ತಿದ್ದರು. ಆ ಪೋಲೀ ಸರೂ ಎಲ್ಲಿಯೋ ಕಣ್ಮರೆಯಾದರು. ಆ ಟೋಳಿಯು ಹತ್ತರ ಬರುವು ದರಲ್ಲಿಯೇ ಹತ್ತು ಸಲ ಬಾಗಿಲ ಬಡಿದಾಗಿರಬೇಕು. ಶೇಷನ ಎದೆ ಒಂದೇ ಸವನೆ ಹೊಡೆದುಕೊಳ್ಳಹತ್ತಿತು. ಕಟ್ಟೆಯ ಮೇಲೆ ಇನ್ನೂ ಮೋಹದೀನನೂ ಹೊರಗೆ ಇದ್ದ. ಅದೇನೋ ಸುದೈವದಿಂದ ಬಾಗಿಲು ತೆರೆಯಿತು. ಮೂವರೂ ಒಳ ಹೊಕ್ಕರೋ ಇಲ್ಲೋ ಅಷ್ಟರಲ್ಲಿ ಆ ದಂಗೆ ಖೋರರ ಗುಂಪೂ ಬಾಗಿಲಿಗೆ ಬಂದಿತು.

"ಬಾಗಿಲ ತೆರೆಯಲು ಎಷ್ಟು ತಡ ಮಾಡಿದಿರಿ?" ಶೇಷ ಸ್ವಲ್

ಸಿಟ್ಟಿನ ಸ್ವರದಲ್ಲಿ ಕೇಳಿದ.

"ಗೊಂದಲ ಸಮೀಪಕ್ಕೆ ಕೇಳ್ತ ಇದ್ದಿತು. ಯಾರಂತ ಬಾಗಿಲ ತೆಗೆಯೋದು ?"

"ಸಾಕ ! ಒಳ್ಳೇ ಚಾತುರ್ಯ ತೋರಿಸಿದ್ದಿರಲ್ಲ !"

"ಎಲ್ಲಾ ಈ ಅಪ್ಪನ ಸಲುವಾಗಿ !" ಅಜಿತನ ಕಡೆಗೆ ಕೈಮಾಡಿ ಹೇಳಿದನೊಬ್ಬ.

"ನನ್ನ ಸಲುವಾಗಿ ?" ಅಜಿತ ಉಚ್ಚರಿಸಿದ.

"ಹೌದ ಮತ್ತ? ನಿನ್ನನ್ನು ಹುಡುಕಿ ದಣಿದೆವು !" ಸೀತಲ ಆಧ್ಯತೆ ಬೆರೆತ ಸ್ವರದಲ್ಲಿ ನುಡಿದ.

"ಕಾರಿನಲ್ಲಿ ಕುಳಿತು ತಿರಗಾಡುವಾಗಲೂ ದಣಿಯುವೀ ನೀ !" ನಕ್ಕು ನುಡಿದ ಅಜಿತ.

"ಅಲ್ಲ ; ನಾಲ್ಕು ದಿನ ಕಾಲೇಜಿನ ಕಡೆಗೇ ಹಾಯಲಿಲ್ಲ ನೀ ?" ಮೋಹದೀನ ಕೇಳಿದ.

"ಸಾಕಪ್ಪ ಸುಮ್ಮನಿರು ನೀ ಮಾತಾಡಬೇಡ !" ಚಂದ್ರಕಾಂತನ ನಡುಗುವ ದನಿಯಲ್ಲಿಯ ನುಡಿಯಿದು.

"ಧ್ವನಿಯ ಮೇಲಿಂದೂ ಮುಸಲ್ಮಾನನೆಂದು ತಿಳಿಯುವರೇನು ಬಿಡೊ !" ಹಣಿಯೇರಿಸಿ ಚಂದ್ರಕಾಂತನ ಮಾತನ್ನು ಅಷ್ಟಕ್ಕೇ ತಡೆದು ಕೇಳಿದ ಇನ್ನೊಬ್ಬ.

"ಬರಲಿ; ಒಬ್ಬೊಬ್ಬರನ್ನ ಗುದ್ದಿ ಕಳಸತೇನಿ" ಯಶವಂತನ ಧೈರ್ಯದ ಮಾತು ಹೊರಬಿದ್ದಿತು.

"ಅಲ್ಲಪ್ಪ! ಇನ್ನೂ ನಿನ್ನ ರಾಷ್ಟ್ರೀಯ ಸೇನೆ ಸಿದ್ಧವಾಗಿಲ್ಲ! ;ಈಗಲೇ ಅಷ್ಟು ಕನಸು ಕಟ್ಟಬೇಡ."

"ಇನ್ನೆಲ್ಲಿಯ ರಾಷ್ಟ್ರೀಯ ಸೇನೆ! ಇನ್ನೆಲ್ಲಿಯ ಅಭ್ಯಾಸ ಮಂಡಲ!" ಅಜಿತ ನಿರುತ್ಸಾಹಿತನಾಗಿ ನುಡಿದ.

"ನೀನೇ ಹೀಗೆ ಕಾಲೇಜು ಬಿಟ್ಟ ಹೋದ ಮೇಲೆ ಹೇಗಾದೀತದು?" ಅಣಕದ ಸ್ವರದಲ್ಲಿ ಶೇಷ ಕೇಳಿದ.

"ನಾನು ಕಾಲೇಜು ಬಿಡಲಿಕ್ಕೆ ನನ್ನನ್ನು ಕಾಲೇಜಿನಲ್ಲಿ ಆಳಿನ ಮೇಲೆ

ಆಳನ್ನು ಕಳಿಸಿ ಯಾರೂ ಕರೆದೊಯ್ದಿಲ್ಲವಲ್ಲ!" ಅಜಿತನ ಅಷ್ಟೇ ಅಣಕದ ಸ್ವರದಲ್ಲಿಯ ಮಾತಿದು.

"ನಿನ್ನನ್ನು ಕರಸಲಿಕ್ಕೆ ನಿಮ್ಮಪ್ಪನೆಲ್ಲಿ ದೊಡ್ಡ ಅಧಿಕಾರಿ ಇದ್ದಾನ?" ಮತ್ತೊಂದು ಗುಂಡು ಹಾರಿಸಿದ ಮೋಹದೀನ.

"ಇರಲಿ ಬಿಡೋ, ಕಾಲೇಜಿನಲ್ಲಿ ಇರದಿದ್ದರೇನಾಯಿತು? ನಮ್ಮ ಕಡೆಗೆ ಬರಬಾರದೇನು?" ಸೀತಲ ಮಾತಿನ ದಿಸೆ ಹೊರಳಿಸಲೆಂದು ನುಡಿದ.

ಇಷ್ಟರಲ್ಲಿ ಬಾಗಿಲ ಮೇಲೆ ಬಡಿಗೆಯ ಹೊಡೆತ ಬಿದ್ದುವು. ಹೊರಗಡೆ ಹುಯ್ಲು ಕೇಳುತ್ತಿದ್ದಿತು. ಗೊಂದಲದಲ್ಲಿಂದ ಒಂದೆರಡು ಮಾತು ಕಿವಿಗೆ ಬಿದ್ದುವು.

"ಇಲ್ಲೇ ಸೇರಿದ ಆ ಮುಸಲ್ಮಾನ ಹುಡುಗ."

"ಹೊರಗೆ ಎಳೆಯೋಣ ಬರ್ರಿ!"

ಒಳಗೆ ಎಲ್ಲರೂ ನಡುಗಿದರು! ಮೋಹದೀನ ಇಲ್ಲಿ ಬಂದದ್ದು ಇವರಿಗೇನು ಗೊತ್ತು? ಕಾಲೇಜಿನ ತರುಣರಲ್ಲಿ ತಿರಗುವ ಮೋಹದೀನನನ್ನು ವೇಷದ ಮೇಲಿಂದ ಯಾರೂ ಮುಸಲ್ಮಾನನೆಂದು ಗುರುತಿಸುವಂತಿರಲಿಲ್ಲ.

ಮನೆಯ ಒಡೆಯ ಕೋಣೆಯಿಂದ ಈಗ ಹೊರಬಿದ್ದ. ಅವನ ಹಿಂದೆಯೇ ಹೆಂಡರು ಮಕ್ಕಳು ಇದ್ದರು. ಹುಡುಗರೆಲ್ಲ ಚಿಕ್ಕವರು. ಅವರೆಲ್ಲರ ಮುಖದಲ್ಲಿಯೂ ಭೀತಿಯ ಚಿನ್ಹವೂ ಒಡೆದು ತೋರುತಲಿದ್ದಿತು. ಅದರಲ್ಲೂ ಆ ಒಡೆಯ ಎಲ್ಲರಕಿಂತ ಹೆಚ್ಚಾಗಿ ಹೆದರಿದ್ದ. ಸಟ್ಟಾ ವ್ಯಾಪಾರದಲ್ಲಿ ಅಕಸ್ಮಾತ್ ದುಡ್ಡು ಸಿಕ್ಕುದರಿಂದ ಶ್ರೀಮಂತನಾದವನಾತ. ಅವನ ಹೆಂಡತಿ ಶೇಷನ ಊರಿನವಳೇ. ಅಂತೇ ಅವನ ಪರಿಚಯವಷ್ಟು. ಮೊದಲು ಮುಂಬಯಿಗೆ ಬಂದಾಗ ನಾಲ್ಕು ದಿನ ಇವರಲ್ಲಿಯೇ ಕಳೆದಿದ್ದ. ಈಗಲೂ ಆಗಾಗ ಬಂದು ಹೋಗುತ್ತಿದ್ದ. ಅಂತೇ ಈ ಹೊತ್ತು ಗೆಳೆಯರನ್ನೆಲ್ಲ ಕರೆದುಕೊಂಡು ಆ ಸಿರಿವಂತನ ಮನೆ ಸೇರಿದ ಶೇಷ. ಸ್ವಲ್ಪ ಕಾಲದಲ್ಲಿ ಗೊಂದಲ ನಿಂತೀತೆಂದು ಅವನ ಕಲ್ಪನೆಯಿತ್ತು.

ಸಿರಿವಂತಿಕೆಯ ಪದರಿನಲ್ಲಿ—ದೇಹ ಶ್ರಮವಿಲ್ಲದೆ—ಅದೇಕೆ ಮಾನಸಿಕ ಶ್ರಮವನ್ನೂ ಮಾಡದೆ ಕೂಡ—ಬಂದು ಬೀಳುವ ಪದವಿಯ ಸ್ಥಾನಗಳು ಬ್ರಿಟಿಷ ಸರಕಾರದ ರಾಜ್ಯದಲ್ಲಿ ಬಹಳ. ಚಾಣಾಕ್ಷ ಸರಕಾರ ಹಿಂದು ಸ್ಥಾನದಲ್ಲಿಯ ಪ್ರಜೆಗಳಿಗಾಗಿ ಇಂಥ ಸ್ಥಳಗಳನ್ನು ಕಲ್ಪಿಸಿಟ್ಟಿದೆ. ಪದವಿ ಪಿಪಾಸುಗಳ ಎದುರಿಗೆ ಗ್ರಾಮಪಂಚಾಯತಿ, ಮುನಸಿಪಾಲ್ಟಿ, ಲೋಕಲ್ ಬೋರ್ಡ, ಗ್ರಾಮ ಸುಧಾರಣಾ ಸಮಿತಿ, ಯುದ್ಧಸಹಾಯಕ ಮಂಡಳ, ಬರಗಾಲ ನಿವಾರಣ ಸಂಘ, ಒಕ್ಕಲಿಗರ ಋಣವಿಮೋಚನ ಕಮೀಟಿ, ಮೊದಲಾದ ಸಂಘ ಸಂಸ್ಥೆಗಳ ಬಲೆ ಬೀಸಿದಾರೆ. ಇಂಥ ಒಲೆಯೊಂದರಲ್ಲಿ ಬಿದ್ದು ಆಧುನಿಕ ಶ್ರೀಮಂತ ಪ್ರತಿಷ್ಠಿತನಾಗಿದ್ದನೀಗ. ಇಂಥವರು ಇಂದು ಕಲೆಕ್ಟರ ಕಮಿಶನರ ಮೊದಲಾದ ಸರಕಾರೀ ಅಧಿಕಾರಿಗಳು ಬರುವರೆಂದೊಡನೆಯೇ ಮ್ಯಾಂಚೆಸ್ಟರದ ದೋತರ ಉಟ್ಟು—ಅದೇಕೆ? ಖುದ್ದ ಇಂಗ್ಲಂಡದಲ್ಲಿ ಹೊಲಿದು ತಯಾರಾಗಿ ಬಂದ ಸೂಟು ಬೂಟುಗಳನ್ನು ಧರಿಸಿ,—ಹೂವಿನ ಹಾರಗಳನ್ನು ಕೈಯಲ್ಲಿ ಹಿಡಿದುಕೊಂಡು ಸ್ವಾಗತಕ್ಕೆ ಸಿದ್ಧರು. ಹಾಗೆಯೇ ಮಹಾತ್ಮರು ಇಂದು ಐದರ ಗಾಡಿಗೆ ಹೋಗುವರೆಂದು ತಿಳಿದೊಡನೆ ನಖಶಿಖಾಂತ ಖಾದಿಧಾರಿಗಳಾಗಿ—ಮಹಿಲಾಶ್ರಮಗಳಿಂದ ನೂಲು ಕೊಂಡು ತಂದು—ಮಹಾತ್ಮರ ಕೊರಳಲ್ಲಿ ತೊಡಿಸಲು ನಿಲ್ದಾಣದಲ್ಲಿ ಮುಂದೆ ನಿಲ್ಲುವರು. ಅದರಂತೆ ಪೋಲೀಸ ಇನಸ್ಪೆಕ್ಟರನನ್ನು ಮನೆಗೆ ಚಹಕ್ಕೆ ಕರೆದು ಕಾಂಗ್ರೆಸಿನ ಇಲ್ಲದ ಹುಳುಕು ಹೇಳಲೂ ಹಿಂಜರಿಯರು. ಅದೇ ರೀತಿ ಕಾಂಗ್ರೆಸ ಮುಖಂಡರನ್ನು ಮನೆಯಲ್ಲಿ ಇಳಿಸಿಕೊಂಡು ಬ್ರಿಟಿಷ ಸತ್ತೆಯ ಅನ್ಯಾಯಗಳನ್ನು ಹೇಳಿಕೊಳ್ಳದೆ ಬಿಡರು: ಕಾಂಗ್ರೆಸು ಗೆಲ್ಲುವಂತೆ ತೋರಿದೊಡನೆಯೇ ಕಾಂಗ್ರೆಸದ ಪರವಾಗಿ ಹುರಿಯಾಳುಗಳಾಗಿ ನಿಂತರೇ. ಹಾಗೆ ತೋರದಿದ್ದರೆ ಸ್ವತಂತ್ರ ನಿಂತು ಸರಕಾರ ಕಾಂಗ್ರೆಸುಗಳೆರಡಕ್ಕೂ ಪ್ರಾಮಾಣಿಕರೆಂದು ತೋರಿಸಿ ಕೊಡಲೂ ಅನುಮಾನಿಸರು. ಶಾಂತಿಕಾಲದಲ್ಲಿ ಇವರ ಮನೆಗಳನ್ನು ಗಾಂಧಿ, ನೆಹರು, ಸುಭಾಷರ ಚಿತ್ರಗಳು ಅಲಂಕರಿಸುವವು. ಕಾಂಗ್ರೆಸ ಮುಂದಾಳುಗಳನ್ನು ಹಿಡಿಯತೊಡಗಿದರೋ, ಆ ಸ್ಥಳದಲ್ಲಿ ವಿಕ್ಟೋರಿಯಾ ಪಂಚಮ ಜಾರ್ಜರ ಭಾವಚಿತ್ರಗಳು ಬಂದುವೇ!

ಇಂಥ ಒಬ್ಬ ಗೃಹಸ್ಥನ ಮನೆಯಲ್ಲಿ ಆ ಗೆಳೆಯರು ಬಂದು ಸೇರಿದ್ದರು. ಅಜಿತನ ಮನೆಗೆಂದು ಹೋದವರು ನಡುವೆಯೇ ಈ ಹಿಂದು ಮುಸಲ್ಮಾನ ಗೊಂದಲವೇಳಲು ಹಿಂದುಗಳು ಹೆಚ್ಚಾಗಿ ಇರುವ ಈ ಭಾಗದಲ್ಲಿ ಈ ಸಿರಿವಂತನ ಮನೆ ಮೋಹದೀನನ ರಕ್ಷಣೆಗೆ ಯೋಗ್ಯವೆಂದು ಭಾವಿಸಿ ಶೇಷ ಎಲ್ಲರನ್ನೂ ಕರೆದುಕೊಂಡು ಅಲ್ಲಿ ಸೇರಿದ್ದ.

ಅಜಿತನು ನಿಲ್ದಾಣಕ್ಕೆ ಅಕ್ಕನನ್ನು ಕಳಿಸಿ ಈಗ ಬರಬಹುದೆಂದು ಅವನ ದಾರೀ ಕಾಯುತ್ತ ಶೇಷ ಹೊರಗೆಯೇ ನಿಂತಿದ್ದ. ಅವನು ಕಾಣಿಸಿದೊಡನೆಯೇ ಕರೆತರಲು ಬೀದಿಗೆ ಬಂದಿದ್ದ. ಆದರೆ ಹೇಗೋ ಆ ಗುಂಪಿಗೆ ಗೊತ್ತಾಗಿ ಹೋಯಿತು, ಈ ಮನೆಯಲ್ಲಿ ಮುಸಲ್ಮಾನ ಹುಡುಗ ನಿದ್ದಾನೆಂದು. ಅದರಿಂದ ಅವರು ಆ ಸಿರಿವಂತನ ಬಾಗಿಲ ಮುರಿಯಲು ಯತ್ನಿಸತೊಡಗಿದರು. ಸಂಬಳಕ್ಕಾಗಿಯೇ ಕೆಲಸ ಮಾಡುವ ಆಳುಗಳು ಸಂಕಟ ಬಂದೊಡನೆಯೇ ಎಲ್ಲಿಯೋ ಮಾಯವಾಗಿಬಿಟ್ಟರು. ಅವರೆಲ್ಲಿ ಹೋದರೋ ಅವರೊಡೆಯನಿಗೇ ಗೊತ್ತಿರಲಿಲ್ಲ.

ಆ ಹೆದರಿದ ಸಿರಿವಂತ ಹೆಂಡತಿಗೆ ಹೇಳಹತ್ತಿದ :

“ ನೀನೇ ಸ್ವಲ್ಪ ಬಾಗಿಲ ತೆರೆದು ಇಲ್ಲಿ ಮುಸಲ್ಮಾನರು ಯಾರೂ ಇಲ್ಲೆಂದು ಹೇಳು. ಸಣ್ಣ ಹುಡುಗನನ್ನೂ ಬಗಲಲ್ಲಿ ಎತ್ತಿಕೋ ಬೇಕಾದರೆ ! ”

“ ನೀವೇ ಹೋಗಿ ಹೇಳಿದರೆ ಅವರ ಮೇಲೆ ಇಂಪ್ರೇಶನ್ ಬೀಳುವುದು. ” ಶೇಷನು ಸಾವುಕಾರನ ಮಾತನ್ನು ನಡುವೆಯೇ ತಡೆದು ಹೇಳಿದ.

“ ಇಂಥ ಟೋಳಿಗಳ ನಿಯಮ ಹತ್ತುವದಿಲ್ಲ ! ಗಂಡಸರನ್ನು ಕಂಡರೆ ಬೇಕಾದದ್ದನ್ನೂ ಮಾಡಬಹುದು. ” ಸೇಠ ಮತ್ತಿಷ್ಟು ಹೆದರಿ ನುಡಿದ.

“ ಅದಕ್ಕಿಂತ ಈ ಹುಡುಗನನ್ನೇ ಮುಚ್ಚಿಡೋಣ. ” ಅವನ ಅರ್ಧಾಂಗಿ ಮೆಲ್ಲನೆ ಉಸುರಿದಳು.

“ ಅಷ್ಟು ವೇಳೆ ಇಲ್ಲ. ಬಾಗಿಲ ಈಗ ಮುರಿಯುವದು ! ನೀನೇ ಹೇಳು. ಇಲ್ಲವಾದರೆ ಮೋಹದೀನನನ್ನು ಒಪ್ಪಿಸಬೇಕಾಗುವದು. ಎಲ್ಲಿಂದ

ಗುರುತ ಅಂತ ಕರಕೊಂಡು ಮನೆ ಹಾಳಿಗೆ ಹಚ್ಚಿ ಇಟ್ಟೆ!" ಕೆರಳಿದ ಸ್ವರ ದಲ್ಲಿ ಹೆಂಡತಿಗೆ ನುಡಿದ ಸೇಡಜಿ ಮಹಾರಾಯ.

"ಅದೇಕೆ, ನಾನೇ ಹೇಳುವೆ" ಮೋಹದೀನ ಮುಂದೆ ಬಂದನೀಗ.

ಇಷ್ಟರಲ್ಲಿ ಬಾಗಿಲ ಮುರಿಯಿತು. ಅಜಿತ ಯಶವಂತ ಮುಂದೆ ಆದರು. ಶೇಷ ಮೋಹದೀನ ಅವರ ಹಿಂಗಾವಲಿಗೆ ನಿಂತರು. ಅವರ ಹಿಂದೆ ಶೀತಲ ಚಂದ್ರಕಾಂತರು ಮನಸ್ಸಿಲ್ಲದೆಯೂ ನಿಲ್ಲಬೇಕಾಯಿತು. ಆ ಶ್ರೀಮಂತ ಮಾತ್ರ ಎಲ್ಲಿಯೋ ಅಡಗಿ ಕುಳಿತ. ಹೆಂಡರು ಮಕ್ಕಳು ಹೋದರೂ ಅಡ್ಡಿಯಿಲ್ಲ. ನಾಳೆ ಇನ್ನೊಂದು ಸಂಸಾರ ಹೂಡಲು ಬಂದೀತು. ಆದರೆ ತನ್ನ ಜೀವಕ್ಕೆ ಮಾತ್ರ ಅಪಾಯ ಒದಗಿ ಉಪಯೋಗ ವಿಲ್ಲ, ಎಂಬುದೇ ಅವನ ಮನೀಷೆ. ಮೋಹದೀನ ಸಮೀಪದಲ್ಲಿದ್ದ ಪಲ್ಲಂ ಗಕ್ಕೆ ಸೊಳ್ಳೆ ಪರದೆಯನ್ನು ಕಟ್ಟಲು ನಿರ್ಮಿಸಿದ ಸಲಾಖೆಗಳನ್ನು ಉಚ್ಚಿ ಮುಂದಿನವರ ಕೈಯಲ್ಲಿ ಕೊಟ್ಟ. ತಾನೂ ತಕ್ಕೊಂಡ.

"ಏನು ಗೊಂದಲವಿದು ?"

ಅಜಿತನ ಅಧಿಕಾರವಾಣಿಯಿದು. ಈಗ ತನ್ನ ಮಂಡಲದ ಧ್ಯೇಯದ ನೆನಪಾಯಿತೇನೋ ಅವನಿಗೆ. ಮೈಯಲ್ಲಿ ಹುರುಪು ತುಂಬಿತು. ಧೈರ್ಯ ಇಮ್ಮಡಿಸಿತು.

"ಹೋಗೋ ಹುಚ್ಚಾ! ಮನೆಯಲ್ಲಿ ಮುಸಲ್ಮಾನನ್ನಿಟ್ಟುಕೊಂಡು ಬುದ್ಧಿ ಹೇಳಲಿಕ್ಕೆ ಬಂದಿದ್ದಾನೆ." ಗುಂಪಿನ ಮುಖಂಡ ನುಡಿದ, ತುಚ್ಛ ಸ್ವರದಿಂದ. ಹಿಂದೆ ನಿಂತು.

ಅಜಿತನಿಗೆ ಎಲ್ಲಿಯೋ ಕೇಳಿದ ಸ್ವರದ ನೆನಪಾಯಿತು. ಎಲ್ಲರ ಮುಖಗಳೂ ವ್ಯಗ್ರವಾಗಿದ್ದವು.

"ಇಲ್ಲಿ ಯಾರೂ ಮುಸಲ್ಮಾನರಿಲ್ಲ." ಯಶವಂತ ಹೇಳಿದ ಖಂಡಿತ ಸ್ವರದಲ್ಲಿ.

"ಇದ್ದರೂ ನಿಮಗೆ ಸಿಗಲಾರ." ಅಜಿತ ಒದರಿದ.

"ಇವನನ್ನೇ ಮೊದಲು ಎಳೆಯಿರಿ !"

ಎಂದವನೇ ಅಜಿತನ ಮೇಲೆಯೇ ಬಡಿಗೆ ಎತ್ತಿದರವರು. ಬಾಗಿಲ ಮೇಲಿನ ಗೋಡೆಗೆ ಬಡಿಗೆಗಳು ಬಡಿದುವು. ಅಜಿತ ಇಷ್ಟರಲ್ಲಿ ಕೈಯೊಳ

ಗಿನ ಕಂಬಿಯಿಂದ ಮುಂದಿನವನಿಗೆ ತಿವಿದು ಹಿಂದೆ ನುಗಿಸಿದ. ಆತ ಉರುಳಿದ. ಸಂಗಡಲೇ ಹತ್ತಿಪ್ಪತ್ತು ಜನ ಮುಂದುವರಿದು ಬಂದರು. ಬಡಿಗೆಗಳನ್ನು ನೆವರಿದರು. ಚಿಕ್ಕ ಬಾಗಿಲವಾದುದರಿಂದ ಅವರ ಆಟ ಸಾಗದಾಯಿತು. ಹಿಂದಿನಿಂದ ಮೋಹದೀನ ಶೇಷರೂ ತಿವಿಯತೊಡಗಿದರು. ಕುಡುಕರ ಗುಂಪಿಗೆ ಒಳಗೆ ಬರಲು ಎಡೆಯಾಗಲಿಲ್ಲ. ಪ್ರತಿಕಾರ ಮಾಡುವವರು ದೊರಕಿದರೆ ರಾಕ್ಷಸರೂ ಹಿಂದೆ ಸರಿಯುವರು. ಅವರಲ್ಲಿ ಉನ್ಮಾದ ಸಾಧಿಸುವಿಕೆಗಳ ಹೊರತು ಬೇರೆ ಸಾಮರ್ಥ್ಯವೂ ಇರದು.

ದಂಗೆಗಾರರು ಹಿಂದೆ ಸರಿದರು. ಆದರೂ ಬೀದಿಯ ಮೇಲೆ ನಿಂತು ಕಲ್ಲೆಸೆಯಲು ತೊಡಗಿದರು. ಕೆಲವರು ಹುಚ್ಚೆದ್ದು ಮನೆಗೇ ಕೊಳ್ಳಿ ಇಡೋಣ ಎನ್ನಹತ್ತಿದರು. ಕತ್ತಲೆ ಬೆಳೆಯುತ್ತೊಡಗಿತು. ಒತ್ತಟ್ಟಿಗೆ ಆವಾರದ ಗೋಡೆಯ ಬದಿಯಲ್ಲಿ ವಿದ್ಯುದ್ದೀಪದ ಕಂಬವೊಂದಿತ್ತು. ಅದರ ಬೆಳಕಿನಲ್ಲಿ ಒಂದು ವ್ಯಕ್ತಿ ಬಡಿಗೆಯನ್ನು ನೆಲಕ್ಕೆ ಊರಿ ನಿಂತು ಬಿಟ್ಟಿದೆ. ಅದೇಕೋ ಮುಖದಲ್ಲಿ ಮುಗುಳ ನಗೆ ಚಿಮ್ಮುತ್ತಿದೆ. ಮೇಲಿಂದ ಮೇಲೆ ಬಾಗಿಲ ಕಡೆಗೆ ನೋಡುತ್ತಿದ್ದಾನೆ.

ಮನೆಯ ಒಡೆಯ ಒಂದು ಸ್ಥಳದಲ್ಲಿ ಅಡಗಿ ಕುಳಿತಿದ್ದ. ಅಲ್ಲಿಂದ ಮನೆಯಲ್ಲಿ ನಡೆದುದೆಲ್ಲ ಕಾಣಿಸುತ್ತಿದ್ದಿತು. ಅವನು ಮಾತ್ರ ಯಾರಿಗೂ ಕಾಣುವಂತಿರಲಿಲ್ಲ. ಆದರೂ ಮನೆಗೆ ಕೊಳ್ಳಿಯಿಡುವ ಮಾತು ಬಂದೊಡನೆ ಕುಳಿತಲ್ಲಿಯೇ ಅವನ ಕೈಕಾಲುಗಳು ತಣ್ಣಗಾದುವು.

"ಆ ಹುಡುಗ ಅಜಿತನಂತೆ ಕಾಣತಾನಲ್ಲ?" ಅಲ್ಲಿ ನಿಂತವನು ಅಂದ.

"ಹೌದೌದು, ನಾನು ಅಜಿತನೇ ಅಹುದು. ಏನು ಮಾಡುವಿರಿ?" ಈಗ ಅಜಿತನಿಗೆ ಈ ಮನುಷ್ಯನನ್ನು ಎಲ್ಲಿಯೋ ನೋಡಿದಂತೆ ಅನಿಸಿತು.

"ಮನೆಗೆ ಬೆಂಕಿ ಹಚ್ಚಿದರೆ ನಿನ್ನ ತಯಾರಿ ಏನು?" ಆ ವ್ಯಕ್ತಿಯ ಪ್ರಶ್ನೆಯಿದು.

"ಯಾರು! ಶಮುಸೇರನೇನು?" ಕೇಳಿದ ಅಜಿತ.

"ಹೌದು; ನೀನಿಲ್ಲಿರುವಿಯೆಂದೇ ಏನೂ ಮಾಡಲು ಬರುವದಿಲ್ಲ. ಇಲ್ಲವಾದರೆ ಈ ಮನೆಯನ್ನೇ ಸುಟ್ಟುಬಿಡುತ್ತಿದ್ದೆವು!"

"ಏಕೆ?"

" ಆದರ ಕಾರಣ ನಿನಗೆ ತಿಳಿಯದು, ಸೇಠನಿಗೆ ಚನ್ನಾಗಿ ಗೊತ್ತು."

" ಶಮುಸೇರ ! ನೀನೂ ಮುಸಲ್ಮಾನ ವಿದ್ಯಾರ್ಥಿ ಮೇಲೆ ಕೈ ಯೆತ್ತುವೆಯಾ ? " ವಿಚಾರದ ತೂಗಾಟದಲ್ಲಿ ಅಜಿತನ ಬಾಯಿಂದ ಮಾತು ಹೊರಬಿತ್ತು. ಶಮುಶೇರನ ಮಾತಿನ ಕಡೆಗೆ ಅವನ ಲಕ್ಷ್ಯವಿರಲಿಲ್ಲ.

" ನಮಗೆ ಜಾತಿಯ ಪ್ರಶ್ನೆಯಿಲ್ಲ. ನಿನಗಿನ್ನೂ ಇದರ ಗುಟ್ಟು ತಿಳಿಯದು ಅಜಿತ. ಅದನ್ನೇನು ಕಾಲೇಜಿನಲ್ಲಿ ಕಲಿಸುವುದಿಲ್ಲ. ಹಃ! ಹಃ! ಹಃ!"

ನಗುತ್ತ ಶಮುಸೇರ ಮುಂದೆ ಬಂದ. ಎಲ್ಲ ಜನರೂ ಅವನ ಬೆನ್ನ ಹಿಂದೆಯೇ ಬಂದರು. ಅವರೆಲ್ಲರನ್ನು ತಡೆದು ಶಮುಸೇರ ಹೇಳಿದ.

" ಎಲ್ಲರೂ ಹೋಗಿರಿ! ಇಲ್ಲಿ ನಿಮ್ಮದೇನೂ ಕೆಲಸವಿಲ್ಲ. ಅಜಿತ ಎಂದೂ ಸುಳ್ಳು ಹೇಳಲಾರ. ಮುಂದೆ ಹೋಗಿ ರಾಮಲಾಲನ ಮನೆಗೆ ಮುತ್ತಿಗೆ ಹಾಕಿರಿ!"

" ಇದೇನು? ಎಂಥ ಗೊಂದಲ ಎಬ್ಬಿಸಿರುವಿ? ವಿನಾಕಾರಣ ಜೀವ ಹಾನಿ ನಿಲ್ಲಿಸಲ್ಲ!" ಅಜಿತ ಹೇಳಿದ.

" ಎರಡು ದಿವಸ ಹೀಗೆ ನಡೆಯೋದೇ." ಎನ್ನುತ್ತ ಶಮುಸೇರ ಇನ್ನೂ ಮುಂದೆ ಬಂದು ಕೇಳಿದ :

" ನಿಮಗೆಲ್ಲಿಯಾದರೂ ಹೋಗಬೇಕಾಗಿದೆಯೋ? ಕಳಿಸುವೆ ನಡೆಯಿರಿ."

" [illegible]ದು. ನಮಗೆ ಕಾಲೇಜ ಹಾಸ್ಟೇಲಿಗೆ ಹೋಗಬೇಕಾಗಿದೆ." ಚಂದ್ರಕಾ[illegible] ಮುಂದೆ ಬಂದು ಹೇಳಿದ.

" ಚ[illegible] ಕುಡಿದೇ ಹೋಗಿರಲ್ಲ ? " ಮನೆಯ ಒಡತಿ ನುಡಿದಳು.

" ನನಗೂ ಆಮಂತ್ರಣವಿದೆಯಲ್ಲ ? " ಶಮುಸೇರ ಜೋಡಿ ಔತಣ ತಕ್ಕೊಂಡ.

ಈಗ ಎಲ್ಲರಿಗೂ ಗೊತ್ತಾಯಿತು. ಶಮುಶೇರ ಈ ಗುಂಪಿನ ಮುಖಂಡ. ಇವನಿಗೂ ಅಜಿತನಿಗೂ ಗುರುತಿದೆ. ಈ ಗುರುತಿನಿಂದಲೇ ಈ ಹೊತ್ತ[illegible]ನೆ ಹಾಗೂ ತಾವು ಉಳಿದರು. ಅದರಿಂದ ಒಡತಿ ಕೂಡಲೆ ಒಳಗೆ ಕ[illegible]ಕ್ಕೆ ಇಟ್ಟಳು. ಆಗ ಸೇಠ ಹೊರಗೆ ಬಂದ. ಇನ್ನೂ

ಅವನ ಮುಖದ ಮೇಲೆ ಹೆದರಿಕೆಯು ಇತ್ತು. ಚಹ ಕುಡಿಯುತ್ತ ಅಜಿತನ ಕಡೆಗೆ ಹೊರಳಿ,—

"ನೀನೂ ಹಾಸ್ಟೇಲಿಗೇ ಬರುವಿಯಲ್ಲ?" ಚಂದ್ರಕಾಂತ ಕೇಳಿದ.

"ನಾ ಹೇಗೆ ಬರಲಿ? ನನ್ನನ್ನು ಅಲ್ಲಿಂದ ಹೊರಗೆ ಹಾಕಿರುವರಲ್ಲ!"

"ಏನಡ್ಡಿಯಿಲ್ಲ. ನನ್ನ ಗೆಸ್ಟ ಅಂತ ನಿಲ್ಲು!" ಚಂದ್ರಕಾಂತ ಅಂದ.

"ಅದೇನೂ ಬೇಡ, ನಮ್ಮ ಮನೆಗೆ ನಡೆ." ಸೀತಲ ಕರೆದ.

"ನಾನೆಲ್ಲಿಯಾದರೂ ಹೋಗುವೆ."

"ಹಾಗೇನು ಮಾಡಬೇಡಿರಿ. ಈ ಹೊತ್ತು ಒಂದು ದಿನ ನಮ್ಮಲ್ಲಿಯೇ ಇದ್ದುಬಿಡಿರಿ!" ಎಂದು ಶ್ರೀಮಂತ ಆಗ್ರಹ ಮಾಡಿದ.

"ದಯಮಾಡಿ ಬೇಡ; ನನಗಷ್ಟು ನಿಮ್ಮ ಗುರುತಿಲ್ಲ. ಸುಮ್ಮನೆ ನಿಮಗೇಕೆ ತೊಂದರೆ ಕೊಡುವುದು?"

"ಶೇಷನನ್ನೂ ಇಲ್ಲೇ ಇಟ್ಟುಕೊಳ್ಳುವೆವು. ಅವನಂತೂ ನಿಮ್ಮ ಗೆಳೆಯನೇ ಇರುವನಲ್ಲ!" ಮನೆಯ ಒಡತಿ ಮಾತು ಹಾಕಿದಳು.

ಕೊನೆಗೆ ಅಜಿತ ಶೇಷರಿಬ್ಬರೂ ಅಲ್ಲಿಯೇ ನಿಲ್ಲುವುದೆಂದು ನಿಶ್ಚಯವಾಯಿತು. ಸೇಠನಿಗೆ ಅಜಿತನಿಂದಲೇ ತನ್ನ ಮನೆ ಉಳಿಯಿತೆಂದು ಗೊತ್ತಾಗಿದ್ದಿತು. ಇಂಥ ಸಮಯದಲ್ಲಿ ಅಜಿತನಂಥವರು ಮನೆಯಲ್ಲಿರುವುದು ಸುರಕ್ಷಿತವೆಂದರಿತು ಅವರನ್ನು ಇಟ್ಟುಕೊಂಡೇ ಬಿಟ್ಟ. ಉಳಿದವರು ಸೇಠಜಿಯವರ ಕಾರಿನೊಳಗಿಂದ ಹಾಸ್ಟೇಲ ಸೇರಿದರು. ಶಮಸೇರ ಅವರನ್ನು ಸುಖರೂಪವಾಗಿ ತಲುಪಿಸಿದ.

ಇದಾಗುವುದರಲ್ಲಿ ಕತ್ತಲೆ ಬಹಳ ಆಗಿದ್ದಿತು. ಶೇಷ ಹಾಗೂ ಅಜಿತ ಒಂದು ಕೋಣೆಯಲ್ಲಿ ಮಲಗಿಕೊಂಡರು. ಸ್ವಲ್ಪ ಹೊತ್ತಿನಲಿ ಹಾಸಿಗೆಯ ವ್ಯವಸ್ಥೆಯೆಲ್ಲ ಚೆನ್ನಾಗಿ ಆಗಿದೆಯೋ ಇಲ್ಲವೋ ಎಂಬುದನ್ನು ನೋಡಲಿಕ್ಕೆ ಬಂದು, ಸೇಠಜಿಯು—

"ಇನ್ನೂ ನಿದ್ರೆ ಬಂದಿಲ್ಲವೋ? ಕುಡಿಯಲಿಕ್ಕೆ ನೀರು ಬೇಕೋ?" ಎಂದು ಕೇಳಿ, ಹೋಗಿ ತನ್ನ ಕೋಣೆಯಲ್ಲಿ ಮಲಗಿಕೊಂಡ. ಗಟ್ಟಿಯಾಗಿ ಬಾಗಿಲ ಹಾಕಿಕೊಳ್ಳಲೂ ಮರೆಯಲಿಲ್ಲ ಕೂಡ.

ಈ ಪ್ರಸಂಗದಿಂದ ಅಜಿತನ ಮನಸ್ಸು ಮತ್ತಷ್ಟು ಕಲಕಿ ಹೋಗಿ

ದ್ದಿತು. ನಿದ್ರಾಂಗನೆ ಅವನ ಹತ್ತಿರ ಸುಳಿಯಲಿಲ್ಲ; ಸುಳಿಯುವಂತೆಯೂ ಇರಲಿಲ್ಲ. ತಲೆಯಲ್ಲಿ ಒಂದೊಂದೇ ವಿಚಾರತರಂಗಗಳು ಏಳತೊಡಗಿದುವು.

ಇದೆಂಥ ಹುಚ್ಚು ! ಅದೂ ಇಪ್ಪತ್ತನೆಯ ಶತಮಾನದಲ್ಲಿಯೂ ಈ ಹುಚ್ಚು ! ಭಾರತದೊಳಗೆ ಅತ್ಯಂತ ಸುಧಾರಣೆಯ ಶಿಖರದ ತುದಿಯಲ್ಲಿರುವ ಮುಂಬಯಿ ನಗರದಲ್ಲಿ, ಕನ್ಯಾಕುಮಾರಿಯಿಂದ ಹಿಮಗಿರಿಯ ವರೆಗೆ ಕೋಲಿಗೆ ಹೊನ್ನು ಕಟ್ಟಿಕೊಂಡು ತಿರುಗಿದರೂ ಏನೂ ಆಗದೆಂಬ ಶಾಂತಮಯ ವಾತಾವರಣದ ಬ್ರಿಟಿಷ ಸತ್ತೆಯಲ್ಲಿ ಈ ಅಶಾಂತಿಯ ಭೂತ ಕುಣಿಯುತ್ತಲಿದೆಯಲ್ಲ !

ಅದೇಕೆ ?

ಪಾರತಂತ್ರ್ಯದ ಕಾರಾಗೃಹದಲ್ಲಿ ಕುಳಿತ ಭಾರತೀಯರಿಗೆ ಒಂದು ಸತ್ಯದರ್ಶನವಾಗಿದೆ. ಅದೆಂದರೆ ಹಿಂದು ಮುಸಲ್ಮಾನರು ಪರಸ್ಪರ ವೈರಿಗಳು. ಅದೂ ಪೂರ್ವಕಾಲದಿಂದಲೂ ವೈರಿಗಳು. ಪ್ರತಿಯೊಬ್ಬರಿಗೂ ವೈರಿಯ ಸೇಡು ತೀರಿಸದ ವರೆಗೆ ಸುಖವಾಗದು. ಶಾಂತಿ ಸಿಗದು.

ಈ ಭಾವನೆಯ ಓಘದಲ್ಲಿ ಭಾರತದ ಸ್ವಾತಂತ್ರ್ಯವನ್ನೇ ಮರೆತಿದ್ದಾರೆ. ನಾಡನ್ನೇ ಹೋಳು ಮಾಡಲು ಹವಣಿಸುತ್ತಿದ್ದಾರೆ. ಅದಕ್ಕಾಗಿ ಹೊಡೆದಾಡುತ್ತಿದ್ದಾರೆ. ಇದನ್ನೇ ಪರಕೀಯ ಸರಕಾರವು ಪತ್ರಿಕೆಗಳಿಂದ ಚಿತ್ರಪಟಗಳಿಂದ ಜಗತ್ತಿನ ತುಂಬ ಪ್ರಕಟಿಸಿ ಪ್ರದರ್ಶಿಸಿ, ಈ ಮೂರ್ಖ ಹಿಂದುವಾಸಿಗಳ ಮೇಲೆ ಅಧಿಕಾರ ನಡೆಯಿಸಲು ತಾವು ಇರಲಿಕ್ಕೇಬೇಕೆಂದು ಸಾರುತ್ತಿದೆ. ಏಕೆ ಸಾರಬಾರದವರು? ಇವರೇ ವರ್ತಿಸಿದ ಮೇಲೆ....

ಹಿಂದೀ ಮುಂದಾಳುಗಳೆನ್ನುವರು : 'ಭಾರತ ನಮ್ಮ ಮಾತೃಭೂಮಿ, ನಾವು ಭಾರತ ಮಾತೆಯ ಔರಸ ಮಕ್ಕಳು! ನಾವು ನಮ್ಮ ಕೈಯಿಂದಲೇ ಎಷ್ಟೋ ಸಲ ಅವಳನ್ನು ಅನ್ಯರಿಗೆ ಒಪ್ಪಿಸಿದ್ದರೂ ಕಳಕೊಂಡಿದ್ದರೂ ಕೂಡ ವಾರಸಾ ಹಕ್ಕು ನಮಗೆ ಸಲ್ಲುವದು. ಜಗತ್ತೆಲ್ಲ ಯಾವ ಕಾಲದಲ್ಲಿ ಅಜ್ಞಾನಾಂಧಕಾರದಲ್ಲಿ ಮುಳುಗಿತ್ತೋ ಆಗ ನಾವು ಜ್ಞಾನದ ಅತ್ಯುನ್ನತ ಶಿಖರದಲ್ಲಿ ಬೆಳಗುತ್ತಿದ್ದೆವು. ಅನ್ಯ ದೇಶಗಳ ಜನತೆಯೆಲ್ಲ ಪಶುಗಳಂತೆ ಬದುಕುತ್ತಿರಲು ಆಗ ನಾವು ಸಂಸ್ಕೃತಿ ಸಂಪನ್ನರಾಗಿ

ಬಾಳಿದ್ದೆವು. ಎಷ್ಟು ಸಲ ಸೋತರೇನಾಯಿತು? ನಾವು ಜೀವಂತರಿದ್ದೇವೆ.'

ಆದರೆ ಪರಾಜಯರಾದ ಪ್ರಜೆಗಳಿಗೆ ಬಾಳುವ ಹಕ್ಕೇ ಇರದು, ಎಂಬ ಅರಿವಾದರೂ ಇವರಿಗೆ ಇದೆಯೋ?

ಅಖಂಡ ಭಾರತ—ಏಶಿಯಾ ಖಂಡದ ಮೂರನೆಯ ಪಾಲು—ವನ್ನು ಆಳುವ ಹಿಂದು ಸಾಮ್ರಾಜ್ಯವನ್ನು ಕಳಕೊಂಡು ಕೂತಿದ್ದಾರೆ! ನಿರ್ಮಾಲ್ಯಸ್ವರೂಪಹಿಂದುಗಳು! ಇನ್ನು ಸ್ವತಂತ್ರರಾಗುವರಂತೆ, ರಾಜ್ಯವಾಳುವರಂತೆ!

ಬುದ್ಧಿವಂತ ಬ್ರಿಟಿಷ ಸಾಮ್ರಾಜ್ಯ ಪ್ರೇಮಿಗಳ ಮಾತುಗಳಿವು.

ಮುಸಲ್ಮಾನ ಮುಖಂಡರು ಹೇಳುವರು: ರಾಜ್ಯ ಮುಸಲ್ಮಾನರದೇ ಇತ್ತು. ಔರಂಗಜೇಬ ಬಾದಶಹ ಇದೇ ಹಿಂದುಸ್ತಾನವನೆಲ್ಲ ಆಳಿದ. ಆಗ ಹಿಂದುಗಳು ಎಲ್ಲಿಯೋ ಮೂಲೆಗುಂಪಾಗಿದ್ದರು. ಈಗ ನಾವು ಅವರನ್ನು ಮುಂದೆ ಬರಗೊಡುವೆವೆ?

ಇಲ್ಲ! ಹಿಂದುಗಳು ಕೇಳುವದಿಲ್ಲ! ಮುಂದೆ ಬರುವರು! ಬರಲಿ! ಅವರು ಬಹುಸಂಖ್ಯಾಕರು! ಅವರಲ್ಲಿ ಕೂಡಿರುವುದೇ ಬೇಡ! ಹಿಂದುಸ್ತಾನದಲ್ಲಿ ಪಾಲನ್ನೇ ತಕ್ಕೊಳ್ಳೋಣ. ಭಾರತದ ಹೊರಗಿದ್ದ ಮುಸಲ್ಮಾನರು ನಮ್ಮನ್ನು ಎತ್ತಿ ಹಿಡಿಯುವರು!

ಬರಲಿರುವ ಸ್ವಾತಂತ್ರ್ಯಕ್ಕೆ ಅಡ್ಡಗಾಲು ಹಾಕುತ್ತಿರುವ ಮುಸಲ್ಮಾನರಿಗೆ ಸ್ವತಂತ್ರ ಅಸ್ತಿತ್ವ ಬೇಕಾಗಿದೆ! ತುರ್ಕಸ್ತಾನವಂತೂ ತುಂಡು ಗಡಿಯಲ್ಪಟ್ಟಿತು. ಅರಬಸ್ತಾನ, ಇರಾಕ, ಸಿರಿಯಾಗಳಲ್ಲಿ ಬಿಳಿ ಕೈಯಾಡಿತು! ಅದೇ ಕೈಯು ಪಾಕಿಸ್ತಾನದ ಮರ್ಕಟಕ್ಕೆ ಮದ್ಯ ಕುಡಿಸುತ್ತಿದೆ! ಆ ಅಮಲಿನಲ್ಲಿ ಮುಸಲ್ಮಾನರು ಹೊಡೆದಾಡುವರು!

ಸಾಯುವವರಾರು? ಪಾಪ! ಬಡವರು, ಕೂಲಿಕಾರರು, ಭಿಕ್ಷುಕರು, ಇವರೇ.

ಅಜಿತನಿಗೆ ನಿದ್ರೆ ಯಾವಾಗ ಬಂದಿತೋ ಏನೋ. ಆದರೆ ಅವನಿಗೆ ಎಚ್ಚರವಾದುದು ಮಾತ್ರ 'ಖಬರದಾರ! ಅಲ್ಲಾಹೋ ಅಕಬರ!' 'ಪಾಕಿ

'ಸ್ತಾನ ಜಿಂದಾಬಾದ!' ಎಂಬ ಗರ್ಜನೆಯಿಂದ, ಒಮ್ಮೆಲೇ ಗಡಬಡಿಸಿ ಎದ್ದು, ಅಜಿತ ಕಿಡಕಿಯಿಂದ ಹೊರಗೆ ನೋಡಿದ. ಮುಸಲ್ಮಾನರ ತಂಡ ವೊಂದು ಹಿಂದುಗಳ ಸೇಡು ತೀರಿಸಲು ಈಗ ಈ ಓಣಿಯೊಳಗೆ ಹೊಕ್ಕಂತೆ ಭಾಸವಾಯಿತು.

ಬೀದಿಯಲ್ಲಿ ಇನ್ನೂ ಜನರ ಓಡಾಟವಿಲ್ಲ. ದೂರದಲ್ಲಿ ಯಾವದೋ ಒಂದು ಮುದುಕಿ ಮಾತ್ರ ಬಗಲಲ್ಲಿ ಆರೇಳು ವರ್ಷದ ಹುಡಿಗೆಯೊಂದನ್ನು ಎತ್ತಿಕೊಂಡು ಮೆಲ್ಲನೆ ಬರುತ್ತಿದ್ದಳು. ಅವಳ ನಡಿಗೆಯ ರೀತಿಯಲ್ಲಿ ಧಿಟ್ಟತನ, ಮುಖದಲ್ಲಿ ಆತ್ಮವಿಶ್ವಾಸ ತುಂಬಿ ತುಳುಕುತ್ತಿದ್ದವು.

ಅದಾವನೋ ಒಬ್ಬ ತರುಣ— ಮಲಮಲಿಯ ಶರ್ಟ ತೊಟ್ಟು ಕೊಂಡವ—ಲಗುಬಗೆಯಿಂದ ಅವಳ ಎದುರಿಗೆ ಬಂದು, "ಇಂಥ ಹೊತ್ತಿ ನಲ್ಲಿ ಎಲ್ಲಿ ಹೊರಟಿ? ಬಗಲಲ್ಲಿ ಯಾರು? ಜಯತುನ!"

"ಹೌದು; ಇವಳವ್ವ, ನಿನ್ನೆ ನನ್ನ ಹತ್ತಿರ ಇವಳನ್ನು ಕೂಡಿಸಿ ಕೆಲ ಸಕ್ಕೆ ಹೋದವಳು ಇನ್ನೂ ಮನೆಗೆ ಬಂದಿಲ್ಲ; ಈ ಗೊಂದಲದಲ್ಲಿ ಎಲ್ಲಿ ಸಿಕ್ಕಳೋ ಏನೋ! ಇವಳು 'ಅವ್ವ! ಅವ್ವ! ಅವ್ವ!' ಎಂದು ರಾತ್ರಿ ಯೆಲ್ಲ ಹಲುಬಿದಳು. ಈಗ—"

"ಸಾಕು ತಿರಗು! ಮುಂದೆ ಹೋಗಿ ಸಾಯುವಿಯೇನು?"

ಮುದಿಕೆಯ ಮಾತುಗಳನ್ನು ನಡುವೆಯೇ ತಡೆದು ಹೇಳಿ, ಮುಂದೆ ಸಾಗಿದ, ಆ ತರುಣ ಅವಸರದಿಂದ.

"ಮುಪ್ಪಿನ ಹೆಂಗಸು, ಕೂಸುಗಳ ಮೇಲೆಯೇ ಇವರ ಗಂಡಸು ತನ!" ಎಂದು ವಟಗುಡುತ್ತ ಮುಂದೆ ಸಾಗಿದಳು. ಇಷ್ಟರಲ್ಲಿ ಇನ್ನೊಬ್ಬ ಹರೆಯದ ಹುಡುಗ ಧಾವಿಸಿ ಬಂದು ಎಂದ:

"ಏ ಮುದಕೀ, ಹೊರಳು! ಎಲ್ಲಿ ಹೋಗುವಿ? ಜೀವ ಬೇಡಾಗಿದೆ ಯೇನು? ತಿರುಗು ಲಗೂನ!"

"ಏನ ಹರೆಯ ನಿಮ್ಮದು? ತಲೆತುಂಬ ಕ್ರಾಪು ಕಾಯ್ದು ಬಾಚಿ ಬೈತಲೆ ತಕ್ಕೊಳ್ಳುವ ನೀವು, ಸ್ವಲ್ಪ ಆಗ್ರಹ ಮಾಡಿದೊಡನೆಯೇ ಸೀರೆ ಯನ್ನೂ ಉಟ್ಟುಕೊಳ್ಳುವಿರೆಂಬುದು ನನಗೇನು ಗೊತ್ತು?"

ಮುದುಕಿಯ ಈ ಮಾತುಗಳಿಂದ ಅಜಿತನ ಕಿವಿಯಲ್ಲಿ

ಕಾಯದ್ದು ಕಬ್ಬಿಣ ರಸ ಸುರುವಿದಂತಾಯಿತು. ಕೂಡಲೆ ಬಡಿಗೆ ತಕ್ಕೊಂಡು ಬಾಗಿಲ ತೆರೆದು ಹೊರಗೆ ಬಂದ, ಶೇಷನಿಗಿನ್ನೂ ಎಚ್ಚರಾಗಿರಲಿಲ್ಲ.

"ಹುಚ್ಚ ಮುದಕಿ!" ಎಂದು ಉದ್ಗರಿಸಿ ಆ ತರುಣ ಅತ್ತ ಸಾಗಿದ.

"ಏ ಅಜ್ಜೀ! ಮುಂದೆ ಹೋಗಬೇಡ, ಎಲ್ಲೀರ ಅಡಗು!" ಜೀವ ಕೈಯಲ್ಲಿ ಹಿಡಿದುಕೊಂಡು ಓಡುವ ಇನ್ನೊಬ್ಬ ಗಂಡಸು ಹೇಳಿದ.

"ನಿಮ್ಮಪ್ಪನ ಹಾದಿ ಅಲ್ಲ ಹೋಗು!" ಮುದಿಕಿ ಮರಳಿ ಆಜ್ಞಾಪಿಸಿದಳು.

"ಸಾಯಲಿಕ್ಕಾಗೀದಿ! ಮುಂದೆ ಮುಸಲ್ಮಾನರು ಬರುತ್ತಿರುವವರು! ಕೊಯ್ದು ಬಿಟ್ಟಾರು!"

"ಮುಸಲ್ಮಾನರು ಬರಲಿ, ಅವರ ಪೀರ ಬರಲಿ, ನಾನು ಅಂಜುವದಿಲ್ಲ!" ಇಷ್ಟರಲ್ಲಿ ಇಪ್ಪತ್ತು ಮೂವತ್ತು ಜನರ ಗುಂಪೊಂದು 'ಅಲ್ಲಾಹೋ ಅಕಬರ!' 'ಪಾಕಿಸ್ತಾನ ಜಿಂದಾಬಾದ!' ಎಂದು ಒದರುತ್ತ ಬಂತು. ಅದರಲ್ಲಿಯ ಕೆಲವರು ಮುದಿಕೆಯ ಕಡೆಗೆ ಧಾವಿಸಿದರು.

"ಏ ರಾಕ್ಷಸರೇ ತಡೆಯಿರಿ!" ಮುದಿಕೆ ಧೈರ್ಯದಿಂದ ಹೇಳಿದಳು.

ತಂಡ ಬೆರಗಿನಿಂದ ನಿಂತಿತು, ನೋಡಿತು. ಕಣ್ದೆರೆದು ನೋಡಿತು. ಆ ಚಿಕ್ಕ ಹುಡಿಗೆ ಗುಲಶನ್‌ಬಿಯ ಮಗಳೆಂಬುದನ್ನು ಒಂದಿಬ್ಬರು ಗುರುತಿಸಿದರು.

ಒಬ್ಬನೆಂದ, "ಆ ಹುಡುಗೆ ಮುಸಲ್ಮಾನರದದೆ!"

"ಪ್ರೊಫೆಸರ ಮೌಲವಿಯವರ ಮನೆಯ ಕೆಲಸದಾಕೆಯ ಮಗಳಲ್ಲ?" ಇನ್ನೊಬ್ಬ ಕೇಳಿದ.

"ಅದೇ ಗುಲಶನ್‌ಬಿಯ ಮಗಳು!" ಮತ್ತೊಬ್ಬ ಚನ್ನಾಗಿ ಗುರುತಿಸಿದ.

"ಹುಡುಗಿಯನ್ನು ಇಳಿಸಿ ಮುಂದ ಬಾ ನೀ." ಆ ಗುಂಪಿನ ಹಿರಿಮಣಿಯೊಬ್ಬ ಭೀಕರ ಸ್ವರದಲ್ಲಿ ಆಜ್ಞೆ ಮಾಡಿದ.

ಇದನ್ನು ಕೇಳಿದೊಡನೆಯೆ ಅಜಿತನ ಬಾಹುಗಳು ಸ್ಫುರಿಸಿದುವು. ಹಲ್ಲು ಕಡಿದ. ಒಮ್ಮೆಲೇ ಕೆಳದುಟಿಯನ್ನು ಒತ್ತಿ ಕಚ್ಚಿದ. ಉಸಿರು

ಒತ್ತರದಿಂದ ಆಡಹತ್ತಿತು. ಎದೆ ಉಬ್ಬಿ ಉಬ್ಬಿ ಶರಟು ಬಿರಿಯುವಂತಾಯಿತು. ಮುಖ ಕೆಂಪೇರಿತು ಕೆಂಡದಂತೆ.

"ಮುದಕಿಯ ಮೇಲೆ ಕೈಯನ್ನಾದರೂ ಎತ್ತಿರಿ! ಒಬ್ಬೊಬ್ಬರ ಕೈ ತೆಗೆದು ಬದಿಗೆ ಇಡದಿದ್ದರೆ ಅಜಿತನೆಂದು ಹೆಸರೇ ಇಡಬೇಡಿ" ಎಂದು ಒದರಿ ಹೇಳಿ ಬೀದಿಗೆ ಹಾರಿದ.

ಗುಂಪು ಹೊರಳಿ ನೋಡಿ, ಖೊಳ್ಳೆಂದು ನಕ್ಕಿತು. ರಾಕ್ಷಸರ ವಿಕಟ ಹಾಸ್ಯದಂತೆ ಆ ಸ್ವರವೆದ್ದು ಸುತ್ತಲೂ ಹಬ್ಬಿತು.

"ಇವನ ತಲೆಯೊಂದು ಹೋಗತದ ಆಯ್ತು ಮುದಕಿ ಜೋಡಿ!" ಎಂದು ಕುತ್ಸಿತ ಮಾತು ಕೇಳಬಂತು ಗುಂಪಿನ ಮಧ್ಯದಿಂದ.

"ನಾಚಿಕೆಗೇಡಿಗಳೇ, ಮುಪ್ಪಿನವರ ಮೇಲೆ ಏರಿ ಬರಲು ಲಜ್ಜೆ ಇಲ್ಲವೇ? ಮುಂದೆ ಕಾಲಿಡಿರಿ ನೋಡುವೆ!" ಮುದಿಕೆ ನಿರ್ಧಾರದ ಧ್ವನಿಯಿಂದ ಆವ್ಹಾನವಿತ್ತಳು. ಅವಳ ಮುಖದಲ್ಲಿ ವೀರಶ್ರೀಯು ನಲಿಯುತಲಿತ್ತು. ಅವಳ ಕಣ್ಣುಗಳಲ್ಲಿ ಕಾಣುವ ಸಾತ್ವಿಕ ಕನಲಿನ ಕೆಂಪು ಉದಯಭಾನುವಿನ ಕೆಂಪನ್ನು ನಾಚಿಸುವಂತಿತ್ತು.

ಇಷ್ಟರಲ್ಲಿ ಎದುರಿನಿಂದ 'ಹುಶ್ಯಾರ! ಜಯ ಶಿವಾಜಿ! ಸಾವರಕರ ಜಿಂದಾಬಾದ! ಹರಹರ ಮಹಾದೇವ!' ಎಂಬ ಸ್ವರ ಕೇಳಬಂದಿತು. "ಖಬರದಾರ!" ಎಂದು ಮುಸಲ್ಮಾನರೂ ಪ್ರತಿಯಾಗಿ ಗರ್ಜಿಸಿದರಾ ಸ್ವರಕ್ಕೆ. ಎರಡೂ ತಂಡದವರು ಒಬ್ಬರ ಮೇಲೊಬ್ಬರು ಉಡಿಯೊಳಗಿನ ಕಲ್ಲುಗಳನ್ನು ತೂರಿದರು. ಮುದುಕಿ ಜಯತುನಬಿಯನ್ನು ಎತ್ತಿಕೊಂಡು ದೃಢವಾಗಿ ನಿಂತಿದ್ದಳು. ವಾತಾವರಣ ಭಯಾನಕವಾಗಿತ್ತು. ಅಜಿತ ಬಡಿಗೆ ಹಿಡಿದುಕೊಂಡು ಬಂದು ಮುದಕಿಯ ಹತ್ತಿರ ನಿಂತಿದ್ದ.

ಆ ಹಿಂದೂ ಮುದಿಕೆಯೊಂದೇ ಸಿಕ್ಕಿದ್ದರೆ ಮುಸಲ್ಮಾನರು ಇಷ್ಟರಲ್ಲಿ ಇರಿದು ಕೊಲ್ಲುತ್ತಿದ್ದರು! ಆದರೆ ಅವಳ ಬಗಲಲ್ಲಿ ಮುಸಲ್ಮಾನ ಹುಡಿಗೆಯೊಂದಿತ್ತು! ಮೇಲಾಗಿ ಈಗ ಎದುರಿಗೇ ಹಿಂದುಗಳ ಗುಂಪೊಂದು ಬಂದು ನಿಂತಿತು!

ಎದುರಿಗಿನ ಗುಂಪಿಗೂ ತಮ್ಮ ತುರುಸಿನ ಕೈ ತೋರಿಸಬೇಕಾಗಿತ್ತವರಿಗೆ. ಈಗಾಗಲೇ ಹಿಂದುಗಳು ಆ ಭಾಗದಲ್ಲಿ ನಾಲ್ಕೈದು ಜನ

ಮುಸಲ್ಮಾನರನ್ನು ಹೊಡೆದಿದ್ದರು. ಅಂತೇ ತಲೆ ತಿರುಗಿ ಮುಸಲ್ಮಾನರು ಈ ಹಿಂದುಗಳ ವಸತಿಯಲ್ಲಿ ಮುಂಜಾನೆ ಸೇರಿದ್ದರು. ಅದರಲ್ಲೂ ಈ ವಿಶಿಷ್ಟ ಸಂದರ್ಭ ಮತ್ತೂ ಅವರ ತಾಳ್ಮೆಗೆಡಿಸಿತು.

" ಹೊಡೆಯಿರಿ, ಆ ಮುದಕಿಯನ್ನು ! "

ಎಂದು ಒದರಿ ಬಡಿಗೆ ಎತ್ತಿದರು ಮುಸಲ್ಮಾನರು.

ಅಜಿತನೂ ಬಡಿಗೆ ಮೇಲೆತ್ತಿದ, ಮುದುಕಿಯ ಮೇಲೆ ಬಡಿಗೆಯ ಏಟುಗಳು ಬೀಳದಂತೆ ಅಡ್ಡವಾಗಿ; ಮತ್ತೆ ಗುಡುಗಿದ.

" ಎಚ್ಚರ ! ಈ ಹುಡಿಗೆ ಮಾತ್ರ ಮುಸಲ್ಮಾನರದ್ದಿದೆ ! ನೆನಪಿರಲಿ ! "

" ಹೀಗೋ ? ಹರಹರ ಮಹಾದೇವ ! " ಎಂದು ಉತ್ಸುಕತೆಯಿಂದ ಕೂಗಿ ಮುಂದೆ ಹೆಜ್ಜೆ ಹಾಕಿತು, ಹಿಂದುಗಳ ಗುಂಪು, ಎಳೆ ಚಿಗರೆ ಮರಿಯನ್ನು ಕಂಡ ಹಸಿದ ಹುಲಿಯಂತೆ.

" ಮುಂದೆ ಬಂದರೆ ಕಾಲು ಮುರದೇನು " ಅಜಿತ ಬೆದರಿಸಿದ ಹಿಂದುಗಳಿಗೆ.

ಮುಸಲ್ಮಾನ ಹುಡಿಗೆ— ಜಯತುನಬಿ— ಹೆದರಿ ಹಿಂದೂ— ನಿರಾಧಾರಿ ಮುದಕಿಯನ್ನು ಗಟ್ಟಿಯಾಗಿ ಅಪ್ಪಿದ್ದಳು !

## ೧೫

ಅಜಿತ ಶುದ್ಧಿಯ ಮೇಲೆ ಬಂದಾಗ ಆಸ್ಪತ್ರೆಯ ಜನರಲ್ ವಾರ್ಡಿನಲ್ಲಿ ತಾನು ಮಲಗಿದುದು ಗೊತ್ತಾಯಿತು. ಹತ್ತಿರ ಶೇಷನಿದ್ದು ವ್ಯವಸ್ಥೆ ಮಾಡುತ್ತಲಿದ್ದ. ತಲೆಯ ಗಾಯ ದೊಡ್ಡದಿತ್ತು. ಡಾಕ್ಟರರು ಔಷಧ ಹಾಕಿ ಪಟ್ಟಿಯನ್ನು ಬಿಗಿದಿದ್ದರು.

" ನೋವು ಹೇಗಿದೆ ? " ಶೇಷ ಕೇಳಿದ.

ಅಜಿತ ಇನ್ನೊಂದು ಮಗ್ಗಲಿಗೆ ಹೊರಳುತ್ತ, " ಅವ್ವಾ ! ಇದೆ ! ಹಾಗೇ ಇದೆ ! " ನಾಲಿಗೆಯಿಂದ ಒಣಗಿದ ತುಟಿಗಳನ್ನು ಒದ್ದೆ ಮಾಡಿಕೊಂಡು—

" ಆ ಮುದುಕಿಯು ಗತಿ ಏನಾಯಿತು ? " ಎಂದ.

" ಏನೂ ಆಗಿಲ್ಲ, ನೆಟ್ಟಗಿದ್ದಾಳೆ. ನೀ ಸುಮ್ಮನೆ ಮಲಿಗು."

" ಹಣ್ಣು ಹಣ್ಣು ಮುದುಕಿ! ಅಂಥವಳ ಮೇಲೆ ಕೈಯೆತ್ತಿದರಲ್ಲ, ಆ ರಾಕ್ಷಸರು!" ಮುಂದೆ ಮಾತಾಡಲು ಶಕ್ತಿ ಸಾಲದೆ ಕಣ್ಣು ಮುಚ್ಚಿದ.

" ಇಲ್ಲಪ್ಪ, ಸುಮ್ಮನಿರು. ಹೆಚ್ಚಿಗೆ ಮಾತಾಡಬೇಡ. " ಶೇಷ ಹೇಳಿದ.

ಅಜಿತ ಮತ್ತೆ ಈ ಮಗ್ಗಲಿಗೆ ಹೊರಳಿ ಮಲಗಿದ. ಶೇಷ ಏನೋ ಧೇನಿಸುತ್ತ ಅಲ್ಲೇ ಸಮೀಪದಲ್ಲಿ ಕುರ್ಚಿಯೊಂದರಲ್ಲಿ ಕುಳಿತ. ಹತ್ತಿರ ಮಲಗಿದ ತನ್ನನ್ನು ಎಚ್ಚರಿಸದೆ ಬೀದಿಗೆ ಹೋಗಿ ಹೀಗೆ ಮಾಡಿಕೊಂಡನಲ್ಲ! ಪಾಪ! ಏನು ಮಾಡಬೇಕು ಇಂಥವನ ಸಾಹಸಕ್ಕೆ? ನನ್ನ ಮೃತ್ಯುಕಿರಣದ ಶೋಧವಾದ ಮೇಲೆ ಇಂಥ ಪ್ರಸಂಗ ಒದಗಿದ್ದರೆ ಆ ಹುಂಬರನ್ನೆಲ್ಲ ಒಂದೇ ಕಿರಣದಿಂದ ಧ್ವಂಸಗೊಳಿಸಿಬಿಡತಿದ್ದೆ. ಎಂದೇನೇನೋ ಎಲ್ಲೆಯಿಲ್ಲದ ವಿಚಾರಸಾಗರದಲ್ಲಿ ತೇಲುತಲಿದ್ದ.

ನಾಲ್ಕು ದಿನ ಊರಲ್ಲೆಲ್ಲ ಈ ಗೊಂದಲ ನಡೆದಿದ್ದಿತು !

" ಇಂದು ರಾತ್ರಿ ಹನ್ನೊಂದು ಜನರ ಕೊಲೆಯಾಯಿತು ! ಎರಡು ಅಂಗಡಿಗಳು ಸುಟ್ಟವು ! " ಡಾಕ್ಟರರಿಗೆ ಫೋನದಿಂದ ಸುದ್ದಿ ಬಂದಿತು.

" ಗಾಂಧೀ ಬೆನ್ನ ಹತ್ತಿ ಹಿಂದುಗಳೆಲ್ಲ ಹೆಂಗಸರಾಗಿಬಿಟಿದ್ದಾರೆ. ಅದೇ ನೋಡು ನಮ್ಮ ಹಿಂದೂ ಮಹಾಸಭೆ ಹೇಗೆ ಇದೆ. ಸಾವರಕರರ ತತ್ವವೇ ಅಂಥವು. ಪುಣೆಗೆ ಮುಸಲ್ಮಾನರ ಸುದ್ದಿಯೆತ್ತಬೇಡ ! " ಗೆಳೆಯರಿಗೆಂದರು ಡಾಕ್ಟರರು.

ಅದೇನೋ ಮಹಾತ್ಮಾ ಗಾಂಧಿಜಿಯವರು ಹುಟ್ಟುವದಕ್ಕಿಂತ ಮೊದಲು ಹಿಂದುಗಳೆಲ್ಲ ಶೂರ ಸೇನಾಪತಿಗಳೇ ಇದ್ದಿರಬೇಕು. ಈಗ ಅಹಿಂಸಾವ್ರತವನ್ನು ಅಸಾಧಾರಣವಾಗಿ ಆಚರಿಸುತ್ತಲಿರುವರು. ಪಾಪ! ಡಾಕ್ಟರರು ಏನು ಮಾಡಿಯಾರು ?

ಡಾಕ್ಟರರು ಗೆಳೆಯರೊಂದಿಗೆ ಚಹ ಕುಡಿಯುತ್ತ ಕುಳಿತಿದ್ದರು.

" ಅಜಿತ ನೀರು ಕುಡಿಯಲಿಕ್ಕೆ ಬೇಡುವನು. ಕೊಡಲೇ ? "

ಶೇಷ ಬಂದು ಕೇಳಿದ.

" ಬೇಡ; ನೀರು ಕೊಡಬೇಡ. ಚಹ ಬೇಕಾದರೆ ಕುಡಿಯಲಿ." ಎಂದರು ಡಾಕ್ಟರರು, ಗೋಣು ಹಾಕುತ್ತ.

" ಅಜಿತ ಚಹ ಕುಡಿಯುವದಿಲ್ಲವಂತೆ "

" ನಿನ್ನೇ ಕುಡಿದಿದ್ದನಲ್ಲ!" ಡಾಕ್ಟರು ಬೆರಗಿನಿಂದ ಕೇಳಿದರು.

" ಅಹುದು. ಇನ್ನು ಚಹ ಕುಡಿಯುವದಿಲ್ಲೆಂದು ನಿಶ್ಚಯ ಮಾಡಿರುವ. "

" ಒಳ್ಳೆಯದಾಯಿತು. ತರುಣರು ಇಂಥ ಚಟಗಳಿಂದ ದೂರ ಇರುವುದು ಬಹಳ ನೆಟ್ಟಗೆ." ಚಹದ ಗುಟುಕು ನುಂಗುತ್ತ ಡಾಕ್ಟರರು ಉಪದೇಶಿಸಿದರು.

" ಈಗ ನೆಟ್ಟಗ ಆಗುವ ವರೆಗೆ ಕುಡಿಯಬೇಕು. ಆಮೇಲೆ ಬಿಟ್ಟರಾಯಿತು." ಮತ್ತೊಬ್ಬರಂದರು.

" ಒಲ್ಲೇ ಅಂತಾನಲ್ಲ ! "

" ಕಾಲೇಜ ಹುಡುಗರ ಈ ಹಟಮಾರಿತನ ನನಗ ಸೇರುವದಿಲ್ಲ ನೋಡು. ಮೊನ್ನೆ ನಮ್ಮ ಹುಡುಗನೇ ಪ್ರಿನ್ಸಿಪಾಲರ ಕೂಡ ಹಟ ಹಿಡಿದು ಕಾಲೇಜ ಬಿಟ್ಟು ಮನೆಯಲ್ಲಿ ಕುಳಿತಿದ್ದ. ಬುದ್ಧಿ ಇಲ್ಲ. ಇವರಿಗೇಕೆ ಬೇಕು ಹಟ ? "

" ವಿದ್ಯಾರ್ಥಿಗಳ ಅಪಮಾನವಾದರೂ ಅವರು ಸುಮ್ಮನಿರಬೇಕೆ ? " ಶೇಷ ತಟ್ಟನೆ ಕೇಳಿದ.

" ಹುಡುಗರಿಗೇನು ಮಾನಾಪಮಾನ ? ಸುಮ್ಮನೆ ಅಭ್ಯಾಸ ಮಾಡುವದನ್ನು ಬಿಟ್ಟು ಮಂಡಲ-ಗಿಂಡಲಗಳ ಗೊಡವೆ ಇವರಿಗೇಕೆ?" ಇನ್ನೊಬ್ಬ ಹಿರಿಯನಾಡಿದ.

ಡಾಕ್ಟರರು ನಡುವೆಯೇ ಮಾತು ಸೇರಿಸಿ, " ಬೇಕು; ಹುಡುಗರಿಗೆ ಅಭಿಮಾನ ಬೇಕು. ಅದರೊಡನೆ ತಮ್ಮ ಅಭಿಮಾನ ನಡೆಯಿಸುವಷ್ಟು ಸಾಮರ್ಥ್ಯವೂ ಅವರಲ್ಲಿ ಇರಬೇಕು. ದಿನಕ್ಕೆ ಹನ್ನೆರಡು ಸಲ ಚಹ ಕುಡಿದು ಕಸುವನ್ನೆಲ್ಲ ಕಳೆದುಕೊಂಡುಬಿಟ್ಟಿದಾರೆ; ಇವರ ಕೈಯಿಂದ ಆದೀತೇನು? ವ್ಯಾಯಾಮ ಇಲ್ಲಾ, ಒಂದ ಲಾಠೀ ಕೈ ಬರುವದಿಲ್ಲ-

ಇದೇ ಅಜಿತನಿಗೆ ಲಾಠಿಯು ನಾಲ್ಕು ಕೈಯು ಬರತಿದ್ದರೆ ಹೀಗೇಕೆ ಪೆಟ್ಟ ತಿಂದ ಬೀಳತಿದ್ದ? ನಮ್ಮ ಸಾವರಕರರ ತತ್ವ ಏನ ಸುಳ್ಳಲ್ಲ! ಏನೋ ಹುಡುಗ ಧೈರ್ಯ ಮಾಡಿ ಹೊಕ್ಕಾನ. ಅದೇ ಕಾಂಗ್ರೇಸಿನವರು ಬಡಿಗೆ ಕಂಡರೆ ಮನೆ ಕಟ್ಟಿ ಇಳಿದು ಹೊರಗ ಬರವರಲ್ಲ!”

ಫೋನಿನ ಗಂಟೆಯಿಂದ ಡಾಕ್ಟರರ ಪ್ರವಚನದ ಆವೇಶ ತಡೆಯಿತು.

‘ಹಿಂದು ಮುಸಲ್ಮಾನರು ಈ ಭಾಗದಲ್ಲಿ ಹೊಡೆದಾಡುತ್ತಿದ್ದಾರೆ ಪೋಲೀಸರು ಬೇರೊಂದು ಭಾಗದಲ್ಲಿ—ಶಾಂತತೆಯಿದ್ದಲ್ಲಿ ಹಃ! ಹಃ!—ಶಿಸ್ತುಗೊಳಿಸುತ್ತಲಿದ್ದಾರೆ. ನಗರಸಭೆಯ ಮೆಂಬರರಿಗೊಬ್ಬರಿಗೆ ಪೆಟ್ಟು ಬಿದ್ದಿದೆ.’ ಎಂದು ಫೋನಿನ ವಿಷಯವಿತ್ತು. ಇನ್ನೊಮ್ಮೆ ಫೋನ ಬರಲು ಮಾತಾಡತೊಡಗಿದರು ಡಾಕ್ಟರರು.

“ಅಹುದು, ನಾನೇ ಡಾಕ್ಟರ. ಏನಿದೆ ವಿಶೇಷ? ಹೋ! ಹೋ! ಪೇಟೆಯೇ ಬಂದು ಬಿದ್ದಿತೇ? ನಾಲ್ಕು ಜನ ಕೂಡಿ ತಿರಗಲೂ ಕೂಡ ಮನಾಯಿ ಮಾಡಿರುವರೇ? ಏನು ಸರಕಾರದ ಅವ್ಯವಸ್ಥೆಯಿದು! ಕಾಂಗ್ರೆಸ ಕಮಿಟಿಯವರು ಹಃ! ಹಃ! ಹಃ! ಹೆಂಗಸರನ್ನು ಹೊರಗೆ ಕಳಿಸುತ್ತಿರುವರು! ಕೊಡಿರಿ ಅಂಥವರಿಗೆ ನಿಮ್ಮ ಮತಗಳನ್ನು! ಹಿಂದುಗಳೂ ಪ್ರತಿಕಾರ ಮಾಡುತ್ತಿರುವರೇ? ಮಸೀದೆ ಸುಟ್ಟರು! ವಹವ್ವಾಃ ಹೀಗೆ ಪ್ರತಿಕಾರ ಬೇಕೇಬೇಕು. ಇಲ್ಲವಾದರೆ ನಡೆಯದು. ‘ಶಠಂ ಪ್ರತಿ ಶಾಠ್ಯಂ’ ಎಂಬುದೇ ನ್ಯಾಯ. ಹೊರಗೆ ಬಾ ಅನ್ನುವಿರಾ? ಗಾಯಾಳುಗಳು ಬಹಳ ಬರುತ್ತಿದ್ದಾರೆ. ಹೊರಗೆ ಬರಲು ಅವಕಾಶವಿಲ್ಲ. ಈಗ ಒಬ್ಬನ ಡ್ರೆಸಿಂಗನ್ನು ಮಾಡಬೇಕಾಗಿದೆ. ನಿಮ್ಮೊಡನೆ ಹೆಚ್ಚಿಗೆ ಮಾತಾಡಲೂ ವೇಳೆಯಿಲ್ಲ. ಸರಕಾರಕ್ಕೆ ಅರ್ಜಿ ಮಾಡುವಿರಾ? ಅದರಲ್ಲಿ ನನ್ನ ಹೆಸರು ಹಾಕಲಿಕ್ಕೆ ಅಡ್ಡಿಯಿಲ್ಲ. ಪುಕ್ಕಟೆ ಔಷಧೋಪಚಾರ ಮಾಡುತ್ತಿರುವೆನೆಂದೂ ಬರೆಯಿರಿ ಬೇಕಾದರೆ. ಹೀಗೆಯೇ ಸುದ್ದಿ ಕೊಡುತ್ತ ಹೋಗಿರಿ. ಥ್ಯಾಂಕ ಯು!”

“ಯಾರ ಫೋನದು?” ಕುಳಿತವರಲ್ಲಿ ಒಬ್ಬ ಕೇಳಿದ.

“ವ್ಯಾಪಾರಿ ಅಸೋಶಿಯೇಶನ್ನದ ಅಧ್ಯಕ್ಷರದು.”

ಡಾಕ್ಟರರು ಕುರ್ಚಿಯ ಮೇಲೆ ಬಂದು ಕುಳಿತು, ಸಿಗಾರೇಟ

ಒಂದನ್ನು ಹೊತ್ತಿಸುತ್ತಿದ್ದರು. ಅಷ್ಟರಲ್ಲಿ ಮತ್ತೆ ಫೋನಿನ ಗಂಟೆಯಾಯಿತು. ಎದ್ದು ಕೇಳತೊಡಗಿದರು.

' ಅಜಿತನ ಸ್ಥಿತಿ ಹೇಗದೆ? ಪಾಪ! ಬಡಹುಡುಗ, ಅವನ ವ್ಯವಸ್ಥೆ ಚನ್ನಾಗಿ ಇಡಿರಿ! ಆದ ಬಿಲ್ಲನ್ನು ನಾನು ಕೊಡುವೆ. ನಾನೇ ತಮ್ಮ ಕಡೆಗೆ ಬರುವವ. ಆದರೆ ನಗರದಲ್ಲೆಲ್ಲ ಈ ಗೊಂದಲ ಹಬ್ಬಿದೆ. ಮೂರು ದಿನ ಆಯ್ತು! ಮುನಸೀಪಾಲ್ಟಿಯು ಆಫೀಸಿಗೆ ಅರ್ಜಿಗಳು ಬಂದಿವೆಯಂತೆ. ಮೀಟಿಂಗಿಗೆ ಕರೆದಿರುತ್ತಾರೆ. ಆದರೆ ಹೇಗೆ ಹೋಗಲಿ? ಏನು ಮಾಡುವುದು? ನನಗೂ ಮೈಯಲ್ಲಿ ನೆಟ್ಟಗಿಲ್ಲ. ಎರಡು ದಿನ ಆಯ್ತು ತಲೆನೋವೆದ್ದಿದೆ. ಗಾಯಾಳುಗಳ ಫಂಡಿಗೆ ಇನ್ನೂರು ರೂಪಾಯಿಗಳನ್ನು ಕೊಡುವೆ ಬೇಕಾದರೆ. ನನ್ನ ಹೆಸರು ಮೇಲೆ ಹಾಕಿ ವರ್ತಮಾನ ಪತ್ರದಲ್ಲಿ ಪ್ರಚಾರ ಮಾಡಿ ಫಂಡು ಕೂಡಿಸಿರಿ. ದೊಡ್ಡಕ್ಷರಗಳಲ್ಲಿ ಹೆಸರು ಮುದ್ರಿಸಲಿ. ವ್ಯಾಪಾರಿ ಅಸೋಶಿಯೇಶನ್‌ವೇನೋ ಅರ್ಜಿ ಹಾಕುವದಂತೆ. ಅವರಿಗೆ ಈ ಸುದ್ದಿಯುನ್ನು ನೀವೇ ತಿಳಿಸಿರಿ. ಗೊತ್ತಾಗದೆ ನನ್ನ ಹೆಸರು ಹಾಕಲು ಮರೆತುಬಿಟ್ಟಾರು ಅದರಲ್ಲಿ. ಈ ಗೊಂದಲದಲ್ಲಿ ಅಜಿತನ ಆರಯಿಕೆ ಮರೆಯಬೇಡಿ. ಅವನಿಂದಲೇ ಆ ದಿನ ನಮ್ಮ ಮನೆ ಉಳಿದುದು. "

ಅಮೀಚಂದ ಸೇಠಜಿಯು ಎರಡನೆಯ ಸಲದ ಫೋನಿದು. ಡಾಕ್ಟರರು ತಿರುಗಿ ಕೇಳಿದರು.

" ಶೇಷನ ಕೈಯಲ್ಲಿ ' ತಲೆನೋವಿನ ಗುಳಿಗೆ ' ಕೊಟ್ಟು ಕಳಿಸಲೋ! ತಿಳಿಯಲಿಲ್ಲವೇ? ನಿಮ್ಮ ತಲೆನೋವಿನ ಗುಳಿಗೆ ಅಂದೆ. "

" ಸುಳ್ಳಲ್ಲ, ನಿಜವಾಗಿಯೇ. ಹಾಂ ಔಷಧದ ಗುಳಿಗೆ ಅಂದಿರೋ? ಹೋ! ಹೋ! ಈಗೇನು ಬೇಡ. ಮುಂಜಾನೆಯಿಂದ ಸ್ವಲ್ಪ ಆರಾಮವೇ ಅನಿಸುತ್ತಿದೆ. "

ಡಾಕ್ಟರರು ಫೋನ ಕೆಳಗಿಟ್ಟು ಅಂದರು. " ಮನೆಯೊಳಗ ಕುಳಿತ ಹೇಳಲಿಕ್ಕೆ ಬರ್‍ತದೆ ಎಲ್ಲ! ಇಂಥವರೇ ಐವತ್ತು ಜನ ಲಾಠೀ ತಕ್ಕೊಂಡು ನಿಂತರೆ ಮುಸಲ್ಮಾನರು ಯಾತಕ್ಕೆ ಬರತಾರೆ ಹೊರಗೆ? ಆ ಗಂಡಸತನ

ಇಲ್ಲ ಇವರಲ್ಲಿ. ಈ ಮಾರವಾಡಿಗಳೆಂದರೆ ಪುಕ್ಕರು.

* * * *

ಅಜಿತನಿಗೆ ಈಗೀಗ ಸ್ವಲ್ಪ ಗುಣವಾಗಿದೆ. ಗಾಯುಗಳು ಮಾಯುತ್ತಲಿವೆ. ಆದರೂ ಇನ್ನೂ ತುಂಬ ಅಶಕ್ತತೆಯಿದೆ. ಮಲಗಿದಲ್ಲಿಯೇ "ಬೀದಿಯಿಂದ ಹೋಗುವ ಹುಡುಗರನ್ನು ಕೊಂದರು. ಮುದುಕರನ್ನು ಹೊಡೆದರು. ಹೆಂಗಸರ ಮೇಲೆ ಕಲ್ಲಿನ ಸುರಿಮಳೆ! ಹಿಂದುಗಳ ಹೆಣಗಳನ್ನು ಕಂಡರೆ ಮುಸಲ್ಮಾನರಿಗೆ ಸಂತಸ! ಮುಸಲ್ಮಾನರ ಕೊಲೆಯಾದುದನ್ನು ಕೇಳಿದರೆ ಹಿಂದುಗಳಿಗೆ ಹಿಗ್ಗು!" ಹೀಗೆ ಕೇಳುತ್ತಿದ್ದ. ದುರ್ದೈವವೀ ಭಾರತವೊಂದರಲ್ಲಿಯೇ ಶಕ್ಯವಿದು! ಎಂದುಕೊಂಡ, ನೊಂದುಕೊಂಡ.

* * * * *

ಈಗ ಅಜಿತನಿಗೆ ಆರಯಿಕೆಗೆ ಇನ್ನಾರೂ ಬೇಕಾಗಿರಲಿಲ್ಲ. ಎಲ್ಲವನ್ನೂ ತನ್ನ ತಾನೇ ನೋಡಿಕೊಳ್ಳುತ್ತಿದ್ದ. ಆದರೂ ಇನ್ನೂ ಕೆಲದಿನ ಆಸ್ಪತ್ರೆಯಲ್ಲಿ ಕಳೆಯಬೇಕಾಗಿದ್ದಿತು. ಶೇಷ ಮೊದಲಿನಂತೆ ಯಾವಾಗಲೂ ಹತ್ತಿರವಿರುತ್ತಿರಲಿಲ್ಲ. ಉಳಿದ ಗೆಳೆಯರೊಡನೆ ದಿನಕ್ಕೊಮ್ಮೆ ಬಂದು ಮಾತಾಡಿ ಹೋಗುತ್ತಿದ್ದ. ಹಣ್ಣು ಹಂಪಲುಗಳನ್ನು ತಂದು ಕೊಡುತ್ತಿದ್ದ. ಡಾಕ್ಟರರ ಮನೆಯಿಂದಲೇ ಊಟ ಬರುತ್ತಿದ್ದಿತು. ಅವಿಚಂದ ಸೇಠನ ಮನೆಯ ಜನರನ್ನು ರಕ್ಷಿಸಿದವನೆಂದೂ ಹುರುಪಿನಿಂದ ಮುಸಲ್ಮಾನರ ಪ್ರತಿಕಾರಕ್ಕೆ ಸಿದ್ಧನಾದವನೆಂದೂ, ಅಜಿತನ ವಿಷಯಕ್ಕೆ ಡಾಕ್ಟರರು ಹೆಚ್ಚು ಲಕ್ಷ್ಯ ಪೂರೈಸುತ್ತಿದ್ದರು. ಹುಡುಗನಲ್ಲಿ ಸ್ವಾಭಾವಿಕವಾಗಿ ಹಿಂದು ಮಹಾಸಭೆಯ ತತ್ವಗಳು ನೆಲೆಗೊಂಡಿವೆಯೆಂದೆನ್ನಿಸಿತ್ತು. ಅದಕ್ಕಾಗಿ ಸಂತಸಗೊಂಡಿದ್ದರವರು. ಅಜಿತನಿಗೆ ಬೇಸರ ಬಂದಾಗ ಸಾವರಕರನ ಚರಿತ್ರೆಯನ್ನೂ ಸಭೆಯ ಉದ್ದೇಶದ ವಿಷಯಕ್ಕಿರುವ ಗ್ರಂಥಗಳನ್ನೂ ಓದಲು ತಂದು ಕೊಡುವರು. ಅಜಿತನೂ ಸಾವರಕರನ ಚರಿತ್ರೆಯನ್ನು ಮಾತ್ರ ಆಸಕ್ತಿಯಿಂದ ಓದತೊಡಗಿದ. ಬರಬರುತ್ತ ಡಾಕ್ಟರರಿಗೆ 'ಲಾಯಿಟ್' ಪತ್ರಿಕೆಯ ಜಪ್ತಿಗೆ ಕಾರಣವಾದ ಲೇಖನ ಬರೆದವನು ಈತನೇ ಎಂದು ತಿಳಿದು ಅಜಿತನ ವಿಷಯಕ್ಕೆ ಆದರ ಹೆಚ್ಚಾಗತೊಡಗಿತು.

ಒಂದಿನ ಮಧ್ಯಾಹ್ನದಲ್ಲಿ ಅಜಿತ ಏನೋ ಓದುತ್ತ ಒರಗಿದ-

ಯಾರೋ ಅವನ ಹೆಸರನ್ನು ಹೇಳುತ್ತ ವಾರ್ಡಿನ ಆ ತುದಿಯಲ್ಲಿ ಹುಡುಕುತ್ತಿದ್ದರು.

" ಯಾರವರು ? " ಎಂದು ಅಜಿತ ಎದ್ದು ಕುಳಿತು ಕೇಳಿದ.

" ಅಜಿತ ಅನ್ನವರು ಎಲ್ಲಿದ್ದಾರಣ್ಣ ? " ಬಂದಾತ ಕೇಳಿದ.

ಆಸ್ಪತ್ರೆಯಲ್ಲಿರುವಾಗ ಅಜಿತನನ್ನು ಗುರುತಿಸುವುದು ಕೊಂಚ ಕಷ್ಟಕರವಾಗಿತ್ತು. ಬೆಳೆದ ಗಡ್ಡ, ಪಟ್ಟಿಕಟ್ಟಿದ ಹಣೆ, ತಲೆ; ವಿರೂಪನಾಗಿದ್ದ ಅಜಿತ.

ದೂರದಲ್ಲಿ ನಿಂತ ಆ ವ್ಯಕ್ತಿಯನ್ನು ದಿಟ್ಟಿಸಿ ನೋಡಿದ ಅಜಿತ. ಹರಕು ಅರಿವೆ, ಹೊಲಸು ಮೈಯು, ಮಾಸಿದ ಬಟ್ಟೆ, ಎಲ್ಲೋ ನೋಡಿದ ನೆನಪು, ಸ್ಮೃತಿಯಂಗಳಕ್ಕೆ ಇಳಿಯುದಾಯಿತು. ಸ್ವಲ್ಪ ಹೊತ್ತು ಗೊಂದಲದಲ್ಲಿ ಬಿದ್ದ ಅಜಿತ. ಒಮ್ಮೆಲೇ ಏನೋ ಲಕ್ಷ್ಯಕ್ಕೆ ಬಂದಂತಾಗಿ—

" ಯಾಕೋ ಸಿದ್ದಾ ? ಬಾರಲ್ಲಾ ! " ಎಂದು ಕರೆದ.

" ಏನಣ್ಣಾ, ನಿಮ್ಮ ಗುರುತಃ ಹತ್ತಲಿಲ್ಲಲಾ ? "

" ಹೀಗಾಯ್ತು ನೋಡು ! " ಎಂದು ನಸುನಕ್ಕ ಅಜಿತ.

" ಎರಡ ದಿನ ನಿಮ್ಮ ಮನೀ ಮುಂದ ಹುಡಿಕಿದ್ನೆ ದ್ಯಾವ್ರು ! ಇಂದ ಕಾಲೇಜಿನ ಅವ್ರೋಳ ಹೇಳಿದ್ರು. ಇತ್ತ ಬಂದ್ನಿ ಅಣ್ಣಾ ! "

" ಯಾಕೋ? " ಕುತೂಹಲದಿಂದ ಕೇಳಿದ, ಅಜಿತ. ಮುಂಬಯಿಯಲ್ಲಿ ತನ್ನನ್ನು ಹುಡುಕುವವರೂ ಇದ್ದಾರಲ್ಲ ಇನ್ನೂ! ಎಂಬ ಬೆರಗುದರಿಯೊಂದು ಮುಖದ ಮೇಲೆ ಆವರಿಸಿತು.

" ಹಿಂದಿಟ ಕೆಲಸ ಇತ್ತರಿ ! "

" ಏನಪಾ ಅದು ? "

" ಏನಿಲ್ಲರಿ ! " ಎಂದು ತೀರ ಹತ್ತರ ಬಂದು ಜೇಬಿನೊಳಗಿನ ಕಾಗದವೊಂದನ್ನು ತೆಗೆದು ಅಜಿತನ ಕೈಗೆ ಕೊಟ್ಟ, ಅನ್ಯರಿಗೆ ಕಾಣದಂತೆ ಕಾಸು ಮರೆಯಾಗಿ ನಿಂತು.

" ಎಲ್ಲೀದೋ ? "

" ಹೇಳೂ ಹಂಗಿಲ್ಲರಿ ! ನೀವಃ ನೋಡಕೊಳ್ರಿ ! " ಸ್ವಲ್ಪ ತಡೆದು " ಉಪ್ಪ ಉಣಿಸಿದ ಉಪಕಾರನಾರಃ ಕಳಿಕ ಬ್ಯಾಡಾಃ ದ್ಯಾವ್ರು ! "

ಅಜಿತ ಕಾಗದ ತಕ್ಕೊಂಡ. ಮೆಲ್ಲನೆ ತೆರೆದು ನೋಡಿದ. ಭಕ್ತಿಯಿಂದ ಕಣ್ಣಿಗೆ ಒತ್ತಿಕೊಂಡು ಮಸ್ತಕದಲ್ಲಿಡುತ್ತ—

"ನಿನಗ ಎಲ್ಲಿಂದ ಸಿಕ್ಕಿತೋ ಇದು?"

"ಅಲ್ಲಿಂದನೇ ಸಿಕ್ಕಿತಣ್ಣ. ನೀವ ಏನಾರೂ ಕೊಡತೇರಿ?"

"ನಾಳಿಗೆ ಬರದ ಕೊಟ್ಟರ?"

"ಹಾಂಗಃ ಮಾಡಿರಿ! ನಾಳೆ ಮತ್ತ ಬರತೇನಣ್ಣ" ಎಂದು ನಡೆದ ಸಿದ್ದ.

"ಸಿದ್ದಾ!"

"ಯಾಕ್ರಿ?" ಎಂದು ಹೊರಳಿದ ಸಿದ್ದ.

ತಲೆದಿಂಬಿನ ಬುಡದಿಂದ ಎರಡು ರೂಪಾಯಿಗಳನ್ನು ತೆಗೆದು ಸಿದ್ದನ ಕೈಗೆ ಕೊಡಹೋದ ಅಜಿತ.

"ಬ್ಯಾಡ್ರಿ ನನ್ನೊಡ್ಯಾ."

"ನಾ ಕೊಡತೇನ ತಗೋ. ಮನೆಯೊಳಗ ಮಕ್ಕಳ ಮರಿಗೆ ಏನಾದರ ಕೊಂಡ ಕೊಡ ಹೋಗು."

"ಈಗೆಲ್ಲ ಪಾಡ ಐತಿ; ಮತ್ತ ಕೆಲಸಕ್ಕ ಹೋಗತೇನಿ."

"ಇರಲಿ ತಗೋ."

"ನಿಮ್ಮ ಹತ್ತರ ತಕ್ಕೊಳೋದಾ? ನೀವ ಹೀಗ ಹಾಸಿಗೆ ಹಿಡದಿದೀರಿ, ನಿಮಗ ಇರಲಿ. ಅನುವು ಆಪತ್ತಿನೊಳಗ."

"ಇದಾವ ತಗೋ ನೀ."

ಎಂದು ಒತ್ತಾಯದಿಂದ ಎರಡು ರೂಪಾಯಿಗಳನ್ನು ಸಿದ್ದನ ಕೈಯಲ್ಲಿ ಹಾಕಿದ ಅಜಿತ. ಸಿದ್ದ ಎರಡೂ ರೂಪಾಯಿಗಳನ್ನು ತಿರುಗಿ ಹಾಸಿಗೆಯ ಮೇಲೆ ಇಟ್ಟು ಹೋದ.

ಆಮೇಲೆ ಅಜಿತ ಪತ್ರವನ್ನು ಪುಸ್ತಕವೊಂದರಲ್ಲಿ ಹಿಡಿದು ಮೆಲ್ಲನೆ ಓದತೊಡಗಿದ. ಕಾಗದ ಹೀಗಿತ್ತು :

"ಅಜಿತ! ತಾನು ಶಿಕ್ಷೆ ವಿಧಿಸೇ ತೀರುವೆನೆಂದು ನಿಶ್ಚಯಿಸಿದ್ದರೂ ಕೂಡ ಅಪರಾಧಿಯನ್ನು ಅನ್ಯರು ರಕ್ಷಿಸಿಕೊಳ್ಳಲು ಪ್ರಯತ್ನ ಮಾಡುವಂತೆ ಸಂಧಿಯನ್ನು ಒದಗಿಸಿಕೊಡುವುದು ಬ್ರಿಟಿಷ ನ್ಯಾಯಾಸನದ್ದೇ

ಒಂದು ವಿಶಿಷ್ಟವಾದರೆ! ಹೀಗೆ ರಕ್ಷಿಸಿಕೊಡುವ ಸೋಗು ಹಾಕಿದ ವಕೀಲರಿಗೇನು ಕೊರತೆಯಿಲ್ಲ. ಆದರೂ ಫೀ ದರ ಮಾತ್ರ ಇಳಿಯುವಂತಿಲ್ಲ. ಇಷ್ಟು ಹಣ ಸುರಿದೂ ಕೂಡ ನಮಗೆ ನ್ಯಾಯದ ಬದಲು ಅನ್ಯಾಯವೇ ಸಿಗುವುದು ಹೆಚ್ಚು. ಇಷ್ಟು ದೊಡ್ಡ ಸಂಬಳ ತಕ್ಕೊಂಡು ನ್ಯಾಯದಾನಕ್ಕೆಂದೇ ಕುಳಿತ ನ್ಯಾಯಧೀಶನಿರುವಾಗ ನಡುವೆ ಈ ವಕೀಲರು ಏಕೆ ಬೇಕೆಂಬುದು ನನಗೆ ಇನ್ನೂ ತಿಳಿದಿಲ್ಲ. ಬಡವರಿಗೆ ಎಂದೂ ತಿಳಿಯುವಂತಿಲ್ಲವೇನೋ!"

"ಬಡವರೆಂದೊಡನೆ ನೆನಪಿಗೆ ಬಂತು. ಅವರ ಹಿತ ಅವರಿಗೆ ತಿಳಿಯದು. ಯಾರಾದರೂ ಹಿತ ಮಾಡುವೆವೆಂದು ಮುಂದೆ ಹೋದರೆ ಅವರ ಕಾರ್ಯದಲ್ಲಿಯೂ ಸ್ವಾರ್ಥಸಾಧನೆಯ ಬಣ್ಣವನ್ನೇ ಕಾಣುವರವರು! ಪಾಪ! ಅವರದೇನು ತಪ್ಪು ಅದರಲ್ಲಿ? ಅವರಿಗೆ ನೆರವಾಗುವ ಧನಿಕ ಜಾತಿಯೆಲ್ಲ ಇದೇ ವರ್ಗದ್ದು! ಅದಕ್ಕಂತೇ ಅವರು ಇನ್ನೊಬ್ಬರನ್ನು ಅವಲಂಬಿಸಲು ಒಲ್ಲರು. ಇದೇ ನೋಡು, ಆ ದಿನ ನಾನೂ ನೀನೂ ಆ ಬೀದಿಯಲ್ಲಿ ನಿಂತು, ಕೂಲಿಕಾರರಿಗೆ ಸೆರೆ ಕುಡಿಯಲು ಕೊಡದೆ ನಮ್ಮ ಸಂಘದ ಕೆಲ ಹಣವನ್ನೂ ವಸೂಲು ಮಾಡಿದೆವಲ್ಲ! ನೆನಪಿದೆಯೋ ನಿನಗೆ? ಆ ಹಣ ನಾವು ಲಂಚ ತಿಂದುದೆಂದೂ ಕೂಲಿಕಾರರನ್ನು ಸುಲಿದುದೆಂದೂ ನನ್ನ ಮೇಲೆ ಕೋರ್ಟಿನಲ್ಲಿ ಸಾಕ್ಷಿಗಳಾದವು. ಆ ನಿನ್ನ ಬೀಡಿ ಅಂಗಡಿಯ ವ್ಯಾಪಾರಿಯೂ ಒಬ್ಬ ಸಾಕ್ಷಿದಾರನೇ! ನನಗೆ ಕೂಲಿಕಾರ ಯೂನಿಯನ್ನ ಕೆಲಸದ ಬಗ್ಗೆ ಶಿಕ್ಷೆಯಾಗಿದ್ದರೆ ಕೆಡಕೆನಿಸುತ್ತಿರಲಿಲ್ಲ. ಕೋರ್ಟು ಕಚೇರಿ ನ್ಯಾಯಗಳು ಬಡವರಿಗಾಗಿ ಇಲ್ಲ. ಸಿರಿವಂತರಿಗಾಗಿ ಕಾದಿವೆ!

"ಇನ್ನೊಂದು ಅಪರಾಧ ನನ್ನ ಮೇಲೆ. ಕೂಲಿಕಾರರಿಗೆ ಕಲಿಸಿ ಜಮುನಾದಾಸನ ಮಿಲ್ಲಿನಿಂದ ಜನರನ್ನು ಹೊರಗೆ ಹಾಕಿದೆನಂತೆ. ಅದಕ್ಕೆ ಕೂಲಿಕಾರರೇ ಕೆಲವರು ಸಾಕ್ಷಿ ನುಡಿದರು. ಜಮುನಾದಾಸನ ಗಿರಣಿ ಎಂಥದಿದೆಯೆಂಬುದನ್ನು ನಾನು ಇದುವರೆಗೂ ಕಂಡಿಲ್ಲ. ನಾಲ್ಕು ದುಡ್ಡಿಗಾಗಿ ಬೇಕಾದವರ ಮೇಲೆ ಬೇಕಾದ ಸಾಕ್ಷಿ ನುಡಿಯುವ ಬಡ ಜನರಿಗೇನು ಭಾರತದಲ್ಲಿ ಕೊರತೆಯಿಲ್ಲ.

"ಆಯಿತು. ಇನ್ನೊಂದು ತಿಂಗಳೊಪ್ಪತ್ತು ಶಿಕ್ಷೆ ಭೋಗಿಸಿದರೆ ನನ್ನ ಎಂಟು ತಿಂಗಳ ಅವಧಿ ತೀರಿತು. ದಿನಗಳು ಹೇಗೋ ಹೋಗುವವು. ಗುಲಾಮರಾಗಿಯೇ ಬಾಳುವ ಜನಕ್ಕೆ ಆತ್ಮ, ಅಭಿಮಾನ ಎಂಬುದಿದೆಯೇ? ಅವರ ದೇಹ ಡೊಗ್ಗಿಸಿದ್ದಕ್ಕೆ ಒಗ್ಗುತ್ತದೆ! ಹಾಕಿದ್ದನ್ನು ತಿನ್ನುತ್ತದೆ! ಈ ಗುಲಾಮರ ದೇಹ ಮನಸ್ಸುಗಳೆಲ್ಲವೂ ಗುಲಾಮವಲ್ಲವೆ?

"ಕೋರ್ಟಿನಲ್ಲಿ ನನ್ನ ಜವಾಬುಗಳೆಲ್ಲ ತೀರ ಮೂರ್ಖತನದ್ದೆಂದು ಕಂಡವು ಒಳ್ಳೇಕಾಯಿದೆ ಜ್ಞಾನಿಗಳಿಗೆ. ಯಾಕಂದರೆ ಅವು ಸಂಪೂರ್ಣ ಸತ್ಯವಾಗಿದ್ದುವು. ನಮ್ಮ ವಕೀಲನೇ ನನಗೆ ಹೇಳಿದ. ಅವನು ನಾನು ನಿರ್ದೋಷಿಯೆನ್ನಲು ಎಷ್ಟು ಪ್ರಯತ್ನ ಪಟ್ಟರೂ ನನ್ನ ಜವಾಬುಗಳೇ ನನಗೆ ಶಿಕ್ಷೆ ವಿಧಿಸಲು ಕಾರಣವಾಗಿ ನಿಂತುವಂತೆ! ಇಷ್ಟಿದ್ದೂ ನಮ್ಮ ವಕೀಲನು ವಿರುದ್ಧ ಪಕ್ಷದವರ ಮತಗಳನ್ನೆಲ್ಲ ಸಂಪೂರ್ಣವಾಗಿ ಖಂಡಿಸಿ ತೋರಿಸಿದ.

"ಆದರೂ ನ್ಯಾಯಾಧೀಶರು ನನ್ನನ್ನು ಅಪರಾಧಿಯೆಂದು ನಿಶ್ಚಯಿಸಿದರು. ಅಪರಾಧಕ್ಕೆ ತಕ್ಕ ಶಿಕ್ಷೆ ವಿಧಿಸುವುದೇ ನ್ಯಾಯ. ಹಾಗೂ ತನ್ನ ಸಂಬಳಕ್ಕೆ ಭದ್ರತೆ ಎಂದು ಅವನ ಅಂತರಾತ್ಮ ನುಡಿಯುತ್ತಿರಬೇಕು. ತನ್ನ ಶಿಕ್ಷಣಕ್ಕೆ ತಕ್ಕಂತೆ ವಿದ್ವತ್ಪೂರ್ಣವಾದ ನಿರ್ಣಯವೊಂದನ್ನು ಬರೆದು ಓದಿ ತೋರಿಸಿದನಾದ.

"ಇರಲಿ. ಮನೆಯಲ್ಲಿ ಇಂದಿರೆಗೆ ನಿಶ್ಚಿಂತೆಯಿಂದ ಇರಲಿಕ್ಕೆ ಹೇಳು. ನಿನ್ನ ಅಭ್ಯಾಸವೂ ಚನ್ನಾಗಿ ಸಾಗಲಿ. ಇಲ್ಲಿ ಹೊರಗಿನ ಸುದ್ದಿ ಏನೂ ತಿಳಿಯುವದಿಲ್ಲ. ಇದೊಂದು ಲೋಕವೇ ಬೇರೆ. ಶಕ್ಯವಾದರೆ ಒಮ್ಮೆ ಭೆಟ್ಟಿಯಾಗಿ ಹೋಗು. ಈಗ ನನ್ನ ಸಂಸರ್ಗದಿಂದ ನಿನಗೂ ಕಷ್ಟ ಒದಗೀತು ಅನ್ನುವ ಹಾಗಿಲ್ಲ. ನಾನು ಸಾಮಾನ್ಯ ಲಂಚ ತಿಂದ ಅಪರಾಧಿ!"

ಹೀಗೆ ಕಾಗದ ಮುಗಿದಿದ್ದಿತು. ಕೆಳಗೆ ರುಜುವಿರಲಿಲ್ಲ. ಆದರೂ ಸುಧೀರನ ಕಾಗದವೆಂದು ಅಕ್ಷರಗಳಿಂದಲೇ ತಿಳಿಯುವಂತಿತ್ತು. ಅಜಿತ ಕಾಗದ ಓದಿ ಭಾರವಾದ ಮನಸ್ಸಿನಿಂದ ಹಾಸಿಗೆಯ ಮೇಲೆ ಹೊರಳಿದ. ಮನಸ್ಸು ಎಲ್ಲೆಲ್ಲಿಯೋ ಹರಿಯುತ್ತಲಿದ್ದಿತು. ಅದೊಂದು ದಿನ ಅಶಾಂತಿ

ಯಲ್ಲಿಯೇ ಕಳೆದನಾದ. ಏನನ್ನೂ ಓದಲಾಗಲಿಲ್ಲ. ರಾತ್ರಿ ನಿದ್ರೆಯೂ ಚನ್ನಾಗಿ ಹತ್ತಲಿಲ್ಲ. ಸುಧೀರನನ್ನು ಒಮ್ಮೆ ಕಂಡು ಮಾತಾಡಬೇಕೆಂಬ ಆತುರ. ಅದರ ವಿಷಯದ ಕನಸು ನೆನಹುಗಳೇ ಇರುಳೆಲ್ಲ. ಮುಂಜಾನೆ ಎದ್ದು ಈಗ ಹಾಸಿಗೆಯ ಮೇಲೆ ಕುಳಿತಿದ್ದ. ಎದುರಿಗಿನ ಬಾಗಿಲ ಕಡೆಗೆಯೇ ಅವನ ದೃಷ್ಟಿಯಿದ್ದಿತು. ಆದರೂ ಅಲ್ಲಿಂದ ಯಾರು ಬಂದರು ಯಾರು ಹೋದರೆಂಬುದನ್ನು ಮಾತ್ರ ಅದು ಗ್ರಹಿಸುತ್ತಿರಲಿಲ್ಲ.

"ಇವರೇ ನೋಡು ಅವರು!"

ಎಂದು ತೋರಿಸುತ್ತ ಯಾವದೋ ಒಂದು ಚಿಕ್ಕ ಹುಡಿಗೆ ಒಬ್ಬ ಹೆಂಗುಸಿನ ಕೈ ಹಿಡಿದು ಎಳೆಯುತ್ತ ಅಜಿತನ ಸಮೀಪಕ್ಕೆ ಬಂತು. ಅಜಿತ ಈ ಮಾತನ್ನು ಕೇಳಿದ. ಎರಡು ಮೂರು ಸಲ ಕೇಳಿದ. ಆದರೂ ಅವನ ಕಿವಿಯನ್ನು ಹೊಗಲಿಲ್ಲ ಆ ಮಾತು. ಅಂದಮೇಲೆ ಮಿದುಳನ್ನು ಮುಟ್ಟುವದಂತೂ ದೂರವೇ ಉಳಿಯಿತು. ಯಾವಾಗ್ಗೆ ಗುಲಶನ್‌ಬಿಯು ಬಂದು ಅಜಿತನ ಪಾದಗಳ ಮೇಲೆ ತಲೆಯಿಟ್ಟಳೋ ಆಗಲೇ ಅವನಿಗೆ ಅರಿವು! ಅಜಿತ ಬೆರಗಿನಿಂದ ನೋಡಿದ. ಹುಡುಗೆಯ ಕಡೆಗೆ ದೃಷ್ಟಿಯನ್ನು ಹೊರಳಿಸಿದೊಡನೆಯೇ ಅವಗೆಲ್ಲ ಅರ್ಥವಾಯಿತು. ಅವರೊಡನೆ ಏನು ಮಾತಾಡಬೇಕೆಂಬುದು ತಿಳಿಯದೆ ಸುಮ್ಮನೆ ಕುಳಿತ. ಕೃತಜ್ಞತೆಯಿಂದ ಆ ತಾಯಿಯು ಮಾತೂ ಬಾರದ ಮೂಕಿಯಾಗಿದ್ದಳಾಗ.

ಸ್ವಲ್ಪ ಹೊತ್ತಿನ ಮೇಲೆ "ನನ್ನ ಕಂದನನ್ನು ಉಳಿಸಿದಿರಿ. ನಿಮ್ಮ ಕಲ್ಯಾಣ ಆಗಲಿ" ಎಂದಳಾಕೆ. ಅಜಿತ ಈಗ ಅವಳನ್ನು ನೋಡಿದ. ಅವನಿಗೆ ಕಾಲೇಜಿನ ನಿಸ್ತೇಜ ಹುಡಿಗೆಯರನ್ನು ನೋಡುವದಕ್ಕಿಂತ ಇಂಥ ಕೂಲಿಕಾರ ಹೆಂಗಸರನ್ನು ನೋಡುವುದರಲ್ಲಿ ಆನಂದ ಹೆಚ್ಚು. ನೀಳವಾದ ಮುಖ, ಗುಲಾಬಿಯಂತಹ ಕಾಂತಿ, ಶ್ರಮಜೀವಿಯಾದರೂ ಶಾಂತಿಯ ಸೂಕ್ಷ್ಮ ಚಿನ್ಹೆಗಳು ಮುಖದಲ್ಲಿದ್ದುವು. ಅವೆಲ್ಲವುಗಳ ಮೇಲೆ ವಿಷಣ್ಣ ನಗೆಯೊಂದು ಆವರಿಸಿದ್ದಿತು. ಅದನ್ನು ಕಳೆಯಲು ಪ್ರಯತ್ನಪೂರ್ವಕವಾಗಿ ಅವಳು ಯತ್ನಿಸುತಿದ್ದಳಾದರೂ ಹೃದಯದಿಂದ ಚಿಮ್ಮಿ ಬರುತ್ತಿದ್ದಿತದು! ಉಡಿಗೆ-ತೊಡಿಗೆಗಳೆಲ್ಲ ಸಾಮಾನ್ಯ ತರಗತಿಯವು. ಆದರೂ ಅವಳನ್ನು ಯಾರಿಗೂ ಒಂದು ಕ್ಷಣ ನೋಡಬೇಕೆನ್ನಿಸುವಂತಹ ರೀವಿ.

" ಏನು ಮಹಾ, ನನ್ನ ಕರ್ತವ್ಯವನ್ನೇ ಮಾಡಿದೆ." ಅಜಿತ ನುಡಿದ.

ಕೃತಜ್ಞತೆಯ ಭರದಲ್ಲಿ ಅವಳ ಬಾಯಿಂದ ಅಷ್ಟು ಸ್ಪಷ್ಟವಾಗಿ ಮಾತುಗಳೇ ಹೊರಡುತ್ತಿರಲಿಲ್ಲ. ಮೆಲ್ಲನೆ ಅಂದಳು :

" ನೀವು ನನ್ನ ಪಾಲಿನ ದೈವ ! "

" ಆ ದಿನ ಜಯತುನಬಿಯನ್ನು ಬಿಟ್ಟು ಎಲ್ಲಿ ಹೋಗಿದ್ದಿರಿ ? " ಅಜಿತ ಕೇಳಿದ.

ಹಾಗೆಯೇ ಆ ಹುಡಿಗೆಯನ್ನು ಅಕ್ಕರೆಯಿಂದ ಕೈಹಿಡಿದು ಎಳೆದುಕೊಂಡು ಹತ್ತಿರ ಪಲ್ಲಂಗದ ಮೇಲೆ ಕೂಡಿಸಿಕೊಂಡ. ಅವಳು ಸಂಕೋಚದಿಂದ ಮೈಮುದುರಿಕೊಂಡು ಕುಳಿತಳು, ಸುತ್ತಲೂ ಚಂಚಲ ನಯನಗಳಿಂದ ನೋಡುತ್ತ.

" ನಾನು ಕೆಲಸಕ್ಕೆ ಹೋಗಿದ್ದೆ. ಎರಡ ದಿನ ಮನೆಗೇ ಬರಲಿಕ್ಕೆ ಆಗಲಿಲ್ಲ, ಆ ಹಿಂದು ಮುಸಲ್ಮಾನ ಹೊಡೆದಾಟದಲ್ಲಿ." ಮಾತಿನ ಕೊನೆ ಯೊಡನೆ ಅವಳ ಮುಖದಿಂದ ನಿಟ್ಟುಸುರೊಂದು ಹೋಯಿತು. ಅದೇಕೋ ಅವಳ ಮುಖದಲ್ಲಿ ಹೆದರಿಕೆ ಆವರಿಸಿತ್ತು. ತನ್ನ ಯಾವದೋ ಒಂದು ಅತ್ಯಂತ ಗುಪ್ತವಾದ ತಪ್ಪು ತನ್ನನ್ನೇ ತಿನ್ನುತ್ತಿರುವಂತೆ ಅವಳ ಭಾವ ವಿದ್ದಿತು. ಅದನ್ನಾವುದನ್ನೂ ಅರಿಯದೆ ಅಜಿತ ಕೇಳಿದ :

" ಹುಡಿಗೆ ಇನ್ನೊಬ್ಬರ ಹತ್ತಿರ ನಿಲ್ಲುವಳೇನು ? "

" ಆ ರಾಧಾ ಅಜ್ಜಿ ಜಯತುನಬಿಗೆ ಮನೆಯವಳೇ " ಗಂಟಲು ಸಿರ ಗಳು ಬಿಗಿದು ಬರಲು ಅವಳ ಬಾಯಿಂದ ಮಾತುಗಳು ಹೊರಡದೆ ಅಳುವು ಬಂದಿತು. ಕಣ್ಣುಗಳು ನೀರಿನಿಂದ ತುಂಬಿದುವು.

" ಆ್ಞಽ ? ಆ ಮುದಕಿಗೆ ಏನಾಯ್ತು ? " ಸಖೇದಾಶ್ಚರ್ಯದಿಂದ ಕೇಳಿದ ಅಜಿತ.

ಧ್ವನಿಯಲ್ಲಿ ದುಃಖ ತುಂಬಿದ್ದಿತು ಆ ದಿನ ಮುದಿಕೆಯ ಮೇಲೆ ಬೀಳಲಿರುವ ಪೆಟ್ಟುಗಳು ಇವನ ಮೇಲೆ ಬಿದ್ದುದರಿಂದ ಮೂರ್ಛೆ ಹೊಂದಿದ್ದ. ಮುಂದೆ ನಡೆದ ಘಟನೆ ಅವನಿಗೆ ಗೊತ್ತಿರಲಿಲ್ಲ. ಇನ್ನೂ ಅದನ್ನಾರೂ ಅವನಿಗೆ ಹೇಳಿರಲಿಲ್ಲ.

" ಆಕೆಗೂ ಪೆಟ್ಟ ಬಿದ್ದು ಹೋದಳಯ್ಯೊ! ಅವಳು ಇನ್ನೆಲ್ಲಿ ನಮಗೆ

ನೋಡಲಿಕ್ಕೆ ಸಿಕ್ತಾಳು ?" ಸ್ವಲ್ಪ ತಡೆದು ಉಸಿರುಗರೆದು "ಮುದಿಕೆ ಬಹಳ ಒಳ್ಳೆವಳು! ಯಾರ ಮನೆಯೊಳಗೆ ಏನಾದರೂ ಸಂಕಟ ಒದಗಿದರೆ ಹೋಗಿ ನೋಡಿ ಕೇಳಿ ಬರತಿದ್ದಳು."

"ಅವಳಿಗೆ ಮಕ್ಕಳಿಲ್ಲೇನು?" ಸಜಲನಯನನಾಗಿ ಕೇಳಿದ ಅಜಿತ. ಶೂನ್ಯದೃಷ್ಟಿಯಿಂದ ಆಸ್ಪತ್ರೆಯ ಯಾವುದೋ ಮೂಲೆಯನ್ನು ನಿಟ್ಟಿಸುತ್ತಿದ್ದನಾಗ.

"ಮಗನೊಬ್ಬ ಇದ್ದಾನೆ. ಎಲ್ಲಿಯೋ ಮಿಲಟರಿಯೊಳಗ ಕೆಲಸ ಮಾಡಿ ತಿಂಗಳಾ ಹದಿನೈದು ರೂಪಾಯಿ ಕಳಿಸುತಿದ್ದ. ಹೀಗೆ ಸತ್ತದ್ದು ಕೇಳಿ ಮೊನ್ನೆ ಬಂದ. ಸಾಯೂ ಕಾಲಕ್ಕ ತಾಯಿ ಮುಖ ನೋಡಲಿಲ್ಲಂತ ಬಹಳ ಅಳತಿದ್ದ. ನಮ್ಮ ಜಯತುನಬಿ ಅಂತೂ ಎರಡೂ ದಿನ 'ಆಂ' ಅನ್ನುವ ಬಾಯಿ ಮುಚ್ಚಲಿಲ್ಲ."

ಕುಳಿತಲ್ಲಿಯೇ ಆ ಚಿಕ್ಕ ಹುಡುಗಿಯ ಕಣ್ಣಿಂದ ನೀರುಗಳು ದಳ ದಳ ಇಳಿಯುತ್ತಿದ್ದವು. ದುಃಖ ಒತ್ತರಿಸಿ ಬರುತ್ತಿರಲು ಹಲ್ಲುಗಳನ್ನು ತುಟಿಯಿಂದ ಒತ್ತಿ ಹಿಡಿದಿದ್ದಳು. ಮೂಗಿನ ಎರಡೂ ಹೊರಳಿಗಳಿಂದ ಬೆಚ್ಚಗಿನ ಉಸಿರು ಹಿಡಿಸಲಾರದೆ ಹೊರಬರುವಾಗ ಸದ್ದನ್ನೆಸಗುತ್ತಿತ್ತು.

"ಆಕೆಯ ಹತ್ತರ ಇದ್ದು ಪಕ್ಷಪಾತವೇನು ಈಕೆಗೆ ?"

"ಅಹುದು. ನಾ ಕೆಲಸಕ್ಕ ಹೋಗುವಾಗ ಅವಳ ಹತ್ತರಾನಃ ಈಕೆಯನ್ನು ಇಟ್ಟ ಹೋಗತಿದ್ದೆ. ಅವಳಿಗೂ ಕೆಲಸ ಇರುತಿರಲಿಲ್ಲ. ಇವಳಿಗೆ ತಿನಿಸಿ ಉಣಸಿ ಆಡಸತಿದ್ದಳು. ಅವಳ ತೊಡೀ ಮೇಲೆ ನನ್ನ ಮಗಳ ಬೆಳೆದ ಇಷ್ಟ ದೊಡ್ಡಾಕಿ ಆದಳು!" ಎಂದು ಮಗಳನ್ನು ಸೆಳೆದು ಅಪ್ಪಿಕೊಂಡಳು. ಆಗ ಜಯತುನಬಿಯು ಮಾತ್ರ ತಾಯಿಯ ಸೀರೆಯ ಸೆರಗಿನಿಂದ ಮುಖ ಮುಚ್ಚಿಕೊಂಡು ಅಳಹತ್ತಿದಳು ಅಪರಿಚಿತ ಸ್ಥಳವೆಂದು ಹಾಗೆ ಮಾಡಿದಳೇನೊ! ಗುಲಶನ್‌ಬಿಯ ಗಂಟಲೂ ಬಿಗಿದು ಬಂದು ಮಾತುಗಳು ಹೊರಡದಾದವು.

ಅಜಿತನ ಬಾಯಿಯೂ ಜಿಗುಟಾಯಿತು. ಕಣ್ಣಂಚಿನಲ್ಲಿ ಜಲಬಿಂದುಗಳು ನಿಂತಿದ್ದುವು. ಮನದಲ್ಲಿ ಹಿಂದು ಮುಸಲ್ಮಾನ ಹೊಡೆದಾಟವೆಲ್ಲಿ ? ಈ ಮುಸಲ್ಮಾನ ಕೂಸು ಹಿಂದೂ ಮಾತೆಯ ತೊಡೆಯ ಮೇಲೆ ಬೆಳೆದು

ದೆಲ್ಲಿ! ರಾಧೆಯೇ ಜಯತುನಬಿಗೆ ಸಲಹಿದ ತಾಯಿಯಂತೆ! ಅವಳು ಹಿಂದು ಇವಳು ಮುಸಲ್ಮಾನ! ಇವರಲ್ಲಿ ಭೇದಭಾವವಿಲ್ಲ. ಭಾರತ ಮಾತೆಯ ನಿಜವಾದ ಮಕ್ಕಳಿವರು! ಜಾತಿಭೇದ ಬಡವರಿಗಿಲ್ಲ. ಸುಧಾರ ಕರೆನಿಸಿಕೊಳ್ಳುವ ಆ ಸಿರಿವಂತರಿಗೆಯೇ ಅದೆಲ್ಲ!

ಸ್ವಲ್ಪ ಹೊತ್ತು ಮಾತಾಡಿ ಕೊನೆಗೆ ತಮ್ಮ ಮನೆಗೆ ಬರಲಿಕ್ಕೆ ಹೇಳಿದಳು ಗುಲಶನ್‌ಬಿ. ಹಾಗೆಯೇ ಚಿಕ್ಕ ಅರಿವೆಯೊಂದರಲ್ಲಿ ಕಟ್ಟಿ ತಂದ ನಾಲ್ಕು ಕಿತ್ತಳೆ ಹಣ್ಣಿನ ಕಾಣಿಕೆಯನ್ನೂ ಸಂಕೋಚದಿಂದ ಅಜಿತನಿಗೆ ಕೊಟ್ಟಳು. ಅಜಿತ ಒಂದು ಹಣ್ಣನ್ನು ಸುಲಿದು ಜಯತುನಬಿಗೂ ತಿನ್ನಲು ಕೊಟ್ಟು ತಾನೂ ತಿನ್ನತೊಡಗಿದ. ದಿನಾಲು ಅಜಿತ ತಿನ್ನುತ್ತಿದ್ದ ಹಣ್ಣುಗಳನ್ನು ಅಮಿಚಂದಸೇಠನು ಕಳಿಸುತ್ತಿದ್ದ. ಆದರೆ ಈ ಹಣ್ಣುಗಳ ಸಿಹಿಯೇ ಬೇರೆ. ಅವೆಂದೂ ಇಷ್ಟು ಸಿಹಿ ಹತ್ತಿರಲಿಲ್ಲ ಅವನಿಗೆ. ಅದೇಕೋ ಗುಲಶನಬಿಯು ತಂದ ಹಣ್ಣಿನ ರಸದ ಹನಿಹನಿಗೂ ಬೆವರಿನ ಹನಿಯು ಕಾಣಿಕೆ ತೆತ್ತುವದಿತ್ತೆಂದೋ ಏನೋ!

* * * *

ತಲೆಯ ಗಾಯ ಮಾಯುತ್ತ ಬಂದಿದ್ದಿತು. ಅಜಿತನಿಗೆ ಒಂದೊಂದೇ ಲಕ್ಷ್ಯಕ್ಕೆ ಬರತೊಡಗಿತು. ತನ್ನ ತಾಯಿ, ತನ್ನ ಅಕ್ಕ, ತನ್ನ ಮನೆ, ತನ್ನ ಸ್ಥಿತಿ, ತನ್ನ ಶಿಕ್ಷಣ, ತನ್ನ ಆಶೆ ಎಲ್ಲವನ್ನೂ ನೆನೆದು ಹೇಗೋ ಹೇಗೋ ಅನ್ನಿಸಿತು. ಮತ್ತೆ ಸುಧೀರನ ಕಾಣುವ ಇಚ್ಛೆ ಬಲವತ್ತರವಾಗತೊಡಗಿತು. ಸಂಜೆಗೆ ಡಾಕ್ಟರರು ಬಂದಾಗ ಕೇಳಿದನು :

“ಇನ್ನೂ ಎಷ್ಟು ದಿವಸ ಇರಬೇಕು ಡಾಕ್ಟರರೇ ?”

“ಐದಾರು ದಿನ. ಗುಣವಾಗಿದೆ. ವಿಶ್ರಾಂತಿ ಬೇಕು ಇನ್ನೂ. ಈ ಗಾಯಗಳ ನೋವಿನಕಿಂತ ಮನದ ನೋವು ಹೆಚ್ಚಾಗಿದೆ.”

“ಒಂದು ಕೆಲಸ ಮಾಡುತ್ತೀರಾ?” ಈ ಪ್ರಶ್ನೆ ಅಜಿತನ ಜೀವವನ್ನೇ ಒತ್ತಿಟ್ಟು ಹೊರಗೆ ಬಂದಂತಿತ್ತು. ಸಿರಿವಂತರ ಹತ್ತರ ಬಾಯಿ ತೆರೆಯುವದು ಅವನಿಗೆ ಈಗೀಗ ಅಸಹ್ಯವೆನಿಸಹತ್ತಿತು.

“ಯಾವ ಕೆಲಸವದು ?”

“ನನಗೆ ಜೇಲಿನಲ್ಲಿ ಒಬ್ಬರಿಗೆ ಭೆಟ್ಟಿಯಾಗಬೇಕಾಗಿದೆ.”

“ ಯಾವ ಜೇಲು ? ”

“ ನಿಮಗೆ ಹಿಂದಿನಿಂದ ಎಲ್ಲವನ್ನೂ ಹೇಳುವೆ ” ಎಂದು ಮಾತು ಮುಗಿಸಲು ಯೋಚಿಸಿದ.

“ ಅಲ್ಲಿ ನಿಮ್ಮವರು ಯಾರಾದರೂ ಇರುವರೇ ? ”

“ ಇದ್ದಾರೆ; ನನ್ನ ಬೀಗ ಇದ್ದಾರೆ. ”

“ ಹೆಸರೇನು ? ”

“ ಸುಧೀರ.”

“ ಹೀಗೋ ? ಅವರು ನನಗೆ ತುಂಬ ಪರಿಚಿತರು. ಕೆಲದಿನ ಒಂದೇ ಕಟ್ಟಡದ ಎರಡು ಭಾಗದಲ್ಲಿ ಇಬ್ಬರೂ ಇದ್ದೆವಲ್ಲ ! ಇಂದಿರೆಯ ತಮ್ಮ ನೀವೇ ಏನು ? ”

“ ಅಹುದು, ಡಾಕ್ಟರರೇ. ”

“ ನನ್ನ ಹೆಂಡತಿಯೂ ಹುಬ್ಬಳ್ಳಿ ಕಡೆಯವಳೆ. ಅವಳಿಗೂ ನಿಮ್ಮಕ್ಕನಿಗೂ ತುಂಬ ಸ್ನೇಹವಿದ್ದಿತಾಗ. ”

“ ಇಬ್ಬರೂ ಕನ್ನಡಿಗರು ! ”

“ ಇರಲಿ, ಆ ಭಾಷೆಯ ವಾದ ನಮ್ಮ ಮನೆಯಲ್ಲಿ ನಡೆಯದು. ಮೊದಲು ಬಂದಾಗ ಹಾಗೆ ಹೀಗೆ ಮಾಡಿ ನೋಡಿದಳು, ನಮ್ಮಾಕಿನೂ. ಈಗ ಎಲ್ಲ ಮರಾಠಿಯನ್ನೇ ಮಾತಾಡತಾಳೆ; ಹುಡುಗರೂ ಹಾಗೇ. ಇಂದಿರೆ ಈಗೆಲ್ಲಿ ? ”

“ ಊರಿಗೆ ಹೋಗಿದ್ದಾಳೆ, ಸುಧೀರ ಜೇಲಿಗೆ ಹೋದ ಮೇಲೆ.”

“ ಸುಧೀರನಿಗೆ ಶಿಕ್ಷೆಯಾದುದು ಗೊತ್ತೇ ಇದೆಯಲ್ಲ ! ಅವನಿಗೆ ನಾನು ಮೇಲಿಂದ ಮೇಲೆ ಹೇಳ್ತ ಬಂದೆ. ‘ಈ ಕೆಲಸ ಸರಿಯಲ್ಲ, ವಿಶ್ವ ಸೃಷ್ಟಿ ಸಫಲವಾಗದು. ಮನೆ ಗೆದ್ದು ಮಾರು ಗೆದೆಯಬೇಕು. ಹಿಂದುಗಳ ಂತ ನೋಡಿರಿ. ಸಂಘಟನೆ ಮಾಡಿರಿ ’ ಎಂದು. ”

ಅಜಿತ ಸುಮ್ಮನಿದ್ದ.

“ ನಾಲ್ಕು ದಿನ ಕಳೆಯಲಿ. ಜೇಲಿನ ಅಧಿಕಾರಿ ನನಗೆ ತುಂಬ ಪರಿಚಯದವ. ಅವರ ಮನೆಯ ಡಾಕ್ಟರನೇ ನಾನು. ಹೇಳಿ ನಿಮಗೆ ಒಪ್ಪಿಗೆ ಕೊಡಿಸುತ್ತೇನೆ. ”

" ಆಗಲಿ, ತುಂಬ ಉಪಕಾರವಾಯಿತು." ಎಂದು ಹೇಳಿದ ಅಜಿತ.

ಮುಂದೆ ಅಜಿತ ಪೂರ್ಣ ಸುಧಾರಿಸಲು ಎಂಟು ಹತ್ತು ದಿನಗಳು ಹಿಡಿದುವು. ಆದರೂ ಆತ ದಿನಾಲು ಡಾಕ್ಟರರ ಬೆನ್ನು ಹತ್ತಿಯೇ ಇದ್ದ. ಅವರು ' ಈಗಲೇ ಬೇಡ. ಇನ್ನೂ ನಾಲ್ಕು ದಿನ ವಿಶ್ರಾಂತಿ ತೆಗೆದುಕೋ ' ಎಂದು ಹೇಳುತ್ತಿದ್ದರು. ಅಜಿತ ಕೇಳಲಿಲ್ಲ. ಆತುರ ತೋರಿಸತೊಡಗಿದ. ಅಜಿತನ ಕೈಯಿಂದ ಜೇಲ ಸುಪರಿಂಟೆಂಡಂಟನಿಗೆ ಅರ್ಜಿ ಬರೆಯಿಸಿಕೊಂಡು ಒಪ್ಪಿಗೆ ತರಿಸಿಕೊಟ್ಟರು. ಕೊನೆಯ ದಿನ ಅಜಿತ ಡಾಕ್ಟರರ ಮನೆಗೆ ಊಟಕ್ಕೆ ಹೋದ. ಕನ್ನಡ ಮಹಿಳೆಯ ಆದರಾತಿಥ್ಯದಿಂದ ತಣಿದ. ಅಕ್ಕನ ಗುಣಗಾನವನ್ನು ಕೇಳಿ ಮುಗ್ಧನಾದ.

ಅದೇ ದಿನ ಅಜಿತ ಸುಧೀರನನ್ನು ಕಂಡ. ಅವನ ಉಡಿಗೆ ತೊಡಿಗೆಗಳನ್ನೂ ಇರುವಿಕೆಯನ್ನೂ ನೋಡಿ ಅವನಿಗೆ ತುಂಬ ವ್ಯಥೆಯಾಯಿತು. ಹೀಗೆ ಜನತೆಯನ್ನು ಪಶುಗಳಂತೆ ನಡೆಯಿಸಿಕೊಳ್ಳುವದಕ್ಕಿಂತ ಒಮ್ಮೆಲೇ ಗಲ್ಲಿಗೇರಿಸಿಬಿಡುವದೇ ಒಳಿತೆಂದೆನಿಸಿತವನಿಗೆ. ಸುಧೀರ ತನ್ನನ್ನು ಹಿಡಿದ ದಿನದ ಸಂಗತಿಯನ್ನು ಹೇಳತೊಡಗಿದ :

ಚರ್ಚ ಗೇಟಿನ ಕಡೆಗೆ ಹೋಗುವ ಟ್ರಾಮಿನಲ್ಲಿ ನಾನು ಏರುತ್ತಲಿದ್ದೆ. ಅಷ್ಟರಲ್ಲಿ " ಮಿ. ಸುಧೀರ ಸ್ವಲ್ಪ ನಿಲ್ಲಿರಿ " ಎಂಬ ಮಾತು ನನ್ನ ಕಿವಿಗೆ ಬಿತ್ತು.

" ಏಕೆ ? " ನಿಂತು, ಹಿಂತಿರುಗಿ ನಾನು ಕೇಳಿದೆ.

" ಸ್ವಲ್ಪ ಕೆಲಸವಿದೆ." ರಹಸ್ಯ ತುಂಬಿದ ನಗೆಯೊಡನೆ ಆ ವ್ಯಕ್ತಿ ಉತ್ತರವಿತ್ತ.

" ಮಿ. ಪಠಾಣ ನಿಮಗೆ ಭೆಟ್ಟಿಯಾಗಲು ಇಚ್ಛಿಸುತ್ತಾರೆ."

" ಈಗಲೇ ? "

" ಹೌದು; ಇಲ್ಲೇ. "

ಒಮ್ಮೆಲೇ ಒಂದು ಕಲ್ಪನೆಯು ನನ್ನ ತಲೆಯಲ್ಲಿ ಮಿಂಚಿ ಮಾಯವಾಯಿತು. ಕೂಡಲೆ ಕೇಳಿದೆ.

" ಭೆಟ್ಟಿಯಾಗುವರೋ ? ಬಂಧಿಸುವರೋ ? "

ಆ ವ್ಯಕ್ತಿಯೂ ನಕ್ಕ. ಸಿ. ಆಯ್. ಡಿ. ಇನಸ್ಪೆಕ್ಟರ ಮೋಹಿತೆಯೇ

ಆ ವ್ಯಕ್ತಿ.

ಸ್ವಲ್ಪ ಹೊತ್ತಿನಲ್ಲಿ ಎಂ. ಪಠಾಣ ಸಾಹೇಬರೂ ನಾಲ್ಕೆಂಟು ಜನ ಪೋಲೀಸರೂ ನಮ್ಮ ಹತ್ತಿರ ಬಂದು ತಲುಪಿದರು.

"ಗುಡ್ ಇವ್ಹನಿಂಗ ಎಂ. ಸುಧೀರ" ಎಂದು ಪಠಾಣರು ಕೈ ಮುಂದೆ ಚಾಚಿದರು. ನಾನು ಕೈ ಕುಲಕುವ ಶಿಷ್ಟಾಚಾರದ ಗೋಜಿಗೆ ಹೋಗದೆ ಹೇಳಿದೆ

"ವ್ಹೆರಿ ಮೇನಿ ಗುಡ್ ಇವ್ಹನಿಂಗ್ಸ ನವ್."

ಎಲ್ಲರೂ ಕೂಡಿ ಮುಂದೆ ನಡೆದೆವು. ಇದೀಗ ಕೂಲಿಕಾರ ಯುನಿಯನ್ನದ ಮ್ಯಾನೆಜಿಂಗ ಕಮೀಟಿಯು ಸಭೆಯನ್ನು ತೀರಿಸಿಕೊಂಡು ಅದರ ಕಚೇರಿಯಿಂದ ಹೊರಗೆ ಬಂದಿದ್ದೆ. ಅದೇ ದಿನ ಮಧ್ಯಾಹ್ನ ಗಿರಣಿಯ ಒಡೆಯರಿಗೂ ನನಗೂ ಭೆಟ್ಟಿಯಾಗಿದ್ದಿತು. ಆ ಭೆಟ್ಟಿಯಲ್ಲಿ ಕೂಲಿಕಾರರು ಸಂಪನ್ನು ಯಾವ ಶರ್ಯತ್ತಿನ ಮೇಲೆ ಮುಗಿಸ ಬೇಕೆಂಬುದನ್ನು ಅವರು ನನಗೆ ತಿಳಿಸಿದರು. ಆ ಕರಾರುಗಳನ್ನು ನಾನು ಅಲ್ಲಿಯೇ ಅಲ್ಲಗಳೆದಿದ್ದೆ. ಆಗ ಅವರು ನನಗೆ ಉಪದೇಶದ ನಾಲ್ಕು ಮಾತುಗಳನ್ನು ಹೇಳಿ ಅಂದರು.

"ಹೀಗೆ ಮಾಡಬೇಡಿರಿ, ನನ್ನ ಮಾತು ಕೇಳಿರಿ. ಈ ಕರಾರುಗಳಿಗೆ ಒಪ್ಪದೆ ಹೋದರೆ ನಿಮ್ಮ ಪರಿಣಾಮವೇನಾದೀತೆಂಬುವದರ ಕಲ್ಪನೆ ಇದೆಯೆ?"

"ಆದರೆ ಈ ಕರಾರುಗಳನ್ನು ಮಾನ್ಯಮಾಡಿದರೆ ಕೂಲಿಕಾರರ ಮೇಲೆ ಯಾವ ಪರಿಣಾಮವಾಗುವದೆಂಬುದನ್ನು ನಾನು ನೋಡಬೇಕಾಗಿದೆ."

ಹೀಗೆ ಉತ್ತರ ಕೊಟ್ಟು ಹೊರಬಿದ್ದೆ. ಆಗ ಸುಮಾರು ಮೂರು ಗಂಟೆಯಾಗಿದ್ದಿತು. ಅಲ್ಲಿಂದ ನೆಟ್ಟಗೆ ನಮ್ಮ ಯೂನಿಯನ್ನದ ಕಾರ್ಯಾಲಯಕ್ಕೆ ಹೋದೆ. ಮ್ಯಾನೇಜಿಂಗ ಕಮಿಟಿಯಲ್ಲಿಯೂ ಅವರ ವಿಚಾರ ಇಟ್ಟೆ. ಎಲ್ಲರ ಅಭಿಪ್ರಾಯ ನನ್ನಂತೆಯೇ ಆಯಿತು. ಮರುದಿವಸದಿಂದ ಸಂಪು ಇನ್ನೂ ಜೋರಾಗಿಯೇ ನಡೆಯಿಸುವದೆಂದೂ ಗೊತ್ತಾಯಿತು. ಅನಂತರ ನಾನು ಹೊರಗೆ ಬಂದಿದ್ದೆ.

ಹಾಗೆಯೇ ಮುಂದೆ ಸಾಗುತ್ತ ನಾವು ಒಂದು ಮೋಟಾರಿನ ಸಮೀಪಕ್ಕೆ ಬಂದೆವು.

" ನಡೆಯಿರಿ. ಮೋಟಾರಿನಲ್ಲಿ ಏರಿರಿ. ನಿಮ್ಮನ್ನು ಆಫೀಸಿಗೆ ಒಯ್ಯಬೇಕಾಗಿದೆ" ಎಂದು ಪಠಾಣರು ಹೇಳಿದರು.

" ಲೇಖೀ ಆಮಂತ್ರಣ ತೋರಿಸಿರಲ್ಲ ? " ಎಂದು ನಾನು ನೆನಹು ಮಾಡಿದೆ.

" ಪಕ್ಕಾ ಇದ್ದೀರಲ್ಲ ನೀವು ! " ಎಂದು ಏನನ್ನೊ ಉದ್ಗಾರ ತೆಗೆದು ಅವರು ವಾರಂಟು ತೋರಿಸಿದರು.

ಇವರಿಗೆ ಇಷ್ಟು ಬೇಗನೆ ಈ ಸುದ್ದಿ ಹೇಗೆ ತಿಳಿಯಿತೆಂದು ನನಗೆ ಆಶ್ಚರ್ಯ. ನಾನು ಮೋಟಾರಿನಲ್ಲಿ ಏರಿದೆ. ಅಷ್ಟರಲ್ಲಿ ಕೆಲ ಕೂಲಿಕಾರ ಗೆಳೆಯರೂ ನೆರೆದರು. ಮೋಟಾರದ ಗಾಲಿಗಳು ಜೋರಿನಿಂದ ತಿರುಗ ತೊಡಗಿದುವು. ಅದಕ್ಕಿಂತ ಜೋರಾಗಿ ನನ್ನ ತಲೆಯಲ್ಲಿ ವಿಚಾರಚಕ್ರ ತಿರುಗತೊಡಗಿತು. ಪಠಾಣರು ಸಹಜ ಮಾತನಾಡುವ ರೀತಿಯಲ್ಲಿ ಹರಟೆಗೆ ಆರಂಭಮಾಡಿದರು.

" ನೀವು ತುಂಬ ತತ್ವನಿಷ್ಠರು ! ಏನಾದರೂ ಕೊನೆಗೂ ತತ್ವ ಬಿಡಲಿಲ್ಲ." ಧ್ವನಿಯಲ್ಲಿ ಶೋಧಕ ಬುದ್ಧಿಯ ತೀಕ್ಷ್ಣತೆ ಒಡಮೂಡುತ್ತಲಿತ್ತು.

" ಹೇಗೆ ? " ನಾನೆಂದೆ. " ನನ್ನ ಮಾತಿನ ಮೇಲಿಂದಲೇ ಕೇಸಿನ ಧೋರಣ ನಿಶ್ಚಯವಾಗತಕ್ಕದ್ದದೆಯೋ ? "

ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಾದೆವು. ಉಳಿದವರೂ ಮೌನವಾಗಿಯೇ ಇದ್ದರು. ತುಸು ಹೊತ್ತಿನಲ್ಲಿಯೇ ಮೋಹಿತೆ ಮಾತಿಗೆ ಆರಂಭ ಮಾಡಿದ.

" ಬಹಳ ಗೊಂದಲ ಹಿಡಿದುಬಿಟ್ಟಿತಿಂದು ! "

" ಅದೇಕೆ ? "

" ನಾಲ್ಕಕ್ಕೆ ಹತ್ತು ಮಿನಿಟ ಇರುವಾಗಂದರೆ ಈ ವಾರಂಟ ಹೊರಟಿತು. ಇಷ್ಟರಲ್ಲಿಯೇ ಈ ವಿಧಿಯೆಲ್ಲ ಆಗಬೇಕಾದರೆ.... "

ನಾನು ತಿರುಗಿ ವಿಚಾರದಲ್ಲಿ ಮಗ್ನನಾದೆ. ನಡೆದ ಘಟನೆಗಳನ್ನು ಮನಸ್ಸಿನಲ್ಲಿ ಹೊಂದಿಸಿ ನೋಡತೊಡಗಿದೆ. ಕೆಳಗಿನ ಪ್ರಮೇಯ ನನ್ನ ಕಣ್ಣೆದುರಿಗೆ ಬಂದು ನಿಂತಿತು.

ಮಧ್ಯಾಹ್ನದ ಮೂರುವರೆ ಗಂಟೆಗೆ ಒಪ್ಪಂದದ ಕರಾರುಗಳನ್ನು ನಾನು ಒಪ್ಪಲಿಲ್ಲ.

ಇದರಿಂದ ಏನಾದರೂ ಪರಿಣಾಮವಾಗುವದೆಂದು ಗಿರಣಿಯ ಮಾಲಕ ಸೂಚಿಸಿದ.

ಮುಂದೆ ಇಪ್ಪತ್ತೇ ನಿಮಿಷಗಳಲ್ಲಿ ವಾರಂಟು ಹೊರಟಿತು.

ತಲೆಯಲ್ಲಿ ವಿಚಾರದ ಗೊಂದಲವೆದ್ದಿತು. ಈ ಘಟನೆಗಳ ಅರ್ಥ ವೇನು? ಇವುಗಳ ಸಂಬಂಧವನ್ನು ಯಾವ ರೀತಿ ಹಚ್ಚುವುದು?

ಇಷ್ಟರಲ್ಲಿ ಮೋಟಾರು ನಮ್ಮ ಮನೆಯ ಮುಂದೆ ಬಂದು ನಿಂತಿತು. ನನ್ನ ಕೋಣೆಯ ತಪಾಸಣೆ ಮಾಡಲಾಯಿತು. ಕೆಲ ಪುಸ್ತಕಗಳನ್ನು ಜಪ್ತ ಮಾಡಲಾಯಿತು. ಆ ಕಾಲಕ್ಕೇನೇ ಇಂದಿರೆಯೊಡನೆ ನಾಲ್ಕು ಮಾತನಾಡಲು ಸಿಕ್ಕದ್ದು. ಅವಳನ್ನು ಹೇಗೆ ಸಮಾಧಾನ ಮಾಡ ಬೇಕೆಂಬುದೇ ನನಗೆ ತಿಳಿಯಲಿಲ್ಲ.

"ಮುಂದೆ ಹದಿನೈದು ದಿನಗಳ ನಂತರ ನನ್ನ ಮೇಲೆ ಎರಡು ಕೇಸುಗಳನ್ನು ತಯಾರಿಸಲಾಯಿತು. ಕೂಲಿಕಾರರ ಮೇಲೆಯೂ ಅವರಲ್ಲಿ ಕೆಲಸ ಮಾಡುವವರಲ್ಲಿಯೂ ೧೨೪ ಅ. ಕಲಮಿನ ಪ್ರಕಾರ ಅನೇಕ ಕೇಸು ಗಳಾಗಿದ್ದುವು. ನನ್ನ ಕೇಸು ಕೋರ್ಟಿನಲ್ಲಿ ನಡೆದಾಗ ಒಂದು ಸಂಗತಿ ಸ್ಪಷ್ಟವಾಯಿತು. ಅದೇನೆಂದರೆ ಒಂದು ಕೇಸಿನ ವಿಷಯದಲ್ಲಿ ನನ್ನನ್ನು ಅಪರಾಧಿಯೆಂದು ಸಿದ್ಧಮಾಡಬೇಕಾದರೆ ಪೋಲೀಸ ಅಧಿಕಾರಿಯು ನಾನು ಕಮ್ಯುನಿಸ್ಟನಿದ್ದೇನೆಂಬ ಸಂಗತಿಯೊಂದನ್ನೇ ಮುಖ್ಯವಾಗಿ ಕೋರ್ಟಿನ ಮನಸ್ಸಿನ ಮೇಲೆ ಪ್ರತಿಬಿಂಬಿಸಲು ಯತ್ನಿಸುತ್ತಿದ್ದನು. ನನ್ನ ವಿಚಾರ, ಉಚ್ಚಾರ, ಆಚಾರಗಳಲ್ಲೆಲ್ಲ ಕಮ್ಯುನಿಝುಮ್ ತುಂಬಿದೆ ಎಂದು ಪ್ರತಿಪಾದಿಸಿದ."

ಎಂದು ಸುಧೀರ ತನ್ನ ಸಂಗತಿ ಹೇಳಿ ಮುಗಿಸಿದ.

"ಅಹುದು; ಈ ಸುದ್ದಿಯನ್ನು ಇಂಗ್ಲೀಷ ವೃತ್ತಪತ್ರವು ಪ್ರಸಿದ್ಧಿಸಿ ದಾಗ "ಕಮ್ಯುನಿಸ್ಟ ಟ್ರಾಯಲ" ಎಂಬ ಅರ್ಥದ ತಲೆಬರೆಹವನ್ನೇ ಕೊಟ್ಟಿದ್ದಿತು" ಅಜಿತ ಹೇಳಿದ. ಆಮೇಲೆ ಸುಧೀರನಿಗೆ ಇಂದಿರೆ ಊರಿಗೆ ಹೋದುದನ್ನೂ ತನ್ನನ್ನು ಕಾಲೇಜಿನಿಂದ ಹೊರದೂಡಿದ ಸಂಗತಿಯನ್ನೂ

ವಿವರಿಸಿದ. ಇನ್ನೂ ಹಿಂದು ಮುಸಲ್ಮಾನರ ದಂಗೆಯ ವಿಷಯ ಹೇಳುತ ಲಿದ್ದ. ಸುಧೀರ ಕಿವಿಗೊಟ್ಟು ಕೇಳುತಲಿದ್ದ. ಅಷ್ಟರಲ್ಲಿ ಅವನಿಗೆ ಕೊಟ್ಟ ಅರ್ಧತಾಸಿನ ಅವಧಿ ತೀರಿತು. ಅಧಿಕಾರಿಯ ಎಚ್ಚರಿಕೆ ಬಂತು. ಆಗ ಸುಧೀರ ಹೇಳಿದ. "ನನಗೆ ಸ್ವಲ್ಪ ದಿನಗಳಲ್ಲಿ ಬಿಡುಗಡೆಯಾಗುವದು. ಕೂಡಲೆ ಊರಿಗೇ ಹೊಗೋಣ! ಒಮ್ಮೆ ಈ ನಗರದ ಹೊಲಸು ವಾತಾವರಣದಿಂದ ದೂರ ಎಲ್ಲಿಯಾದರೂ ಹೋಗಿರಬೇಕೆಂದೆನಿಸುತ್ತಿದೆ."

ಮತ್ತೂ ಒಂದು ಸಂಗತಿಯನ್ನು ಸುಧೀರ ಮೇಲಿಂದ ಮೇಲೆ ಹೇಳಿದ್ದ.

"ಪ್ರಿನ್ಸಿಪಾಲರನ್ನು ಕಾಣು, ಕಾಲೇಜ ಸೇರು, ಹೀಗೆ ತಿರಗಬೇಡ. ಇದೊಂದು ವರ್ಷ ಕಲಿತು ಬಿ. ಎ. ಒಂದು ಆದರೆ ನಮ್ಮ ಮನೆಯಲ್ಲಿ ಇದ್ದುದಕ್ಕೆ ಸಾರ್ಥಕವಾಯಿತು. ನಿಮ್ಮ ಕಕ್ಕ ಅವಳಿಗೂ ಹೆಸರಿಡವುದು ಬೇಡ."

* * * *

ಆದರಂತೆ ಇಂದು ಅಜಿತ ಪ್ರಿನ್ಸಿಪಾಲರನ್ನು ಕಾಣಲಿಕ್ಕೆ ಹೋದ. ಸಾಯಂಕಾಲವಾಗಿದ್ದಿತು. ಪ್ರಿನ್ಸಿಪಾಲರು ಇದೀಗ ಪತ್ನಿಯೊಡನೆ ಹೊರಗೆ ಹೊರಡಲು ಸಿದ್ಧರಾಗಿದ್ದರು. ಕಾರು ಗೇಟಿನೆದುರಿಗೆ ಸಿದ್ಧವಾಗಿ ನಿಂತಿದ್ದಿತು. ಅಜಿತ ಹೋಗಿ ನಮುಸ್ಕಾರ ಮಾಡಿದ. ಅವರು ತಿರುಗಿ ನಮುಸ್ಕಾರ ಮಾಡಲಿಲ್ಲ. ಮೇಲಾಗಿ ಅವನ ಕೂಡ ಮಾತಾಡಲೂ ಕೂಡ ಇಚ್ಛೆ ತೋರಿಸಲಿಲ್ಲ. ನೆಟ್ಟಗೆ ಕಾರಿನಲ್ಲಿ ಹೋಗಿ ಕುಳಿತರು. ಅವರ ನಾಯಿಯೂ ಹೋಗಿ ಮಗ್ಗುಲಲ್ಲಿ ಕುಳಿತಿತು.

ಪ್ರಿನ್ಸಿಪಾಲರ ಕಾರಿನ ಬದಿಯಲ್ಲಿ ಹೋಗಿ ನಿಂತು, ಇಂಗ್ಲೀಷಿನಲ್ಲಿ,—

"ಸರ್ ನಾನು ಬಂದಿರುವೆ" ಎಂದ ಅಜಿತ.

"ಅಹುದು, ನನಗೆ ಕಣ್ಣುಗಳಿವೆ, ನಿನ್ನನ್ನು ನೋಡಲಿಕ್ಕೆ— ಆದರೆ—"

ಅಜಿತ ಅವರ ಮಾತನ್ನು ನಡುವೆಯೇ ತಡೆದು ಹೇಳಿದ.

"ನಿಮ್ಮ ಹೇಳಿಕೆಯಂತೆ ನಾನು ಇಲ್ಲಿಯವರೆಗೆ ತಡೆದೆ."

"ನಾನು ನಿನಗೆ ಯಾವಾಗ್ಗೆ ಹೇಳಿದ್ದೆ?"

ಇಂಗ್ಲೀಷ ಭಾಷೆಯ ಶೈಲಿಯು ಒಲವು ವ್ಯಂಗ್ಯಾರ್ಥದ ಕಡೆಗೆ ಹೆಚ್ಚು. ಪಾಶ್ಚಿಮಾತ್ಯ ಸಂಸ್ಕೃತಿಯ ದರ್ಶಕವೇ ಅದು. ಭಾಷೆಗೇನನ್ನು ವುದು? ನಿಜವಾಗಿಯೂ ಅಜಿತನಿಗೆ ಪ್ರಿನ್ಸಿಪಾಲರು ಹಾಗೆಂದಿಗೂ ಹೇಳಿ ರಲಿಲ್ಲ. ಜಾಧವ ಮಾಸ್ತರರೇ ಹೇಳಿದ್ದರು.

" ನಮ್ಮ ಮಾಸ್ತರರು ಹಾಗೆ ಹೇಳಿದರಲ್ಲ; ಹೀಗೆ ನೀವು ಹೇಳಿರುವಿ ರೆಂದು? "

" ಅವರ ತಿಳುವಳಿಕೆ ಹಾಗಿರಬೇಕು. ನಾನೇನು ಹಾಗೆ ಹೇಳಿಲ್ಲ."

" ಅಂದರೆ ನನ್ನನ್ನು ಕಾಲೇಜಿನಲ್ಲಿ ಕರಕೊಳ್ಳುವದಿಲ್ಲವೇ? "

" ಇಂಥ ಕೆಟ್ಟ ಹುಡುಗರನ್ನು ಕಾಲೇಜಿನಲ್ಲಿ ಇಟ್ಟುಕೊಂಡು ನನ್ನ ಕಾಲೇಜಿನ ಹೆಸರು ಕೆಡಿಸಿಕೊಳ್ಳಲಾರೆ. ತಿಳಿಯಿತೊ? "

ಮುಖದಿರುವಿ ಡ್ರಾಯ್ವ್ಹರನಿಗೆ ಹೇಳಿದ, " ನಡೆಯಿರಿ! "

ಕಾರು ಹಾರ್ನ ಹೊಡೆಯಿತು, ನಡೆಯಿತು.

ಜೇಲ ಸುಪರಿಂಟೆಂಡಂಟನಂತಹ ಹೃದಯಹೀನ ಅಧಿಕಾರಿ ಅಜಿತ ನಿಗೆ ದಯ ತೋರಿಸಿದ್ದ. ಆದರೆ ರಾಷ್ಟ್ರದ ಹೃದಯವನ್ನೇ ನಿರ್ಮಾಣ ಮಾಡುವದಕ್ಕಾಗಿ ಕಾಲೇಜು ನಡೆಯಿಸುತ್ತಿರುವ ಪ್ರಿನ್ಸಿಪಾಲನು ಮಾತ್ರ ಹೃದಯಹೀನತೆಯ ಮೂರ್ತಿಮಂತ ಪ್ರತೀಕನಾಗಿ ನಿಂತಿದ್ದ.

ಆ ಕಾರು ಮುರಿದು ಹಾಕಬೇಕು. ಪ್ರಿನ್ಸಿಪಾಲನನ್ನು ಕೊಂದು ಬಿಡಬೇಕು ಎಂದು ಅಜಿತನಿಗೆ ಅನ್ನಿಸಹತ್ತಿತು. ಚಿಕ್ಕಪುಟ್ಟ ಅವಮಾನ ಅನ್ಯಾಯಗಳೂ ಎಂಥ ದೊಡ್ಡ ಗುನ್ಹೆಗಳಿಗೆ ಕಾರಣವಾಗುತ್ತವೆಂಬುದು ಮಾನಸಶಾಸ್ತ್ರವನ್ನು ಬೋಧಿಸುವ ಆ ಪ್ರಿನ್ಸಿಪಾಲನ ಲಕ್ಷ್ಯಕ್ಕೆ ಬರಲಿಲ್ಲ ವೇನೋ! ಅವನ ನಡೆ ನುಡಿ ಅಧಿಕಾರ ಪ್ರದರ್ಶನದ ಕಠೋರತನಗಳು ಕೋಮಲ ಹೃದಯದ ವಿದ್ಯಾರ್ಥಿಗಳ ತಲೆ ತಿರುಗಿಸುತ್ತಿದ್ದುವು.

ಹೀಗೆ ಜಗತ್ತಿನೊಳಗಿನ ಎಷ್ಟು ಜೀವಿಗಳು ಅನ್ಯಾಯದ ಅಗ್ನಿ ಕುಂಡದಲ್ಲಿ ಉರಿದು ಹೋಗುತ್ತಿಲ್ಲ!

ಆ ಕಾರಿನ ಬೆನ್ನು ಹತ್ತಬೇಕು. ಅದನ್ನೆತ್ತಿ ಬೀಸಾಡಬೇಕು. ಸಮೀಪದ ಬಂಗಲೆಗೆ ಬೆಂಕಿ ಹಚ್ಚಬೇಕು. ಎಂದು ಉಚ್ಛಳಿಸಿತವನ ಕೋಪದ ಕಿಡಿಯು. ಆದರೆ ಅದು ಅಶಕ್ತ ಮನಸ್ಸಿನ ಸಿಟ್ಟಾಗಿತ್ತು!

ಕಾರು ಅದಾವಾಗಲೋ ಹೋಗಿತ್ತು, ಅಜಿತನ ದೃಷ್ಟಿಪಥದಿಂದ !

ಅಜಿತ ಶೂನ್ಯಮನಸ್ಕನಾಗಿ ಕೊಂಚ ಕಾಲ ನಿಂತ. ಇನ್ನು ಎಲ್ಲಿ ಹೋಗಬೇಕವನು ? ಏನು ಮಾಡಬೇಕವನು ?

## ೧೬

ಮುರದೇವಿ ಮುದುಕಿಗೆ ಹದಿನಾರು ವರ್ಷದ ಹರಯ ಬಂದಂತಾಗಿದೆ. ಮೊಮ್ಮಗನ ಮದಿವೆಯ ಸಿದ್ಧತೆಯಲ್ಲಿ ಅವಳದೇ ಮುಂದೆ ಮುಂದೆ ಓಡಾಟ. ಓಣಿಯೊಳಗಿನ ಹೆಂಗಸರನ್ನು ಕರೆಯಿಸುವದು, ಗೋದಿ ಅಕ್ಕಿಗಳನ್ನು ಹಸನು ಮಾಡಲು ಹಚ್ಚುವದು, ಓಲೇಕಾರರನ್ನು ತರಿಸಿ ಮನೆ ಮನೆಗೆ ಗೋದಿಯನ್ನು ಬೀಸಲು ಕುಟ್ಟಲು ಕಳಿಸುವುದು. ಇವೆಲ್ಲ ಕೆಲಸಗಳು ಅವಳವೇ ಆಗಿದ್ದುವು. 'ಬಹು ದಿವಸಗಳಿಂದ ಮನೆಯಲ್ಲಿ ಮದಿವೆ ಮುಂಜಿಗಳಾಗಿಲ್ಲ. ಈ ಮದಿವೆ ಮನೆಯಲ್ಲಿಯೇ ಆಗಿದ್ದರೆ ನೆಟ್ಟಗಿತ್ತು. ಆದರೆ ಆದಗೌಡ ಕೇಳಲಿಲ್ಲ. ಬೀಗರ ಕಡೆಗೇ ಹಾಕಿಬಿಟ್ಟ. ಹಾಕಿದರೆ ಹಾಕಲಿ, ಹೆಣ್ಣಿನ ಮನೆಯೊಳಗೇ ಮದಿವೆ ಆಗುವದು ವಾಸ್ತವ. ಆದರೆ ಊರ ಗೌಡನ ಮದಿವೆ, ಊರ ಜನರಿಗೆ ಊಟ ಉಡಿಗೆ ಬೇಡವೆ? ಬಡಬಗ್ಗರು ಹೋಳಿಗೆ ಹುಗ್ಗಿಯನ್ನು ಹೊಟ್ಟೆತುಂಬ ಯಾವಾಗ್ಗೆ ಕಾಣುವರು ? ಎರಡು ದಿನ ಊರೆಲ್ಲ ತಿನ್ನಲಿ ! ಊರ ಜನರದೆಲ್ಲ ಇವರು ತಿನ್ನುವರು ಗೌಡರಾಗಿ. ಇವರ ಮನೆಯೊಳಗೆ ಒಮ್ಮೆಯಾದರೂ ಅವರು ಕೈ ತೊಳಕೊಳ್ಳಲಿ ಅಲ್ಲ ನನ್ನ ಕಣ್ಣ ಮುಂದ. ಜನರಿಗೆ ಅನ್ನಾ ಹಾಕಿದಷ್ಟೇ ಬಂತು. ಸತ್ತರೆ ಸಂಗಡ ಏನ ಒಯ್ಯೊದದೆ' ಎಂದು ಅವಳ ಮನಸ್ಸು. ಮಗ ಒಂದು ಚೀಲ ಗೋದಿ ಕುಟ್ಟಿಸಲು ಹೇಳಿದರೆ ಮುರದೇವಿ ಎರಡು ಚೀಲಗಳಷ್ಟು ಕುಟ್ಟಿಸಿಡುತ್ತಿದ್ದಳು. ಮೊಮ್ಮಗನ ಮದಿವೆಯಲ್ಲಿ ಯಾವುದಕ್ಕೂ ಕೊರತೆಯಾಗಕೂಡದೆಂಬುದೇ ಅವಳ ಆಂತರ್ಯ. ಅತ್ತೆಯ ಈ ಉತ್ಸಾಹ ಕಂಡು ಸೊಸೆಯರಿಬ್ಬರೂ ಹರುಷಗೊಂಡು ಮದಿವೆಯ ಸಿದ್ಧತೆಗೆ ಹಗಲಿರುಳೂ ದುಡಿಯುತ್ತಿದ್ದರು. 'ನಮ್ಮ ಮನೆಯ ಮದಿವೆಯಲ್ಲಿ ನಾವೇ ಮಾಡದಿದ್ದರೆ ಹೊರಗಿನವರು ಹೇಗೆ ಮಾಡಿಯಾರು ?'

ಎಂದುಕೊಂಡು ಸರಸ್ವತಿಯುಂತೂ ಎಲ್ಲದಕ್ಕೂ ಹಿರಿಹುದ್ದರಿಯೇ ಆಗಿ ನಿಲ್ಲುತ್ತಿದ್ದಳು. ಇದನ್ನು ಕಂಡು ಮುರದೇವಿ ಅನ್ನುವಳು :

"ಈಗಲೇ ಇಷ್ಟು ದುಡಿಯುವೀ, ನಾಳೆ ನಿನ್ನ ಮಗನ ಮದಿವೆ ಅಂದರೆ ರಾತ್ರಿ ನಿದ್ದೀನೇ ಕಾಣಲಿಕ್ಕಿಲ್ಲ ತಾಯಿ ನೀ!"

"ಇದೂ ನನ್ನ ಮಗನದೇ ಮದಿವೆ ಅಲ್ಲs? ಏನು ಎರಡನೆಯವರದ್ದ ಅದ? ಆ ಮಗಾ ಏನ ಹೊಟ್ಟೆಯಿಂದ ಹುಟ್ಟಿದವನಂತ ಹೆಚ್ಚಿನವ ಈತ ಏನ ಕಡಿಮೆಯುವ?"

ಹೀಗೆ ಹೇಳುವಳಾದರೂ ಹೆಣ್ಣುಸ್ವಭಾವಕ್ಕನುಸರಿಸಿ ಅವಳ ಮುಖದ ಮೇಲೊಂದು ಸೂಕ್ಷ್ಮವಾದ ಅಸಂತೋಷದ ಝುಳುಕು ಹಾಯ್ದು ಹೋಗುತ್ತಿದ್ದಿತು. ಅದು ಮುರದೇವಿಯು ಮಂದ ದೃಷ್ಟಿಗೆ ಕಾಣುವಂತೆಯೂ ಇಲ್ಲ ಆದರೂ ಅವಳು ತನ್ನ ಮನೋದೇವತೆಯು ಹೇಳಿದಂತೆಯೇ ನುಡಿಯುವಳು.

"ಅಜಿತನ ಮದವಿಯನ್ನೇ ಮೊದಲು ಮಾಡಬೇಕಿತ್ತು ತಾಯಿ! ಇನ್ನೂ ಅವನ ಕಲಿಯೋದನೇ ನಡದದೆ. ಇರಲಿ, ಕಲಿತರೆ ಏನಾತು? ನಾಲ್ಕಾರ ತಿಂಗಳೊಳಗ ಹೆಣ್ಣ ನೋಡಿ ಮಾಡೇಬಿಡೋಣಂತ. ಯಾರೇನು ಮದಿವಿ ಮಾಡಕೊಂಡ ಮೇಲೆ ಕಲಿಯುವದಿಲ್ಲs?"

"ಕಲಿಯುವರಲ್ಲ! ಅಪ್ಪಾ ಕುಲಕರ್ಣೀ ಮಗಾ ಕಲಿಯುವದಿಲ್ಲs! ಈಗ ಎರಡ ಮಕ್ಕಳ ಆಗಿವೆ. ಇನ್ನೂ ವಕೀಲಿ ಪರೀಕ್ಷೆಗೆ ಕೂಡುವವನಿದ್ದಾನಂತೆ! ಅದಕೇನು?" ಎಂದು ಗಂಗವ್ವ ಒಳಗಿನಿಂದ ಬರುತ್ತ ನುಡಿದಳು.

"ಅದೆಲ್ಲ ಆಯ್ತು, ಅಜಿತ ಊರಿಗಾದರೂ ಬರಬೇಕಲ್ಲ?" ನಿಟ್ಟುಸುರಿನೊಡನೆ ಸರಸ್ವತಿಯು ಬಾಯಿಂದ ಮಾತು ಹೊರಬಿತ್ತು.

"ಬಂದಾನಲ್ಲ, ತಮ್ಮನ ಮದಿವೆಗೆ ಬರದೆ ಇರ್ತಾನು?" ಮುರದೇವಿ ಕೇಳಿದಳು.

"ಅವನೇ ನಮ್ಮ ರಾವಸಾಹೇಬನ ಮದಿವೆಗೆ ಬರದಿದ್ದರೆ ನಾವೆಲ್ಲಿ ಅವನ ಮದಿವೆ ಪಂಚಾಯತಿ ಮಾಡೋದ ಕೆಟ್ಟsದ?" ಗಂಗವ್ವನ ಬಿಂಕದ ಮಾತಿದು.

"ಅದೇಕೆ ಬಾರದೆ ನಿಂತಾನು? ಅಜಿತನೂ ಅವ:ೂ ಕೂಡಿಯೇ

ಬರುವೆವೆಂದಿದ್ದಾರೆ. ಮುಹೂರ್ತ ತಿಳಿಸಿ ಇನ್ನೊಂದ ಕಾಗದ ಬರಸ ಬೇಕ ಜಾಧವ ಮಾಸ್ತರರಿಂದ ಬೇಕಾದರೆ."

ಅಲ್ಲೇ ಗೋದೀ ಹಸನು ಮಾಡುತ್ತಿರುವ ಹೆಂಗಸರ ಮೇಲ್ವಿಚಾರಣೆ ಯಲ್ಲಿದ್ದ ಇಂದಿರೆ ತಟ್ಟನೆ ನುಡಿದಳು. ಆಗ ಮುಖದಲ್ಲಿ ಸಂತೋಷದ ಕಳೆ ತಂದು ನಿಜಸ್ಥಿತಿಯನ್ನು ಮರೆಯಿಸಲು ಶಕ್ಯವಿದ್ದಷ್ಟು ಯತ್ನಿಸಿದ ಳಾದರೂ ಅವಳ ಮುಖ ಇನ್ನಿಷ್ಟು ನಿಸ್ತೇಜವೇ ಆಯಿತು.

"ನಾವು ಕರೆಯಲು ಕಳಿಸದೇ ಸುಧೀರ ಅಳಿಯತನಕ್ಕ ಬರುವ ನೇನು?" ಗಂಗವ್ವ ನಗೆಯಲ್ಲಿ ಬರೆಯೆಳೆದಳು. ಇಂದಿರೆಯ ಹೃದಯದ ಹುಣ್ಣಿನ ಮೇಲೆ ಕಾರವೆರಚಿದಂತಾಯಿತು.

ಇಂದಿರೆ ಯಾವದೋ ಯೋಚನೆಯಲ್ಲಿದ್ದಳು. ಅವಳ ಲಕ್ಷ್ಯ ಆ ಮಾತಿನ ಕಡೆಗೆ ಅಷ್ಟು ಇರಲಿಲ್ಲ. ಗೋದೀ ಹಸನು ಮಾಡುತ್ತ ಕುಳಿತ ಸರಸ್ವತಿಯು ಮಾತ್ರ ಮನದಲ್ಲಿ "ನಮಗೆ ಖರ್ಚು ಮಾಡುವುದು ಬಂದರೆ ಎಲ್ಲರೂ ಹೀಗೇ ಅನ್ನುವವರು. ತಮ್ಮ ಮಗನ ಮದಿವೆಗೆ ಖರ್ಚು ಮಾಡಲಿಕ್ಕೆ ಹತ್ತಿಲ್ಲ? ಸಾವಿರ ಏನ ಎರಡ ಸಾವಿರ ಏನ.. ಅದಕ್ಕ ಲೆಕ್ಕವೇ ಇಲ್ಲ; ನಮ್ಮ ಮಕ್ಕಳಿಗೇ ಲೆಕ್ಕಕ್ಕೆ ಹತ್ತದೆ!" ಎಂದು ಕೊಂಡಳು. ಒಳಕುದಿಯ ರಭಸದಿಂದ ಕೈಯೊಳಗಿನ ಮೊರವೂ ಸ್ವಲ್ಪ ಜೋರಿನಿಂದಲೇ ಸಪ್ಪಳ ಮಾಡುತ್ತಿದ್ದಿತು.

"ಹೆಣ್ಣು ಮಕ್ಕಳು ತಿರುಗಿ ಮನೆಗೆ ಹಡೆಯಲಿಕ್ಕೆ ಬಂದರೂ ಇನ್ನೂ ನೀವು ಅಳಿಯಂದಿರನ್ನು ಕರೆಯಿಸದಿದ್ದರ ಅವರೇನು ಮಾಡಬೇಕು? ತಾವೇ ಬರದ ಎಷ್ಟು ದಿನಾ ಅಂತ ನಿಲ್ಲಬೇಕು?" ಹೊರಗಿನ ಹೆಂಗಸೊ ಬ್ಬಳು ಸರಸ್ವತಿಯ ಕಡೆಗೆ ನೋಡಿ ಅರ್ಥಪೂರ್ಣವಾದ ನಗೆಯೊಂದನ್ನು ಬೀರಿ ನುಡಿದಳು.

"ಯುಗಾದಿ ಆಗಿ ನಾಳಿನ ಅಮಾವಾಸ್ಯೆಗೆ ಏಳ ತಿಂಗಳ ಆಯ್ತಲ್ಲ?" ವಿಚಾರಮುದ್ರೆಯಿಂದ ಇಂದಿರೆ ನಡುವೆಯೇ ಕೇಳಿದಳು.

"ಅದೇಕೆ? ಆಗ ನಿಂತಿದೆಯೇನು?" ಇನ್ನೊಬ್ಬಳು ಕೇಳಿದಳು.

"ಇಲ್ಲ ತಾಯಿ! ಈಗ ದಿನದೊಳಗ." ಶೂನ್ಯದೃಷ್ಟಿಯಿಂದ ಮುಂಗೈ ಬಳೆಯನ್ನು ಹಿಂದೆ ಸರಿಸುತ್ತ ಇಂದಿರೆ ನುಡಿದಳು.

"ಯುಗಾದಿ ಲೆಕ್ಕ ಯಾತಕ್ಕ ಬೇಕಾಗಿತ್ತು?" ಮುರದೇವಿ ಕೇಳಿದಳು.

ಇಂದಿರೆ ಏನೂ ಹೇಳಲಿಲ್ಲ. ಸುಮ್ಮನೆ ಒಂದು ನಿಟ್ಟುಸುರು ಬಿಟ್ಟಳು ಮಾತ್ರ. ಅದು ಬಹಳ ಜೋರಾಗಿ ಹೊರಗೆ ಬಂದಿತು; ಬಹಳ ಹೊತ್ತು ತಡೆಹಿಡಿದುದರಿಂದಲೋ ಏನೋ.

"ಇಂದಿರಾ ಸಣ್ಣಾಕಿರುವಾಗ ಎಂಥಾ ಚಲೋ ಇದ್ದಳು. ಈಗ ಬಂದಾಗಿಂದ ನೋಡತೇವು ಮಾತಿಗೊಮ್ಮೆ ಉಸುರಗರಿಯುವಳು."

"ಬಸಿರು ಹೆಂಗಸು ಹಾಗೇ ಅಲ್ಲ!"

"ನಾವು ಎತ್ತ ಬಸಿರು ಆದೇವೋ ಎತ್ತ ಹಡೆದೇವೋ! ಇವರು ಹಗಲಿ ರಾತ್ರಿ 'ಉಸ್! ಉಸ್!' ಅಂತೇ ಇರತಾರು. ಒಂದಿನವಾದರೂ ನಗತ ಕೆಲಿತ ಇರಬಾರದೂ? ಬುತ್ತಿರೊಟ್ಟಿ ಮಾಡುವ ದಿನಾರೇ ಊರ ಜನರೆಲ್ಲ ಕುಬಸ ತಂದರು. ಹೆಣ್ಣ ಮಗಳು ಈಗ ಕಣ್ಣೊಳಗಿನ ನೀರ ಬರುವವು ಇನ್ನೊಂದ ಕ್ಷಣಕ್ಕೆ ಬರುವವು ಅನ್ನುವಂತೆ ಮೋರೆ ಸಪ್ಪಗೆ ಮಾಡಿ ಕುಳಿತುಬಿಟ್ಟಳು. ಇಂಥಾದೆಂಥಾ ಬಸಿರಿದು?" ಗಂಗವ್ವ ಬೆರಗು ನಿಂದೆಗಳಿಂದ ಬೆರೆತ ಸ್ವರದಲ್ಲಿ ಅಂದಳು.

ಸರಸ್ವತಿಗೂ ಮಗಳ ಇಂತಹ ಸ್ಥಿತಿಯು ಒಡೆಯದ ಒಗಟೇ ಆಗಿದ್ದಿತು. ಯಾರೂ ಇಲ್ಲದಾಗ ಒಮ್ಮೊಮ್ಮೆ ಇಂದಿರೆಯು ಅಳುತ್ತ ಕೋಣೆಯಲ್ಲಿ ಕುಳಿತದ್ದನ್ನು ಅವಳು ಹಲವು ಸಲ ಕಂಡಿದ್ದಳು. ಅವ್ವ ಎಷ್ಟು ಆಗ್ರಹ ಪಟ್ಟು ಕೇಳಿದ್ದರೂ ಕಾರಣ ಹೇಳುತ್ತಿರಲಿಲ್ಲ. ಬಹಳ ಕೇಳಲು, 'ಅಪ್ಪನ ನೆನಪು ಆಗಿತ್ತು' ಎಂದು ಏನೋ ಒಂದು ಮಾತು ಹೇಳಿ ಮುಗಿಸುತ್ತಿದ್ದಳು. ಅದಕ್ಕೆ ಸರಸ್ವತಿಯು ಹೃದಯವೂ ಶೋಕದಿಂದ ತುಂಬಿ ಬರುತ್ತಿದ್ದಿತಾದರೂ ತಡೆಹಿಡಿದು, "ಅದನ್ನು ನಾವು ದೇವರ ಹತ್ತರ ಬೇಡಿ ಬಂದಿಲ್ಲ! ಬಸಿರು-ಹೆಂಗಸಾಗಿ, ಹೀಗೆ ಅವರ್‌ನೆನಪು ಮಾಡಿ ಅತ್ತರ ಏನಾಗೋದು? ಮೈಯೊಳಗಿನ ಶಕ್ತಿ ಅಷ್ಟ ಚಿಂತಿಯಿಂದ ಹೋಯ್ತೆಂದರೆ ನಾಳೆ ಹಡೆಯುವಾಗ ಕಷ್ಟ ಆಗೋದು" ಎಂದು ಹೇಳುವಳು. ನಿಜವಾಗಿಯೂ ಇಂದಿರೆಯು ದಿನದಿನಕ್ಕೆ ಕ್ಷೀಣವಾಗುತ್ತ ನಡೆದಿದ್ದಳು. ಮನೆಯೆಲ್ಲ ಮದುವೆಯ ಉಲ್ಲಾಸದಿಂದ ಉಕ್ಕುತ್ತಿದ್ದರೆ ಅದರ

ತಳದಲ್ಲಿ ಈಕೆ ಮನದೊಳಗೆ ಸುಧೀರನ ಬಿಡುಗಡೆಯ ದಿನಗಳನ್ನು ಎಣಿಸಿ-ಎಣಿಸಿ ಕುದಿಯುತ್ತಿದ್ದಳು.

ಸರಸ್ವತಿಗೆ ಗೊತ್ತು, ತನ್ನ ಮಗಳ ವಿಷಯಕ್ಕೆ ಮಾತು ಬಂತೆಂದರೆ ಗಂಗವ್ವ ಆದಷ್ಟು ಉದ್ದ ಮಾಡದೆ ಬಿಡುವದಿಲ್ಲವೆಂದು. ಅದಕ್ಕಂತೇ ಮಾತು ತಿರುಗಿಸಿ—

" ದಿನದೊಳಗ ಬಿತ್ತು ಈಕೆಗೆ; ಮದುವೆಯಂತೂ ಕಾಲೊಳಗೇ ಬಂತು. ಈಕೆಯನ್ನು ಮನೆಯೊಳಗ ಬಿಟ್ಟು ನಾವೆಲ್ಲರು ಹೇಗೆ ಹೋಗುವುದು ? " ಎಂದಳು.

" ಮನೆಯೊಳಗ ಯಾರಾದರೂ ಇರಲಿಕ್ಕೆ ಬೇಕಲ್ಲ. ತುಂಬಿದ ಹೆಂಗಸನ್ನು ಹೇಗೆ ತಕ್ಕೊಂಡು ಹೋಗಲಿಕ್ಕೆ ಬರ್ತದೆ ? " ಮುರದೇವಿ ಅಂದಳು.

" ತಮ್ಮನ ಮದಿವೆಯೊಳಗ ಆರತಿ ಬೆಳಗುವವಳು, ನಾಲ್ಕು ದಿನ ತಿಂದ ತಿರಗಾಡುವವಳು ಇಂದಿರಾ. ಇವಳನ್ನೇ ಮನೆಯೊಳಗ ಇಟ್ಟ ಹೋಗುವದು ಆಯ್ತಿಲ್ಲ !" ನೆರೆಮನೆಯ ಹೆಂಗಸಿನ ಮಾತಿದು.

" ಅದಕ್ಕೇನು ಮಾಡೂವ್ರದದೆ ? ಇದೇನು ನಮ್ಮ ನಿಮ್ಮ ಕೈಯೊಳಗಿನದು ? ಈಗಿನ ಆಕಾರ ನೋಡಿದರೆ ಮದಿವೆ ಮುಂದಿರುವಾಗಲೇ ಹಡೆದಾಳು. ಆದರೆ ಇದೇ ಬಹಳ ದಿನಕ್ಕ ಚೊಚ್ಚಿಲ ಬಸಿರು ಆಗಿದಾಳ ತಾಯೀ, ಎಳೇ ಕೂಸಿನ ತಕ್ಕೊಂಡು ಹಸಿ ಮೈಯೊಳಗ ಒಯ್ದು ಏನಾದರೂ ಆದರೆ ಜನ್ಮತನಕ ಮಾತ ಬಂದಾವವ್ವ ನಮ್ಮ ತಲೆಗೆ. " ಗಂಗವ್ವ ಮಾತು ಬೆಳೆಯಿಸಿದಳು.

" ಈಕೆ ಇಲ್ಲ, ಈಕೆಯ ಗಂಡ ಓಡ್ಯಾಡತಾನ ಆಯ್ತು, ಈಕೆಯ ಪಾಲ್ದು. " ನೆರಮನೆಯ ಹೆಂಗಸಿನ ನಗೆಮಾತಿದು.

" ನೀವು ಕರೆಯದಿದ್ದರೆ ಅವರು ಯಾತಕ್ಕ ಬಂದಾರು ? "

" ಕರೆಯೋದಿಲ್ಲೇಕೆ ? ಇಂಥಾ ಮದಿವೆಯೊಳಗ ಅಳಿಯನನ್ನು ಕರೆಸದೆ ಇನ್ನೆಂದ ಕರೆಸುವದು ? ಬಿಟ್ಟ ಮಾಡಿದರ ಜನರು ಏನಂದಾರು ? ಮಾಸ್ತರರ ಕೈಯಿಂದ ಕಾಗದ ಬರೆಯಿಸೋಣು. ಪತ್ರದ ಮೇಲೆ ಬರುವದಿಲ್ಲಂದರೆ ಅವರೇ ಹೋಗಿ ಕರಕೊಂಡು ಬಂದಾರ ? ಅದಕೇಕೆ ? ಆನೆ

ಯೆಲ್ಲ ಹೋಗಿದೆಯಂತೆ ಬಾಲಕ್ಕೆ ಬಡಿದಾಟ ಏಕೆ? ರಾವಸಾಹೇಬನ ಅರಿವೆಯ ಜೊತೆಗೇನೇ ನಿನ್ನ ಗಂಡನಿಗೂ ಒಂದು ದೋತರ ರುಮಾಲು ತರಿಸಿ ಬಿಡತೇನು, ಆದಗಾಡನಿಗೆ ಹೇಳಿ; ಆಯ್ತಲ್ಲೋ?" ಅಜ್ಜಿಯ ಸಮಾಧಾನದ ವಚನವಿದು.

"ಅವರು ರುಮಾಲ ಸುತ್ತೂದೆ ಇಲ್ಲ ಮೊದಲ!" ಲಜ್ಜೆಯ ನಸುನಗೆಯೊಡನೆ ಇಂದಿರೆಯ ಮುಖದಿಂದ ಮಾತುದುರಿತು.

"ಇಲ್ಲಾದರೆ ಮುಚ್ಚವಲ ಕೊಟ್ಟು ಟೊಪ್ಪಿಗೆ ತಾ ಅಂತಿಯೇನು ನೀ?" ನಗೆಯಾಡಿದಳು ಮುದುಕಿ. "ರುಮಾಲ ಸುತ್ತಿದರ ಚಂದವ್ವ! ನಮ್ಮ ರಾವಸಾಹೇಬನೂ ಹಾಗೇ. ಎಂಥಾದೋ ಒಂದು ಟೊಪ್ಪಿಗೆ ಹಾಕೊಂಡು ಹೊರಗೆ ನಡೆದ ಅಂದರ ಆಯ್ತೋ, ಮೈಮೇಲೇನ ದೋತರ ಎಲ್ಲಾ ಏನ ಇಲ್ಲ!"

"ಈಗಿನವರು ಎಲ್ಲಿ ಸುತ್ತುವರು? ಎಂಥ ಬೆಲೆಯುಳ್ಳ ರುಮಾಲು ದೋತರ ತಂದರೂ ಅವು ಪೆಟ್ಟಿಗೆಯೊಳಗೇ ಬೀಳುವವು. ಅದಕ್ಕಿಂತ ಎರಡು ಮೂರು ತೊಲೆ ಬಂಗಾರ ಹಾಕಿದರೆ ಹೆಸರಾದೀತು." ನೆರೆಮನೆಯ ಹುಡಿಗೆಯೊಬ್ಬಳು ಸೂಚಿಸಿದಳು, ಇಂದಿರೆ ಹೇಳಲು ಹಿಂಜರಿಯುತ್ತಿದ್ದುದನ್ನೇ.

"ನಿನ್ನ ಗಂಡನಿಗೂ ಹೀಗೇ ಬೇಡುವವಳಲ್ಲ!" ಮತ್ತೊಬ್ಬ ಹೆಂಗಸು ಹಾಸ್ಯಮಾಡಿದಳು.

"ಬೇಡವರಲ್ಲ. ಅವರೇಕೆ ಬಿಟ್ಟಾರು? ಮನೆಗೆ ಮಗನಾಗಿ ಹುಟ್ಟಿದ್ದರೆ ಹೊಲಮನೆಯೊಳಗ ಪಾಲ ಇರತಿರಲಿಲ್ಲ ಅವರಿಗೆ?" ಹೀಗೆ ಸರಸ್ವತಿ ಹೆಣ್ಮಕ್ಕಳ ಹಕ್ಕು ಹೇಳಹೋದಳು ಸಮಯ ಸಾಧಿಸಿ.

ಅದಾವಾಗಲೋ ಕೋಣೆಯೊಳಗಿಂದ ಹೊರಗೆ ಬಂದು ಕಂಬಕ್ಕೆ ಒರಗಿ ನಿಂತಿದ್ದ ರಾವಸಾಹೇಬ. ಕೈಬೆರಳಿನಲ್ಲಿ ಬೀಗದ ಕೈಸರ ತಿರುಗುತಲಿದ್ದಿತು. ಹೆಂಗಸರ ಹರಟೆ ಹಾಸ್ಯಗಳನ್ನು ಕೇಳುತ್ತ ಯಾವದೋ ಒಂದು ವಿಚಾರದಲ್ಲಿ ಮಗ್ನನಾಗಿದ್ದ. ಅವನೆದುರಿನಲ್ಲಿಯೇ ಪಡಸಾಲೆಯ ತುಂಬ ಹತ್ತಿಪ್ಪತ್ತು ಜನ ಹೆಂಗಳೆಯರು ಕುಳಿತು ಧಾನ್ಯ ಹಸನು ಮಾಡುತ್ತಿದ್ದರು ಇವರೆಲ್ಲ ತನ್ನ ಮದುವೆಗಾಗಿಯೇ ದುಡಿಯುತ್ತಿದ್ದಾರಲ್ಲ

ಎಂದು ಹೆಮ್ಮೆಯು ಕೋಡೊಂದು ಮೂಡುವುದು, ಮನಸ್ಸಿನ ತಲೆಗೆ. ಹಾಗೆಯೇ ಅವನ ಕಣ್ಣುಗಳು ಯಾರು ಯಾರು ಇರುವರೆಂಬುದನ್ನು ನಿರುಕಿಸುತ್ತ ಎಲ್ಲರ ಮುಖದೆಡೆಗೂ ಸುಳಿಯುವವು. ಅವು ಮುಂದುವರಿದಂತೆ ಕೈಯೊಂದು ಚಾಚಿದ ತಲೆಗೂದಲು ಸರಿಯಾಗಿವೆಯೋ ಇಲ್ಲೋ ಎಂಬುದನ್ನು ನೋಡಲು ತಲೆಯ ಮೇಲಾಡುವುದು, ಅವನ ದೃಷ್ಟಿಯು ಎಲ್ಲಿಯೋ ನೆಲೆನಿಂತು.

"ಚಂದ್ರಿ ಯಾವಾಗ ಬಂದಾಳಲ್ಲ?" ಎಂದು ಕೇಳಿದ ರಾವ ಸಾಹೇಬ, ಕುಲುಕುಲು ನಗೆಯೊಂದನ್ನು ಬೀರುತ್ತ.

ಹೆಂಗಸರೆಲ್ಲ ಹೊರಳಿ ನೋಡಿದರು. ಹಲವರು ಲಜ್ಜೆಯಿಂದ ನಾಲಿಗೆ ಕಚ್ಚಿದರು. ಅಲ್ಲಿ ಪುರುಷರಾರೂ ಇಲ್ಲೆಂದು ಗಳಹುತ್ತಿದ್ದ ಅವರಿಗೆ ಸ್ವಲ್ಪ ಸಂಕೋಚವೆನಿಸಿತೇನೊ! ತಲೆತಗ್ಗಿಸಿ ಕೆಲಸದಲ್ಲಿ ಮಗ್ನರಾದರು. ಒಳಗೊಳಗೇ "ಇಲ್ಲೇ ನಿಂತಾನಲ್ಲ ತಾಯಿ!" ಎಂದುಕೊಂಡವರೆಷ್ಟೋ.

"ಅಣ್ಣಾವರ ಮದಿವೆ ಅಂದ ಮೇಲೆ ಬರಲಿಕ್ಕ ಬೇಡ ನಾವೇ!" ರಾವಸಾಹೇಬನ ದೃಷ್ಟಿಗೆ ದೃಷ್ಟಿಯನ್ನು ಕೂಡಿಸಿ, "ದೊಡ್ಡವರಿಗೆ ನಮ್ಮಂಥವರ ನೆನಪು ಏನು ಈಗ? ನಿಮಗೇನು ಉಳಿದವರ ಅಗತ್ಯ ಇನ್ನ?" ತವರು ಮನೆಗೆ ಬಂದ ಚಂದ್ರಾ ನುಡಿದಳು ಸರಸವಾಗಿ.

ಅವಳ ಮಾತಿನ ಇಂಗಿತ, ದೃಷ್ಟಿಯೊಳಗಿನ ಕಾತರ, ಮುಖದೊಳಗಿನ ವ್ಯಂಗ್ಯಗಳ ಗುಟ್ಟು ರಾವಸಾಹೇಬನಿಗೇ ಗೊತ್ತು. ಅಂತೇ ಅವನು ಅವಳಿಗಿಂತ ವ್ಯಂಗ್ಯವಾಗಿ ಕೆಣಕು-ಸ್ವರದಲ್ಲಿ ಉತ್ತರ ಕೊಟ್ಟನು.

"ನಮ್ಮ ಮದಿವೆ ನೋಡಿ ಹೊಟ್ಟೆಯುರಿಯುವವರು ನಮ್ಮ ಮದುವೆಗೆ ಬರುವುದೇ ಬೇಡ." ಮಾತಿನಲ್ಲಿ ಕೊಂಕುತನವಿತ್ತು.

ಒಂದೊಂದು ಸಂದರ್ಭದಲ್ಲಿ ಆಡಿದ ಮಾತಿನಲ್ಲಿ ಮಾತಾಡುವವರ ಉದ್ದೇಶವೇನಿದ್ದರೂ ಕೂಡ ಕೇಳುವ ಹಲವರಿಗೆ ಅರ್ಥಗಳು ಬೇರೆ ಬೇರೆಯಾಗಿಯೇ ಸ್ಫುರಿಸುವ ಸಂಭವವುಂಟು. ತಮ್ಮನ ಮಾತು ಕೇಳಿ ಇಂದಿರೆಯ ಮುಖ ಬಾಗಿದ ಹೀರೇಕಾಯಿಯಂತಾಯಿತು. ಅವಳ ಮನವು, 'ನಾನೊಂದನ್ನು ನೆನೆದು ನಿರುತ್ಸಾಹಿಯಾಗಿದ್ದರೆ ಇವನೊಂದು ಭಾವಿಸಿದನಲ್ಲ!' ಎಂದುಕೊಂಡು ಕಲಕಿತು! ತಮ್ಮನ ಶೀಲ ಸಭ್ಯತೆಗಳು

ಜ್ಞಾನವಿಲ್ಲದೆ.

"ನನ್ನ ಮದಿವೆಯಾದರೆ ಎರಡ ದಿನ ಹೋಳಿಗೆ ತಿನ್ನಲಿಕ್ಕೆ ಸಿಗ್ತಾವ ಆಕೆಗೆ. ಹೊಟ್ಟಿ ಏಕೆ ಉರದೊತೋ? ಇಲ್ಲದ್ದ ಒಂದ ಅನ್ನುವಿ ನೀ-ಕಾಗದ ತಗೋ, ಆ ಸತ್ತ್ಯಾ ಯಾರ ಯಾರಿಗ ಗೋದಿ ಬೀಸಲಿಕ್ಕೆ ಕೊಟ್ಟು ಬಂದಾನ ಹೇಳ್ತೇನಿ, ಬರಕೋ; ಅಷ್ಟರs ಕೆಲಸಾ ಮಾಡು." ಮುರದೇವಿ ಮುದುಕೆಯೂ ಮೊಮ್ಮಗನ ಮಾತಿನ ಮಲಕನ್ನರಿಯದೆ ನುಡಿದಳು.

"ಮದುಮಗ ಆಗವರು! ಅವರೇಕೆ ಕೆಲಸ ಮಾಡಿಯಾರು?" ಚಂದ್ರಾ ಹುಬ್ಬು ಹಾರಿಸಿ ಚುಚ್ಚಿ ನುಡಿದಳು.

"ಮದುಮಗ ಆಗುವಾಗ ಆಗ್ತಾನಲ್ಲ, ಈಗೇನ?"

ತಲೆಬಾಗಿಲಲ್ಲಿ ತಂದೆ ಬರುತ್ತಿರುವುದನ್ನು ಕಂಡು ರಾವಸಾಹೇಬನು ಹೊರಳಿ ಒಳಗೆ ಬಚ್ಚಲುಮನೆಗೆ ಮುಖ ತೊಳೆದುಕೊಳ್ಳಲು ಹೋದ-ಗಂಗವ್ವ ಗಡಿಯಾರದ ಕಡೆಗೆ ನೋಡಿ,

"ನಾಲ್ಕರ ಗಾಡಿಗೇ ಬಂದರೇನೋ ಅವರು. ಹರಿವತ್ತು ಊಟ ಇಲ್ಲದೆ ಹೊರಟಿರಬೇಕು" ಎಂದು ಎದ್ದು ಒಳಗೆ ಕೈಕಾಲಿಗೆ ನೀರಿಡಲು ಹೋದಳು. ಹೆಂಗಸರೆಲ್ಲ ಸೆರಗು ಸಾವರಿಸಿಕೊಂಡು, ಮೈ ಬಿಗು ಹಿಡಿದು ಮುಂದಿನ ಕೆಲಸ ಸಾಗಿಸಿದರು. ಪಡಸಾಲೆಯೆಲ್ಲ ಮೌನವಾಗಿದ್ದಿತು. ಕೇವಲ ಕಾಳು ಕೇರುವ ಸರಸರ ಸಪ್ಪಳವಷ್ಟೇ ಕೇಳಬರುತ್ತಿದ್ದಿತು. ಅದಕ್ಕೆ ವನಿತೆಯರ ಕರಗಳ ಕಂಕಣರವ ತಾಳ ಕೊಡುತ್ತಿತ್ತು.

ಗೌಡರು ಒಳಗೆ ಬಂದರು. ಜೋಡಿನ ಧೂಳು ಹೋಗಲೆಂದು ಮೆಟ್ಟುಗಲ್ಲಿನ ಮೇಲೆ ಕಾಲು ಅಪ್ಪಳಿಸುತ್ತ ಆ ಪಡಸಾಲೆಗೆ ಹೋದರು. ಪಡಸಾಲೆಯಲ್ಲಿ ಕೆಲಸ ಮಾಡುತ್ತಿದ್ದ ಹೆಂಗಸರ ಕಡೆಗೊಮ್ಮೆ ದೃಷ್ಟಿಯನ್ನು ಹರಿಯಿಸಿ ಕೈಯೊಳಗಿನ ಬೆತ್ತ ಮೂಲೆಯಲ್ಲಿಟ್ಟರು. ತಲೆಯರುಮಾಲು ತೆಗೆದು ತಮ್ಮದೆ ಠೀವಿಯಿಂದ ಗೂಟಕ್ಕೆ ಹಾಕಿದರು. ಒಂದೆರಡು ಸಲ ತಲೆಯ ಮೇಲೆ ಕೈಯಾಡಿಸುತ್ತ ಪಡಸಾಲೆಯ ಅಂಚಿಗೆ ಬಂದರು. ಗಂಗವ್ವ ಬಿಸಿನೀರಿನ ತಂಬಿಗೆ ತಂದು ಕಟ್ಟೆಗೆ ಇಟ್ಟು ಹೋದಳು. ಹೊರಗಿನಿಂದ ಟಾಂಗಾ ಹೊಡೆಯುವ ಮನುಷ್ಯ ಗಂಟೊಂದನ್ನು ತಂದಿಟ್ಟು ಹೋದ. "ಮತ್ತೊಂದು ಗಂಟೆನೊಳಗ ಕೇದಗೆಯ ತೆನೆಯೊಂದಿದೆ

ಸ್ವರದಲ್ಲಿ ಗೌಡರೆಂದರು.

ಗೌಡರ ಮಾತು ಕೇಳಿ ಅಲ್ಲೇ ಬದಿಗೆ ನಿಂತ ಮನೆಯ ಹೆಂಗಸರ ಮುಖವರಳಿದುವು, ಮದುವೆಯ ನಿಮಿತ್ತ ತಮಗೆಲ್ಲರಿಗೂ ಜರದ ಸೀರೆ ಸಿಕ್ಕವೆಂದು. ಸರಸ್ವತಿಯು ಹಸರು ಸೀರೆಯ ಕಡೆಗೊಮ್ಮೆ ನೋಡಿ, 'ನನ್ನ ಮಗಳಿಗೇ ತಂದಿರಬೇಕೆನಿದು ಬಸಿರು ಇರುವಳೆಂದು?' ಎಂದು ಮನದಲ್ಲಿಯೇ ಒಂದು ಕ್ಷಣ ಅಂದುಕೊಂಡಳು. ಮತ್ತೆ 'ಇಂಥ ಬೆಲೆಯುಳ್ಳುದನ್ನು ಅವಳಿಗೇಕೆ ತಂದಾರು?' ಎಂದೂ ಮಾರ್ನುಡಿ ಹೊರಟಿತು ಅವಳ ಹೃದಯದಾಳದಲ್ಲಿ.

"ಹಾಗಾದರೆ ಈ ಹಸರು ಸೀರೆ ಯಾರಿಗೆ?" ಸರಸ್ವತಿ ಕೇಳ ಬಯಸಿದ ಪ್ರಶ್ನೆಯನ್ನೇ ಅಮ್ಮವ್ವ ಮುದಿಕೆ ಕೇಳಿದಳು.

"ಇಂದಿರೆಗೆ." ಸ್ವಲ್ಪ ತಡೆದು, "ಉಡಿಯ ತುಂಬುವಾಗ ಆಕೆಯ ಗಂಡ ಇಲ್ಲ ಆದ..ನಮ್ಮ ಹುಡಿಗೆ ಹಣೆಬರೆಹ ಹರಕು." ಒಮ್ಮೆಲೇ ಮಾತಿನ ಓಘವನ್ನು ತಡೆದು, "ದೂರ ಊರು ಬರಲಿಕ್ಕೆ ಆಗಲಿಲ್ಲ ಅವನಿಗೆ ಅಂದ ಮೇಲೆ ಹಸಿರು ಸೀರೆ ಯಾರು ಉಡಿಸುವರು? ನಾವೇ ತಂದೆವಾಯ್ತು?" ಗೌಡರು ಸ್ವಲ್ಪ ಆಢ್ಯತೆಯಿಂದ ಮೊದಲು ಹೇಳಹೋದರಾದರೂ ಮಾತು ತಬ್ಬಿಬ್ಬಾಗಿ ಅವರ ಬಾಯಿಂದ ಹೊರಬಿತ್ತು ಕೊನೆಗೆ.

ಮುಂದೆಯೇ ಕುಳಿತ ಇಂದಿರೆಯ ಮುಖ ಝುರ್ರೆಂದು ಇಳಿಯಿತು. ಯಾವದೋ ಒಂದು ರಹಸ್ಯ—ಕಕ್ಕನಿಗೆ ಗೊತ್ತಾಗಬಾರದದು—ಗೊತ್ತಾಗಿದೆಯೇ? ಎಂಬ ಶಂಕೆ ಒಳವತ್ತರವಾಗಿ ಅವಳ ಮುಖದ ಬಣ್ಣ ಇಳಿಯಿತು. ಮೈಯಲ್ಲಿ ನಡುಕ ಹುಟ್ಟಿತು. ಹುಚ್ಚು ಕಳೆಯಿಂದ ಎಲ್ಲರ ಕಡೆಗೂ ನೋಡತೊಡಗಿದಳು.

ಎಲ್ಲ ಸೀರೆಗಳನ್ನೂ ತೋರಿಸಿಯಾಯಿತಾದರೂ ಮದುಮಗಳ ಅರಿವೆಗಳೇ ಕೊನೆಗೂ ಹೊರಡಲಿಲ್ಲ. ಅದರಿಂದ ನೋಡಲು ಬಂದ ಹೆಂಗಸರಿಗೆಲ್ಲ ಅಸಮಾಧಾನವಾಯಿತು. ಮುರದೇವಿ ಮೃದುವಾಗಿ ಕೇಳಿದಳು. "ಇದೆಲ್ಲ ಆಯಿತು; ಮದುಮಗಳಿಗೆ ಏನ ಅರಿವೆ ತಂದಿರಿ? ಆ ಗಂಟಿನೊಳಗ ಇದಾವೇನು?"

ಜರದ ಸೀರೆ ಉಡಬೇಡವೇ? ಗಳಿಸುವಾಗ ಪೈಗೆ ಪೈ ಲೆಕ್ಕ ಹಾಕಿ ಗಳಿಸ ಬೇಕು. ವೆಚ್ಚಮಾಡುವಾಗ ಸಾವಿರಕ್ಕೆ ಸಾವಿರ ಸದ್ದಿಲ್ಲದೆ ಪ್ರಸಂಗ ಬಂದಾಗ ಬಿಡಲೇಬೇಕು. ಅಂದರೇನೇ ನಾಲ್ಕು ಜನರಲ್ಲಿ ಭೂಷಣ, ಎಂದು ನಿರ್ಧರಿಸಿದ್ದರು. ಅಂತೇ ಯಾವುದಕ್ಕೂ ಇಷ್ಟು ಕೈ ಸಡಿಲು ಬಿಡದವರು ಈಗ ರೂಪಾಯಿ ಉಡಿಯನ್ನೇ ಕಟ್ಟಿಕೊಂಡು ನಿಂತಿದ್ದರು, ಮಗ ಮಾಮಲೇದಾರರ ಬೀಗನಾಗುವನೆಂದು. ಆ ಉಬ್ಬಿನಲ್ಲಿಯೆ ಅರಿವೆಯ ಗಂಟು ಬಿಚ್ಚುತ್ತ ಗೌಡರು—

"ಸೀರೆಗಳನ್ನು ನೋಡಬರ್ರಿ! ನಿಮ್ಮ ಮನಸಿಗೆ ಬರ್‍ತಾವೇನು?" ಹೆಂಗಸರಿಗೆ ಕರೆದರು. "ನಿನ್ನ ಊಟಾ ತಿನಸಾ ತೀರಲಿ, ಆ ಮೇಲೆ ಸಿಸ್ತಿನಿಂದ ನೋಡತೇವಂತ. ಇನ್ನೂ ಒಂದು ನಾಲ್ಕು ಮೊರ ಗೋದಿಯೂ ಮುಂದ ಅವೆ. ಅವನ್ನಷ್ಟ ಹಸನು ಮಾಡಿ ಬರ್‍ತೇವು." ಮುರದೇವಿ ಹೇಳಿದಳು.

"ಅರಿವೆ ನೋಡೆ ಹಸಿವೆ ನೀರಡಿಕೆ ಹಾರಿ ಹೋಗ್ತಾವೆ. ಹಿಂದಿನಿಂದ ಹಸನ ಮಾಡೀರಂತ ಬರ್‍ರಿ!" ಎಂದು ಗೌಡರು ಮತ್ತೊಮ್ಮೆ ಕರೆದರು. ನಿಜವಾಗಿಯೂ ಗೌಡರು ಅರಿವೆಗಷ್ಟು ಮರುಳಾಗಿದ್ದರು.

ನೆರೆಮನೆಯ ಮುದುಕಿಯೊಬ್ಬಳು ಮೆಲ್ಲನೆ ಎದ್ದು ಮುಂದೆ ಬಂದಳು. ಅವಳೂ ಮುರದೇವಿಯ ಸಮವಯಸ್ಸಿನವಳು. ಅವಳಿಗೆ ಗೌಡರ ಹೆದರಿಕೆಯೇನು? ಅವಳು ಮುಂದಾಗಲು, ಉಳಿದ ಹೆಂಗಸರೂ ಹಿಂದಿನಿಂದಲೇ ಬಂದರು. ಗಂಟಿನ ಸುತ್ತ ನೆರೆದರು. ಗೌಡರು ಕಂಬಳಿಯೊಂದನ್ನು ಹಾಸಿ, ಅದರ ಮೇಲೆ ಗಂಟು ಬಿಚ್ಚಿ, ಒಂದೊಂದೇ ಸೀರೆಗಳನ್ನು ತೆರೆದು ತೋರಿಸತೊಡಗಿದರು. ಆಗ ಅಕಸ್ಮಾತ್ ಹೊರಗಿನ ಅಪರಿಚಿತರು ಯಾರಾದರೂ ಬಂದಿದ್ದರೆ ಇವರೇ ಸೀರೆಯ ವ್ಯಾಪಾರಿಗಳೇನೋ ಎನ್ನುವಂತೆ ತೀರಿಯಿತ್ತು.

"ಈ ಹಸರು ಸಿರೇ ಏನು ಎತ್ತೇರಿಸುವುದು?" ಅಮ್ಮವ್ವ ಮುದಕಿ ಕೇಳಿದಳು, ಸೀರೆಯನ್ನು ಕೈಯಲ್ಲಿ ತಕ್ಕೊಂಡು.

"ಇದರೊಳಗ ಮದುಮಗಳ ಅರಿವೆ ಒಂದೂ ಇಲ್ಲ ನೋಡು. ಎಲ್ಲ ನಮ್ಮ ಮನೆಯವರಿಗೇ ತಂದಿದೆ." ಕಿಂಚಿತ್ ಅಸಮಾಧಾನದ

ಸ್ವರದಲ್ಲಿ ಗೌಡರೆಂದರು.

ಗೌಡರ ಮಾತು ಕೇಳಿ ಅಲ್ಲೇ ಬದಿಗೆ ನಿಂತ ಮನೆಯ ಹೆಂಗಸರ ಮುಖವರಳಿದುವು, ಮದುವೆಯ ನಿಮಿತ್ತ ತಮಗೆಲ್ಲರಿಗೂ ಜರದ ಸೇರೆ ಸಿಕ್ಕವೆಂದು. ಸರಸ್ವತಿಯು ಹಸರು ಸೀರೆಯ ಕಡೆಗೊಮ್ಮೆ ನೋಡಿ, 'ನನ್ನ ಮಗಳಿಗೇ ತಂದಿರಬೇಕೆನಿದು ಬಸಿರು ಇರುವಳೆಂದು?' ಎಂದು ಮನದಲ್ಲಿಯೇ ಒಂದು ಕ್ಷಣ ಅಂದುಕೊಂಡಳು. ಮತ್ತೆ 'ಇಂಥ ಬೆಲೆಯುಳ್ಳುದನ್ನು ಅವಳಿಗೇಕೆ ತಂದಾರು?' ಎಂದೂ ಮಾರ್ನುಡಿ ಹೊರಟಿತು ಅವಳ ಹೃದಯದಾಳದಲ್ಲಿ.

"ಹಾಗಾದರೆ ಈ ಹಸರು ಸೀರೆ ಯಾರಿಗೆ?" ಸರಸ್ವತಿ ಕೇಳ ಬಯಸಿದ ಪ್ರಶ್ನೆಯನ್ನೇ ಅಮ್ಮವ್ವ ಮುದಿಕೆ ಕೇಳಿದಳು.

"ಇಂದಿರೆಗೆ." ಸ್ವಲ್ಪ ತಡೆದು, "ಉಡಿಯ ತುಂಬುವಾಗ ಆಕೆಯ ಗಂಡ ಇಲ್ಲ ಆದ..ನಮ್ಮ ಹುಡಿಗೆ ಹಣೆಬರೆಹ ಹರಕು.'' ಒಮ್ಮೆಲೇ ಮಾತಿನ ಓಘವನ್ನು ತಡೆದು, "ದೂರ ಊರು ಬರಲಿಕ್ಕೆ ಆಗಲಿಲ್ಲ ಅವನಿಗೆ ಅಂದ ಮೇಲೆ ಹಸಿರು ಸೀರೆ ಯಾರು ಉಡಿಸುವರು? ನಾವೇ ತಂದೆವಾಯ್ತು?" ಗೌಡರು ಸ್ವಲ್ಪ ಆಢ್ಯತೆಯಿಂದ ಮೊದಲು ಹೇಳಹೋದರಾದರೂ ಮಾತು ತಬ್ಬಿಬ್ಬಾಗಿ ಅವರ ಬಾಯಿಂದ ಹೊರಬಿತ್ತು ಕೊನೆಗೆ.

ಮುಂದೆಯೇ ಕುಳಿತ ಇಂದಿರೆಯ ಮುಖ ಝುರ್ರೆಂದು ಇಳಿಯಿತು. ಯಾವುದೋ ಒಂದು ರಹಸ್ಯ— ಕಕ್ಕನಿಗೆ ಗೊತ್ತಾಗಬಾರದುದು— ಗೊತ್ತಾಗಿದೆಯೇ? ಎಂಬ ಶಂಕೆ ಒಲವತ್ತರವಾಗಿ ಅವಳ ಮುಖದ ಬಣ್ಣ ಇಳಿಯಿತು. ಮೈಯಲ್ಲಿ ನಡುಕ ಹುಟ್ಟಿತು. ಹುಚ್ಚು ಕಳೆಯಿಂದ ಎಲ್ಲರ ಕಡೆಗೂ ನೋಡತೊಡಗಿದಳು.

ಎಲ್ಲ ಸೀರೆಗಳನ್ನೂ ತೋರಿಸಿಯಾಯಿತಾದರೂ ಮದುಮಗಳ ಅರಿವೆಗಳೇ ಕೊನೆಗೂ ಹೊರಡಲಿಲ್ಲ. ಅದರಿಂದ ನೋಡಲು ಬಂದ ಹೆಂಗಸರಿಗೆಲ್ಲ ಅಸಮಾಧಾನವಾಯಿತು. ಮರದೇವಿ ಮೃದುವಾಗಿ ಕೇಳಿದಳು. "ಇದೆಲ್ಲ ಆಯಿತು; ಮದುಮಗಳಿಗೆ ಏನ ಅರಿವೆ ತಂದಿರಿ? ಆ ಗಂಟಿನೊಳಗ ಇದಾವೇನು?"

“ ಛೀ! ಇಲ್ಲ; ಆಕೆಯ ಅರಿವೆ ಹೀಗೆ ಒಮ್ಮೆಲೇ ಹೋದ ಕೂಡಲೆ ಎಲ್ಲಿಂದ ಸಿಕ್ಕಾವು? ಎರಡ ದಿನ ಬೆಳಗಾಂವಿ ಪೇಟೆಯನ್ನೆಲ್ಲ ಕಿತ್ತು ಹಾಕಿದೆವು. ನಮ್ಮ ಮನಸಿಗೆ ಬರುವಂಥ ಶಾಲೂನs ಸಿಕ್ಕಲಿಲ್ಲ.”

“ ಆಮೇಲೆ ?”

“ ಒಬ್ಬ ಅರಿವೆ ಅಂಗಡಿಯವನಿಗೆ ಹೇಳಿ ಬಂದೆವು! ಬನಾರಸದಿಂದ ತರಿಸಿ ಕೊಡತೇನಂತ ಹೇಳಿರುವ, ತುಂಬ ಜರದ್ದು !”

“ ಹೌದು. ನಮ್ಮ ಅಣ್ಣನ ಹೆಂಡತಿಗೂ ತವರುಮನೆಯವರು ಹಟ ಹಿಡಿಯಲು ಬನಾರಸಿನ ಶ್ಯಾಲೂ ತಗೊಂಡಿದ್ದರು, ನಾಲ್ಕಿಪ್ಪತ್ತು ರೂಪಾಯಿ ಕೊಟ್ಟು.” ಗುಂಪಿನೊಳಗಿನ ಒಬ್ಬ ಹುಡಿಗೆ ಹೇಳಿದಳು.

ಗೌಡರು ಆ ಹುಡಿಗೆಯನ್ನು ನಿರೀಕ್ಷಿಸಿ, “ ಅಂಥಾ ಶಾಲೂ ಇಂದ ಬೇಕಾದಷ್ಟು ಸಿಗುತ್ತವೆ. ಅದೇನ ಮಾಡುವಿ? ದೊಡ್ಡವರ ಮನೆ ಮಗುಳಿಗೆ ಶೋಭಿಸುವಂತಹದು, ಇರಲಿಕ್ಕೆ ಬೇಡಾ?” ಅಮ್ಮವ್ವ ಮುದುಕಿಯನ್ನು ನೋಡಿ ಕೇಳಿದ ಗೌಡ.

“ ಬೇಕಲ್ಲ; ಹಿಟ್ಟಾ ಬೂದಿ ಎಲ್ಲಾನೂ ಸರಿ ಎಂದರೆ ಹ್ಯಾಗಾದೀತು? ಬೀಗರ ತಕ್ಕ ತಗೋಲಿಕ್ಕೆ ಬೇಕಲ್ಲ !”

“ ಸುಮ್ನೆ ಅಲ್ಲ, ನಾವು ಏನು ಶಾಲು ತರಲಿಕ್ಕೆ ಹೇಳಿದೆವೋ ಅದರ ಬೆಲೆ ತೂಕದ ಮೇಲೆ ಗೊತ್ತಾಗುವದದೆ” ಬಾಯೊಳಗಿನ ಎಲೆಯುಗುಳಿ ಬರುತ್ತ ಆದಗೌಡ ಹಣೆಯೇರಿಸಿ ಹೇಳಿದ.

“ ತೂಕದ ಮೇಲಿಂದ! ಸೇರಿಗೆಷ್ಟು?” ಆಶ್ಚರ್ಯದ ಉದ್ಗಾರ ಹೆಂಗಸರ ಬಾಯಿಂದ ಹೊರಟಿತು.

“ ಸೇರಿಗೆ ಕೇಳತೀರಿ ನೀವು?” ಅಧ್ಯತೆಯಿಂದ ನಿಂತು ಕೈಮಾಡಿ, “ ತೊಲೆಯ ಮೇಲಿಂದ ಲೆಕ್ಕ ಏದೆ ತೊಲೆಯ ಮೇಲಿಂದ.” ಹೇಳಿದ, ಗೌಡ.

ಮುರದೇವಿ ಮುದುಕಿ ಗೌಡನ ತಾಯಿಯಾದರೂ ಇಂಥದೇನೂ ಅವಳಿಗೆ ಗೊತ್ತಿಲ್ಲ. ಅವಳ ಮದಿವೆಯನ್ನು ಹತ್ತಾಣೆಯ ಅರಸಿಣ ಪತ್ತಲವೊಂದನ್ನು ತಂದು ಮಾಡಿದ್ದರು. ಇಂಥ ಸೀರಿ, ಇಂಥ ಬೆಲೆ ಅವಳರಿಯಳು. ಇನ್ನೂ ಮೈಮೇಲೆ ಸೇರೆರಡುಸೇರು ಬಂಗಾರದ ಒಡವೆ

ಇಟ್ಟುಕೊಂಡವಳವಳು. ಮಗನ ಇಂಥ ಮಾತು, ಅರಿವೆಯ ಈ ಗಂಟು ಗಳನ್ನು ಕಂಡು ದಂಗುಬಡಿದೇ ಕುಳಿತಿದ್ದಳಾಕೆ. ಕೊನೆಗೆ ಕೇಳಿದಳು :

" ಏನೋ ಅಪ್ಪ ! ಜಗದೊಳಗ ಇಲ್ಲದ ಮಾತನ್ನೇ ಹೇಳುವಿ ನೀ ! ಸೀರೀ ತೂಕ ಮಾಡಿ ತರುವಿಯಂತೆ, ಅದೂ ಏನ ಬಂಗಾರೋ ? "

" ಹಾಗಲ್ಲವ್ವಾ ! ನಿಮಗ ಗೊತ್ತಿಲ್ಲ, ಹಳೆಯ ಜನ ನೀವು. ಒಳ್ಳೆಯ ಜರಾ ಯಾತರಿಂದ ಆಗ್ತದ ಅನ್ನೋದು. ಚೊಕ್ಕ ಚಾಂದಿಯಿಂದ ಮಾಡು ವರು ಗೊತ್ತ ಅದ ? ಅಂದ ಮೇಲೆ ತೂಕ ಇಲ್ಲದೆ ಹೇಗೆ ಕೊಟ್ಟಾರು ? ಅದೇನು ಮದಿವೆಗೆ ನಮ್ಮ ನಿಮ್ಮಂತಹ ಹಳ್ಳೀ ಹೆಂಗಸರೇ ಬರ್ತಾರೆ ? ಕಲೆಕ್ಟರ ಹೆಂಡರೂ ಮಾಮಲೇದಾರ ಹೆಂಡರೂ ಬರುವವರು. ಅಂಥವರ ಒಳಗ ಶೋಭಿಸಲಿಕ್ಕೆ ಬೇಡಾ ? "

" ಅದೇನೂ ನನಗ ತಿಳಿಯುವ ಹಾಗಿಲ್ಲ. ನೀ ಮಾಡ್ತ ಹೋದದ್ದು ನಾ ನೋಡ್ತ ಹೋಗುವವಳು ಕಣ್ಣಿರುವ ವರೆಗೆ. ಆದರೆ ಅರಿವೆಯೇನೂ ಕಡಿತನಕ ಉಳಿಯುವ ಬದಕಲ್ಲ ಏನಲ್ಲ. ಅದಕ್ಕಾಗಿ ದುಡ್ಡು ಸುರಿಯೂ ಬದಲು ಇನ್ನೂ ಬೆಳ್ಳಿ-ಬಂಗಾರ ಹಾಕು ಸೊಸೆಯ ಮೈಮೇಲೆ. ನಾಲ್ಕೊ ಪ್ಪತ್ತು ನಿಲ್ಲೂ ಬದಕು " ಎಂದು ತನಗೆ ತಿಳಿದಂತಹ ಬುದ್ಧಿ ಹೇಳ ಹೋದಳು ಮುರದೇವಿ.

ಹಳ್ಳಿಯ ಹೆಂಗಸರೆಲ್ಲ ಚೊಕ್ಕ ಚಾಂದಿಯ ಶಾಲು ಎಂಥದಿರುವದೋ ಎಂದು ಬೆರಗುವಟ್ಟು ಕುಳಿತಿದ್ದರು. ಪಾಪ! ನೂಲಿನ ಸೀರೆಯೂ ಮೈ ಮುಚ್ಚುವಷ್ಟು ಸಿಗದಿರುವ ಬಡ ಹೆಂಗಸರಿಗೆ ಗೌಡರ ಈ ಸೀರೆಯ ಬೆಲೆ ಹೇಗೆ ತಿಳಿಯಬೇಕು ? ತಿಳಿಯುವದಿಲ್ಲವೆಂತಲೇ ಒಳಿತು. ಇಲ್ಲವಾದರೆ ಮನವು ಬಯಕೆ ಹಣ್ಣಿನ ಬೆನ್ನಿಗೆ ಬಿದ್ದು ಘಾಶಿಯಾಗುವುದಲ್ಲ !

" ಬೆಳ್ಳಿ ಬಂಗಾರದ ವಸ್ತಾ ಇಟಗೊಳ್ಳಲಿಕ್ಕೆ ಆಕೆಯೂ ಏನ ಕಾರಹುಣ್ಣಿವೆ ಎತ್ತ ? ನಮ್ಮ ನಿಮ್ಮ ಕಾಲಕ್ಕ ಇತ್ತ ಅದೆಲ್ಲ, ಈಗ ಹೋಯ್ತವ್ವ ! "

" ಬೆಳ್ಳಿ-ಬಂಗಾರ ಹಾಕದ ಮತ್ತೇನ ಹಾಕಂತಾರು ? " ಬೇರೆ ಬೇನಸಿನ ಆಭರಣಗಳೂ ಇರಬಹುದೆಂದು ಹೊಳೆಯದ ಹಳ್ಳಿಯ ಹೆಂಗ ಸೊಬ್ಬಳು ನುಡಿದಳು ಅವಾಕ್ಕಾಗಿ.

“ ಮುತ್ತಿನ ನಾಲ್ಕಾರು ಎಳೆ ಹಾಕೊಂಡರಾಯ್ತು ! ನಿಮ್ಮಂತೆ ಹತ್ತ ಹತ್ತ ತೊಲೆಯ ಗೆಜ್ಜಿಟಿಕ್ಕಿ ಹಾಕಿಕೊಂಡರೆ ಅವರ ಗೋಣು ತಾಳ್ಲಿಕ್ಕಿಲ್ಲ ! ” ಇಂದಿರೆ ಹೇಳಿದಳು.

ಗೌಡನು ಮಗಳ ಬುದ್ಧಿಗೆ ಮೆಚ್ಚಿದನು. ತಾನು ಆಡುವ ಮಾತನ್ನು ಅವಳೇ ಆಡಿದ್ದಕ್ಕೆ ಆನಂದವಾಯಿತವನಿಗೆ. ಆ ಉಬ್ಬಿನಲ್ಲಿ,—

“ ಇಷ್ಟ ಜನರೊಳಗ ನಿಜವಾದ ತಿಳವಳಿಕೆ ಇದ್ದಾಕೆ ಅಂದರೆ ಇವಳೊಬ್ಬಳೇ ನೋಡು! ಮುಂಬಯಿ ಊರಾಗ ಇದ್ದಾಕೆ ಅಂತೇ ಆಕೆಗೆ ಎಲ್ಲ ಗೊತ್ತದ. ಅಲ್ಲಿ ದೊಡ್ಡ ದೊಡ್ಡ ಸಿರಿವಂತರನ್ನು ನೋಡತಾಳ ದಿನಾ ಬೆಳಗಾದರೆ. ” ಉಳಿದ ಹೆಂಗಸರ ಕಡೆಗೆ ನೋಡಿ, “ ಈ ಹೆಂಗಸರಿಗೆ ಏನ ತಿಳಿಯೋದು ಇಂದರಾ ? ದೊಡ್ಡ ಜನರೊಳಗ ಹೋಗಿ ಬಂದು ಗೊತ್ತೇ ಇಲ್ಲ, ಎಲ್ಲಿ ಕೇಳಿಲ್ಲನೂ ನೋಡಿಲ್ಲನೂ.” ತಾನೂ ಈಗೀಗಲೇ ಕಾಣುತ್ತಿರುವುದೆಂಬುದನ್ನು ಅರಿತೂ ಕೂಡ ನುಡಿದನಾತ.

ನೆರೆಹೊರೆಯ ಒಕ್ಕಲಿಗರ ಹೆಂಗಸರ ಮುಂದೆಲ್ಲ ಇನ್ನುಳಿದ ವಿಷಯ ಬೆಳಿಯಿಸಬಾರದೆಂದು ಮುರದೇವಿ ಸುಮ್ಮನಾದಳು. ಈ ಎಲ್ಲ ಅರಿವೆಗಳನ್ನು ನೋಡಿಯೂ ಆ ಗಂಟಿನಲ್ಲಿ ಏನಿದೆ ಎಂಬುದನ್ನು ಅರಿತುಕೊಳ್ಳಲು ಅವಳ ಕುತೂಹಲ ಕೆರಳುತಲಿತ್ತು. ಕೇಳಿಯೇ ಬಿಡಬೇಕೆಂಬ ಯೋಚನೆಯು ಗಂಗವ್ವನಲ್ಲಿಯೂ ಬರುತ್ತಲಿದ್ದಿತು. ಮದುಮಗಳ ಅರಿವೆಯನ್ನಂತೂ ತಂದಿಲ್ಲ, ಅಂದ ಮೇಲೆ ಅದರಲ್ಲೇನಿರಬೇಕು ? ಎಂದು ಮನಸ್ಸಿಗೇ ಪ್ರಶ್ನೆ ಕೇಳಿಕೊಳ್ಳುತ್ತ, ಏನೋ ಅನುಮಾನ ಮಾಡಿ ಸರಸ್ವತಿಯು ಕೇಳಿದಳು.

“ ಅದರೊಳಗೇನು ರಾವಸಾಹೇಬನ ಅರಿವೆ ? ”

“ ಹೂಂ ! ನಿಮಗೆಲ್ಲರಿಗೂ ಆಯಿತು. ಅವನಿಗೆ ಬೇಡಾ ? ಮದುಮಗನಾಗಿ ಹೋಗುವವ ಲಂಗಡಫಂಗ ಅಂತ ಹೋಗಿ ನಿಲ್ಲುವುದದ ನಾಲ್ಕು ಜನರೊಳಗ ? ”

“ ಎಲ್ಲಾ ಅವನದೇ ಅದೇ ಸಡಗರ. ಅವನಿಗೂ ಬೇಕಲ್ಲ ! ಮದುಮಗನ ಬಿಟ್ಟ ಮದುವೆಗೆ ಹೋದರಂತ. ಅವನಿಗಿಲ್ಲದೆ ಹೇಗೆ ಆದೀತು ? ” ಗಂಗವ್ವನ ವೃದು ನುಡಿಯಿದು.

ಕೋಣೆಯ ಕಡೆಗೆ ಹೊರಳಿ, "ರಾವಸಾಹೇಬ" ಎಂದು ಗೌಡ ಕೂಗಿದ. ಕೂಡಲೆ ರಾವಸಾಹೇಬ ಕೋಣೆಯಿಂದ ಹೊರಗೆ ಬಂದ. ಅವನ ಕಡೆಗೆ ಗಂಟನ್ನೇ ಕೊಡುತ್ತ—

"ಇವು ತಗೋ ನಿನ್ನ ಅರಿವೆ. ಕೋಟು ನಾಳೆ ಕೊಲ್ಹಾಪುರಕ್ಕೆ ಹೋಗಿ ಹೊಲಿಯಲಿಕ್ಕೆ ಹಾಕಿ ಬಾ. ನಾಲ್ಕು ದಿನದೊಳಗ ಹೊಲದ ತಯಾರ ಆಗಲಿ. ಶರಟುಗಳನ್ನು ಇಲ್ಲೇ ಉಳಿದ ಅರಿವೆಯು ಕೂಡ ಕೊಡೋಣಂತ, ಹೊಲಿಯಲಿಕ್ಕೆ ಕೋಟಿನ ಕೆಲಸ ಚೊಕ್ಕ ಆಗಲಿಕ್ಕೆ ಬೇಕು" ಎಂದು ಹೇಳಿದನು.

ರಾವಸಾಹೇಬ ಅರಿವೆಯ ಗಂಟನ್ನು ಬಿಚ್ಚಿ, ಕೋಟಿನ ಅರಿವೆ ಕೈಯಲ್ಲಿ ತಕ್ಕೊಂಡು ನೋಡಿ ಪರೀಕ್ಷಿಸಿ, "ಪ್ಯೂಅರ ಉಲನ್ನ ಅಲ್ಲ! ನಾನೇ ನೋಡಿ ತರತಿದ್ದೆ" ಎಂದ.

"ನಿನಗೆ ನಾ ತಂದದ್ದು ಯಾವುದು ಮನಸಿಗೆ ಬಂದಿತ್ತು?" ಕುಪಿತನಾಗಿ ಗೌಡ ಕೇಳಿದ, ಹೆಂಗಸರಿದುರಿನಲ್ಲಿ ಮಗನು ಅರಿವೆಗೆ ಹೆಸರು ಇಟ್ಟುದಕ್ಕಾಗಿ.

ಹೆಂಗಸರ ಮುಂದೆ ತಂದೆ ಇಷ್ಟು ಅಂದುದೇ ರಾವಸಾಹೇಬನಿಗೆ ಅತ್ಯಂತ ಅವಮಾನಕರವೆನಿಸಿತು. ಅರಿವೆಗಳನ್ನೆಲ್ಲ ಅಲ್ಲೇ ಒಗೆದು, ಸೆಟೆದುಕೊಂಡು ಕೂಡಲೆ ಕೋಣೆಯೊಳಗೆ ಹೋಗಿಬಿಟ್ಟ. ಅರಿವೆಯ ಗಂಟೆಲ್ಲ ಚಲ್ಲಾಪಿಲ್ಲಿಯಾಗಿ ಅಲ್ಲಿಯೇ ಬಿತ್ತು. ಅದನ್ನು ಕಂಡು ಮುರದೇವಿಗೂ ಕೊಂಚ ಅಸಮಾಧಾನವಾಗಿರಬೇಕು. ಹಳ್ಳಿಯ ಹೆಂಗಸರಿಗೂ ಕೆಡಕೆನಿಸಿತು. ಚಂದ್ರಿಯ ಮನಸ್ಸಿನಲ್ಲಿ ಆನಂದವೋ ಅಸಂತೋಷವೋ ಅಭಿಮಾನವೋ ಇವೆಲ್ಲ ಮುಪ್ಪುರಿಗೊಂಡ ಇನ್ನಾವುದೋ ಒಂದು ಭಾವನೆಯೋ ಉಂಟಾಗಿತ್ತು

"ನೀವೊಬ್ಬರೇ ಅವನ ಅರಿವೆ ಏಕೆ ತಂದಿರಿ? ತನಗೆ ತಾನೇ ನೋಡಿ ತರತಿದ್ದ ಅಲ್ಲ?" ಗಂಗವ್ವ ಗಂಡನಿಗೆ ಮೆಲ್ಲನೆ ಕೇಳಿದಳು.

"ಒಂದರೊಳಗೊಂದ ಕೊಂಡ ಸೋಯಿ ಸಿಕ್ಕಾವು ಅಂತ ತಂದೆವಿ. ಅವನ ಬೀಗ—ನಾಳೆ ಮಾಮಲೇದಾರ ಆಗುವಂಥವ—ಅವನೇ ನೋಡಿ ಪಾಸ ಮಾಡಿ ಕೊಟ್ಟದಾನು. ಇವನದೇನು ಮತ್ತ ಟಿನಿಮಿನಿ, ಇಂಗ್ಲೀಷ

ಏಳ ಎತ್ತೆ ಕಲಿತವನದು ? ”

ಈಗ ಆ ಓಣಿಯ ಹೆಂಗಸರಿಗೆಲ್ಲ ಗೊತ್ತಾಯಿತು, ಗೌಡರ ಆಪ್ತರು ಮಾಮಲತಿಯ ವರಗೆ ಏರಿದವರಿರುವರೆಂದು. ಅವರಿಗೆಲ್ಲ ಅಭಿಮಾನ ವೆನಿಸಿತು, ಮಾಮಲೇದಾರನ ತಂಗಿಯನ್ನು ತಮ್ಮೂರ ಗೌಡನ ಮಗ ನಿಗೆ ಕೊಟ್ಟರೆಂದು. ಅದರಲ್ಲೂ ಒಬ್ಬ ಹೆಂಗಸು ಕೇಳೇಬಿಟ್ಟಳು.

“ ರಾವಸಾಹೇಬನ ಬೀಗ ಮಾಮಲೇದಾರ ಇದಾನು ? ”

“ ಹೂಂ ! ಅದೇನ ಚಿಲ್ಲರ ಮನೆತನ ಅಲ್ಲವ್ವ ! ಬೆಳಗಾಂವಿ ಯಲ್ಲೇ ಭಾರಿ ಮನೆತನ. ನಮ್ಮೂರ ಕುಲಕರ್ಣಿ ರಂಗಣ್ಣನ ಮಗನಿಗೆ ಹೆಣ್ಣ ಕೊಟ್ಟಾರಲ್ಲ. ಅವರಿಗೆ ಸಹಿತ ಇವರೇ ಸಾಲ ಕೊಟ್ಟಿದಾರಂತ. ಹತ್ತೆಂಟ ಹಳ್ಳಿಯೊಳಗೆಲ್ಲ ಹೊಲ ಮನೆ ಅವೆ. ಅದೇನು ಹೇಳಲಿಕ್ಕೆ ಲೆಕ್ಕ ಹತ್ತುವ ಹಾಗಿಲ್ಲ, ಅವರ ಮನೆಯ ಸಿರಿವಂತಿಕೆ. ಈ ಹೊತ್ತು ಐವತ್ತು ಜನ ಹೋಗಲಿ ಊಟಕ್ಕ ಎಲ್ಲಾರಿಗೂ ಬೆಳ್ಳಿ ತಾಟು ತಂಬಿಗೆ ! ಕೂತ ಸ್ಥಳ ಬಿಟ್ಟ ಎದ್ದ ಹೋದಾರಂದೀ ಮತ್ತ ! ”

“ ಮುರದೇವಿ ಅಕ್ಕನ ನಸೀಬ ತೆರೆಯಿತ ಏಳ ತಾಯಿ ! ” ಸರಿ ವಯಸ್ಸಿನ ಅಮ್ಮವ್ವ ಉದ್ಗಾರ ತೆಗೆದಳು.

“ ನಂದೇನಃ ತಾಯೀ ! ” ಮುರದೇವಿ ಸಂತಸದ ಭರದಲ್ಲಿ ಉಚ್ಚ ರಿಸಿದಳು.

“ ಇಂಥಾದೆಲ್ಲ ಮೊಮ್ಮಗನ ಐಸಿರಿ ನೋಡೋದೇನ ಕಡಿಮೆಯು ದಲ್ಲ ! ” ಉಳಿದ ಹೆಂಗಸರ ಬೆರಗು ನುಡಿಯಿದು.

“ ಹುಡುಗನ ಪುಣ್ಯ ಉದಯಕ್ಕೆ ಬಂತು ಅದೆಲ್ಲ ನಿಜ. ನಾವು ಮಾಡುವುದನ್ನು ಮಾಡಿದೆವು. ಈ ಉದ್ಧಟ ಹುಡುಗ ಒಂದು ಎಲ್ಲರನ್ನು ಹೊಂದಿಸಿಕೊಂಡು ಹೋಗಬೇಕಲ್ಲ ! ಇಲ್ಲದ್ದೊಂದು ಹುಂಬತನ ಮಾಡ್ತ ಹೋದರ ಹ್ಯಾಗೆ ನಡೆದೀತು ? ಅದೇನು ನಾಲ್ಕ ಉಡಾಳ ಹುಡುಗರೊಳಗ ತಿಂದ ತಿರಗುವದದ ? ”

“ ಅವನೂ ಬೇಕಾದಷ್ಟು ಹುಶ್ಯಾರ ಇದಾನ ತಗೊಳ್ಳರಿ ! ಇಂಗ್ರೇಜಿ ಏಳನೆ ಇತ್ತೆ ಪಾಸ ಆಗಿದಾನ, ಅವನಿಗೇನು ತಿಳಿಯುವದಿಲ್ಲಾ ? ” ಕಲಹ ಪ್ರಿಯ ಹೆಂಗಸೊಬ್ಬಳು ಕೆಣಕಿ ನುಡಿದಳು, ರಾವಸಾಹೇಬ ಮ್ಯಾಟ್ರಿಕ್ಕ

ಆಗಿಲ್ಲೆಂದರಿತೂ ಕೂಡ.

"ಇವನಿಗೆ ತಿಳಿಯದಿದ್ದರೂ ಹುಡಿಗೆ ಇದ್ದಾಳ ಎಲ್ಲ ತಿದ್ದಿ ತೋರಿಸುವಂಥವಳು!"

"ರಾವಸಾಹೇಬನಿಗೆ ಒಪ್ಪುವಂಥವಳು ಇದಾಳಿಲ್ಲೋ? ಸಾಕು. ಅವರ ಸಿರಿವಂತಿಕೆ ಏನೂ ನಮ್ಮ ಮನೆಗೆ ಬರುವಂಥಾದಲ್ಲ. ಮೊನ್ನೆ ಭಟ್ಟರು ಮಾಡಿದರು ನೋಡು ಬಂಗಾರದಂಥ ಹುಡುಗನಿಗೆ ಟೆಂವಕ್ಕಿಗೋಣಿನ ಹುಡುಗೆಯನ್ನ. ಅದೇನು ನನ್ನ ಮನಸಿಗೆ ಬರಲಿಲ್ಲ" ಮುರದೇವಿ ಕೊನೆಗೆ ಮಂಗಲ ನುಡಿದು ಮುಗಿಸಿಬಿಟ್ಟಳು.

ತಾಯಿಯ ಮಾತಿಗೆ ಗೌಡನು ಏನೂ ಹೇಳದೆ ಎದ್ದು ಹೋಗಿ ತನ್ನ ಕೋಟಿನ ಕಿಸೆಯಲ್ಲಿ ಕೈಹಾಕಿ ಏನೋ ಹುಡುಕತೊಡಗಿದ.

ಅತ್ತೆಯ ಮಾತನ್ನು ಮುಂದುವರಿಸಿ ಗಂಗವ್ವ ಹೇಳತೊಡಗಿದಳು.

"ನಾವೇನ ಸೊಸೀನಾ ನೋಡಿಲ್ಲ ತಾಯಿ! ಅವರಾ ರಾವಸಾಹೇಬ ಅಷ್ಟು ನೋಡಿ ಬಂದಿದಾರೆ ಮನೆಯವರಂದರ; ಹೊರಗಿನವರೂ ನಾಲ್ಕು ಜನರು ಹೋಗಿದ್ದರು. ಆಗೂ ನಾವು ಹೆಂಗಸರು ಯಾರು ಹೋಗಲಿಲ್ಲ ಏನಿಲ್ಲ! ಆಕೆಯ ಅವ್ವಾದರೂ ನಮ್ಮ ಮನೆ ನೋಡಲಿಕ್ಕೆ ಬಂದಿದ್ದರೆ ಅವಳನ್ನು ನೋಡಿಯಾದರೂ ಹುಡಿಗೆಯ ರೂಪದ ಅಂದಾಜ ಕಟ್ಟಲಿಕ್ಕೆ ಬರತಿತ್ತು. ಅದೂ ಇಲ್ಲ ಇದೂ ಇಲ್ಲ."

ಸೊಸೆಯ ಮಾತನ್ನು ನಡುವೆಯೇ ತಡೆದು ನಾ ಬಹಳ ಹರಿದಾಡಿದೆನು; ಆದರೆ ಮನೆಯ ಮಗನೇ ನೋಡಲಿಕ್ಕೆ ನಡೆ ಅನ್ನದೆ "ನಾನೇ ಹೇಗೆ ಬರತೇನಂತ ಬೆನ್ನ ಹತ್ತಲಿ ತಾಯೀ?" ಮುರದೇವಿ ಕೇಳಿದಳು.

ಆದಗೌಡ ಸ್ವಲ್ಪ ಧೇನಿಸಿ ಏನೋ ನೆನಪಾದಂತವನಾಗಿ ಜೇಬಿನೊಳಗಿನ ದಿನಚರಿಯನ್ನು ಹೊರಗೆ ತೆಗೆದು ಅದರಲ್ಲಿಂದ ಚಿಕ್ಕ ಭಾವಚಿತ್ರವೊಂದನ್ನು ತೆಗೆದು ತಾಯಿಯ ಕೈಗೆ ಕೊಡುತ್ತ "ನೋಡಿಲ್ಲ ನೋಡಿಲ್ಲ ಅನ್ನುವಿರಿ. ನೆಟ್ಟಗ ನೋಡಿರಿ ಎಲ್ಲಾರು ಸೊಸೀನಾ" ಬಿಂಕದಿಂದ ನುಡಿದರು.

"ಈ ಚಿತ್ರದೊಳಗ ಏನ ತಿಳಿಯುವದು ಮೂಗಾ ಕಣ್ಣಾ?" ಎಂದು ಮುರದೇವಿ ನೋಡದೆ ಗಂಗವ್ವನ ಕೈಗೆ ಕೊಟ್ಟಳು, ಸ್ವಲ್ಪ ಅಸಮಾಧಾನ

ದಿಂದಲೇನೇ.

ಗಂಗವ್ವನ ಕೈಗೆ ಹೋಗುತ್ತಲೇ ಎಲ್ಲ ಹೆಂಗಸರೂ ನೋಡಿದರು. ಏನೋ ದೊಡ್ಡವರ ಸೊಸೆಯೆಂದೋ ಎಲ್ಲರೂ 'ಚಲೋ ಇದಾಳು, ಚಲೋ ಇದಾಳು' ಎಂದೇ ಅಂದು ಮೋರೆ ತಿರುವಿದರು. ಚಂದ್ರಿಯೊಬ್ಬಾಕೆ ಮಾತ್ರ ಭಾವಚಿತ್ರವನ್ನು ಸ್ವಲ್ಪ ಹೊತ್ತು ನಿರೀಕ್ಷಿಸಿ ಮನದಲ್ಲಿಯೇ "ಮೂವತ್ತು ಹೆಣ್ಣು ನೋಡಿ ಏನ ಚಲೋ ಹೆಣ್ಣಂತ ಮಾಡಕೋಲಿಕ್ಕ ಒಪ್ಪಿದಾನ ತಗೋ! ಉದ್ದ ಕಂಬ ನಿಂತಂಗದೆ" ಎಂದುಕೊಂಡಳು. ಆಗ, ಅದೇಕೋ ಅವಳ ಮನಸ್ಸಿಗೆ ಕೊಂಚ ಶಾಂತಿ.

ರಾವಸಾಹೇಬ ಕೋಣೆಯಲ್ಲಿ ಸಿಟ್ಟಿನಿಂದ ಹೋಗಿ ಮಲಗಿದ್ದನಾದರೂ ಅವನ ಕಿವಿಗಳೆಲ್ಲ ಹೊರಗೆಯೇ ಇದ್ದುವು. ಮನಸ್ಸು ಭಾವಚಿತ್ರದ ಕಡೆಗೆ ಹರಿಯುತ್ತಿದ್ದಿತು. ನೋಡಲಿಕ್ಕೆ ಹೋದಾಗ ಅಷ್ಟು ಚನ್ನಾಗಿ, ಹೆಂಡತಿಯಾಗುವವಳನ್ನು ನೋಡಲಾಗಲಿಲ್ಲ ಅವನಿಗೆ. ಶ್ರೀಯಲದೇವಿಯ ಆಕೃತಿ ಅವನ ಮನಃಪಟಲದ ಮೇಲೆ ಅಷ್ಟು ನಿಚ್ಚಳವಾಗಿ ಮೂಡಿರಲಿಲ್ಲ. ಅವಳ ತಂದೆಯ ಸಿರಿಗೇ ಒಲಿದ ಇವನ ತಂದೆ ಈ ಮೊದಲೇ ಒಪ್ಪಿಬಿಟ್ಟುದರಿಂದ — ಅವಳ ಅಣ್ಣ ಮಾಮಲೇದಾರನಾಗುವ— ಇನ್ನೊಬ್ಬ ಅಣ್ಣ ವಕೀಲ— ಎಂದು ಆಪ್ತರ ಹಿರಿಮೆಯನ್ನು ನೆನೆಯುತ್ತ ವಧುವಿನ ವಿಷಯಕ್ಕೆ ಏನೂ ಹೇಳದೆ ಸುಮ್ಮನಾಗಿಬಿಟ್ಟಿದ್ದ. ಆಪ್ತರ ಮನೆಯಲ್ಲಿಯ ಹೊಸಗಾಲದ ಆದರಾತಿಥ್ಯ— ಚಹ ಫಲಾಹಾರಗಳ ವೈವಿಧ್ಯ— ಬೆಡಗಿನ ಕುರ್ಚಿ ಮೇಜುಗಳು ಅವನ ಕಣ್ಣಿಗೆ ಪರೆಯನ್ನೆಳೆದುವೋ ಏನೋ! ಆದಗೌಡ ಮಗನ ಮೌನವನ್ನೇ ಸಮ್ಮತಿಯೆಂದು ಭಾವಿಸಿ ಮುಂದುವರಿದ.

ಎಲ್ಲರೂ ತಮ್ಮ ತಮ್ಮ ಕೆಲಸಕ್ಕೆ ಹೋಗಲು ರಾವಸಾಹೇಬನು ಮೆಲ್ಲಗೆ ಹೊರಗೆ ಬಂದು ತಂದೆಯ ಜೇಬಿನೊಳಗಿಂದ ಶ್ರೀಯಲದೇವಿಯ ಭಾವಚಿತ್ರವನ್ನು ಸಾವಕಾಶವಾಗಿ ತಕ್ಕೊಂಡು ತನ್ನ ಕೋಣೆಗೆ ಹೋದ. ಕಿಡಕಿಯ ಬೆಳಕಿನಲ್ಲಿ ಎರಡು ಮೂರು ಸಲ ನಿರೀಕ್ಷಿಸಿದ. ಕಣ್ಣಲ್ಲಿ ಕಣ್ಣಿಟ್ಟು ನೋಡಿದ. ಮುಖ ಮೂಗುಗಳನ್ನು ಕಣ್ಮುಂದೆ ತರಲು ಯತ್ನಿಸಿದ. ಆವಳ ರೂಪು ಅಸ್ಪಷ್ಟವಾಗಿಯೇ ಯಾಕಾಗಲೊಲ್ಲದು ಅವನ

ಬಗೆಗಣ್ಣಿನಿಯಲ್ಲಿ ಪ್ರತಿಫಲಿಸಿತು. ಹಿಂದೆ ನೋಡಿದ ಹಲವು ಹುಡಿಗೆಯರ ರೂಪೂ ಅವನ ಕಣ್ಣೆದುರಿಗೆ ಹಾಗೇ ಸುಳಿಯಿತು. ಹಲವು ಪ್ರಸಂಗಗಳ ನೆನಪಾಯಿತು. ಸುಲೋಚನೆಯೊಡನೆ ಕಾರಿನಲ್ಲಿ ಕುಳಿತ ಸನ್ನಿವೇಶದ ಸ್ಮೃತಿ ಸುಳಿದು ಮೈ ಪುಳಕಗೊಂಡಿತು. ಅವಳ ಭಾವಚಿತ್ರವೊಂದು ತನ್ನಲ್ಲಿರುವಂತೆ ಭಾಸವಾಯಿತು. ಅದರ ಮರೆಗಾಯಿತೀ ಎದುರಿಗಿನ ಚಿತ್ರ. ಯಾವದೋ ಅಸಮಾಧಾನದ ಸುಳಿಗೆ ಸಿಕ್ಕು ರಾವಸಾಹೇಬ ಎದ್ದ. ಕಪಾಟಿನೊಳಗಿಂದ ಸುಲೋಚನೆಯ ಫೋಟೋ ಹೊರಗೆ ತೆಗೆದ. ಶ್ರೀಯುಲದೇವಿಯ ಫೋಟೋವಿನ ಜೊತೆಗೆ ಹೊಂದಿಸಿಟ್ಟು ನಿರೀಕ್ಷಿಸತೊಡಗಿದ.

"ನೀವು ಮೋಸ ಹೋದಿರಿ."

"ಇಲ್ಲ, ಸುಲೋಚನಾ."

"ಹಾಗಾದರೆ ನನಗೆ ಮೋಸ ಮಾಡಿದಿರಿ."

"ಇಲ್ಲ ಸುಲಾ, ನಿಜವಾಗಿಯೂ ಇಲ್ಲ."

"ಅಂದಿನ ನಿಮ್ಮ ಕಣ್ಣೊಳಗಿನ ಆಶೆ ಎಲ್ಲಿ ಹೋಯಿತು?"

"ನೀನು ಮರೆಯಾದೊಡನೆಯೇ ಹೋಯಿತು!"

"ಮರೆಯಾದೊಡನೆಯೇ ಅಳಿಯುವಂತಹ ಕೀಳ ವಾಸನೆಯೋ ಅದು?" ರಾವಸಾಹೇಬನ ಹೃದಯ ಅದುರಿತು.

"ಸುಲೋಚನಾ!"

"ನೀವು ಸಿರಿದೇವಿಗೆ ಮೋಸ ಹೋದಿರಿ!"

"ಇಲ್ಲ; ಹೋಗಿಲ್ಲ."

"ಅವರ ಅಧಿಕಾರಕ್ಕೆ?"

"ಅದಕ್ಕೂ ಇಲ್ಲ!"

"ನನ್ನ ಮುಂದೆ ಆತ್ಮವಂಚನೆಯೋ ಇನ್ನೂ?"

ರಾವಸಾಹೇಬನ ಹೃದಯವನ್ನು ಒತ್ತಿ ಹಿಂಡಿದಂತಾಯಿತು. "ಯಾವುದಕ್ಕಾಗಿ ನಾನು ಈ ಮದುವೆಯನ್ನು ಒಪ್ಪಿದೆನೋ?" ಎಂದು ತನ್ನನ್ನು ತಾನೇಕೆ ಕೇಳಿಕೊಂಡ.

ಚಂದ್ರಿಯ ರೂಪು ಒತ್ತಟ್ಟಿಗೆ ಮನದಂಚಿಗೆ ನಿಂತು ವಿಕಟ ನಗೆ

ಯೊಂದನ್ನು ಬೀರಿ ಕೆಣಕುತ್ತಲಿತ್ತು.

ಒಮ್ಮೆಲೇ ಉಸಿರು ಕಟ್ಟಿದಂತಾಯಿತವನಿಗೆ. ಧಡಾರನೆ ಬಾಗಿಲ ತೆರೆದು ಹೊರಗೆ ಓಡಿ ಬಂದ.

ಸೂಲೋಚನೆಯ ರೂಪು ಅವನ ಕಣ್ಣೆದುರಿಗೆ ಮತ್ತೆ ಮತ್ತೆ ಬಂದು ನಿಲ್ಲುತ್ತಿತ್ತು.

## ೧೭

ಅಜಿತ ಸಾಗಿದ್ದ, ಹಾಗೆಯೇ ಸಾಗಿದ್ದ. ಎಲ್ಲಿಗೆ? ಕಾಲುಗಳು ಎತ್ತ ಬೀಳುತ್ತಿದ್ದುವೋ ಅತ್ತ. ಈಗ ಅವನಿಗೆ ಸ್ವಾತಂತ್ರ್ಯ ಸಿಕ್ಕಂತಾಗಿದ್ದಿತು. ಯಾರಿಂದ? ಪರಕೀಯ ಸತ್ತೆಯಿಂದಂತೂ ಅಲ್ಲ! ಪರಕೀಯ ಶಿಕ್ಷಣದಿಂದ ಮಾತ್ರ ಅನ್ನಬಹುದು. ಅನ್ಯರ ಆಳಿಕೆಯ ಗಾಣದಲ್ಲಿ ಸಿಕ್ಕು ನುಗ್ಗಾಗುತ್ತಿರುವ ಭಾರತಭೂಮಿಯಲ್ಲಿಯೇ ಇನ್ನೂ ಜೀವಂತನಾಗಿದ್ದ ಅಜಿತ. ಹೋಗ ಹೋಗುತ್ತಲೇ ಹಗಲುಗನಸು ಕಾಣುವನಾತ.

"ಯಾರ ವಿಜಯವಾಯಿತು ತಿಳಿಯಿತೇನು ?"

"ಇಲ್ಲ ಮಹಾರಾಯಾ! ಯಾರಿಗೆ ವಿಜಯ ?"

"ಹಿಂದುಗಳಿಗೆ!"

"ಹೀಗ! ಅದು ಹೇಗೆ?" ಅಜಿತ ಅಂದುಕೊಂಡ.

"ಪಾರ್ಲಿಮೆಂಟಿನ ಸಭೆಯಲ್ಲಿ ಒಬ್ಬ ಹಿಂದುವಿನ ಪ್ರವೇಶವಾಯಿತು!"

"ಎಲಾ ಹುಚ್ಚಾ ಹೋಗು! ಇಬ್ಬರು ಮುಸಲ್ಮಾನರನ್ನು ಎಂದೋ ಆ ಸಭೆಗೆ ಕರೆಯಿಸಿದ್ದಾರೆ!"

"ಆಯ್ತು! ಮತ್ತ!"

"ಮತ್ತೇನು? ಜಯ ಸಿಕ್ಕಿತು!"

"ಯಾರಿಗೆ?"

"ಅದನ್ನೂ ಹೇಳಬೇಕೆ? ನಿಜವಾಗಿಯೂ ಜಯ ಸಿಕ್ಕದ್ದು ಬ್ರಿಟಿಷ ಸತ್ತೆಗೆ!"

ಅದಾವಾಗಲೋ ತುಂತುರು ಮಳೆಗೆ ಆರಂಭವಾಗಿದ್ದಿತು. ಅದರ ಅರಿವು ಅಜಿತನಿಗೆ ಇರಲಿಲ್ಲ. ಈಗ ಸ್ವಲ್ಪ ರಭಸದಿಂದಲೇ ಆರಂಭವಾಯಿತು ಮಳೆ. ಅಜಿತ ಓಡಹತ್ತಿದ. ಸಮೀಪದಲ್ಲಿರುವ ದೊಡ್ಡ ಕಮಾನಿನಂತಿರುವ ಬಾಗಿಲಲ್ಲಿ ಹೋಗಿ ನಿಲ್ಲಬೇಕೆಂದು ಬಯಸಿದ. ಶ್ರೀಮಂತರು ಆಶ್ರಯ ಕೊಡದಿದ್ದರೂ ಬಡವರ ವಸತಿಯ ಭಾಗದ ಹೊರ ಬಾಗಿಲಾದರೂ ಅವನಿಗೆ ಆಸರ ನೀಡುವದೆಂಬುದು ಖಂಡಿತ ಗೊತ್ತಿದ್ದಿತು. ಅಂತೇ ಅವನು ಅತ್ತ ಸಾಗುತ್ತಿದ್ದ. ಮೋಡ ಮುಸುಕಿದುದರಿಂದ ಕತ್ತಲೆಗವಿದಿದ್ದಿತು. ಹೇಗೋ ಹೋಗಿ ಅಲ್ಲಿ ಸೇರಿದ. ಮಳೆಯಿಂದ ಅಲ್ಲಲ್ಲಿ ನೀರು ನಿಂತಿದ್ದುವು. ಒಳಗೆ ದೃಷ್ಟಿ ಹರಿಯಿಸಿದ. ಕೂಲಿಕಾರರ ಹಂಚಿನ ಮುರುಕು-ಮನೆಗಳು ಮಿಣುಕು-ಬೆಳಕಿನಲ್ಲಿ ಅಸ್ಪಷ್ಟವಾಗಿ ಕಂಡವು. ಅವುಗಳ ಸುತ್ತಲೂ ಈ ಸಿಮೆಂಟಿನ ಸುಂದರ ಆವಾಸದ ಅಂಗಡಿಗಳ ಸಾಲು. ಬಡತನವನ್ನು ಹೊಟ್ಟೆಯಲ್ಲಿ ಹುದುಗಿಸಿಟ್ಟುಕೊಂಡು ಸಿರಿವಂತಿಕೆಯನ್ನು ಮೇಲೆ ಮೆರೆಯಿಸುವ ಮುಂಬಯಿಯ ನಿಜಸ್ವರೂಪದಂತಿದ್ದಿತಾ ಭಾಗ. ಅಷ್ಟರಲ್ಲಿ ಎದುರಿಗೆ ಯಾವದೋ ವ್ಯಕ್ತಿ ಬರುತ್ತಿರುವಂತೆ ಕಂಡಿತು.

ಹೊರಗಿನಿಂದ ಬರುವ ಮಾನವ ಮೂರ್ತಿ ತೂಗಾಡುತ್ತಲಿತ್ತು.

ಅವನು ಬೇನೆಯುವನಿರಬಹುದೆ? ಏನು ಕತ್ತಲೆಯಲ್ಲಿ ನೆಟ್ಟಗೆ ನಡೆಯಲು ಬರಲಿಕ್ಕಿಲ್ಲವೊ?

ನೆರವು ನೀಡಲೆಂದು ಸಹಾನುಭೂತಿ ಅಜಿತನಲ್ಲಿ ಜಾಗೃತವಾಯಿತು.

"ಎಲ್ಲಿ ಹೋಗುವುದು?" ಆ ತೂಗಾಡುವ ವ್ಯಕ್ತಿಗೆ ಕೇಳಿದ ಅಜಿತ.

"ಮ-ಮ-ನೆಗೆ."

"ಮನೆ ಎಲ್ಲಿದೆ?"

"ಅ.. ದ .. ನೋಡಲ .. ಎದುರಿಗೆ.. ಮನೆ.. ಅದ.. ಕಣ್ಣ... ಕಾಣುವ.. ದಿ.. ಲ್ಲ.. ?"

ಆ ಮನುಷ್ಯ ಮಾತಾಡಿದ. ಅವನ ಮಾತಿನ ಮೇಲಿಂದ ಆತನು ಸೆರೆ ಕುಡಿದಿರುವನೆಂದು ತಿಳಿಯಲು ಬಹಳ ವೇಳೆ ಹಿಡಿಯುತ್ತಿರಲಿಲ್ಲ.

" ಕುಡಿದಿರುವೆಯೇನು ?"

"ಕುಡಿದಿರುವೆ. ಹೌದು ಕುಡಿದಿರುವೆ ಹೋಗೋ ಹೋಗು, ಕುಡಿದಿರುವೆ ಸೆರೆಯನ್ನು ಸಿಂದಿಯನ್ನು ಎಲ್ಲಾ ಕುಡಿದಿರುವೆ, ತುಂಬಾ ಕುಡಿದಿರುವೆ."

ಅವನ ಸ್ಥಿತಿಯನ್ನು ನೋಡಿ ಅಜಿತನಿಗೆ ಎಲ್ಲವೂ ಮರವಾಯಿತು. ಅಷ್ಟರಲ್ಲಿ ಆತ ಒಳ್ಳೇ ಜೋರಿನಿಂದ ನಗುತ್ತ ನೀರಿನ ಗುಂಡಿಯಲ್ಲಿ ಕುಳಿತ. ಅಜಿತ ಹತ್ತರ ಹೋಗಿ ಅವನನ್ನು ಎಬ್ಬಿಸಲು ಪ್ರಯತ್ನ ಪಟ್ಟ. ಆದರೆ ಅವನಿಗೆ ಆ ಹೊಲಸು ನೀರಿನಲ್ಲಿಯ ಹೊರಳಾಟವೇ ಸ್ವರ್ಗಸುಖವೆನಿಸುತಿದ್ದಿತು.

"ಇಂದ ಅವನ ತೀರಿಸೇ ಬಿಡುವೆ; ಹಲಕಟ! ಸರೀ ಎಲ್ಲಿಂದ ಬಂದಿರುವೀ ನನಗ ಅಡ್ಡ ಬರುವಿ? ನೀ ಅಂದರ ಏನ? ನಿನ್ನ ಕಿಮ್ಮತ್ತ ಅಂದರ ಏನ?"

ಅತ್ಯಂತ ಅಮಲೇರಿದ ಆ ಕುಡುಕನಿಗೆ ಅಲ್ಲಿಂದ ಏಳುವುದೇ ಬೇಕಿರಲಿಲ್ಲ. ಸಮೀಪದ ಮನೆಗಳ ಬಾಗಿಲುಗಳೆಲ್ಲ ಹಾಕಿದ್ದುವು. ಅವುಗಳಲ್ಲಿ ಒಂದು ಮುರುಕು ಮನೆಯ ಹರಕು ಬಾಗಿಲು ತೆರೆಯಿತು.

" ಕುಡಿದ ಬಂದಿರುವಿ ಅಲ್ಲೇನು ?" ಯಾವದೋ ಹೆಂಗಸಿನ ಕರ್ಕಶ ಸ್ವರ ಕಿವಿಗೆ ಬಿತ್ತು.

" ಅಲ್ಲಾ ಬಿನ್ ಕೋ ಹೀ ನಹೀ ಹೋ!" ಎಂದು ಕುಡುಕ ಹಾಡತೊಡಗಿದ. ಆ ಹೆಂಗಸು ಹೊರಗೆ ಬಂದು ಅಜಿತನನ್ನು ಕಂಡಳು.

" ಮತ್ತೊಬ್ಬ ಜೋಡಿದಾರನ್ನ ತಂದಿರುವಿ ಹೌದ ?"

" ನಾನು ಅವನ ಜೋಡೀದಾರನಲ್ಲ !" ಅಜಿತ ಹೇಳಿದ.

" ಯಾರಿದ್ದರೇನು ? ಸ್ವಲ್ಪ ಅವನನ್ನ ಎತ್ತಿ ತರಲು ಹಿಡಿಯಿರಿ! ಪೀಡಾ ಸತ್ತ ಹೋದರೂ ನೆಟ್ಟಗ. ನಾ ತಣ್ಣಗ ಇದ್ದೇನು!" ಎಂದು ವಟಗುಡುತ್ತಿದ್ದಳವಳು.

ಮಳೆ ಸ್ವಲ್ಪ ಕಡಿಮೆಯಾಗಿದ್ದಿತು. ಆ ಸ್ತ್ರೀಯೂ ಅಜಿತನೂ ಕೂಡಿ ಎತ್ತಿ ಮನೆಯಲ್ಲಿ ತಂದರು, ಆ ಕುಡುಕನನ್ನು. ಮನೆಯೊಳಗಿನ ಮಂದ ಪ್ರಕಾಶದಲ್ಲಿ ಬಂದೊಡನೆಯೇ ಅವಳು ಅಜಿತನನ್ನು ಒಮ್ಮೆಲೇ ಗುರುತಿ

ಸಿದಳು. ಗಂಡನನ್ನು ಅಲ್ಲಿಯೇ ಬಿಟ್ಟು,—

"ದೇವಾ, ಎಂಥಾ ವೇಳೆಯೊಳಗ ನನ್ನ ಮನೆಗೆ ಬಂದಿರಿ!"

ಎಂದು ಕನಿಕರದಿಂದ ನುಡಿದಳು. ಅವಳ ನರ ನರಗಳಲ್ಲೂ ಆದರ ತುಂಬಿ ತುಳುಕುತ್ತಿದ್ದಿತು. ಅಜಿತನಿಗೂ ಈಗ ಗುರುತು ಸಿಕ್ಕಿತು. ಕೂಡಲೇ ಅವನೂ ಚಿರಪರಿಚಿತನಂತೆ:

"ಜಯತುನಬಿ ಎಲ್ಲಿ?" ಎಂದು ಕೇಳಿದ.

ಗುಲಶನ್‌ಬಿಯು, ಒಂದು ಮೂಲೆಯಲ್ಲಿ ಹರಕು ಚಿಂದೆ ಸುತ್ತಿಕೊಂಡು ಬಿದ್ದ ಒಂದು ಚಿಕ್ಕ ಮನುಷ್ಯಾಕಾರದ ಕಡೆಗೆ ಬೊಟ್ಟು ಮಾಡಿ ತೋರಿಸಿದಳು. ಮನೆಯು ಎಲ್ಲ ಕಡೆಗೂ ಸೋರುತಲಿದ್ದಿತು. ಚಾಪೆಯ ಎರಡು ಮೂರು ತುಂಡುಗಳನ್ನು ಹಾಸಿ, ಪತಿಯ ಮೈಮೇಲಿನ ತೊಯ್ದ ಅರಿವೆ ತೆಗೆದು ಅದರ ಮೇಲೆ ಉರುಳಿಸಿದಳು. ಮತ್ತು ಒಂದು ಹರಕು ದೋತರ ತಂದು ಹೊಚ್ಚಿದಳು. ಅಮಲಿನ ಗುಂಗಿನಲ್ಲಿ ಬಿದ್ದನಾತ. ಅಜಿತ ಅವನು ಅವಳ ಗಂಡನೆಂದು ಅರಿತಿದ್ದನಾಗಲೇ.

"ಯಾವ ಕೆಲಸದ ಮೇಲೆ ಇರುವ ನಿನ್ನ ಗಂಡ?"

"ಸಧ್ಯಕ್ಕೆ ಕೆಲಸವೇನೂ ಇಲ್ಲ. ಮಿಲ್ಲಿನಲ್ಲಿಂದ ಹೊರಗ ಹಾಕಿದ್ದಾರೆ."

"ಯಾವ ಕೆಲಸವಿತ್ತು?"

"ಮತ್ತೇನಿರುವುದು, ಗಿರಣಿಯ ಕೂಲಿ?"

"ಕೆಲಸವಿಲ್ಲವಾದರೂ ಸೆರೆಗೆ ರೊಕ್ಕ ಎಲ್ಲಿಂದ ತರುವ?"

"ಎಲ್ಲಿಂದಲಾದರೂ ತಂದು ಕುಡಿಯಲೇಬೇಕಲ್ಲ? ಮನೆಯಲ್ಲಿ ತಿನ್ನಲು ಕೂಳಿಲ್ಲ, ಸುತ್ತಿಕೊಳ್ಳಲು ಚಿಂದೆಯಿಲ್ಲ. ಮೇಲೆ ಇಂಥ ನರಕದಲ್ಲಿರುವುದು! ಸೆರೆ ಕುಡಿದು ಸುದ್ದಿ ಹಾರಿ ಬೀಳುವದಾದರೂ ಸುಖಕರವಲ್ಲವೆ?" ಗುಲಶನ್‌ಬಿಯು ತನ್ನ ಗಂಡನ ನಡತೆಯ ಸಮರ್ಥನೆಯನ್ನೇ ಮಾಡಿದಳು. ಒಬ್ಬಸೇ ಇದ್ದಾಗ ಅವನಿಗೆ ಅವಳು ಈ ನಡತೆಗಾಗಿ ಬಯ್ಯುತ್ತಿದ್ದಳೇನೋ.

"ನೀವು ದೊಡ್ಡ ಮನೆತನದವರಿರಬೇಕಲ್ಲ?" ಸ್ವಲ್ಪ ತಡೆದು ಅವಳು ಅಜಿತನಿಗೆ ಕೇಳಿದಳು.

"ಎಲ್ಲಿ ದೊಡ್ಡ ಮನೆತನ? ಬಡತನ ನನಗೂ ಗೊತ್ತು. ಅಂದರೂ ಇಂಥ ಬಡತನ ನಾನೆಂದೂ ನೋಡಿರಲಿಲ್ಲ."

"ನೋಡಿರಲಿಲ್ಲ. ಇಂದು ಇಂಥ ಅವೇಳೆಯಲ್ಲಿ ಇಲ್ಲಿ ಹೇಗೆ ಬಂದಿರಿ? ಮೊನ್ನೆ ನಾ ಮತ್ತೊಮ್ಮೆ ದವಾಖಾನೆಗೆ ಬಂದಿದ್ದೆ ನೀವಿರಲಿಲ್ಲ."

"ಏಕೆ?"

"ನಿಮ್ಮನ್ನು ಒಮ್ಮೆ ಮನೆಗೆ ಕರೆತರಬೇಕೆಂದು."

"ಏತಕ್ಕೆ?"

"ಮಾಡಿದ ಉಪಕಾರ ಕಳೆಯಲಿಕ್ಕಾದರೂ ಮನೆಗೆ ಕರೆದು ತಂದಾದರೂ ಸನ್ಮಾನಿಸಬಾರದೇ?"

"ಏತರ ಉಪಕಾರ ಬಿಡು!"

"ಈಗ ಇಬ್ಬರೂ ಹೇಗೆ ಬಂದಿರಿ? ಈ ಹೊತ್ತು ಒಬ್ಬ ಮುಸಲ್ಮಾನ ಶ್ರೀಮಂತನನ್ನು ಹೊಡೆದು ಬರ್ತೇನಂತ ಹೋಗಿದ್ದ ನಮ್ಮವ ಮನೆಯಿಂದ."

"ಅದೇಕೆ?"

"ಸಾಯುವವರು ನಾವು! ಮತ್ತು ಚೈನಿ ಮಾಡುವವರು ಅವರು! ಯಾವನೋ ಒಬ್ಬ ಪಠಾಣ ಹಿಂದೂ ಹೆಂಗಸೊಬ್ಬಳನ್ನು ಎತ್ತಿ ಒಯ್ಯುತ್ತಿದ್ದನಂತೆ. ಅವನನ್ನು ಹಿಂದೂ ಪೈಲವಾನನೊಬ್ಬ ಕೊಂದನಂತೆ ಅದಕ್ಕೇ ಊರೆಲ್ಲ ಆ ಹಿಂದು ಮುಸಲ್ಮಾನ ಬಡಿದಾಟ. ನಾಲ್ಕು ದಿನ ಅದರೊಳಗ ಬಡವರು ಎಷ್ಟು ಜನ ಸತ್ತರು! ಸಾವುಕಾರ ಒಬ್ಬನಾದರೂ ಸತ್ತನೆ? ಸಾವುಕಾರ ಕೂಸುಗಳು ಸತ್ತುವೇ?" ಒಳ್ಳೇ ಕ್ರೋಧದಿಂದ ಕೇಳಿದಳು ಗುಲಶನ್‌ಬಿಯು.

ಅವಳ ಮಾತು ಸರಿಯಾಗಿದ್ದಿತು. ಪ್ರತಿಯೊಂದು ಗೊಂದಲದಲ್ಲಿ ಸಾಯುವವರು ಬಡವರೆ! ಒಬ್ಬ ಸಿರಿವಂತನಾಗಲಿ ಗಿರಣಿಯ ಒಡೆಯನಾಗಲಿ ಇಲ್ಲವೆ ದೊಡ್ಡ ದೊಡ್ಡ ಅಧಿಕಾರಿಗಳಾಗಲಿ ಸತ್ತುದಾದರೆ ಈ ಹಿಂದೂ ಮುಸಲ್ಮಾನ ಹೊಡೆದಾಟಗಳ ಸ್ವರೂಪವೇ ಬೇರೆಯಾಗಿರುತ್ತಿದ್ದಿತು. ಇಂಥ ಗೊಂದಲದಲ್ಲಿ ಒಬ್ಬನೂ ಅಧಿಕಾರಿ ಸಿಕ್ಕಿಲ್ಲ. ಶ್ರೀಮಂತ

ಷತ್ತಿಲ್ಲ ಅಂತಲೇ ಈ ಗೊಂದಲದ ಹಿಂದಿರುವ ಉದ್ದೇಶ ಬೆಳಕಿಗೆ ಬರುವದು.

" ಸಹಜ ಬಂದಿರುವಿರಲ್ಲ ? " ಅವಳು ಕೇಳಿದಳು.

" ಹೌದು, ಮಳೆ ಬಂತು. ಎಲ್ಲಿಯಾದರೂ ನಿಲ್ಲೋಣ ಅಂತ ಬಂದೆ, ನಿಮ್ಮ ಮನೆಗೇ ನೀ ಕರೆದು ತಂದೆ." ನಸುನಕ್ಕ ಅಜಿತ.

" ಕರೆಯಲಿಕ್ಕೆ ಬಂದಿದ್ದರೆ ನನ್ನ ಗುಡಿಸಲಿಗೆ ಬರುತ್ತಿದ್ದಿರಾ ? "

" ಓಹೋ ! ಅವಶ್ಯ ಬರುತ್ತಿದ್ದೆ. ಅದಕ್ಕೇನು ? "

" ನಿಮ್ಮಂತಹರು ಇಲ್ಲಿ ಬಂದಾರೆಯೇ ? "

" ಬರಬಾರದೇನು ? "

ಅವಳು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಳು. ಆಮೇಲೆ " ಹೇಗಾದರೂ ಬಂದಿರುವಿರಿ ! ಚಹ ಮಾಡಿ ಕೊಡತೇನಿ ಕುಡಿಯಿರಿ ! ನಿಮಗಂತ ಸ್ವಲ್ಪ ಸಕ್ಕರಿ ತಂದ ಇಟ್ಟೇನಿ ಅರಿವೆಯೊಳಗ ಕಟ್ಟಿ. ಬಹಳ ದಿನ ಆಯ್ತು, ಮಳೆಯೊಳಗ ತೊಯ್ಯತೇನೋ ನೋಡತೇನಿ." ಮತ್ತೇನೋ ನೆನಪಾದಂತಾಗಿ ನಿರಾಶೆಯಿಂದ " ಇಲ್ಲದ ಹೊತ್ತಿನೊಳಗ ಬಂದಿರುವಿರಿ. ಹಾಲಿಲ್ಲ ಅಯ್ಯೋ ! " ಎಂದು ಮರುಗಿದಳು. ಹಾಲಿಲ್ಲವಾದರೂ ಬರೇ ಡಿಕಾಕ್ಶನ್ ಆದರೂ ಕುಡಿದು ಸಂತಸ ಪಡುತ್ತಿದ್ದೆ. ಆದರೆ ನಾನು ಚಹ ಕುಡಿಯುವದೇ ಇಲ್ಲ ! "

ಒಮ್ಮೆಲೇ ಅವಳ ಮುಖ ಕಪ್ಪಿಟ್ಟಿತು. ಅದರ ಹೊರತಾಗಿ ಅಜಿತನನ್ನು ಸತ್ಕರಿಸಲಿಕ್ಕೆ ಅವಳ ಹತ್ತಿರ ಮತ್ತೇನೂ ಇರಲಿಲ್ಲವೇನೋ! ಬಹಳ ಹೊತ್ತಿನ ನಂತರ ಅವಳೆಂದಳು:

" ಸಂಜೆಗೆ ಊಟ ಇಲ್ಲೇನೋ ? "

" ಇಲ್ಲ; ಆದರೂ ನನಗೆ ನಡೆಯುವುದು, "

" ಅವನ ಸಲುವಾಗಿ ಒಂದು ರೊಟ್ಟಿ ಸುಟ್ಟಿದ್ದೆ. ಇನ್ನು ಅವನೇನೂ ಬೆಳತನಕ ಏಳುವ ಲಕ್ಷಣವಿಲ್ಲ. ನಿಮಗೆ ನಡೆಯುವಂತಿದ್ದರೆ ಕೊಡುವೆ " ಅನುಮಾನಿಸುತ್ತ ಕೇಳಿದಳು.

" ಕೆಲಸವಿಲ್ಲ ಅನ್ನುವಿ, ರೊಟ್ಟಿಗೆ ಹಿಟ್ಟೆಲ್ಲಿಂದ ಬಂತು ? " ಅಜಿತ ಕೇಳಿದ.

"ನಾ ಹೋಗುವೆನಲ್ಲ ಕೆಲಸಕ್ಕ ಒಬ್ಬರ ಮನೆಗೆ" ಇಷ್ಟು ಹೇಳ ಬೇಕಾದರೆ ಅವಳಿಗೇನೋ ಕಸಿವಿಸಿಯಾದಂತಾಯಿತು. ಮುಖ ವಿವರ್ಣ ವಾಯಿತು. ಅದನ್ನು ಮರೆಮಾಡಲೆಂದೇ ಹೊರಳಿ ಒಣ ರೊಟ್ಟಿ ಯೊಂದನ್ನು ಒಡಕು ಜರ್ಮನ ತಾಟಿನಲ್ಲಿ ಹಾಕಿ ತಂದಳು. ಅದರ ಮೇಲೆ ಸ್ವಲ್ಪ ಕಾರವಿತ್ತು. ಮಳೆಯ ನೀರಿನಿಂದ ತೊಯ್ದು ಅದೂ ಮುದ್ದೆ ಯಾಗಿದ್ದಿತು. ಇಂಥ ಆಹಾರ ಅಜಿತನೆಂದೂ ಕಂಡಿರಲಿಲ್ಲ. ಬಡವರ ಸಲುವಾಗಿ ತುಂಬ ಆದರವಿದ್ದಿತವನಿಗೆ. ಅಭಿಮಾನವೂ ಇತ್ತು. ಸ್ವತಃ ಗೌಡರಲ್ಲಿ ಹುಟ್ಟಿ ಬೆಳೆದವನಾದರೂ ಬಡವನೆಂದು ಅನ್ನಿಸಿಕೊಳ್ಳಲು ಅವ ನಿಗೆ ಒಂದು ತರದ ಭೂಷಣವೆನಿಸುತಿದ್ದಿತು. ಮತ್ತು ಜಗತ್ತಿನ ಬಡವರ ಸಲುವಾಗಿಯೂ ಇಂಥ ಹೊಸದೊಂದು ದೃಷ್ಟಿಯನ್ನಿತ್ತ ಸುಧೀರನ ಸಲು ವಾಗಿಯೂ ತುಂಬ ಆದರವಿದ್ದಿತವನಿಗೆ. ಈಗ ಬಡತನದ ನಿಜಸ್ವರೂಪ ವನ್ನು — ಭಾರತದ ನಗ್ನಸ್ವರೂಪ — ಕಂಡು ಅವನ ಮೈಮೇಲೆ ರೋಮಾಂಚನಗಳೆದ್ದುವು.

ಆ ರೊಟ್ಟಿಗೆ ತುಪ್ಪದ ಮೈಲಿಗೆಯಾಗಿರಲಿಲ್ಲ. ಸಿಹಿ ಎಂಬುದಂತೂ ಏನೂ ಇರಲಿಲ್ಲ. ಅಂಥ ಆಹಾರವನ್ನು ಇಡಲಿಕ್ಕೂ ಒಂದು ತಗಡಿನ ಒಡಕು ಪಾತ್ರೆ. ಅದನ್ನು ಎಂದಿನಿಂದ ಉಪಯೋಗಿಸುತ್ತಿದ್ದರೋ ಏನೋ. ಹಾಸ್ಟೇಲಿನೊಳಗಿನ ಬಡವರಲ್ಲಿ ತೀರ ಬಡವನೆನ್ನಿಸಿಕೊಳ್ಳುವ ವಿದ್ಯಾರ್ಥಿಗೂ ಕೂಡ ಈ ಬಡತನದ ನೂರನೆಯ ಪಾಲೂ ಕಲ್ಪನೆಯಿರಲು ಶಕ್ಯವಿಲ್ಲ.

"ನಿಮಗೆ ಸೇರಲಿಕ್ಕಿಲ್ಲ ಇದು!" ಅವಳೆಂದಳು.

"ಅದೇಕೆ? ತಾ. ಸ್ವಲ್ಪ ತಿನ್ನುವೆ" ಎಂದು ಅಜಿತ ಒಂದು ಚೂರು ಮುರಿದು ತಕ್ಕೊಂಡು, ಕಾರ ಹಚ್ಚಿ ಕಚ್ಚಿದ. ಎಷ್ಟು ಹೊತ್ತಾದರೂ ಅವನ ಗಂಟಲಲ್ಲಿ ಇಳಿಯದಾಯಿತು.

ಆ ಮನೆ, ಅಂಥ ಕತ್ತಲೆ, ಈ ಮಳೆ, ಅಲ್ಲದೆ ಹೊಸಸ್ಥಳ, ಅದರಲ್ಲೂ ನಿರುದ್ಯೋಗಿ ಕೂಲಿಕಾರನ ಸೆರೆಕುಡಿದಾವಸ್ಥೆ, ಅವನ ತರುಣ ಹೆಂಡತಿ, ಮೇಲಾಗಿ ರೂಪವತಿ ಈ ಎಲ್ಲ ವಿಷಯುಗಳಿಂದ ಅಜಿತನ ಜೀವ ಗಾಬರಿ ಯಾಯಿತು. ಅದರಲ್ಲಿ ಈ ಭಯಂಕರ ಬಡತನದ ವಿಶ್ವರೂಪದರ್ಶನದಿಂದ

ಉಸುರು ಕಟ್ಟಿದಂತಾಗಿದ್ದಿತು.

"ಇರಲಿ ಬಿಡರಿ, ತಿನ್ನಬೇಡಿರಿ ಅದನ್ನ! ನಿಮಗೆ ಸೇರುವದಿಲ್ಲೆಂಬುದು ನನಗೆ ಗೊತ್ತಿತ್ತು. ಇಕ್ಕೊಳ್ಳಿ ನೀರು!" ಎಂದು ಒಂದು ಮಡಿಕೆಯಲ್ಲಿ ನೀರು ತಂದು ಕೊಟ್ಟಳು.

ಆರೋಗ್ಯಶಾಸ್ತ್ರ, ಸಾರ್ವಜನಿಕ ಸ್ವಚ್ಛತೆ, ವೈಯಕ್ತಿಕ ಆರೋಗ್ಯ ವಾಸ್ತುರಚನೆ ಇವುಗಳ ಬಗ್ಗೆ ಅಜಿತ ಬಹಳಷ್ಟು ಓದಿದ್ದ. ಹೊಸ ಜಗತ್ತಿನಲ್ಲಿ ಕಟ್ಟುವ ಮನೆಗಳ ರಚನೆ ಹಾಗೂ ನೀರಿನ ವ್ಯವಸ್ಥೆಗಳ ಯೋಜನೆಯನ್ನು ಈಗಾಗಲೇ ಕಲ್ಪನೆಯಲ್ಲಿ ನಿಶ್ಚಯಿಸಿದ್ದನಾತ. ಆದರೆ ಈ ಮನೆಯಲ್ಲಿ ಕಳೆದ ಒಂದು ತಾಸಿನಲ್ಲಿಯೇ ಸಾರ್ವಜನಿಕ ಆರೋಗ್ಯದ ಮಹತ್ವ ಎಂದೂ ತಿಳಿಯಲು ಶಕ್ಯವಿಲ್ಲದಷ್ಟು ತೀವ್ರತೆಯಿಂದ ಅವನಿಗೆ ಗೋಚರಿಸಿತು.

ಕ್ರಿಮಿ! ಮಾನವ ಸಮಾಜದೊಳಗಿನ ಬಹುಸಂಖ್ಯಾಕರನ್ನು ಕ್ರಿಮಿಗಳನ್ನಾಗಿ ಮಾಡುವ ಮತ್ತು ಅವುಗಳ ರಕ್ತ ಹೀರುವ ಕ್ರೂರ ಮಾನವ ಜಿಗಣೆಗಳು ಎಲ್ಲೆಡೆಗೂ ಹಬ್ಬಿವೆ! ಈ ಸುಧಾರಕರೆನ್ನಿಸುವ ಸಿರಿವಂತರಿಗೆ ಇವರ ಹೊರತು ಗತಿಯಿಲ್ಲ. ಅವರ ಸೇವೆಗೆ ಇವರೇ ಬೇಕು. ಇಷ್ಟೇಕೆ? ಅವರ ಹೊಟ್ಟೆಗೆ ದೊರೆಯುವ ಅನ್ನವಾದರೂ ಇಂಥ ಬಡಜನರ ಸಾಹಸ ಜೀವನದಿಂದಲೇ ಉತ್ಪನ್ನವಾಗುತ್ತದೆ! ಆದರೆ ಇವರ ಕಡೆಗೆ ಕಣ್ಣೆತ್ತಿ ನೋಡಲೂ ಕೂಡ ಅವರು ಸಿದ್ಧರಿಲ್ಲ. ಹಾಗೆಯೇ ಅಜಿತಗೊಂದು ವಿಚಾರ ಬಂತು.

ಮಾನವ ಹಾಗೂ ಪ್ರಕೃತಿ ಇವೆರಡರಲ್ಲಿಯೂ ಯುದ್ಧವಾದರೆ?

ಪ್ರಕೃತಿಯ ಪರಾಕ್ರಮ! ನಿಸರ್ಗದ ಶೋಷಣ! ಈ ಶೋಷಣೆಯ ಪರಿಣಾಮವೆಂದರೇನೇ ಸಂಸ್ಕೃತಿ!

ಈ ಸಂಸ್ಕೃತಿಗೆ ಕಲಂಕ ಹಚ್ಚುವ ಒಂದೇ ಒಂದಾದ ಕೃತಿಯೆಂದರೆ ಮಾನವರು ಒಬ್ಬರನ್ನೊಬ್ಬರು ಶೋಷಣ ಮಾಡುವುದು!

ಆದರೆ ಮಾನವನೂ ಕೂಡ ಪ್ರಕೃತಿಯ ಒಂದಂಶವಲ್ಲವೇ? ನಿಸರ್ಗದ ಶೋಷಣೆಯನ್ನು ಮಾನವ ಮಾಡುವ; ಮತ್ತು ಮಾನವ ವರ್ಗವನ್ನೇ ಇನ್ನೊಂದು ಮಾನವ ವರ್ಗ ಸುಲಿಯುವದು, ಇದರಲ್ಲಿ ಅಂತರವೇನು?

ಮಹಾತ್ಮರ ಅಹಿಂಸೆ! ಸಾಮ್ಯವಾದಿಗಳ ಹಿಂಸೆ! ಪರಿವರ್ತನ ಮತ್ತು ಪರಾಜಯ! ಪರಿವರ್ತನವಾಗದಿದ್ದರೆ? ಹಳೆಯ ಸಂಸ್ಕೃತಿ ರೂಢಿಗಳಿಗೆ ಆಶ್ರಯಿಸಿರುವ ವರ್ಗದ ನಾಶವಾಗಲೇ ಬೇಕು. ವರ್ಣಭೇದ, ಹಾಗೂ ವರ್ಣಭೇದಗಳನ್ನು ಜಾಗ್ರತದಲ್ಲಿಡುವ ರಾಜ್ಯ ಸಾಮ್ರಾಜ್ಯಗಳನ್ನು ನಷ್ಟಗೊಳಿಸಲೇ ಬೇಕು !

" ರಾತ್ರಿ ಇಲ್ಲಿಯೇ ಇರುವಿರಲ್ಲ ? " ಗುಲಶನ್‌ಬಿ ಕೇಳಿದಳು.

" ಅದೇ ವಿಚಾರದಲ್ಲಿರುವೆ ! "

" ಇಂದೊಂದು ದಿನ ಇಲ್ಲೇ ಕಳೆಯಿರಲ್ಲ! ಮಳೆಯೂ ಇದೆ" ಮನಸ್ಸಿಲ್ಲದೆ ನುಡಿದಳವಳು.

"ಆದರಿಂದ ನಿಮಗೆ ತೊಂದರೆ." ಅವಳ ಮನದ ಇಂಗಿತವನ್ನರಿತೇ ಅಜಿತ ಕೇಳಹೋದ.

"ತೊಂದರೆಯಂತೂ ನಿಮಗೇ ಆಗುವುದು, ನಮಗೇನು? ನಾವಂತೂ ಇಲ್ಲಿಯೇ ಹುಟ್ಟಿ ಬೆಳೆದಿದ್ದೇವೆ. ಇದರಲ್ಲಿಯೇ ಸಾಯುವವರು ! ಇದೋ ಅರಿವೆ ತಗೊಳ್ಳಿರಿ, ನಿಮ್ಮ ಅರಿವೆ ತೆಗೆದಿಟ್ಟು ಇದನ್ನು ಸುತ್ತಿಕೊಳ್ಳಿರಿ ! " ಎಂದು ಒಂದು ಹರಕು ಅರಿವೆಯೊಂದನ್ನು ಕೊಟ್ಟಳು. ಅಜಿತ ಅಲ್ಲಿ ಇರದಿದ್ದರೆ ಆ ಕೂಲಿಕಾರ ಸ್ತ್ರೀಯು ತನ್ನ ಮೈಮೇಲೆ ಆ ತೊಯ್ದ ಅರಿವೆಗಳನ್ನೂ ಇಡುತ್ತಿರಲಿಲ್ಲವೆನೋ! ಆ ಹದಿನಾರು ತೂತುಗಳಿರುವ ಒದ್ದೆ ಅರಿವೆಯಲ್ಲಿಯೇ ಅವಳು ಮಲಗಬೇಕಾಯಿತು. ಅದರಲ್ಲಿಯೂ ಅವಳ ಮೈಯು ಅಲ್ಲಲ್ಲಿ ತೆರೆದಿದ್ದಿತು.

ಅವಳು ಚಾಪೆಯ ತುಂಡೊಂದನ್ನು ತಂದು ಅಜಿತನಿಗೆ ಹಾಸಿಕೊಟ್ಟಳು. ಹೊರಗೆ ಮಳೆ ಹಾಗೇ ಇದ್ದಿತು. ಮನೆಯೆಲ್ಲ ಸೋರುತ್ತಿದ್ದಿತು. ಸ್ವಲ್ಪ ಗಟ್ಟಿಯಾದ ಒಂದು ಮೂಲೆಯಲ್ಲಿ ಅಜಿತನಿಗೆ ಸ್ಥಳ ತೋರಿಸಿ, ಅವಳೂ ಒಂದು ಮಗ್ಗಲಿಗೆ ಸ್ವಲ್ಪ ಅಡ್ಡಾದಳು.

ಅಜಿತ ಅರಿವೆ ಕಳೆಯುವ ಗೋಜಿಗೆ ಹೋಗಲಿಲ್ಲ. ಹಾಗೇ ಸ್ವಲ್ಪ ಅಡ್ಡಾಗಲು ಇಚ್ಛಿಸಿದ. ನೆಲದ ತೇವು ಚಾಪೆಯ ಮೇಲೆಯೂ ತನ್ನ ಸಾಮ್ರಾಜ್ಯಲಾಲಸೆಯನ್ನು ಬೀರಿದ್ದಿತು. ಮೈಮೇಲಿನ ಅರಿವೆಗಳಂತೂ ಒದೆಯಾಗಿಯೇ ಇದ್ದುವು. ಮೆಲ್ಲಗೆ ಗೋಡೆಗೆ ಆನಿಸಬೇಕೆಂದ. ಅಲ್ಲಿ

ಗಣಿಗಳ ರಕ್ತದ ಕಲೆಗಳು ಕಾಣಿಸಿದುವು. ಸಾವಕಾಶವಾಗಿ ನೆಲಕ್ಕೆ ಉರುಳಿದನಾತ. ಇಂಥ ಸ್ಥಿತಿಯಲ್ಲಿರುವ ಜನರು ಕೊಲೆ ಸುಲಿಗೆ ಮದ್ಯ ಪಾನಗಳನ್ನು ಮಾಡದೆ ಇನ್ನೇನು ಮಾಡಬೇಕು?

"ಜೇಬಿನಲ್ಲಿ ದುಡ್ಡು ಇವೆಯೋ?" ಗುಲಶನ್‌ಜ ಕೇಳಿದಳು.

"ಹೌದು."

"ಇಲ್ಲಿ ಕೊಡಿರಿ; ಜಪ್ಪಿಸಿಡುವೆ."

"ಇರಲಿ; ನನ್ನ ಹತ್ತಿರ!"

"ಇಂಥ ಸ್ಥಳದಲ್ಲಿ ದುಡ್ಡು ಸಂಗಡ ತಂದಿರುವಿರಿ! ಯಾರಾದರೂ ಕೊಂದರೆ?"

"ಇಷ್ಟು ದುಡ್ಡಿಗಾಗಿ!"

"ಇಲ್ಲಿ ಕೇವಲ ಒಂದಾಣೆಗಾಗಿಯೂ ಹೊಡೆದಾಡುವರು!"

ಅಜಿತ ಒಮ್ಮೆಲೇ ಎದ್ದು ಕುಳಿತ.

"ನಿನ್ನ ಗಂಡ ನನ್ನನ್ನು ಕೊಂದು ಹಾಕಬಹುದು?"

"ಹೆದರಬೇಡಿರಿ, ನಾ ಇದ್ದೇನೆ. ನಡೆಯುವ ಸಂಗತಿ ಹೇಳಿದೆ."

ಅಜಿತ ಜೇಬಿನೊಳಗಿನ ನೋಟುಗಳ ಪುಡಿಕೆ ತೆಗೆದು ಅವಳ ಕಡೆ ಚಾಚಿದ. ಅವಳೂ ಮಲಗಿದಲ್ಲಿಂದಲೇ ಕೈನೀಡಿದಳು. ಸಮೀಪ ದ್ದುದರಿಂದ ಕೈಗೆ ಕೈ ಹತ್ತುವಂತಿತ್ತು. ಆಶ್ಚರ್ಯದಿಂದ ಅವುಗಳನ್ನು ನೋಡಿ ತಕ್ಕೊಂಡಳವಳು.

"ಬೆಳಗಿನಲ್ಲಿ ಹೋಗುವಾಗ ಒಯ್ಯಿರಿ!" ಎಂದಳು.

ಅಜಿತ ಸುಮ್ಮನಾದ. ಅದೇ ಕಾಲಕ್ಕೆ ಮಳೆಯ ದೊಡ್ಡ ಹನಿಯೊಂದು ೂರಿನೊಳಗಿಂದ ಅವನ ಮೈಮೇಲೆ ಬಿತ್ತು. ಅದರಿಂದ ನಡುಗಿದ. ಅವಳ ಂಡನ ಹೆದರಿಕೆಯೂ ಅದಕ್ಕೆ ಕಾರಣವಾಗಿರಬೇಕು. ಆದರೂ ಅವಳ ದಾರಬುದ್ಧಿಗೆ ಮನದಲ್ಲಿಯೇ ಅವಳನ್ನು ಅಭಿನಂದಿಸದೆ ಇರಲಿಲ್ಲ ಜಿತ.

"ನಿನ್ನ ಗಂಡನಿಗೆ ಎಚ್ಚರಿಕೆಯಾದರೆ?" ಮತ್ತೂ ಕೇಳಿದ ಅಜಿತ.

"ಅವನಿಗೆ ಆಗುವದಿಲ್ಲ."

"ಅವನ ಅಮಲು ಇಳಿದರೆ?"

“ ಇಳಿದರೆ ಏನಾಗುವುದು ? ”

“ ನಾನು ಹಿಂದು ! ಅದರಲ್ಲಿಯೂ ನಿಮ್ಮ ಮನೆಯಲ್ಲಿ.”

“ ಅದಕ್ಕೇನು ? ಹಿಂದು ಇದ್ದರೇನಾಯಿತು ? ಇಲ್ಲಿ ಸುತ್ತಲೆಲ್ಲ ಹಿಂದುಗಳೂ ಇದ್ದಾರೆ. ಮುಸಲ್ಮಾನರೂ ಇದ್ದಾರೆ. ಇಬ್ಬರೂ ಕೂಡಿಯೇ ಇದ್ದೇವೆ.” ಗುಲಶನ್‌ಬಿ ಕೊಂಚ ಕಾಲ ತಡೆದು ನುಡಿದಳು.

“ ಹಿಂದುಗಳಷ್ಟು ಮುಸಲ್ಮಾನರ ಹೃದಯವೇನು ಕಠೋರವಿರಲಿಕ್ಕಿಲ್ಲ ! ”

“ ಅವಳ ಕಣ್ಣುಗಳಲ್ಲಿ ಒಂದು ತೀಕ್ಷ್ಣ ವೇದನೆಯು ಆಡುತಲಿತ್ತು.

“ ಹಿಂದುಗಳು ಕಟುಮನಸ್ಸಿನವರು ! ”

“ ಕಟುಮನಸ್ಸಿನವರಲ್ಲ, ಕಟುಕರು. ”

ಗುಲಶನ್‌ಬಿಗೆ ದುಃಖ ಒತ್ತರಿಸಿ ಬರಲು ಹಲ್ಲುಗಳಿಂದ ತುಟಿ ಒತ್ತಿ ಹಿಡಿದಳು. ಕಣ್ಣುಗಳನ್ನು ಒಂದು ಕ್ಷಣ ಮುಚ್ಚಿದಳು. ತೆರೆದಾಗ ಎರಡು ಹನಿಗಳು ಅವಳ ಗಲ್ಲದ ಮೇಲೆ ಉರುಳಿದುವು. ಜಿಗುಟಾದ ಬಾಯಿಯನ್ನು ಸರಿಪಡಿಸಿಕೊಂಡು ನುಡಿದಳು.

“ ಹಿಂದುಗಳಿಗೆ ಹೃದಯವಿರುತ್ತಿದ್ದರೆ ಒಂದು ಕ್ಷುಲ್ಲಕ ತಪ್ಪಿಗಾಗಿ ಉಚ್ಚಕುಲದ ಬಾಲವಿಧವೆಯಾದ ನನ್ನನ್ನು ಹೀಗೆ ಮುಸಲ್ಮಾನರಲ್ಲಿ ನೂಕುತ್ತಿದ್ದರೆ ? ”

“ ಗುಲಶನ್ ! ನೀನು ಹಿಂದು ! ”

ಅಜಿತನ ಈ ಉದ್ಗಾರದಲ್ಲಿ ಜಗತ್ತಿನೊಳಗಿರುವಷ್ಟು ಬೆರಗು ಕರುಣೆಗಳೆಲ್ಲ ಕೂಡಿದಂತಿತ್ತು.

ಗುಲಶನ್‌ಬಿಯ ಕಣ್ಣೀರು ಧಾರೆಗಳೇ ಅವನ ಮಾತಿಗೆ ಉತ್ತರಗಳಾಗಿದ್ದುವು.

ಧರ್ಮ! ಧರ್ಮದ ಹೆಸರಿನಲ್ಲಿ ಎಂಥ ಅನ್ಯಾಯಗಳಿವು! ಒಬ್ಬ ವಿಧವೆ, ಪತಿತೆ—ಈ ಕ್ರೂರ—ಡಾಂಭಿಕ ಆಚಾರ್ಯರ ಕಠೋರ ಕಟ್ಟಳೆಗಳಿಗಾಗಿ ಹಿಂದುತ್ವವನ್ನೇ ಕಳೆದುಕೊಳ್ಳಬೇಕೆ ? ಅವಳ ಪತನಕ್ಕೂ ಯಾವನಾದರೊಬ್ಬ ಆಚಾರ್ಯನೇ ಕಾರಣವಾಗಿರಲಿಕ್ಕಿಲ್ಲವೆಂದು ಯಾರು ಹೇಳ

ಬೇಕು? ಆತ ಮಾತ್ರ ಜನಿವಾರ ಜುಟ್ಟಗಳನ್ನು ಧರಿಸಿ ಧರ್ಮಾತ್ಮನೆಂದು ಸಮಾಜದಲ್ಲಿ ಮೆರೆಯಬೇಕು. ಈಕೆ ಇಂಥ ನರಕದಲ್ಲಿ ನರಳಬೇಕು. ಅಯ್ಯೋ ಎಂಥ ಅನ್ಯಾಯ? ಧರ್ಮ ಧಾರಕವೋ ಮಾರಕವೋ?

ಅಜಿತ ಸ್ವಲ್ಪ ಹೊತ್ತು ಸುಮ್ಮನೆ ಕುಳಿತ. ಕುಳಿತಲ್ಲಿಯೇ ಕಣ್ಣಿಗೆ ಜಂಪು ಬಂದಂತಾಯಿತು. ಅದೇನೋ ಅರನಿದ್ರೆ. ಕನಸು ನನಸುಗಳ ಸಮಯ. ಎದುರಿನಲ್ಲಿಯೇ ಟಗರು ಹುಂಜಗಳ ಕಾದಾಟದ ದೊಡ್ಡ ಮೈದಾನ. ಒಂದು ಬದಿಗೆ ಎತ್ತರವಾದ ಕಟ್ಟೆಯ ಮೇಲೆ ಇಟ್ಟ ಕುರ್ಚಿಗಳ ಮೇಲೆ ನಿರ್ಣಾಯಕ ಸಮಿತಿಯವರು ಕುಳಿತಿದ್ದಾರೆ. ಆಯಾ ಟಗರು ಹುಂಜಗಳ ಬದಿಗೆ ಅವುಗಳ ಒಡೆಯರು ನಿಂತಿದ್ದಾರೆ. ಇದೀಗ ಕಡತ ನಿಂತಿದೆಯೇನೋ. ಹಾಗೆಯೇ ಟಗರುಗಳ ಮೈಮೇಲೆ ಕೈಯಾಡಿಸಿ ಹುರುಪು ಕೊಡುತ್ತಿದ್ದಾರೆ. ಅದನ್ನು ಕಂಡು ಆ ಉಚ್ಚಾಸನದ ಮೇಲೆ ಕುಳಿತ ಹಿರಿಯರು ಹರುಷಗೊಳ್ಳುತ್ತಿದ್ದಾರೆ.

ಒಬ್ಬ ತನ್ನ ಟಗರು ತಕ್ಕೊಂಡು ಅದೇಕೋ ಹಿಂದೆ ಸರಿದ. ಕೂಡಲೆ ಅವರು ಅವನನ್ನು ಹತ್ತಿರ ಕರೆದು ಹುರುಪು ಕೊಟ್ಟರು.

“ಬರ್ರಿ! ರಾವಸಾಹೇಬರೇ, ನೀವು ಹಿಂದೆ ಸರಿಯುವಿರಿ? ಮುಂದಾಗಿರಿ! ಟಗರನ್ನು ಸರಪಳಿ ಬಿಚ್ಚಿ ಬಿಡಿರಿ! ವಹವ್ವ!”

ಇಗ ಮತ್ತೆ ಕಡತಕ್ಕೆ ಆರಂಭವಾಗುವದು. ಆಗ ಇನ್ನೊಂದು ಪಕ್ಷದವ ತನ್ನ ಟಗರು ತಕ್ಕೊಂಡು ಹಿಂದಿರುಗಿದ.

“ಇಲ್ಲಿ ಬನ್ನಿ ಖಾನಸಾಹೇಬರೇ, ನೀವು ಹಿಂದೆ ಸರಿದರೆ ನಿಮ್ಮ ಪೂರ್ವಜರಾದ ಗಿಝ್ನಿ ಮುಹಮ್ಮದ, ಅಲ್ಲಾ ಉದ್ದೀನ ಖಿಲಜಿ, ಔರಂಗಜೇಬ ಮೊದಲಾದವರನ್ನು ನಾಚಿಕೆಗೇಡು ಮಾಡಿದಂತಾಗುವದಲ್ಲ! ಹೊಡೆ ಇನ್ನೊಂದೆರಡು ಸಲ! ಶಹಾಬ್ಬಾಸ!

ಇದರಿಂದ ಎರಡೂ ಟಗರುಗಳ ಒಡೆಯರು ಟಗರುಗಳಿಗೆ ಸೆರೆ ಕುಡಿಸಿ ಒಂದರಮೇಲೊಂದನ್ನು ಬಿಟ್ಟರು! ಕಾಳಗ ರಭಸದಿಂದ ಆರಂಭವಾಯಿತು.

ಇಷ್ಟರಲ್ಲಿ ಅತ್ತ ಹುಂಜ ಹಿಂದಿರುಗಿತು. ಕಾಳಗ ಮುರಿಯಿತು. ಒಬ್ಬ ಹುಂಜನ್ನು ಬಗಲಲ್ಲಿ ಹಿಡಿದುಕೊಂಡು ಹೊರಳಿದ. ಆ ಮೇಲಿನ

ಆಸನದಿಂದಲೇ ಸನ್ನೆ ಮಾಡಿ ಅವನನ್ನು ಕರೆದು, ಹತ್ತಿರ ಕುರ್ಚಿಯ ಮೇಲೆ ಕೂಡಿಸಿಕೊಂಡು ಚಹದ ಒಂದು ಕಪ್ಪು ತರಿಸಿ ಇವನಿಗೂ ಕೊಟ್ಟು ತಾವೂ ಕುಡಿದು,—

"ಅದೇನು ನೋಡಿದಿರಾ? ಟಗರುಗಾಳಗ ಹೇಗೆ ನಡೆದಿದೆ!" ಎಂದು ತೋರಿಸಿ ಕೊಂಚ ಹೊತ್ತಿನ ಮೇಲೆ "ಖಾನ ಬಹಾದ್ದೂರರೇ ಇಷ್ಟಕ್ಕೆ ಸಾಕುಮಾಡಿದಿರಿ ನೀವು? ನಾವು ನಿಮಗೆ ನೆರವಿಗೆ ಇದ್ದೇವಲ್ಲ! ನಮ್ಮಲ್ಲಿ ಸಾಕಿದ ಒಳ್ಳೆಯ ಹುಂಜಗಳಿವೆ ಬೇಕಾದರೆ ಕೊಡುತ್ತೇವೆ. ಬ್ಯಾರಿಷ್ಟರ ಅಂಜೇಡಕರರಂಥವರು ಹಿಂದೆಯೇ ಬರುತ್ತಿದ್ದಾರೆ. ನೀವು ಮುಂದೆ ನಿಂತು ಆಡಿಸುವವರಾಗಿರಿ. ನಾವೆಲ್ಲ ನೋಡಿಕೊಳ್ಳುತ್ತೇವೆ." ಎಂದು ಕಿವಿ ತುಂಬಿದರು.

ಖಾನ ಸಾಹೇಬರು ಬಿಳಿ ಸಾಹೇಬರ ಜೊತೆಯಲ್ಲಿ ಕುರ್ಚಿಯ ಮೇಲೆ ಕುಳಿತು ಚಹ ಕುಡಿಯುವ ಬಹುಮಾನ ಸಿಕ್ಕುದಕ್ಕೆ ಉಲ್ಲಸಿತರಾಗಿ ಎದ್ದರೇ. ಎದುರಾಳನ್ನು ಕೂಗಿ ಕರೆದು, ಆವನಿನ್ನೂ ಹುಂಜ ಸಿದ್ಧಗೊಳಿಸುವ ಮೊದಲೇ ತನ್ನ ಹುಂಜನ್ನು ಹುರಿಗೊಳಿಸಿ ಬಿಟ್ಟರೇ ರಂಗದ ಮೇಲೆ.

ಎದುರಿಗಿನವನು ಹುಂಜನ್ನು ಬಿಡದೆ ಇರಲು ಸಮಿತಿಯವರು ಮರೆಗೆ ಕರೆದು,

"ದಿವಾನ ಬಹಾದ್ದೂರ! ನಿನಗಾಗಿ ಎರಡು ಬಕ್ಷೀಸುಗಳನ್ನು ಕಾಯ್ದಿಟ್ಟಿದೇವೆ. ನೀವು ಅಲ್ಪರೆಂದು ಹಿಂಜರಿಯುವ ಕಾರಣವಿಲ್ಲ. ಬೇಕಾದದ್ದಾಗಲಿ, ಒಮ್ಮೆ ಟಕ್ಕರು ಕೊಟ್ಟೇ ತೀರಲಿ! ತಿಳಿಯಿತೇ?" ಎಂದು ಚುಚ್ಚಿ ಕೊಟ್ಟರು.

"ಇದಾರ ಟಕ್ಕರ ನಡೆದಿದೆ ಗೊತ್ತಿದೆಯೋ?" ಅಜಿತನ ಕಿವಿಗೆ ಪ್ರಶ್ನೆ ಬಿತ್ತು.

"ಇಲ್ಲ; ಚನ್ನಾಗಿ ತಿಳಿಯದಾಗಿದೆ."

"ಟಕ್ಕರ ಕೊಡುವ ನೀವಿಬ್ಬರೂ ಅಣ್ಣತಮ್ಮಂದಿರು."

"ಅವರಿಗೆ ಪ್ರೋತ್ಸಾಹನ ಕೊಡುವವರಾರು?"

"ಗುರುತಿಸು ನೋಡೋಣ!"

"ಗೃಷ್ಟಿ ಹರಿಯದು."

“ ಇಲ್ಲಿಗೇ ದೃಷ್ಟಿ ಮಂದಾಯಿತೆ ? ಗುರುತಿಸಲಿಕ್ಕ ಬಾರದೆ ? ಅವ ರನ್ನು ಗುರುತಿಸಲಿಕ್ಕೆ ಕಲಿಯುವ ತನಕ ನೀವು ಹೀಗೆ ಹೊಡೆದಾಡಿಯೇ ಸಾಯುವವರು. ಜಗತ್ತಿನ ಜನರಿಗೆ ಏನಾದರೊಂದು ನಗುವ ಪ್ರಸಂಗ ಬೇಕಲ್ಲ ! ”

“ ಇದರಲ್ಲಿ ಹುಂಜ ಬಿದ್ದರೆ ? ”

“ ಬಿದ್ದರೇನು ? ಸಾಹೇಬರ ಡಿನರದ ತಾಟು ತುಂಬೀತು. ”

“ ಯಾರ ತಾಟು ? ”

ಅಜಿತನ ಈ ಪ್ರಶ್ನೆ ಕೇಳಿ ಯಾರೋ ನಕ್ಕಂತೆ ಭಾಸವಾಯಿತು. ಅಜಿತ ಕಣ್ದೆರೆದ. ಅದೇ ಮನೆ. ಚಿತ್ತ ವ್ಯಗ್ರವಾಗಿತ್ತು. ಮೂಲೆಯೊಳಗೆ ಬಿದ್ದ ಪುರುಷವ್ಯಕ್ತಿ ಎದ್ದು ಮೈಮೇಲೆ ಬರುವಂತೆ ತೋರಿತು. ಅಜಿತ ನಡುಗಿದ. ಗದ್ಗದಿತ ಸ್ವರದಲ್ಲಿಯೇ “ ಅಯ್ಯೋ ! ” ಎಂದು ಚೀರಿದ.

“ ಸುಮ್ಮನೆ ಬೀಳಲ್ಲ ಮೂಲೆಯಲ್ಲಿ ! ” ಗುಲಶನಬಿಯು ಎದ್ದು ಗಂಡನನ್ನು ನೂಕಿ ಅಂದಳು ಸಿಡುಕಿನಿಂದ.

“ ನನ್ನ ಕಣ್ಣ ಮುಂದೇ ಯಾರನ್ನು ಕರಕೊಂಡು ಮಲಗಿ ರುವಿಯೋ ? ”

ಬಿದ್ದಲ್ಲಿಯೇ ಒದರಿದನಾತ. ಕರಕರ ಹಲ್ಲು ತಿನ್ನುತ್ತಿದ್ದ ಸಪ್ಪಳ ಕೇಳುತ್ತಿದ್ದಿತು. ಮುಟ್ಟಿಗೆಗಳೂ ಬಿಗಿದಿದ್ದುವು.

ಅಜಿತನ ತಲೆಯಲ್ಲಿ ಒಮ್ಮೆಲೇ ಪ್ರಕಾಶ ಬಿತ್ತು. ಇಂಥ ಅವೇಳೆಯಲ್ಲಿ ಈ ಕೂಲಿಕಾರನ ಹೆಂಡತಿಯ ಹತ್ತಿರ ನಾನಿರುವುದು? ಅಯ್ಯೋ ದೈವವೇ! ಇಲ್ಲಿಂದ ಜೀವಂತ ಹೊರಬೀಳಬಹುದೇ ? ಎಂಥ ಸಂದರ್ಭವಿದು !

“ ಅಂಜಬೇಡಿರಿ ! ಇಲ್ಲಿ ಸುತ್ತೆಲ್ಲ ಹೀಗೆ ನಡೆಯುವದು. ಅವರು ಸುಮ್ಮನೆ ಇರುವರು. ಈ ಹೊತ್ತೇ ನಮ್ಮ ಮನೆಯಲ್ಲಿ ಈ ಹೊಸ ಸ್ಥಿತಿ ಯನ್ನು ಕಂಡು ನಮ್ಮವನು ಸಿಟ್ಟಿಗೆ ಬಂದಿದಾನೆ.” ಪತನದ ಪಾವಟಿಗೆಯ ಅಂಚಿಗೆ ಬಂದು ನಿಂತಂತೆ ಅವಳ ಈ ಮಾತಿತ್ತು !

“ ಹೊಸದಾಗಿ ಏನು ಕಾಣಿಸಿತು ? ” ಗಾಬರಿಯಾಗಿ ಕೇಳಿದ ಅಜಿತ.

“ ಹೊಸದು ಏನೂ ಇಲ್ಲ. ನಾವಿಬ್ಬರೂ ಅಕ್ಕ-ತಮ್ಮಂದಿರಂತೆ

ಇದ್ದೇವೆ. ಆದರೂ ಅವನಿಗೆ ಸುತ್ತಲಿನ ಸಂಗತಿಯಂತೆ ಭಾಸವಾಗಿದೆ. ಉಳಿದ ಗಂಡಸರು ಸುಮ್ಮನೆ ಇರುವರು. ಇವನಿಗೆ ಇನ್ನೂ ಗೊತ್ತಿಲ್ಲ. ಜಿಗದಾಡತಾನೆ."

"ಉಳಿದ ಗಂಡಸರು ಸುಮ್ಮನೇ ಇರುವರು ?"

"ಇರದೆ ಯಾರಿಗೆ ಹೇಳುವರು ? ಹೊಟ್ಟೆಗೆ ಇಲ್ಲದ ಮೇಲೆ ಎಲ್ಲಾ ವನ್ನೂ ಸುಮ್ಮನೆ ಸಹನ ಮಾಡಬೇಕಾಗುವದು !"

"ಅಂತೂ ನೀನೂ...."

"ದುಡ್ಡುಳ್ಳವರು ಬಲೆಯೊಳಗೆ ಕೆಡವಿದ ಮೇಲೆ ಹಸಿದ ಹೊಟ್ಟೆ ಕೇಳತದ ?" ನಡುವೆಯೇ ತಡೆದು ಕೇಳಿದಳಾಕೆ.

ಅವಳ ಗಂಡ ಅಲ್ಲೇ ಮಲಗಿದ. ಅವನಿಗೆ ನಿದ್ರೆಯೂ ಹತ್ತಿತು.

"ಆದರೂ ಈ ಜಗವೆಲ್ಲ ಹೀಗೇ ಅನ್ನು ?"

"ನಮ್ಮ ಜನವೇನು, ನಿಮ್ಮ ಜನವೇನು ? ನಮಗೆ ಹೊಟ್ಟೆಗಿಲ್ಲ ವೆಂದಾದರೂ ಹೀಗೆ ಮಾಡುವೆವು. ನಿಮ್ಮ ಹೆಂಗಸರೇನು ತಿಂದುಂಡೂ ಮಾಡುವರಲ್ಲ ?"

"ಕಾರಣ ?"

"ನಿಮ್ಮ ಹೆಂಗಸರಿಗೆ ಕೆಲಸವಿಲ್ಲ. ಬೇಕಾದಷ್ಟು ತಿನ್ನಲಿಕ್ಕೆ ಆದೆ. ನಾಳಿನ ಚಿಂತೆಯಿಲ್ಲ. ಎರಡನೆಯ ಕೆಲಸವೇನವರಿಗೆ ?"

ಅಜಿತ ಹೆಚ್ಚಿಗೇನೂ ಕೇಳಲಿಲ್ಲ. ಪತ್ರಿಕೆಗಳಲ್ಲಿ ಪಾಪಪೂರಿತ ಪಟ್ಟಣಗಳ ಸುದ್ದಿಯನ್ನು ಅವನು ಓದಲು ಎಂದೂ ಮನಸ್ಸು ಮಾಡು ತ್ತಿರಲಿಲ್ಲ. ಹಿಂದೊಮ್ಮೆ ಗೆಳೆಯರಲ್ಲಿ ನಡೆದ ಚರ್ಚೆಯೊಂದು ನೆನಪಾಯಿ ತವನಿಗೆ. ದೊಡ್ಡ ನಗರವೊಂದರಲ್ಲಿ ವಿದ್ಯಾಮಂದಿರಕ್ಕೆ ಹತ್ತು ಸಾವಿರ ರೂಪಾಯಿ ದಾನವಿತ್ತ ಮಹನೀಯರೊಬ್ಬರು, ಮೂರು ಕಾರುಗಳನ್ನು ಇಟ್ಟಿದ್ದರಂತೆ. ಯಾಕೆ ಗೊತ್ತೇ ? ಸಿರಿವಂತರ ಮನೆಯ ಸುಶಿಕ್ಷಿತ ತರುಣ ಕುಮಾರಿಕೆಯರನ್ನು ರಾತ್ರಿ ಸಿನೇಮಾದ ಹೊತ್ತಿಗೆ ಗೊತ್ತಾದ ಸ್ಥಳಗಳಿಂದ ಕರೆದೊಯ್ದು ಅವಿವಾಹಿತ ತರುಣರ ಕೋಣೆಗಳಿಗೆ ಬಿಟ್ಟು, ಸಿನೇಮಾ ಬಿಡುವ ಹೊತ್ತಿಗೆ ಸರಿಯಾಗಿ ತಿರುಗಿ ಅವರವರ ಮನೆಗಳಿಗೆ ಅವರ ಹಿರಿಯರಿಗೆ ಗೊತ್ತಾಗದಂತೆ ಬಿಡುವುದಕ್ಕೆ ! ಮನೆಯೊಳಗೆ ಸತ್ಯ

ನಾರಾಯಣ ಪೂಜೆಯಂತಹ ಧಾರ್ಮಿಕ ಸಮಾರಂಭದಲ್ಲಿ ಮನೆಗೆ ತರುಣ ತರುಣಿಯರನ್ನೆಲ್ಲ ಮೊದಲು ಆಮಂತ್ರಿಸಿ ಪರಸ್ಪರ ಪರಿಚಯ ಮಾಡಿಕೊಡುವ ಕ್ರಮಪ್ರಾಪ್ತ ವ್ಯವಸಾಯವಂತೆ!

ಈ ಉದ್ಯೋಗದ ಉತ್ಪನ್ನದಲ್ಲಿಯ ಕೆಲ ಭಾಗ ವಿದ್ಯಾಮಂದಿರಕ್ಕೆ ದಾನ! ಬೇಕಲ್ಲ? ಅಂಥ ಮಂದಿರಗಳಲ್ಲಿ ಶಿಕ್ಷಣ ಸಂಪಾದಿಸಿ ಸುಧಾರಿಸಿ ದಷ್ಟೇ ಇವರ ಉತ್ಪನ್ನ ಬೆಳೆಯುವದಲ್ಲ! ಮೇಲಾಗಿ ಈ ದಾನಗಳಿಂದ ಲ್ಲವೆ ಅವರ ಈ ವ್ಯವಹಾರ ಕಲೆ ಬೈಲಿಗೆ ಬಾರದಿರುವುದು! ಅನೀತಿ ಮಾರ್ಗವನ್ನು ಹಿಡಿಸುವ ಬಡತನ, ಸಿರಿವಂತಿಕೆಗಳೆರಡೂ ವಿಷದ ಮಾದರಿ ಗಳೇ ಆಗಿವೆ!

## ೧೮

ಅಜಿತ ತನ್ನನ್ನು ಕಾಣಲು ಬರುವನೆಂದೊಡನೆಯೆ ಸುಧೀರನಿಗೆ ಸಂತಸವಾಗಿತ್ತು. ನಾಲ್ಕು ಗೋಡೆಯ ಒಳಗೆ ಹೊರಗಿನ ಜಗತ್ತಿನಿಂದ ಬೇರೆಯಾದಾಗ ಒಬ್ಬ ಜೀವದ ಹತ್ತರದ ವ್ಯಕ್ತಿಯ ಭೆಟ್ಟಿಯಾಗುವಂತಿ ದ್ದರೆ ಆಗ ಉಂಟಾಗುವ ಆತುರತೆ, ಉತ್ಸಾಹ, ಆನಂದ, ಅತೃಪ್ತಿ ವರ್ಣಿ ಸಲು ಬಾರದು, ಹೇಳಲು ಸಾಕಾಗದು. ಅದಕ್ಕೆ ಅನುಭವ ಬೇಕು, ದೈವ ಬೇಕು. ಒಳಗಿನವರಿಗೆ ಹೊರಗಿನಿಂದ ಬರುವ ಕಾಗದ, ಭೆಟ್ಟಿಯ ದಿನಗಳು ಹಬ್ಬವಿದ್ದಂತೆ ಅಂದಿನ ಆನಂದಕ್ಕೆ ಪಾರವೇ ಇಲ್ಲ. ಜೇಲಿ ನಲ್ಲಿ ಹಾಂ! ಹಾಂ! ಅನ್ನುವುದರೊಳಗೆ ಹೊತ್ತು ಹೋಗುವುದೆಂದರೆ ಭೆಟ್ಟಿಯ ಸಮಯದಲ್ಲಿ. ಅಜಿತ ಬಂದ ದಿನ ಸುಧೀರನ ಮೈಮೇಲೆ ಒಂದು ಬೊಟ್ಟು ಮಾಂಸ ಹೆಚ್ಚಾಗಿದ್ದಿತು. ಆದರೆ ಮರುದಿನವೇ ಅವ ನನ್ನು ಬಾಯಖಳಾ ಜೇಲಿನಿಂದ ಯರವಡಾ ಜೇಲಿಗೆ ಒಯ್ದರು.

ಬಾಯಖಳಾ ಜೇಲಿನ ವಾತಾವರಣವು ಸುಧೀರನಿಗೆ ಈಗೀಗ ಸೇರುತ್ತಿದ್ದಿತು. ಹೊಸದಾಗಿ ಬಂದಾಗ ಕೆಲ ದಿನವೇನೋ ಅತೃಪ್ತಿ, ಅಸಮಾಧಾನವಿತ್ತು. ಯಾರಾದರೂ ಹೊರಗಿನಿಂದ ಬರುವರೆಂದೊಡನೆ ಬಾಗಿಲ ಬಳಿ ನಿಂತು ನೋಡುವ. ಸ್ವಲ್ಪ ಹೊತ್ತಿನಲ್ಲಿ ಮತ್ತೆ ಬಾಗಿಲನ್ನು

ಮುಚ್ಚಲಾಗುವುದು. ಆದರೂ ಆ ಒಂದು ಕ್ಷಣ ಹೊರಗಿನ ಜಗತ್ತನ್ನು ನೋಡುವುದಕ್ಕಾಗಿ ತಾಸೆರಡು ತಾಸು ಬಾಗಿಲ ಎದುರಿಗೆ ನಿಂತುದೂ ಉಂಟು. ಹೊರಗಿನ ಜಗತ್ತೆಂದರೆ ಆಗ ಅಷ್ಟು ಪ್ರಿಯವಾಗಿತ್ತು. ಈಗೀಗ ಅದೆಲ್ಲ ಮರೆತು ಜೇಲಿನ ವಾತಾವರಣ ವ್ಯಾಪ್ಯವುಂಡಿದ್ದಿತು. ಇಷ್ಟರಲ್ಲಿ ಈ ಜೇಲಿನಿಂದ ಇನ್ನೊಂದು ಜೇಲಿಗೆ ಹೋಗುವ ಸಂದರ್ಭ. ಒಂದು ಜೇಲಿನಲ್ಲಿ ಇರುವ ಅನುಕೂಲತೆಗಳು ಇನ್ನೊಂದು ಜೇಲಿನಲ್ಲಿ ಇರುವದಿಲ್ಲ. ಕೆಲ ದಿನಗಳಲ್ಲಿ ವಾರ್ಡರನ ಗುರುತಾಗಿರುತ್ತದೆ. ಏನನ್ನಾದರೂ ಕೊಂಚ ಹೊರಗಿನ ಸುದ್ದಿಯನ್ನು ಮಾತಾಡಲು ಸಿಕ್ಕುತ್ತದೆ. ಈ ಸಹಾನುಭೂತಿ ಸಹಕಾರಗಳು ಬೇರೆ ಜೇಲಿಗೆ ಹೋದೊಡನೆ ಒಮ್ಮೆಲೇ ಇಲ್ಲವಾಗುತ್ತವೆ. ಅದರಲ್ಲಿ ಯರವಡಾ ಜೇಲಿನಲ್ಲಿ ಕಠೋರತೆ ಬಿಗುವುಗಳು ಹೆಚ್ಚೆಂದು ಕೈದಿಗಳು ಮಾತಾಡುತ್ತಿದ್ದರು. ಮೇಲಾಗಿ ಇನ್ನು ಕೆಲವೇ ದಿನಗಳಲ್ಲಿ ಬಿಟ್ಟು ಹೊರಗೆ ಹೋಗುವೆನೆಂಬ ಕನಸು ಕಾಣುತ್ತಿರುವಾಗಲೇ ಈ ಸ್ಥಳಾಂತರ ಸುಧೀರನಿಗೆ ಬಹಳ ಬೇಸರವನ್ನುಂಟುಮಾಡಿತು.

ಮರುದಿನ ಬೆಳಿಗ್ಗೆ ಸುಧೀರನನ್ನೊಳಗೊಂಡು ಇಪ್ಪತ್ತು ಜನ ಕೈದಿಗಳನ್ನು ಪುಣೆಯ ಸ್ಟೇಶನಿಗೆ ಕಳುಹಿಸಿದರು. ಇವರು ಅಲ್ಲಿ ಹೋಗಿ ಇಳಿಯುವ ಮೊದಲೇ ಸುತ್ತಲೂ ಮುಚ್ಚಿದ ಕೈದಿ-ಮೋಟಾರು ಇವರನ್ನು ಒಯ್ಯಲು ಸಿದ್ಧವಾಗಿ ಬಂದು ನಿಂತಿದ್ದಿತು. ಮುಂದೆ ಪೋಲೀಸ ಪಹರೆಯಲ್ಲಿ ಯರವಡಾ ಜೇಲಿಗೆ ಒಯ್ದರು. ಅಲ್ಲಿ ಮತ್ತೆ ಝಡತಿಯ ಸಮಾರಂಭ ನಡೆಯಿತು.

ಕ್ರಮವಾಗಿ ಒಬ್ಬೊಬ್ಬರ 'ಚೆಕಿಂಗ' ಆಗಬೇಕು. ಆ ದಿನ ಇಪ್ಪತ್ತು ಜನರ ಚೆಕಿಂಗ ಇದ್ದುದರಿಂದ ಇವರೆಲ್ಲರನ್ನು ಒಯ್ದು ಒಂದು ಕಟ್ಟೆಯ ಮೇಲೆ ಕೂಡಿಸಿದರು. ಆಗ ಸುಧೀರ ಸಹಜವಾಗಿ ಜೊತೆಯವನೊಡನೆ ಒಂದು ಮಾತನಾಡಿದ. ಆದರೆ ಕೂಡಲೆ 'ಚುಪ ಬೈಠೋ. ಬಾತ ನೈ ಮಂಗತಾ' ಎಂದು ಹುಕುಮಾಯಿತು. ಸುಧೀರನಿಗೆ ಬಹಳ ಕೆಡಕೆನಿಸಿತು. ಟಕಮಕ ಆ ಸಿಪಾಯಿಯ ಮುಖ ನೋಡಿದ. ಅವನಿಗೆ ತುದಿಗುಂಡಿಯಿಂದ ಕುಳಿತು ಈಗಾಗಲೇ ಬೇಸರ ಉಂಟಾಗಿದ್ದಿತು. ಅದರಲ್ಲಿ ಈ ಕಠೋರ ಆಜ್ಞೆ ಬೇರೆ. ಹೀಗಾಗಿ ಅವನು ತುಂಬ ಕೆರಳಿದ. ಕೆರಳಿದ

ಮನಸ್ಸು ಸುಮ್ಮನೆ ಕೊಡಗೊಡಲಿಲ್ಲ. ಎದ್ದು ನಿಂತ. ಅದನ್ನು ಕಂಡೊಡ ನೆಯೇ ಅಲ್ಲಿಯ ಪೋಲೀಸರು 'ಬೈಠಜಾವ್' ಎಂದು ಆರ್ಡರು ಕೊಟ್ಟರು. ಆದರೂ ಸುಧೀರ ಕೂಡಲಿಲ್ಲ. ಹಾಗೆಯೇ ನಿಂತ. ಕಣ್ಣು ಕೆರಳಿಸಿ ಆ ಸಿಪಾಯಿಯ ಕಡೆಗೆ ನೋಡುತಲಿದ್ದ. ಅಷ್ಟರಲ್ಲಿ ಅಸಿಸ್ಟಂಟ ಜೇಲರ ಅಲ್ಲಿಗೆ ಬಂದ. ಸುಧೀರ ಎದ್ದು ನಿಂತುದನ್ನು ನೋಡಿ ಒಮ್ಮೆಲೇ ಕಣ್ಣು ಕಿಸಿದನು. 'ಬೈಠೋ' ಎಂದು ಅವನೂ ಹುಕುಮು ಕೊಟ್ಟನು. ಸುಧೀರ ಇಂಗ್ಲೀಷಿನಲ್ಲಿ ಏನೇನೋ ಹೇಳಲಾರಂಭಿಸಿದ. ಆದರೆ ಅದನ್ನು ಕೇಳಿಕೊಳ್ಳುವಷ್ಟು ಆ ಅಧಿಕಾರಿಗಳಿಗೆ ತಾಳ್ಮೆಯಿರಲಿಲ್ಲ. ಸೌಜನ್ಯವೂ ಇರಲಿಲ್ಲ. ಅವನು ಒಮ್ಮೆಲೇ ಸುಧೀರನ ಮೈಮೇಲೆ ಏರಿ ಬಂದು, ಹಟಾತ್ತಾಗಿ ಕೂಡಿಸಿಯೇ ಬಿಟ್ಟ. ಸುಧೀರ ಕೂಡಲೆ ಪುಟಿಚಂಡಿನಂತೆ ಮತ್ತೆ ಎದ್ದ. ಇನ್ನೇನು ಕೈಗೆ ಕೈ ಹತ್ತುವದೇನೋ ಅನ್ನುವಷ್ಟರಲ್ಲಿ ಸುಧೀರನ ಸರತಿ ಬಂದಿತು. ಚೆಕಿಂಗಕ್ಕೆ ಹೋದ.

ಚೆಕಿಂಗ ಕಾಲಕ್ಕೇನೇ ಆ ಜೇಲರನು ಸುಧೀರನ ಹಿಸ್ಟರಿ ಟಿಕೆಟ್ ನೋಡಿದ. ಅದರ ಮೇಲಿಂದ ಸುಧೀರನ ನಡತೆಯು ಅರ್ಥವಾಯಿತು ಅವನಿಗೆ. ಮುಂದೆ ಅವನ ವಿಷಯಕ್ಕೆ ಜೇಲರನ ನಡತೆಯಲ್ಲಿ ಸ್ವಲ್ಪ ಮಾರ್ದವ ಉಂಟಾಯಿತು. ಏನಾದರೇನು ಹುಣಸಿಯ ಹುಳಿ ಹೋಗುವುದೇ ?

ಈಗೀಗ ಸುಧೀರನಿಗೆ ತನ್ನ ಸಣ್ಣಂದಿನ ದಿವಸಗಳ ನೆನಪಾಗುವುದು. ಆಗ ಮನೆಯಲ್ಲಿ ಅಜ್ಜಿ ಇದ್ದಳು. ತಾಯಿ ತೀರಿಕೊಂಡಾಗಿನಿಂದಲೂ ಅವಳೇ ಇವನನ್ನು ಜೋಕೆ ಮಾಡುತ್ತಿದ್ದಳು. ತಂದೆ ಇನ್ನೊಬ್ಬಳನ್ನು ಮದುವೆಯಾದ. ಆಮೇಲಂತೂ ಅಜ್ಜಿಯ ಅಕ್ಕರೆಯಲ್ಲಿಯೇ ಬೆಳೆದಿದ್ದನಾತ. ಅವಳು ಆಗಾಗ ಹಾಲು ಕಾಯಿಸಿ ಕೊಡುವುದು, ಓಣಿಯೊಳಗಿನ ಹುಡುಗರು ಜಗಳ ತೆಗೆದರೆ ಸ್ವತಃ ತಾನು ಹೋಗಿ ಅವರ ಕೂಡ ವಾದಿಸುವುದು, ತನ್ನ ಮೊಮ್ಮಗನ ತಪ್ಪು ಇದ್ದರೂ ಇನ್ನೊಬ್ಬರ ಹುಡುಗರನ್ನೇ ಬೆದರಿಸಿಕೊಳ್ಳುವುದು, ರಾತ್ರಿ ಹಾಸಿಗೆ ಹಾಸಿ ಘುಗ್ಗುಲಲ್ಲಿ ಮಲಗಿಸಿಕೊಳ್ಳುವುದು, ಇವೆಲ್ಲ ಸುಖಮಯ ಸನ್ನಿವೇಶಗಳು ಅವನ ಕಣ್ಣ ಮುಂದಿನಿಂದ ಹಾಯ್ದು ಹೋಗುವವು. ಮುಂದೆ ಅಜ್ಜಿ ತೀರಿ

ಕೊಂಡಾಗ ತನಗೆ ತಾಯಿ ಅಗಲಿದಾಗಿನಕಿಂತ ಹೆಚ್ಚಿಗೆ ದುಃಖವಾಯಿತು, ಮನಸ್ಸು ನೋಯಿತು. ಆ ಹುಣ್ಣಿನ ಮೇಲೆ ಬರೆಯೆಳೆದಂತೆ ಮಲ ತಾಯಿಯ ನಡತೆ, ಆಗ ಕೆಲ ದಿನ ತಾನು ಕಷ್ಟ ಪಟ್ಟ ಬಗೆ, ಇವೆಲ್ಲವೂ ನೆನಪಾದುವು. ಆದರೆ ಆ ಎಲ್ಲ ಕಷ್ಟಗಳಲ್ಲಿಯೂ ಒಂದು ರೀತಿಯ ಸಮಾಧಾನವಿತ್ತು. ಏನು ಮಾಡಲೂ ಆಗ ಸ್ವತಂತ್ರನಿದ್ದನಾತ. ಈಗ ಮಾತ್ರ ಆ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗಿದೆ. ಇದೇ ಅವನಿಗೆ ಬಹಳ ದುಃಖವನ್ನುಂಟುಮಾಡಿದ್ದಿತು. ಇಲ್ಲಿ ಕ್ಷಣಕ್ಷಣಕ್ಕೂ 'ನೀನು ಗುಲಾಮ! ನೀನು ಗುಲಾಮ!' ಎಂಬ ಸಂಗತಿಯನ್ನು ನೆನಪಿಗೆ ತಂದು ಕೊಡುತ್ತಾರೆ.

ಪರದೇಶದೊಳಗಿನ ಜೇಲುಗಳು ಶಿಕ್ಷಣಮಂದಿರಗಳಾಗಿವೆಯಂತೆ. ಅಲ್ಲಿ ಅಪರಾಧಗಳ ಹಿನ್ನೆಲೆಗಳನ್ನು ವಿಚಾರಿಸಿ, ಅಪರಾಧಿಗಳ ಮನಸ್ಸಿನ ರಚನೆಯನ್ನು ಗಮನಿಸಿ ಅವರು ಸುಧಾರಿಸುವಂತೆ ಶಿಕ್ಷಣ ಕೊಡಲಾಗು ವುದು. ಸೆರೆಮನೆಯಿಂದ ಹೊರಬಿದ್ದ ಮನುಷ್ಯ ಒಳ್ಳೆಯ ನಾಗರಿಕನಾಗು ತ್ತಾನೆ; ಹಾಗೆ ಆಗುವಂತೆ ಅಲ್ಲಿಯ ಸರಕಾರ ಲಕ್ಷ್ಯಗೊಡುತ್ತಿದೆ. ಇಲ್ಲೇನಿದೆ? ದಾರಿ ತಪ್ಪಿ ಒಮ್ಮೆ ಸೆರೆಮನೆ ಸೇರಿದರೆ ತೀರೇಹೋಯಿತು. ಒಳ್ಳೆಯ ಮನುಷ್ಯನೂ ಕೂಡ ಗುನ್ಹೆ ಮಾಡುವ ಪ್ರವೃತ್ತಿಯುಳ್ಳವನಾಗು ತ್ತಾನೆ. ಈ ದೇಶದ ಜೇಲಿನಲ್ಲಿ ಹಾಗಾಗುವಂತೆಯೇ ವ್ಯವಸ್ಥೆಯಿರು ತ್ತದೆ. ಈ ಸಲ ಕಳ್ಳನೆಂದು ಶಿಕ್ಷೆ ಹೊಂದಿದವನು ಮರುಂದಿನ ಸಲ ಖೂನಿ ಎಂದು ಸೆರೆಮನೆ ಸೇರಲೇಬೇಕು. ಸೇರದಿದ್ದರೆ ಅವನಿಗೆ ಗತಿಯೇ ಇಲ್ಲ. ಹಾಗೆ ಅವನ ಅಂತರಂಗವನ್ನು ಹದಗೊಳಿಸಿ ಹೊರಗೆ ಕಳಿಸು ವರು, ಈ ಜೇಲಧಿಕಾರಿಗಳು. ಸಮಾಜ ಅದಕ್ಕೆ ತಕ್ಕ ಪ್ರೋತ್ಸಾಹವೀಯು ವುದು. ತಾನು ನೆಟ್ಟ ಸಸಿಯನ್ನು ಬೆಳೆಸಲಿಕ್ಕೆ ತಾನೇ ಪ್ರೋತ್ಸಾಹ ಕೊಡದಿದ್ದರೆ ಇನ್ನಾರು ಕೊಟ್ಟಾರು?

ಸುಧೀರನ ಹಿಸ್ಟರಿ ಟಿಕೆಟಿನ ಮೇಲಿಂದ ಅಲ್ಲಿಯ ಜೇಲರನು ಫಿತೂರಿ ಕೈದಿಯೆಂದು ಅವನನ್ನು ಉಳಿದ ಕೈದಿಗಳಿಂದ ಬೇರೆಯೇ ಇಟ್ಟುಬಿಟ್ಟಿದ್ದ. ಅದರಿಂದ ಅವನ ಕೋಣೆ ಒತ್ತಟ್ಟಿಗೇನೇ ಇತ್ತು. ಇವನಂತೆಯೇ ಇದ್ದ ಇನ್ನೊಬ್ಬ — ಮಂಗಲಸಿಂಗನೆಂಬ ಶೀಖ ಕೈದಿಯು ಒಂದು ದಿನ

ಮುಂಜಾನೆ ಇವನಿಗೆ ದೊರಕಿದ. ಅವನ ಎತ್ತರ ನಿಲುವಿಕೆ, ಆಕರ್ಷಕ ಮುಖ, ಮೋಹಕ ಕಣ್ಣುಗಳು ಸುಧೀರನ ಮನಸ್ಸನ್ನು ಸೆಳೆದುವು. ಈಗ ಕೆಲದಿನಗಳಿಂದ ಸುಧೀರನು ಅಪರಾಧಿಗಳನ್ನು ಕಂಡರೆ ಕನಿಕರ ಪಡು ವನು. ಅವರು ಮಾಡಿದ ತಪ್ಪುಗಳೇನು ? ಅದಕ್ಕೆ ಆದ ಶಿಕ್ಷೆ ಎಷ್ಟು ಎಂಬುದನ್ನೂ ವಿಚಾರಿಸುವನು. ಹಲವರ ಹಿಸ್ಟರಿ ಟಿಕೆಟ್‌ಗಳನ್ನೂ ಸಂದರ್ಭ ಸಿಕ್ಕಾಗ ನಿರೀಕ್ಷಿಸುವನು. ಇದರಿಂದ ಅವನಲ್ಲಿ ದಿನದಿನಕ್ಕೆ ಅಪರಾಧಿಗಳ ಬಗ್ಗೆ ಕುತೂಹಲ ಕೆರಳುತ್ತಿದ್ದಿತು. ಈ ಕುತೂಹಲ ಪ್ರವೃತ್ತಿ ಯನ್ನು ಸಮಾಧಾನಗೊಳಿಸಲಿಕ್ಕೆಂದೇ ಇಂದು ಸುಧೀರ ಮಂಗಲಸಿಂಗ ನಿಗೆ ಕೇಳಿದ.

" ನಿಮ್ಮ ಅಡ್ಡ ಹೆಸರೇನು ? ''

" ಗಾಂಧಿ. "

" ಹೋ ! ಮಂಗಲಸಿಂಗ ಗಾಂಧಿ ಅಂತಲೋ ನಿಮ್ಮ ಹೆಸರು ? "

" ಉಳಿದ ಕೈದಿಗಳೆಲ್ಲ ಮಹಾತ್ಮ ಗಾಂಧಿಯೆಂತಲೇ ಕರೆಯು ವರು. "

" ಹಃ ! ಹಃ ! ಹಃ ! '' ಸುಧೀರ ನಕ್ಕ.

ಸ್ವಲ್ಪ ಹೊತ್ತು ಮಾತಾಡುವಷ್ಟರಲ್ಲಿ ಮಂಗಲಸಿಂಗ ದೂರದೃಷ್ಟಿಯ ಮನುಷ್ಯನೆಂಬುದು ಸುಧೀರನಿಗೆ ತಿಳಿದು ಬಂದಿತು. ಅಪರಾಧದ ಕಡೆಗೆ ಒಲಿಯುತ್ತಿದ್ದ ಮನುಷ್ಯನನ್ನು ಹೇಗೆ ಸುಧಾರಿಸಬೇಕು, ಮನುಷ್ಯ ಸ್ವಭಾವ ಯಾವ ರೀತಿ ಇರುತ್ತದೆ, ಇವುಗಳ ಜ್ಞಾನ ಅವನಿಗೆ ಇತ್ತು. ಹೀಗಿದ್ದೂ ಅವನು ಜೇಲಿನಲ್ಲಿ ತನ್ನ ಆಯುಷ್ಯ ಕಳೆಯುತ್ತಿದ್ದುದನ್ನು ಕಂಡು ಸುಧೀರನಿಗೆ ಇನ್ನೂ ಆಶ್ಚರ್ಯವಾಯಿತು. ಆದರಿಂದ ದಿನ ಗಳೆದಂತೆ ಅವನೊಡನೆ ಹೆಚ್ಚು ಸಂಬಂಧ ಬೆಳೆಯಿಸಿದ. ಸುಧೀರನ ನಡತೆಯನ್ನು ನಿರೀಕ್ಷಿಸಿ ಆತ ಮೊದಮೊದಲು ನಾಲ್ಕು ದಿನ ಸ್ವರಾಜ್ಯದ ವಿಷಯಕ್ಕೇನೇ ಹರಟೆ ಹೊಡೆದ. ನಡುನಡುವೆ ಕಾಂಗ್ರೆಸು ಎಲ್ಲಿ ತಪ್ಪು ತ್ತದೆ, ಏನು ತಪ್ಪುತ್ತದೆ, ಎಂಬುದನ್ನು ತೋರಿಸಲು ಪ್ರಯತ್ನ ಪಡುವನು. ಒಂದು ದಿವಸ ಅವನಂದ :

" ನಿಮ್ಮ ಸ್ವರಾಜ್ಯದಲ್ಲಿ ನಮ್ಮದೇನು ವ್ಯವಸ್ಥೆ ? ಗುನ್ಹೆಯ

ಪದ್ಧತಿ ನೀವು ಹೇಗೆ ಇಡುವಿರಿ? ಸ್ವರಾಜ್ಯ ಪ್ರಾಪ್ತಿಯ ಕಾರ್ಯದಲ್ಲಿ ನಮ್ಮನ್ನು ಹೇಗೆ ಉಪಯೋಗಿಸಿಕೊಳ್ಳುವಿರಿ? ನಮಗೆ ನೀವು ರಾಟಿಯನ್ನು ತಿರುಗಿಸಲಿಕ್ಕೂ, ಸೆರೆ-ಸಿಂದಿಗಳನ್ನು ಬಿಡಲಿಕ್ಕೂ ಹೇಳಿದರೆ ನಾವೆಂದೂ ಬಿಡಲಾರೆವು. ನಮ್ಮ ವೃತ್ತಿಯ ಕಡೆಗೆ ಲಕ್ಷ್ಯ ಕೊಡರಿ; ನಾಳೆ ಸ್ವರಾಜ್ಯ ಸಿಕ್ಕಿತು, ಇಂಗ್ಲೀಷರು ಇಲ್ಲಿಂದ ಹೋದರು. ಆ ಮೇಲೆಯೂ ನೀವು ಇದೇ ಸೆರೆಮನೆ, ಇದೇ ಸ್ಥಿತಿ ಇಟ್ಟರೆ ನಾವು ಸುಮ್ಮನೆ ಕೂಡುವದಿಲ್ಲ, ಬಂಡು ಹೂಡುವೆವು."

ಆಗ ಸುಧೀರ ಅವನಿಗೆ ತನ್ನ ಸ್ವರಾಜ್ಯದ ಕಲ್ಪನೆಯನ್ನೆಲ್ಲ ವಿವರಿಸಿದ.

"ಹೋ! ನೀವು ಕೆಂಪು ಧ್ವಜದವರು ಕಾಣುತ್ತೀರಿ."

ಮಂಗಲಸಿಂಗನ ಈ ಮಾತಿನಿಂದ ಕೆಂಪು ಬಾವುಟದವರ ವಿಷಯಕ್ಕೆ ಅವನಲ್ಲಿ ಸದ್ಭಾವನೆಯಿದ್ದಂತೆ ತೋರುತ್ತಿದ್ದಿತು. ಅಲ್ಲದೆ ಅವನಿಗೆ ತ್ರಿರಂಗಿ ಧ್ವಜ, ಕೆಂಪು ಬಾವುಟಗಳಲ್ಲಿಯ ವ್ಯತ್ಯಾಸದ ಕಲ್ಪನೆಯೂ ಇದ್ದಿತು.

ಈ ಪ್ರಸಂಗದ ಮೇಲಿಂದ ಸುಧೀರನಿಗೆ ಅವನ ವಿಚಾರಸರಣಿ, ಬುದ್ಧಿಮತ್ತೆಯ ಸ್ಪಷ್ಟ ಕಲ್ಪನೆ ಬಂದಿತು. ಇದರಿಂದ ಅವನ ಚರಿತ್ರದ ಬಗ್ಗೆ ಚಿಕಿತ್ಸಕ ಬುದ್ಧಿಯು ಜಾಗೃತವಾಗಿ ಇನ್ನೊಂದು ದಿನ ಸಮಯ ಸಿಕ್ಕಾಗ ಎಲ್ಲ ವಿಷಯವನ್ನೂ ತಿಳಿಯುವ ಲಾಲಸೆಯಿಂದ ಕೇಳಿದ.

"ನಿಮ್ಮೂರು ಯಾವುದು? ನೀವು ಜೇಲಿಗೆ ಬರುವ ಪ್ರಸಂಗ ಏಕೆ ಬಂತು?" ಸುಧೀರ ಇಷ್ಟು ಕೇಳುವುದೇ ತಡ, ಆತ ಬಡಬಡ ಹೇಳತೊಡಗಿದ.

"ನನ್ನೂರು ಕಾಶ್ಮೀರದೊಳಗಿನ ಜಮ್ಮೂ ಎಂಬುದು. ಹೋದ ಮಹಾಯುದ್ಧದಲ್ಲಿ ಸೈನ್ಯದಲ್ಲಿ ಸೇರಿದೆ. ಇಂಗ್ಲೀಷ, ಉರ್ದುಗಳೆರಡೂ ಭಾಷೆಯಲ್ಲಿ ಓದುಬರೆಹ ಬಲ್ಲೆ. ಮೆಸೊಪೊಟೇಮಿಯಾದಲ್ಲಿ ಶೂರತನದಿಂದ ಕಾದಿದೆ. ಸಾಹಸದ ಕಾರ್ಯ ಮಾಡಿದೆ. ವೈರಿಗಳ ಪ್ರದೇಶವನ್ನು ಗೆದ್ದುಕೊಂಡ ಮೇಲೆ ಅಲ್ಲಿಯ ಲೂಟಿಯಲ್ಲಿ ನಾನೇ ಮುಂದಾಳು, ಪ್ರವೀಣ. ಅಲ್ಲಿಯೇ ನನಗೆ ಯುಕ್ತಿ ಪ್ರಯುಕ್ತಿಗಳಿಂದ ಪರಾಕ್ರಮ ತೋರಿಸಿ, ಲೂಟ ಮಾಡುವ ಚಟ ಬಿದ್ದಿತು. ಮುಂದೆ ಯುದ್ಧ ಮುಗಿಯಿತು. ನಮ್ಮನ್ನೆಲ್ಲ ಕೆಲಸದಿಂದ ತೆಗೆದುಹಾಕಿದರು. ನಿರುದ್ಯೋಗಿ

ಗೊಂಡೆವು. ಅಲ್ಲಿ ಇಲ್ಲಿ ಕೆಲ ದಿನ ಅಲೆದಾಡಿ ಮೋಟಾರ ಡ್ರಾಯರ್ವ್ಹರನ ಕೆಲಸ ಹಿಡಿದೆ. ಆ ಕೆಲಸದಲ್ಲಿ ನನ್ನ ಸಾಹಸಪ್ರವೃತ್ತಿಗೆ ಶಾಂತಿ ಸಿಕ್ಕದಾಯಿತು. ಯುದ್ಧದಿಂದ ನನ್ನಲ್ಲಿ ಆ ಪ್ರವೃತ್ತಿ ಬಹಳ ಬೆಳೆದಿದ್ದಿತು. ಏನು ಮಾಡಿದರೂ ಮನಸ್ಸಿಗೆ ಸಮಾಧಾನವಿಲ್ಲದಾಯಿತು. ಮೋಟಾರ ಜೋರಿನಿಂದ ಹೊಡೆದು ನೋಡಿದೆ. ಜಗಿಸಿ ನೋಡಲು ಪ್ರಯತ್ನ ಪಟ್ಟೆ. ಏನಾದರೂ ನನಗೆ ಬೇಕಾದ ಶಾಂತಿ ಇಲ್ಲವಾಗಲು ಆ ನೌಕರಿ ಬಿಟ್ಟೆ. ನಿರುದ್ಯೋಗಿಯಾಗಿ ಅಲೆದಾಡಿದೆ. ಯುದ್ಧಸಂದರ್ಭದಲ್ಲಿ ಕಲಿತ ಸುಲಿಗೆ—ಲೂಟಿ ಮಾಡುವ ವಿದ್ಯೆಯಂತೂ ಇದ್ದೇ ಇದ್ದಿತು. ಅದನ್ನೇ ಅವಲಂಬಿಸಿದೆ. ಇಲ್ಲಿ ಬಂದು ಬಿದ್ದೆ." ಇಷ್ಟು ಹೇಳಿ ಸ್ವಲ್ಪ ಹೊತ್ತು ಮಾತಾಡದೆ ನಿಂತನಾತ. ಆಮೇಲೆ "ಏನಾದರೂ ಸರಕಾರ ಹೀಗೆ ಮನುಷ್ಯನ ವ್ಯಕ್ತಿತ್ವವನ್ನು ಎಂದೂ ನಷ್ಟಪಡಿಸಬಾರದು. ಪಡಿಸುವ ಅಧಿಕಾರವೂ ಅದಕ್ಕಿಲ್ಲ" ಎಂದು ಅಧಿಕಾರವಾಣಿಯಿಂದ ನುಡಿದು ಸುಮ್ಮನಾಗಿಬಿಟ್ಟ.

ಹೀಗೆ ವಿವಿಧ ಜೀವನಗಳ ನಿರೀಕ್ಷಣೆಯಲ್ಲಿ ತೊಡಗಿದ ಸುಧೀರನಿಗೆ ತನ್ನ ಬಿಡುಗಡೆಯ ದಿನವು ಸಮೀಪಿಸಿತೆಂಬುದರ ಕಲ್ಪನೆಯೇ ಇರಲಿಲ್ಲ. ಒಂದು ದಿನ ಮುಂಜಾನೆ ಕೆಲವು ಜನ ಕೈದಿಗಳನ್ನು ಮುಂಬಯಿಗೆ ಕರೆದೊಯ್ದರು. ಅವರಲ್ಲಿ ಅಜಿತನೊಡನೆ ಜೇಲಿಗೆ ಬಂದವರೂ ಇದ್ದರು. ಇವರನ್ನು ಮುಂಬಯಿಗೇಕೆ ಒಯ್ಯುವರೆಂದು ವಿಚಾರಿಸಲಾಗಿ ತಿಳಿದು ಬಂತು, ಅವರ ಶಿಕ್ಷೆ ಮುಗಿಯಿತು, ಮುಂಬಯಿಗೆ ಒಯ್ದು ಬಿಡುವರು ಎಂದು. ಸುಧೀರನೂ ಕನಸು ಕಟ್ಟತೊಡಗಿದ, ತನ್ನನ್ನೂ ಅಲ್ಲಿಯೇ ಒಯ್ದು ಬಿಡುವರೆಂದು ಆಗ ಇನ್ನುಳಿದ ನಾಲ್ಕಾರು ದಿನಗಳೆಂದರೆ ನಾಲ್ಕಾರು ವರುಷಗಳಂತೆ ಅನಿಸಿತವನಿಗೆ. ಆದರೆ ಬಿಡುಗಡೆಯ ದಿನವು ಸಮೀಪ ಬಂದರೂ ಇನ್ನೂ ಇವನನ್ನು ಮುಂಬಯಿಗೆ ಒಯ್ಯುವ ಲಕ್ಷಣ ತೋರದಾಯಿತು. ಸುಧೀರ ಚಡಪಡಿಸಿದ. ಮನೆಯವರನ್ನು ಕಾಣುವ ಆತುರ ಬಹಳವಾಗಿದ್ದಿತು. ಮೊನ್ನಿನ ಪತ್ರದಲ್ಲಿಯಂತೂ ಅಜಿತನು 'ನೀನು ಬಿಟ್ಟು ಬಂದೊಡನೆಯೇ ಸಿದ್ದಾಪುರಕ್ಕೆ ಹೊರಡೋಣ' ಎಂದು ಬರೆದಿದ್ದ. ತನ್ನ ಬಿಡುಗಡೆಯ ದಿನಗಳನ್ನು ಲೆಕ್ಕ ಹಾಕಲಿಕ್ಕೆ

ತಾನೇ ತಪ್ಪಿರುವೆನೇನೋ ಎಂದುಕೊಂಡು ತಿರುತಿರುಗಿ ಎಣಿಸಿದ. ಮರುದಿನವೇ ತನ್ನ ಬಿಡುಗಡೆಯೆಂದು ಗೊತ್ತಾಯಿತು. ಆ ದಿನ ಬೆಳತನಕ ಅವನಿಗೆ ನಿದ್ರೆಯೇ ಇಲ್ಲ. ಈಗಾಗಲೇ ಊರಿಗೆ ಹೋಗಿ ಮುಟ್ಟಿದವನಂತೆ ಕನಸು ಕಂಡ. ಕಾಣುತ್ತಲೇ ಇದ್ದ.

ಬೆಳಗಾಯಿತು. ತಾಸು ಹೊತ್ತೇರಿತು. ಇವನ ಕಡೆಗೆ ಯಾರೂ ಸುಳಿಯಲಿಲ್ಲ. ಜೇಲಿನ ನೀರಸ ಜೀವನ ಕ್ರಮ ಮತ್ತೆ ಆರಂಭವಾಯಿತು. ಸುಧೀರನ ಮನಸ್ಸು ಉದ್ವಿಗ್ನಗೊಂಡಿತು. ಅಷ್ಟರಲ್ಲಿ ದೂರದಿಂದ ಯಾರೋ ಬರುವಂತೆ ಕಂಡಿತು. ಅಹುದು, ಜೇಲ ಸುಪರಂಟೆಂಡಂಟನೇ. ಸಂಗಡ ಇಬ್ಬರು ಪೋಲೀಸರೂ ಇರುವರು. ಅವರು ನನ್ನ ಕೋಣೆಯ ಕಡೆಗೇ ಬರುತ್ತಲಿರುವರು. ನನ್ನ ಬಿಡುಗಡೆಗೇನೇ ಬರುತ್ತಿರುವರು. ಸುಧೀರನ ಹೃದಯದಲ್ಲಿ ಒಂದು ತರದ ಆನಂದದ ಉನ್ಮಾದ ತುಂಬಿತು. ಜೀವ-ಹಕ್ಕಿ ವಿಶಾಲ ಜಗತ್ತಿನ ಆಕಾಶದಲ್ಲಿ ಹಾರಾಡತೊಡಗಿತು. ದೃಷ್ಟಿಯು ಎಲ್ಲಿಯೋ ನೆಲೆಸಿತು. ಏನನ್ನೋ ಕಂಡು ಸಂತಸಗೊಂಡಿತು. ಅದೆಷ್ಟು ಕಾಲ ? ದೃಷ್ಟಿ ಹೊರಗೆ ಹರಿಯುವ ವರೆಗೆ ಮಾತ್ರ. ಆ ಜೇಲಿನ ಅಧಿಕಾರಿ ಇವನ ಕಡೆಗೆ ಬರಲಿಲ್ಲ. ಬೇರೆ ಕೋಣೆಗೇನೇ ಹೋದನೇನೋ. ಕಣ್ಮರೆಯಾಗಿಬಿಟ್ಟಿದ್ದ. ಸುಧೀರನ ಮನಸ್ಸು ನಿರಾಶೆಗೊಂಡಿತು. ನಿಟ್ಟುಸಿರೊಂದನ್ನು ಬಿಟ್ಟು, ಕಣ್ಣು ಮುಚ್ಚಿ ಬಿದ್ದು ಬಿಟ್ಟ. ಸ್ವಲ್ಪ ಹೊತ್ತಿನ ಮೇಲೆ ಸಿಪಾಯಿ ಎಚ್ಚರಿಸಿ ಹೊರಗೆ ಕರೆದು ತಂದಾಗ—

"ಏಕೆ, ಎಲ್ಲಿ ಕಳಿಸುತ್ತಿರುವಿರಿ ನನ್ನ ?" ಎಂದು ಸುಧೀರ ಕೇಳಿದ.

"ಈ ಜೇಲಿನ ಹೊರಗೆ. ನಿನ್ನ ಶಿಕ್ಷೆ ಮುಗಿಯಿತು. ಇನ್ನು ನಿನ್ನ ಬಿಡುಗಡೆಯಾಗುವುದು."

"ಹೊರಗೆ ಹೋದರೇನಿದೆ ? ಈ ಸಣ್ಣ ಜೇಲಿನಿಂದ ದೊಡ್ಡ ಜೇಲಿಗೆ ಹೋದ ಹಾಗೆ."

ಆದರೆ ಸುಧೀರನ ಮಾತಿನ ಕಡೆಗೆ ಲಕ್ಷ್ಯ ಕೊಡುವವರಾರು ? ಅವನನ್ನು ಹೊರಗೆ ತೆಗೆದು ಜೇಲಿನ ಬಾಗಿಲ ಹಾಕಲಾಯಿತು !

ಅವನ ಮೊದಲಿನ ಅರಿವೆಗಳು ಅವನಿಗೆ ಸಿಕ್ಕುವು. ಅದರೊಡನೆಯೇ

ಮುಂಬಯಿ ವರೆಗಿನ ರೇಲ್ವೆ ಟಿಕೆಟ್ ಬಂದು ಕೈಸೇರಿತು. ಹೊರ ಜಗತ್ತಿನೊಡನೆ ಈಗ ಉಂಟಾದ ಸಂಬಂಧ ಹೇಗೊ ಹೇಗೊ ಅನ್ನಿಸ ಹತ್ತಿತು. ಆದರೂ ಕಡಿದ ಸಂಬಂಧ ಮತ್ತೆ ಜೋಡಿಸಲ್ಪಟ್ಟಿತು! ಅದೆಂಥ ಸಂಬಂಧ?

* * * *

ಅದೇ ಸಂಜೆ ಅಜಿತ ಸುಧೀರರಿಬ್ಬರೂ ಊರಿಗೆ ಹೋಗಲೆಂದು ಪುಣೆಯ ರೇಲು ಹತ್ತಿದರು. ಸುಧೀರನ ಮನಸ್ಸು ಇಂದಿರೆಯನ್ನು ಕಾಣಲು ಹಾತೊರೆಯುತ್ತಿತ್ತು. ಉಗಿಬಂಡಿ ಹೊರಡುವ ಮುಂಚೆ ಅಜಿತ ಕಿಡಕಿಯೊಳಗಿಂದ ಹೊರಗೆ ನೋಡಿ, ವಿಶಾಲವಾಗಿ ಹಬ್ಬಿರುವ ನಗರವನ್ನು ಕುರಿತು ತನ್ನಲ್ಲಿಯೇ ಅಂದುಕೊಂಡ. ಅದೊಬ್ಬ ಆಧುನಿಕ ಕವಿಯ ಕವನವಾಗಿತ್ತು.

೧

ನಿನ್ನ ಕಂಡೆ.
ಕಡಲ ನೀರ್ಕುಡಿದದರ
ಬುಡನೆಲವ ನೆಲೆ ಮಾಡಿ
ಕಪ್ಪು ಮಡಿಕೆಯ ಮೈಯ
ತಪ್ಪಲದ ಕಡೆ ತೂರಿ
ನೋಡುವರ ಮೈಮುಳ್ಳು
ಕೂಡಿ ಏಳುವ ತೆರದಿ
ಹಲ್ಲು ಹಂದರ ಹಾಸಿ
ಜೊಲ್ಲು ಹಂಬಲು ತೋರಿ
ಪುಡಿಯಾಳು ಕಟ್ಟಾಳು
ಜಡದ ನಾಡಲಿ ಬಾಳು-
ವೆಲ್ಲ ಬಗೆ ಜೀವಗಳ
ಕೊಲ್ಲಲಿಕೆ ನುಂಗಲಿಕೆ
ಬಾಯ್ತೆರೆದು ಬಿದ್ದಿರುವ
ಭವ್ಯ ಘನ ಹಿರಿ ಮೊಸಳೆ!
ನಿನ್ನ ಕಂಡೆ!
ಮುನ್ನೆಂದು ಕಾಣದಿಹ
ಕಾಣ್ಕೆ ಕಂಡೆ!

೨

ಬೇರೊಂದ ನಾ ಕಂಡೆ.
ಹಗಲ ಸೆಕೆ-ಬಿಸಿಲಲ್ಲಿ
ನೊಗದಿ ಭಾರವ ಹೊತ್ತು
ದುಡಿವ ಜನ ದನವಾಗಿ

ಇಡಿತೆರೆದ ಬಾಯುಬ್ಬುರುಗು
ಬಿಸಿಯುಸಿರು ಕಂಗೆಣ್ಣು
ಕಸಿವಿಸಿಯು ಶಿಖೆ ಕಂಡೆ.
ಇರುಳ ಮಿಂಚಿನ ಸರದ
ಮರುಳು ದೀವಿಗೆಗಳೊಳು
ದಣಿದು ತಣಿಯದೆ ಮಲಗಿ
ಕನಸೆಂಬ ಕಾಳ್ಗಿಚ್ಚು—
ನೆಲ ಹೊಕ್ಕು ತವಮ್ಮಾಸೆ—
ಹುಲ್ಲು ಹಸುರನು ಸುಡುವ
ಲಕ್ಷೋಪಲಕ್ಷ ನರ-
ವಾಂಛಿತದ ಜ್ವಾಲೆ ಕಂಡೆ.
ಕಡಲಡಿಯ ಹಿರಿ ಮೊಸಳೆ.
ಒಡಲೊಳಗೆ ಸಿಲ್ಕಿರುವ
ಜೀವರಾಶಿಯ ನುಂಗಿ
ಜೀವದುಂಬಿದ ಬೊಂಬೆ
ಕಂಡೆ ನಾ ನಿನ್ನ ಕಂಡೆ.

೩

ಮರೆಯದಿರು, ಹಿರಿದಾದ-
ರೂ ನೀನು ಬರಿ ಬೊಂಬೆ.
ನಾಣ್ಯ ಮೋಹದ ಹಲವು
ಮಾನ್ಯ ಮಾನವ ಶೈಲ—
ಹೃದಯದಿ ಹಿರಿಹೆಮ್ಮೆ
ಅದಯ ಹಸ್ತದ ಜಂಭ
ರಚಿಸಿರುವ ಬರಿ ಬೊಂಬೆ.
ರುಚಿರವೆನಿಸುವ ಬೊಂಬೆ.
ಕಂಡೆ ನಾ ನಿನ್ನ ಕಂಡೆ.

ಬೊಂಬೆ!
ಘೋರ ಜೀವನ ಮರಣ
ಸಾರಚಿತ್ರವೆ, ಕ್ಷಮಿಸು.
ನಿನ್ನ ನಾ ಪ್ರೀತಿಸುವೆ.
ನೀನೆನಗೆ ಬೇಕು ಬೇಕು.
ನಿನ್ನ ಕಂಡರಿತೊಲಿವ
ತನ್ನ ತಾ ಕಾಣುವನು.
ನಿನ್ನ ದರ್ಪಣದಲ್ಲಿ
ನಾ ಜಗದ ಕತೆಯರಿತೆ.

—ರಸಿಕ ರಂಗ

## ೧೯

ಅಜಿತನನ್ನು ತಲೆಬಾಗಿಲಲ್ಲಿ ಕಂಡೊಡನೆಯೇ "ಅಣ್ಣಾ ಬಂದ, ಅಣ್ಣಾ ಬಂದ!" ಎಂದು ಕೂಗುತ್ತ ಅಂಗಳದಲ್ಲಿದ್ದ ಹುಡುಗರು ಒಳಗೆ ಓಡಿದರು. ಆದಗೌಡನು ಇದೀಗ ಚಾವಡಿಗೆ ಹೋಗಿದ್ದ, ಹೆಂಗಸರೆಲ್ಲರೂ ಒಳಗೆ ಇದ್ದರು. ಈ ಕೂಗು ಮೊದಲು ಕಿವಿಗೆ ಬಿದ್ದದ್ದು ಇಂದಿರೆಯ ಕಿವಿಗೆಯೇ. ಕೇಳಿದೊಡನೆಯೇ ಹೊರಗೆ ಓಡಿ ಬಂದಳವಳು. ನಲ್ಲ ನಲ್ಲೆಯರ ಭೆಟ್ಟಿ ಮೆಟ್ಟುಗಲ್ಲಿನ ಮೇಲೆಯೇ ಆಯಿತು. ಎಂಟು ತಿಂಗಳ ನಂತರದ ದರ್ಶನವದು!

"ಬಂದಿರಿ!" ಎಂದಿಷ್ಟೇ ಅವಳ ಬಾಯಿಂದ ಉದ್ಗಾರ ಹೊರಟಿತು. ನಡುವಿನ ಇಂಥ ಅಗಲುವಿಕೆಯಿಂದ ಇಬ್ಬರಲ್ಲಿಯೂ ಒಂದು ತರದ ಸಂಕೋಚ ಜನಿಸಿದ್ದಿತೇನೊ! ಆದರೂ ಅಲ್ಲಿ ಅಜಿತನೂ ಇನ್ನುಳಿದ ಹುಡುಗರೂ ಇರುವರೆಂಬ ಅರಿವು ಇಲ್ಲದೆಯೇ ಇಂದಿರೆಯು ಸುಧೀರನನ್ನು ಅಪ್ಪಿ ನಿಂತಿದ್ದಳು. ಮಲ್ಲಿಗೆ ಮೂವನ್ನಪ್ಪಿದಂತೆ, ಅವನೂ ಅವಳನ್ನು ಗಟ್ಟಿಯಾಗಿ ಅಪ್ಪಿದ್ದ. ಅವಳ ಕೈಗಳೆರಡೂ ಪತಿಯ ಕೊರಳನ್ನು ಗಟ್ಟಿಯಾಗಿ ಹಿಡಿದಿದ್ದುವು. ಅವನ ಕೈಯೂ ಅವಳ ಕುರುಳನ್ನು ತೀಡಿತು.

ಮನೆಯವರಾರಾದರೂ ಹಿರಿಯರು ಕಂಡಿದ್ದರೆ ಏನೆನ್ನುತ್ತಿದ್ದರೋ!

ಹೀಗೆ ಎಷ್ಟು ಹೊತ್ತು ಕಳೆಯಿತೆಂಬುದು ಅವರಿಬ್ಬರಿಗೂ ಗೊತ್ತಾಗಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಇಂದಿರೆಯ ಮನದ ಆವೇಗ ಹಿಡಿತಕ್ಕೆ ಬಂದಂತಾಗಲು ಕರಗಳು ಸಡಿಲಿದುವು. ಆದರೂ ಇನ್ನೂ ಪತಿಯ ಮೈಗೆ ಹೊಂದಿಯೇ ನಿಂತಿದ್ದಳು.

"ಬಂದರು!" ಈ ಶಬ್ದವನ್ನು ಅವಳು ಮೇಲಿಂದ ಮೇಲೆ ಉಚ್ಚರಿಸುತ್ತಿದ್ದಳು.

"ನೀವು ಬಂದಿರಿ?"

"ಹೀಗೇಕೆ ಆದಿರಿ?"

ಅವಳ ಎರಡೂ ಕಣ್ಣುಗಳಿಂದ ಒಂದೇ ಸವನೆ ನೀರು ಹೊರಹೊಮ್ಮುತ್ತಿದ್ದುವು. ಅವು ಸುಧೀರನ ಹೃದಯದ ಹತ್ತರ ಅಂಗಿಯ ಮೇಲೆ

ಬಿದ್ದು ಇಂಗುತ್ತಿದ್ದುವು. ಅವಳ ದುಃಖವನ್ನೆಲ್ಲ ತಾನು ಹೀರಿಕೊಂಡು ಸಮಾಧಾನ ಪಡಿಸುವನೇನೋ ಸುಧೀರ ಅನ್ನುವಂತಿತ್ತು, ಆ ಕಣ್ಣೀರಿನ ಕೊಡಕೊಳ್ಳುವಿಕೆಯ ಸನ್ನಿವೇಶ.

ಈಗ ಮನೆಯೆಲ್ಲ ಸಂತಸದಿಂದ ತುಳುಕುತ್ತಿದೆ. ಇಂದಿರೆ ಗಂಡು ಕೂಸನ್ನು ಹೆತ್ತಿದ್ದಳು. ಮದಿವೆಯೂ ಸಮೀಪಿಸಿದುದರಿಂದ ಸುತ್ತಲಿನ ಆಪ್ತೇಷ್ಟರೂ ಬಂದಿದ್ದಾರೆ. ಹಗಲಿರುಳು ಫಲಾರದ ಜೀನಸುಗಳನ್ನು ಮಾಡುವ ಗಡಿಬಿಡಿ ಮನೆಯಲ್ಲಿ. ಇತ್ತ ಹೆರಿಗೆಯ ಮನೆ ಅತ್ತ ಹಂದರದ ಮನೆ, ಗೊಂದಲಕ್ಕೇನು ಕಡಿಮೆಯಿಲ್ಲ. ಹಿಂದಿನ ಚಿಂತೆ ಬಿಟ್ಟು ಮದಿವೆಗೆ ಹೋಗಲಿಕ್ಕೆ ಒಳ್ಳೆಯದಾಯಿತು; ಇಂದಿರೆ ಹಡೆದಳು ಎಂದು ಮುರದೇವಿಯ ಹೃದಯ ಹಗುರಾಗಿದೆ, ಹರುಷಗೊಂಡಿದೆ. ಹಗಲು ಹದಿನಾರು ಸಲ ಸುಧೀರನನ್ನೂ ಮೊಮ್ಮಕ್ಕಳನ್ನೂ ಒಳಗೆ ಕರೆದು ಉಂಡಿ ಚಕ್ಕುಲಿ ಕರಚೀಕಾಯಿಗಳ ತಾಟು ತುಂಬಿ ಮುಂದಿಡುವಳವಳು ಈಗಿನ ಹುಡುಗರು ಕೆಲಸದಲ್ಲಿ ಮೆತ್ತಗಿದ್ದಂತೆ ತಿನಿಸಿನಲ್ಲಿಯೂ ಕೂಡ ಸೂಕ್ಷ್ಮ ಬಹಳ. ಒಂದೇ ಉಂಡಿಯನ್ನು ಪ್ಲೇಟಿನಲ್ಲಿ ಇಟ್ಟು ತಂದಿಟ್ಟರೆ ಅರ್ಧ ತಿಂದು ಇನ್ನರ್ಧ ಇಟ್ಟು ಚಹದ ಕಪ್ಪಿನ ಕಡೆಗೆ ಆತುರದೃಷ್ಟಿಯಿಂದ ನೋಡುವ ಆ ತರುಣರಿಗೆ ಈ ತಾಟು ತುಂಬಿದ ಫಲಾಹಾರವೊಂದು ಅವ್ಯವಹಾರದ ಮಾದರಿಯೇ. ಆದರೂ ಅದು ಅಜ್ಜಿಯ ಅಕ್ಕರೆಯ ಚಿನ್ಹವೆಂದರಿತ ಅವರು ಕರೆದಾಗ ಒಳಗೆ ಹೋಗಿ ಒಂದಿಷ್ಟು ತಿಂದು ಹೊರಗೆ ಬಂದು ಕೂಡುತ್ತಿದ್ದರು. ಈಗ ರಾವಸಾಹೇಬ ಅಜಿತ ಸಧೀರರೆಲ್ಲರೂ ಕೂಡಿಯೇ ತಿನ್ನುತ್ತಿದ್ದರು; ಕೂಡಿಯೇ ಇರುತ್ತಿದ್ದರು.

ಅಜಿತನ ಮೊದಲಿನ ಗೆಳೆಯರು ಈಗ ಒಬ್ಬೊಬ್ಬರೇ ಬಂದು ಕಾಣತೊಡಗಿದರು. ಜಾಧವ ಮಾಸ್ತರರೂ ಬರುವರು ಅಜಿತ ಎಲ್ಲರೊಡನೆಯೂ ಮನಬಿಚ್ಚಿ ಮಾತಾಡುವ, ನಕ್ಕು ಕೆಲೆಯುವ, ಒಳಗೆ ಕರೆದೊಯ್ದು ಏನಾದರೂ ತಿನ್ನಲಿಕ್ಕೆ ಕೊಟ್ಟು ಆದರಿಸಿ ಬಾಗಿಲ ವರೆಗೆ ಹೋಗಿ ಕಳಿಸಿ ಬರುವ. ಗೌಡರ ಮನೆಯಲ್ಲಿ ಊರ ಜನರಿಗೆ ಈ ಸನ್ಮಾನ ಸಿಗುವುದು ಅಪರೂಪ. ಅಜಿತನ ಗೆಳೆಯರಾದರೇನಾಯಿತು ? ನಾಳೆ ಅವರ ಮೇಲೆ ರಾವಸಾಹೇಬ ಗೌಡನಾಗಬೇಕಿಲ್ಲವೇ ? ಅಂಥವರಿಗೆ ಈ ಸಲಿಗೆಯೇ ? ಎಂದು ಗೌಡರು

ಮುಖ ಮುದುರಿಸುತ್ತಿದ್ದರು. ಆದರೆ ಅವರ ಮುಖದ ಕಡೆಗೆ ಅಜಿತ ನೋಡಬೇಕಲ್ಲ.

ಬರಬರುತ್ತ ಜಾಧವ ಮಾಸ್ತರರಿಗೂ ಸುಧೀರನೊಡನೆ ಸಲಿಗೆ ಬೆಳೆಯಿತು. ಅವರೂ ಒಂದು ದಿನ ಸುಧೀರನಿಗೆ ಚಹಕ್ಕೆ ಔತಣವಿತ್ತರು. ಜೊತೆಗೆ ರಾವಸಾಹೇಬ ಅಜಿತರೂ ಹೋಗಿದ್ದರು. ಆಗ ಮಾತಿಗೆ ಮಾತು ಹೊರಟು ಜೇಲಿನ ಅನುಭವದ ಕಡೆಗೆ ಹರಟೆ ಹೊರಳಿತು.

" ಜೇಲ ಅಂದರೆ ಒಂದು ಚಿಕ್ಕ ಭಾರತವೇ. ಅಲ್ಲಿ ಒಂದು ತುಣುಕು ಬೀಡಿಗಾಗಿ ದೊಡ್ಡ ದೊಡ್ಡ ಹೊಡೆದಾಟಗಳೂ ಆಗುತ್ತವೆ! "

" ಬೀಡಿಗಾಗಿ! " ಜಾಧವ ಮಾಸ್ತರರು ಉದ್ಗರಿಸಿದರು.

" ಚಟ ಒಂದಿರುವದಲ್ಲ; ಚಟ ಪೂರಯಿಸಲಿಕ್ಕೆ ಏನೆಲ್ಲ ಮಾಡುವರು. ಒಳಗೆ ಚುಟ್ಟ ಸೇದಲು ಸಿಗುವದೆಂದರೆ ಸ್ವರ್ಗಸುಖ ಸಿಕ್ಕಂತೆ ಅವರಿಗೆ! "

" ಒಳಗೆ ಚುಟ್ಟ ಕೊಡುವರೇ? "

" ಅವರೇಕೆ ಕೊಡಲಿಕ್ಕೆ ಬೇಕು? ಜೇಲಿನಲ್ಲಿ ಎಲ್ಲವೂ ಸಿಗುತ್ತದೆ. ಕಳ್ಳದಾರಿ ಬೇಕಾದಷ್ಟಿವೆ. ಹೆಂಡರನ್ನಷ್ಟೇ ತರಿಸಲಿಕ್ಕೆ ಬರುವದಿಲ್ಲ." ಎಂದ ಸುಧೀರ. ರಾವಸಾಹೇಬ ಬೆರಗಿನಿಂದ ಕೇಳುತ್ತಿದ್ದ. ಈಗೀಗ ಅವನಿಗೆ ಒಂದೊಂದಾಗಿಯೇ ವಿಷಯ ತಿಳಿಯುತ್ತಿದ್ದಿತು. ಮನೆಯವರಿಗೂ ಕೊಂಚ ಕೊಂಚ ಗೊತ್ತಾಗಿ ಹೋಯಿತು. ಮಗಳ ಇಂದಿನವರೆಗಿನ ನಡತೆಯ ಅರ್ಥ ಈಗ ಸರಸ್ವತಿಗೆ ಆಗಹತ್ತಿತು. ಆದರೂ ಯಾರೂ ಯಾರ ಮುಂದೆಯೂ ಮಾತಾಡಲು ಮನಸ್ಸು ಮಾಡರು. ತಮ್ಮ ಅಳಿಯನಿಗೆ ಶಿಕ್ಷೆಯಾದುದನ್ನು ತಾವೇ ಆಡಿಕೊಳ್ಳುವುದೇ? ಊರಲ್ಲಿ ನಮ್ಮ ಹಿರಿಮೆಯೇನು ಆಮೇಲೆ? ಯಾರಿಗೂ ಗೊತ್ತಾಗದಂತಿರುವುದೇ ಒಳಿತು. ತಾವೂ ತಿಳಿದೂ ತಿಳಿಯದಂತಿದ್ದರಾಯಿತು ಎಂದು ತಮ್ಮಷ್ಟಕ್ಕೆ ಅಂದುಕೊಂಡು ಸುಮ್ಮನಿದ್ದರು. ಅದರಲ್ಲಿ ಮದುವೆಯ ಗೊಂದಲ ಬೇರೆ ಮನೆಯಲ್ಲಿ. ಒಬ್ಬರು ಕೇಳಿದರನ್ನುವಷ್ಟರಲ್ಲಿ ಹತ್ತು ಜನ ಕೇಳಿ ಅಪ್ಪರ ಕಿವಿಯ ವರೆಗೂ ಮಾತು ಹೋದೀತು. " ಹಾಳಜಾವಿ ಜೀವವೊಲ್ಲರು! ಅವರ ಫಲ ಪುಣ್ಯ ಅವರು ಭೋಗಿಸುವರು. ನಾಲ್ಕು ದಿನ ಮದಿವೆಗೆ ಬಂದಿದ್ದಾರೆ ಮತ್ತೆ ಹೋಗಿಬಿಡುವರಂದರಾಯಿತು. " ಎಂದುಕೊಂಡಿದ್ದರು ಗೌಡರು.

ಗಂಗವ್ವ ಏಕಾಂತದಲ್ಲಿ ಈ ಮಾತೆತ್ತಿದಾಗ "ನನಗಂದೇ ಗೊತ್ತಾಗಿದೆ. ಮಾಸ್ತರು ಮುಂಬಯಿಗೆ ಹೋಗಿ ಬಂದ ಕೂಡಲೇ ಹೇಳಿದ್ದಾರೆ. ಆದರೆ ನಿಮ್ಮ ಮುಂದೆಲ್ಲ ಹೇಳಿ ಏಕೆ ಮನೆಯ ಮರ್ಯಾದೆಯನ್ನ ಕಳಕೊಳ್ಳುವುದು ಅಂತ ಹೊಟ್ಟೆಯಲ್ಲಿ ಇಟ್ಟುಕೊಂಡಿದೇನೆ. ಇನ್ನೂ ಏನ ಮಾಡುವುದಿದೆ? ಹುಡುಗ ಒಳ್ಳೆಯವ ಹೊರಡಲಿಲ್ಲ, ಇಂದಿರೆಯನ್ನು ಎಂದ ಮದುವೆ ಮಾಡಿ ಕೊಟ್ಟೆವೋ ಅಂದೇ ನಮ್ಮ ಪಾಲಿಗೆ ಸತ್ತಳೆಂದು ತಿಳಿದು ಕಣ್ಣು ಮುಚ್ಚಿ ಕೂಡುವುದಾಯಿತು" ಎಂದು ಹೇಳಿ ಸುಮ್ಮನಾದರು. ಆದರೂ ಅವರೂ ಸುಧೀರನಿಗಾದ ಈ ಶಿಕ್ಷೆಯಿಂದ ಬಹಳ ನೊಂದು ಕೊಂಡಿದ್ದರು. ಮನೆತನಕ್ಕೆ ಕಲಂಕ ತಗಲಿತೆಂದೇನೊ !

ಅಜಿತ ಸುಧೀರರನ್ನು ಗೆಳೆಯರು ಆದರದಿಂದ ಕಾಣುವುದೂ, ಅಜ್ಜಿ ಮನೆಯಲ್ಲಿ ಆಗಾಗ ಕರೆದು ತಿಂಡಿ ತೀರ್ಥಗಳನ್ನು ಕೊಡುವುದೂ ರಾವ ಸಾಹೇಬನ ಹಿರಿಮೆಗೆ ಸ್ವಲ್ಪ ಕುಂದು ಬಂದಂತೆನಿಸಹತ್ತಿತವನಿಗೆ. ಮೊದ ಮೊದಲು ಇಂದಿಲ್ಲ ನಾಳೆ ಇದು ಕಡಿಮೆಯಾದೀತು, ಹೊಸದಾಗ್ಗೆ ಬಂದವ ರೆಂದು ಹೀಗೆ ಮಾಡುವರು ಎಂದುಕೊಂಡು ನಾಲ್ಕು ದಿನ ಸುಮ್ಮನಿದ್ದ. ಆದರದು ಕಡಿಮೆಯಾಗಲಿಲ್ಲ. ಇನ್ನು ಸುಮ್ಮನೆ ಕುಳಿತು ಉಪಯೋಗ ಎಲ್ಲಿಂದು ರಾವಸಾಹೇಬನು ಸುಧೀರ ಜೇಲಿಗೆ ಹೋದವನೆಂದು ತನಗೆ ಸಿಕ್ಕ ಸತ್ಯವನ್ನು ಮನೆಯುವರ ಮುಂದೆ ಸಾರಿ ಅವನ ವಿಷಯಕ್ಕೆ ಆದರ ಕಡಿಮೆ ಮಾಡಲು ಯತ್ನಿಸಿದ ಮದುವೆಗೆ ಬಂದ ಆಪ್ತೇಷ್ಟರಲ್ಲಿ ಗೌಡ ರಂತೂ ಆ ವಿಷಯದತ್ತ ಮನಸ್ಸು ಹಾಕಲಿಲ್ಲ. ತಿರುಗಿ ಮಗನನ್ನೇ ಬೆದರಿಸಿಕೊಂಡರು. ಹೆಂಗಸರಿಗೆ ಈ ವಿಷಯ ರಾವಸಾಹೇಬನಿಂದ ತಿಳಿ ದಾಗ ವಿಶೇಷವೇನೂ ಎನಿಸಲಿಲ್ಲ. ಈಗೀಗ ಒಳಗೊಳಗೇ ಇಂದಿರೆಯಿಂದ ಎಲ್ಲ ಸಂಗತಿ ಗೊತ್ತಾಗಿ, ಚರ್ಚೆಯಾಗಿ ಮುಗಿದು ಹೋಗಿದ್ದಿತು. ಆದರಿಂದ ರಾವಸಾಹೇಬ ನಿರೀಕ್ಷಿಸಿದ ಫಲ ದೊರೆಯಲಿಲ್ಲ. ಆಮೇಲೆ ಮನೆಗೆ ಬರುವ ನಾಲ್ಕೆಂಟು ಗೆಳೆಯರ ಮುಂದೆ ಈ ಕಥೆ ಸಂದರ್ಭ ನೋಡಿ ಮಾತಿನಲ್ಲಿ ಸೇರಿಸಿ ಬೀರಿದ. ಆದರಿಂದ ಅವರು ಸುಧೀರನ ಬಗ್ಗೆ ಆದರ ವನ್ನೇ ತೋರಿಸಿದರು. ಈಗಾಗಲೇ ತರುಣರ ಮನದಲ್ಲಿ ಮಹಾತ್ಮರ ಚಳವಳಿಯಿಂದ ಜೇಲು ತಪೋಭೂಮಿಯಾಗಿದ್ದಿತು. ರಾಜನಿಷ್ಠ ಗೌಡನ

ಮಗನಾದ ರಾವಸಾಹೇಬನಿಗೇನೋ ಜೇಲಿಗೆ ಹೋಗಿ ಬಂದವ ಕ್ಷುದ್ರ ನೆಂದು ಭಾವನೆ. ಹಾಗೆ ಜನರೂ ತಿಳಿದು ವರ್ತಿಸುವರೆಂದು ಅವನ ಕಲ್ಪನೆ. ಅವನ ಕಲ್ಪನೆ ತಲೆಕೆಳಗಾಯಿತು. ಅದರಿಂದವನು ಒಳ ಗಿಂದೊಳಗೇ ಕುದಿಯುತ್ತಿದ್ದ. ಮಿಡುಕುತ್ತಿದ್ದ. ಈಗೀಗ ಅಜ್ಜಿ ಸಾಮೂಹಿಕ ವಾಗಿ ಊಟಕ್ಕೆ ಕರೆದು ಹೋದರೆ ರಾವಸಾಹೇಬ ಊಟಕ್ಕೆಯೇ ಹೋಗುತ್ತಿರಲಿಲ್ಲ. ಹಾಗೆಯೇ ಕೋಣೆಯಲ್ಲಿ ಹೋಗಿ ಸೆಟೆದು ಕೂತು ಬಿಡುವ. ಕೊನೆಗೆ ಸರಸ್ವತಿಯು ಬಂದು ಆಗ್ರಹದಿಂದ ಕರೆದು ಊಟಕ್ಕೆ ಕೂಡಿಸಬೇಕು. ತಾಟಿನ ಮೇಲೆ ಕುಳಿತಾಗಲೂ ಸರಸ್ವತಿಯು ಎಲ್ಲ ರಿಗೂ ಸಮನಾಗಿ ಬಡಿಸಿದರೂ ಅಳಿಯನಿಗೂ ಮಗನಿಗೂ ಮೇಲಿಂದ ಮೇಲೆ ಕೇಳಿ ಹಾಕುವಳೆಂದೂ ತನ್ನ ಕಡೆಗೆ ಹೊರಳಿ ಕೂಡ ನೋಡುವ ದಿಲ್ಲವೆಂದೂ ಇವನು ಭಾವಿಸಿದ್ದ. ಅವಳು ಸ್ವಾಭಾವಿಕವಾಗಿ ತುಪ್ಪ ಬಡಿಸಲು ಬರಲು,—

"ಅಳಿಯದೇವರಿಗೆ ಹಾಕಲ್ಲ! ನನಗೇನು?" ಎಂದು ಕೊಂಕು ನುಡಿಯುವ.

ಅವನ ಮಾತಿನಿಂದ ಸರಸ್ವತಿಯ ಹೃದಯಕ್ಕೆ ಸಾವಿರ ಚೇಳು ಕಡಿದಷ್ಟು ನೋವಾಗುವದು. ಆದರೂ ಅವಳು, "ಅಳುಕಲಿಕ್ಕಿದೆ ಅಡ ಲಿಕ್ಕಿಲ್ಲ" ಎಂದುಕೊಂಡು ಸುಮ್ಮನಿರುವಳು. ಅಲ್ಲೇ ಕುಳಿತ ಮುರ ದೇವಿ ಮುದಿಕೆ ಮಾತ್ರ ಇದು ಮೊಮ್ಮಗನ ಸಹಜ ಪರಿಹಾಸವೆಂದು ಭಾವಿಸಿ,—

"ಬಡಿಸಲಿಕ್ಕೆ ಬೇಕಪ್ಪ! ಸಕ್ಕರಿ ತುಪ್ಪಿನೊಳಗ ಎರಿವಲ್ಲಿರೇನು ಅವನನ್ನ?" ಎಂದು ಕೇಳುವಳು.

"ಸಕ್ಕರಿ ತುಪ್ಪಿನೊಳಗ ಮುಳುಗಿಸಲಿಕ್ಕೆ ನಮ್ಮಲ್ಲೇನು ಅದರ ಬಾವಿಯಿಲ್ಲ?"

"ನಾಳೆ ನಿಮ್ಮ ಅತ್ತೆ ಮಾವನ ಮನೆಯೊಳಗ ಬಾವಿ ಇರತದನೋ ಇಲ್ಲೋ ನೋಡೋಣಲ್ಲ!" ಎಂದು ಕೊಂಕು ನುಡಿಯನ್ನೇ ಸರಳವಾಗಿ ಮುಗಿಸುತ್ತಿದ್ದಳು ಮುರದೇವಿ. ರಾವಸಾಹೇಬನೂ ಅಜ್ಜಿಯ ಮಾತಿಗೆ ತೆಪ್ಪಗಾಗಿಬಿಡುತ್ತಿದ್ದ.

ಇದರಲ್ಲಿ, ಹೇಗೋ ಮನೆಯ ಹೆಂಗಸರಲ್ಲಿ ಅಜಿತನ ಮದುವೆಯ ವಿಷಯಕ್ಕೂ ಮಾತು ಹೊರಟಿತು. ಅದು ಒಂದೆರಡು ದಿನಗಳಲ್ಲಿ ಗೌಡನ ಕಿವಿಯ ವರೆಗೂ ಹೋಗಿ ತಲುಪಿತು ಕೂಡ. ಗೌಡನೂ ವಿಚಾರಿಸಿದ, 'ತನ್ನ ಮಗನ ಮದಿವೆಯನ್ನಷ್ಟೇ ಮಾಡಿ ದೊಡ್ಡವನಾದರೂ ತಮ್ಮನ ಮಗನ ಮದಿವೆ ಮಾಡಲಿಲ್ಲ ಗೌಡ' ಎಂದು ಜನರೂ ಆಡಿಕೊಳ್ಳಬಹುದು ಎಂದು. ಅದರಿಂದ ಅಜಿತನ ಮದುವೆಯ ಮಾತಿಗೆ ಅವನೂ ಚಾಲನೆ ಕೊಟ್ಟ. ಅದರ ಜೊತೆಗೆ ಗಂಗವ್ವನು, "ಹೇಗಾದರೂ ರಾವಸಾಹೇಬನ ಮದುವೆ ಮಾಡಿಕೊಂಡು ಬಂದು ಊರ ಜನರಿಗೊಂದು ಊಟ ಹಾಕಲಿಕ್ಕೇ ಬೇಕು. ಅದರೊಳಗೇ ಒಂದು ಹುಡಗಿನ ನೋಡಿ ಅಜಿತನ ಅಕ್ಕಿಕಾಳು ಒಗೆದು ಬಿಟ್ಟರಾಯಿತು. ಇದೇ ಖರ್ಚಿನೊಳಗ ಮದಿವೇ ಆಗಿ ಹೋಗ್ತದ" ಎಂದು ಗಂಡನಿಗೆ ಸೂಚಿಸಿದಳು.

ಗೌಡನಿಗೆ ಒಮ್ಮೆಲೇ ಈ ವಿಚಾರ ಸರಿಯೆನಿಸಲಿಲ್ಲ. ಯಾಕಂದರೆ ಗಂಡುಮಕ್ಕಳ ಮದಿವೆಯನ್ನು ತಮ್ಮ ಮನೆಯಲ್ಲಿ ಮಾಡಿಕೊಳ್ಳುವ ಪರಿಪಾಠ ಎಂದೂ ಇರಲಿಲ್ಲ. ಕನ್ಯಾದಾನ ಪದ್ಧತಿಯ ಪ್ರಕಾರ ಅಜಿತನ ಮದುವೆಯೂ ಹೊರಗೇ ಆಗಬೇಕು. ಅದೇ ಭಾವನೆಯಿಂದ ಅವರು ಅಂದರು: "ಅವನ ಮದುವೆ ನಮ್ಮ ಮನೆಯಲ್ಲೇಕೆ? ಯಾರು ಹೆಣ್ಣು ಕೊಟ್ಟವರು ಮಾಡಿಕೊಟ್ಟಾರಲ್ಲ?"

"ಹೂಂ! ನಾಲ್ಕು ವರ್ಷ ಹೆಚ್ಚ ಕಲಿತರೆ ಏನಾಯ್ತು? ಹೆಣ್ಣು ಕೊಟ್ಟು, ಮೇಲೆ ಮದುವೆ ಮಾಡಿ ಕೊಡುವಂಥ ನಡೆತನ ಸಿಗತದೆ ಅವನಿಗೆ? ಅವನೂ ಏನ ರಾವಸಾಹೇಬನ ಹಾಗೆ ಖುದ್ದ ಗೌಡ ಆಗ್ತಾನು?"

ಹೆಂಡತಿಯ ಈ ಮಾತಿನಿಂದ ಗೌಡನಿಗೆ ಗೊತ್ತಾಯಿತು: ತನ್ನ ಮಗ ಗೌಡನಾಗುವವ. ಉತ್ಪನ್ನ ದೊಡ್ಡದು. ಅಂತಲೇ ಇಂಥ ದೊಡ್ಡ ಮನೆತನದವರು ಹೆಣ್ಣು ಕೊಟ್ಟು ಮದುವೆ ಮಾಡಿ ಕೊಡುವರು. ಅಜಿತನಿಗೆ ಇದು ಶಕ್ಯವಿಲ್ಲ. ಎಲ್ಲಿಯಾದರೂ ಅವನಿಗೆ ಯೋಗ್ಯವಿರುವ ಮನೆತನದ ಹೆಣ್ಣೊಂದನ್ನು ನೋಡಿ ನಿಶ್ಚಯಿಸಿಬಿಡಬೇಕು ಎಂದು ಯೋಚಿಸಿದರು. ಅದರಂತೆ, ರಾವಸಾಹೇಬನಿಗೆ ಹೆಣ್ಣುಗಳು ತಾವೇ ನಡಕೊಂಡು ಬರುವವೆಂದು ಸ್ವಸ್ಥ ಕುಳಿತ ಗೌಡರು ಅಜತನಿಗಾಗಿ ಅಲೆದಾಡಬೇಕಾ

ಯಿತು. ಅವರು ಒಂದೆರಡು ಕಡೆಗೆ ಹೋಗಿ ಬಂದು, ಅಜಿತನ ಮದುವೆಯನ್ನೂ ಮಾಡುವರೆಂಬ ಸಮಾಚಾರ ತಿಳಯಲು ಹತ್ತಾರು ಜನರು ಹೆಣ್ಣು ಕೊಡಲು ಮುಂದೆ ಬಂದರು! ಅದನ್ನು ಕಂಡು ಗೌಡರು ಬೆರಗಾದರು. ಯಾವ ಹೆಣ್ಣನ್ನು ಆರಿಸಬೇಕೆಂಬುದೂ ವಿಚಾರಕ್ಕಿಟ್ಟು ಕೊಂಡಿತು.

ಗೌಡರ ಮನೆಯಲ್ಲಿ ಈಗ ರಾವಸಾಹೇಬನ ಮದುವೆಯ ಸಿದ್ಧತೆಗಿಂತಲೂ ಹೆಚ್ಚಾಗಿ ಅಜಿತನ ಹೆಣ್ಣಿನ ವಿಷಯಕ್ಕೆ ಮಾತುಕತೆಗಳು ನಡೆದುವು. ದಿನವೂ ಒಂದಿಬ್ಬರು ಬಂದು ಗೌಡರ ಹತ್ತರ ತಮ್ಮ ಹುಡಿಗೆಯ ಮಾತೆತ್ತುವರು. ಅದರಲ್ಲೂ ವರದಕ್ಷಿಣೆಯ ವಿಚಾರವನ್ನೂ ವಧುಪಕ್ಷದವರೇ ಮುಂದೂಡತೊಡಗಿದರು. ದೊಡ್ಡ ಮನೆತನದವರು ಬಂದು ಹೆಣ್ಣು ಕೊಡುತ್ತೇವೆಂದು ವರದಕ್ಷಿಣೆ ಕಟ್ಟಿಕೊಂಡು ಬಾಗಿಲಲ್ಲಿ ಕುಳಿತಿರುವಾಗ ಅಜಿತನಿಗೂ ದೊಡ್ಡವರ ಹುಡಿಗೆಯನ್ನು ಮಾಡದೆ ಏಕೆ ಬಿಡುವುದು? ಎಂದು ಒಮ್ಮೆ ಗೌಡರು ವಿಚಾರಿಸುವರು. ಬರುವ ಹಣದ ಲೆಕ್ಕ ಹಾಕಿ ಮನದಲ್ಲಿ ಹರುಷಗೊಳ್ಳುವರು. ಮತ್ತೊಂದು ಕ್ಷಣದಲ್ಲಿ ಈಗ ವರದಕ್ಷಿಣೆ ಕೊಟ್ಟು ಸೂಜಿಯಾಗಿ ಒಳಗೆ ಸೇರಿ ಹಿಂದಿನಿಂದ ಡಬ್ಬಣವಾಗಿ ಎದ್ದರೆ? ಪಾಲಿನ ವಿಷಯದಲ್ಲಿ ಅಜಿತನ ಬೆನ್ನು ಕಟ್ಟಿದರೆ? ಎಂದೂ ಚಿಂತಿಸುವರು. ಒಳ್ಳೆಯ ಮನೆತನದವರು ತಮ್ಮನ ಮಗನಿಗೂ ಹೆಣ್ಣು ಕೊಡಲು ಬಂದುದರಿಂದ ತನ್ನ ಮನೆತನದ ಖ್ಯಾತಿಯನ್ನು ನೆನೆನೆನೆದು ಹಿಗ್ಗುವನಾದರೂ ಅವರ ಹುಡಿಗೆಯನ್ನು ಅಜಿತನಿಗೆ ತಂದುಕೊಂಡು ಪಾಲಿನ ನ್ಯಾಯಕ್ಕೆ ಅವನಿಗೆ ಬೆನ್ನು ಕಟ್ಟಲು ತಾನೇ ನೆರವಾಗಲು ಅವನ ಮನಸ್ಸು ಒಪ್ಪದು. ಅದರಲ್ಲೂ ತೀರ ಸಾಮಾನ್ಯ ಜನರ ಹುಡಿಗೆಯನ್ನು ಇನ್ನು ಮಾಡುವದಾದರೂ ಹೇಗೆ? ಎಂದೂ ಪ್ರಶ್ನೆ ಉದ್ಭವಿಸಿತು. ಅಜಿತನಿಗಂತೂ ಇನ್ನೂ ಮದುವೆಯ ವಿಚಾರವನ್ನೇ ಸ್ವತಃ ಗೌಡರೇ ಕೇಳಿರಲಿಲ್ಲ. ಅವನೇನೂ ತನ್ನ ಮಗನಲ್ಲ. ಒತ್ತಾಯ ಪಡಿಸಲೂ ಬರುವದಿಲ್ಲ. ತಾನು ಒಪ್ಪಿದ ಹೆಣ್ಣನ್ನೇ ಮಾಡಿಕೊಂಡಾನೆಂಬುವಂತೆಯೂ ಇಲ್ಲ. ಹೀಗಾಗಿ ಗೌಡರು ಬಹಳ ಪೇಚಿನಲ್ಲಿ ಬಿದ್ದರು ಆದರೂ ಮೊದಮೊದಲು ಬಂದ ಸಾಲ್ಕಾರು ಒಳ್ಳೆಯ ಮನೆತನದ ಹುಡಿಗೆಯರಿಗೆ ಏನಾದರೂ ಒಂದು

ಹೆಸರಿಟ್ಟು ಹಿಂದಿರುಗಿಸುತ್ತಿದ್ದರು. ಒಂದಕ್ಕೆ ಮುಖ ಕಪ್ಪು—ಇನ್ನೊಂದಕ್ಕೆ ಗಲ್ಲದ ಮೇಲೆ ಮಾತಾಡುವಾಗ ತಗ್ಗು ಬೀಳುವದು— ಮಗುದೊಂದು ಹುಬ್ಬಿನ ಮೇಲೆ ಮಚ್ಚೆಯುಳ್ಳದು— ಇನ್ನೊಂದು ಉದ್ದಗೋಣಿನದು—ಎಂದು ತಿರಸ್ಕರಿಸುತ್ತಿದ್ದರು. ವರನ ಅವತಾರ ತಾವೇ ತಾಳಿದ್ದರು !

ಅಜಿತ ಯಾರ ಮುಂದೆಯೂ ಮದುವೆಯ ಮಾತನ್ನು ಇನ್ನೂ ಎತ್ತಿರಲಿಲ್ಲ. ಅವನು ತನ್ನಲ್ಲಿಯೇ ವಿಚಾರದಲ್ಲಿದ್ದ, ಮದುವೆಯಾಗಬೇಕೋ ಬೇಡವೋ ಎಂದು. ಮಾಡಿಕೊಳ್ಳುವುದೆಂದೇ ನಿಶ್ಚಯಿಸಿದ ಮೇಲೆಯಲ್ಲವೆ ಹುಡಿಗೆಯನ್ನು ಆರಿಸುವ ವಿಚಾರ ? ಹೀಗೆಯೇ ಒಂದು ಮಧ್ಯಾನ ಕೋಣೆಯಲ್ಲಿ ಒಬ್ಬನೇ ಒರಗಿದಾಗ ತನ್ನ ಲಗ್ನದ ವಿಚಾರ ತಲೆಯಲ್ಲಿ ಸುತ್ತುತ್ತಿದ್ದಿತು. ಆದರಂತೆ ಅವನಿಗೆ ತೋರಿಸಲು ತಂದ ಹುಡಿಗೆಯರ ಚಿತ್ರಗಳೂ ಅವನ ಕಣ್ಣೆದುರಿಗೆ ನಿಂತವು.

ನಾವು ಲಗ್ನಸಂಬಂಧಕ್ಕೆ ಬಂಧನವೆಂತಾದರೂ ಏಕೆ ಹೇಳಬೇಕು? ಪ್ರತ್ಯಕ್ಷ ಸ್ವರ್ಗವನ್ನೇ ಭೂಮಿಯ ಮೇಲೆ ನಿರ್ಮಾಣ ಮಾಡುವ ಸಂಜೀವನ ಶಕ್ತಿ ಯಾವುದರಲ್ಲಿವುದೋ ಆ ಸ್ತ್ರೀ ಪ್ರೇಮಕ್ಕೆ ಬಂಧನವೆನ್ನುವುದೆಂದರೇನು ? ಆದರೆ ಇನ್ನೂವರಗೆ ಭೂಮಿಯ ಮೇಲೆ ಸ್ವರ್ಗ ನಿರ್ಮಾಣವಾದಂತಿಲ್ಲವಲ್ಲ ! ಹಾಗಿದ್ದರೆ ಜಗತ್ತಿನಲ್ಲಿ ಬಡವರ ಗುಡಿಸಲುಗಳೂ ಹೊಟ್ಟೆಯ ಹಸಿವೆಯನ್ನು ಮರೆಯಿಸಲು ಸೆರೆ ಕುಡಿಯುವಿಕೆಯೂ ಸಹನ ಶಕ್ತಿಯಿಲ್ಲದ ಹೊಡೆದಾಟಗಳೂ ಏಕಿರುತ್ತಿದ್ದುವು? ಸ್ತ್ರೀಯರು ಸ್ವರ್ಗ ನಿರ್ಮಾತೃಗಳಾದರೆ ? ಈಗ ಸ್ತ್ರೀಯರು ಪ್ರತಿಯೊಂದು ಮನೆಯಲ್ಲಿ ಇದ್ದಾರಲ್ಲ !

ಇಷ್ಟೇ ಅಲ್ಲ, ಶ್ರೀಮಂತರ ಮನೆತನದ ಹೆಣ್ಣುಮಕ್ಕಳೂ ಕೂಡ ಇರುವರಲ್ಲ. ಅವರೆಲ್ಲರೂ ನೆಟ್ಟಗಿದ್ದಾರೆಂದು ಹೇಳಲಿಕ್ಕೆ ಬಾರದಿದ್ದರೂ ಅವರ ಉಡಿಗೆ ತೊಡಿಗೆಗಳು ಮಾತ್ರ ನೆಟ್ಟಗಿವೆ ಎಂಬುದು ತೋರುತ್ತಲೇ ಇದ್ದಿತು. ಪುರುಷರ ಮನಸ್ಸನ್ನು ಆಕರ್ಷಿಸುವಷ್ಟು ಗುಣವಿದೆ ಅದರಲ್ಲಿ. ಆದರೂ ಕೂಡ ಇತ್ತ ಹಳ್ಳಿಯ ಜೀವನವನ್ನೂ ನೆನೆದ. ಹಳ್ಳಿಯ ಜೀವನದಲ್ಲಿ ನಗರದ ಜೀವನಕ್ಕಿಂತ ಪಾವಿತ್ರ್ಯ ಹೆಚ್ಚೆಂದು ಅವನಿಗೆ ಗೋಚ

ರಿಸಿತ್ತು. ಅಲ್ಲಿಯೂ ಕೂಡ ಸ್ತ್ರೀಯರ ಸುತ್ತಲೂ ತರುಣರಿಗೆ ಸ್ವರ್ಗ ಕಾಣಿಸುತ್ತದೆ! ಆದರೆ ಆ ಸ್ವರ್ಗದರ್ಶನದ ಪರಿಣಾಮವೇನು ?

ಈಗ ಕಾಣುವ ಮಾನವಸೃಷ್ಟಿ!

ಇಂಥ ಮಾನವ ಪ್ರಾಣಿಯ ಜನನಕ್ಕೆ ಕಾರಣವಾದ ಭಾವನೆಯಲ್ಲಿ ಏನಾದರೂ ದೋಷವಿರಲೇ ಬೇಕು! ಇಲ್ಲವಾದರೆ ದೇಹಸುಖದಲ್ಲಿಯೇ ಸಾಯುವ ಈ ಜನಾಂಗಕ್ಕಿಂತ ಮಿಗಿಲಾದ ಸಮಾಜ ರಚನೆಯಾಗುತ್ತಿರ ಲಿಲ್ಲವೆ? ಇನ್ನು ಪುರುಷನಂತೆ ಸ್ತ್ರೀಯರಿಗೂ ಕೂಡ ತರುಣರ ಹತ್ತಿರ ಸ್ವರ್ಗಸುಖ ತೋರುತ್ತಿರಲೇ ಬೇಕಲ್ಲವೇ? ಇಲ್ಲವಾದರೆ ಮದಿವೆಯೇ ಆಗುತ್ತಿರಲಿಲ್ಲ.

ಅಜಿತ ಮೊನ್ನೆ ನೋಡಿದ ಒಂದು ಹುಡಿಗೆಯು ಬಡವರವಳಾದರೂ ಒಳ್ಳೆಯವಳು. ಅವಳ ಮೇಲೆ ಅಜಿತನ ಪ್ರೇಮವಿದ್ದುದು ಧನಾಪೇಕ್ಷೆ ಯಿಂದಂತೂ ಅಲ್ಲ. ಧನಿಕರ ಕನ್ಯೆಯನ್ನು ವರಿಸುವ ಇಚ್ಛೆಯೂ ಅವ ನಿಗೆ ಇದ್ದಿಲ್ಲ. ಬಡವರ ಹುಡಿಗೆಯನ್ನು ಜೊತೆಗೂಡಿ ಬಡಭಾರತದ ಸ್ವಾತಂತ್ರ್ಯಕ್ಕೆ ಹೋರಾಡುವದು ಸಮಂಜಸವಲ್ಲವೆ?

ನನ್ನ ಆದರ್ಶ, ನನ್ನ ವಿಚಾರ, ದೇಶದ ಸ್ವಾತಂತ್ರ್ಯ ಈ ಎಲ್ಲ ವಿಚಾರ ಗಳು ಇಂಥ ಹಳ್ಳಿಯ ಹುಡಿಗೆಗೆ ಗೊತ್ತಾಗುವ್ವದೆ ?

ಗೊತ್ತಿರುವ ಹುಡಿಗೆಯರೆಷ್ಟಿದ್ದಾರೆ ಈ ಹಿಂದುಸ್ತಾನದಲ್ಲಿ ? ಹುಡಿ ಗೆಯರೇಕೆ ? ಹುಡುಗರಿಗೂ ಗೊತ್ತಿಲ್ಲ. ಗೊತ್ತಿಲ್ಲವೆಂತಲೇ ಇನ್ನೂ ಪಾರತಂತ್ರ್ಯ ಕೂಪದಲ್ಲಿ ಹೊರಳುತ್ತಿರುವರಲ್ಲ! ಸಂಪೂರ್ಣ ಭಾರತದ ಹೊಣೆಯನ್ನು ತಾನೊಬ್ಬನ್ನೇ ಹೊತ್ತಂತೆ ಯೋಚಿಸುತ್ತಿದ್ದ, ಅಜಿತ.

ಅಂತೂ ಆ ವರ್ಷ ಅಜಿತನಿಗೂ ಗುರುಬಲ ಪ್ರಬಲವಿತ್ತೆಂದು ಹೇಳ ಬೇಕು. ರಾವಸಾಹೇಬನ ಸಂದರ್ಭದಲ್ಲಿ ಅಜಿತನ ಮದಿವೆಯ ನಿರ್ಣಯವೂ ಆಯಿತು.

ಮಲಗೌಡರು ಹೊಸಹಳ್ಳಿಯ ಒಂದು ಗೌಡರ ಮನೆತನಕ್ಕೆ ಸೇರಿ ದವರು. ಅವರಿಗೂ ಆದಗೌಡರಿಗೂ ತುಂಬ ಪರಿಚಯ. ಮೊದಲು ಒಳ್ಳೇ ಮೆರೆದ ಮನೆತನವದು. ಕಳೆದ ಮಹಾಯುದ್ಧದ ಕಾಲಕ್ಕೆ ಮಗಳ ಮದಿವೆ ಯನ್ನು ಒಳ್ಳೇ ಆದ್ದೂರಿಯಿಂದ ಮಾಡಿ ಸಾಲಗೇಡಿಯಾದವರು ತಿರುಗಿ

ಚೇತರಿಸಲಿಲ್ಲ. ಒಂದೊಂದೇ ಹೊಲಗಳು ಕೈಬಿಟ್ಟುವು. ಆದರೆ ಜನರಿಗೇನು? ಮನೆಗೆ ಬಂದ ಸೊಸೆಯು ಕಾಲಗುಣ ನೆಟ್ಟಗಿಲ್ಲವೆಂದು ಆಡಿಕೊಂಡರು. ಜನರು ಏನಂದುಕೊಂಡರೂ ಆದಗೌಡನಿಗೆ ಮಾತ್ರ ಗೊತ್ತು, ಈ ಆಸಾಮಿ ಮದುವೆಯ ವೆಚ್ಚದಲ್ಲಿಯೇ ಮುಳುಗಿದನೆಂದು. ಆದರೂ ಕೂಡ ಅವನ ಮಗನ ಮದಿವೆಯ ವೈಭವ ರಾವಸಾಹೇಬನ ಮದಿವೆಗೂ ಬರಲೆಂದು ಒಳಗಿನ ಹಾರಯಿಕೆ. ಅಂತೇ ಅವನನ್ನು ಮುಂಚಿತವಾಗಿ ಸಲಹೆಗೆಂದು ಕರೆಯಿಸಿಕೊಂಡಿದ್ದರು. ಆಗಲೇ ಮಲಗೌಡರು ತಮ್ಮ ಮಗಳ ಲಗ್ನದ ಪ್ರಸ್ತಾಪ ಎತ್ತಿದುದು. ಅಜಿತನೂ ಗೌಡನ ಒತ್ತಾಯಕ್ಕೆ ಹೋಗಿ ನೋಡಿ ಬಂದಿದ್ದ. ಮಲಗೌಡನ ತಂತ್ರದಂತೆ ಹುಡಿಗೆಯೂ ರಾವಸಾಹೇಬನ ಮದಿವೆಗೆಂದು ಇವರ ಮನೆಗೇ ಬಂದಿದ್ದಳು. ಎಲ್ಲರೂ ನೋಡಿದರು. ಸರಸ್ವತಿಯು ತಿರುತಿರುಗಿ ನೋಡಿದಳು. ಹುಡಿಗೆ ಸುಂದರ, ನೀಳ ಮೊಗ, ಅದಕ್ಕೆ ತಕ್ಕಂತೆ ಗುಲಾಬಿ ವರ್ಣದ ಕಪೋಲಗಳು, ಅಗಲ ಹಣೆ. ತುಂಬಿಗುರುಳು. ನಿರ್ಧನಿಕರ ಮನೆಯ ಮಗಳಾದರೇನಂತೆ; ರತಿದೇವಿಯಂತೆ ಒಪ್ಪುತ್ತಿದ್ದಳಾಕೆ. ಮುರದೇವಿ ಹತ್ತಿರ ಕೂಡಿಸಿಕೊಂಡು ಮಾತನಾಡಿಸಿ ನೋಡಿದರು.

"ನಿನ್ನ ಹೆಸರೇನವ್ವ?"

"ಗುಣವಂತಿ."

"ಮನೆಯಲ್ಲಿ ಅಡಿಗೆ ಅಂಬಲಿ ಎಲ್ಲ ಮಾಡುತ್ತೀಯಾ!"

"ಮಾಡುತ್ತೇನೆ. ಹೋದ ವರ್ಷ ಸಾಲೆ ಬಿಡಿಸಿದಾಗಿನಿಂದಲೂ ಮಾಡುತ್ತೇನೆ."

"ಸಾಲೆಗೂ ಹೋಗುತ್ತಿದ್ದೆ ಏನವ್ವಾ?"

"ಹೌದು; ಕನ್ನಡ ನಾಲ್ಕನೆ ಎತ್ತೆಯ ವರೆಗೂ ಕಲಿತಿರುವೆ."

"ನೆಟ್ಟಗಾಯಿತೇಳ, ನಮ್ಮ ಅಜಿತ ಬಯಸಿದಂತೆಯೇ ಇದೆ."

ಹುಡಿಗೆ ಸುಮ್ಮನಾದಳು.

"ನಮ್ಮ ಅಜಿತನನ್ನು ನೋಡಿರುವೆಯಾ?"

ಗುಣವಂತಿ ಏನೂ ಹೇಳಲಿಲ್ಲ. ಮುರದೇವಿ ಅಜಿತನನ್ನು ಕರೆದಳು. ಹತ್ತರ ಕೂಡಿಸಿಕೊಂಡು:

"ನೋಡು ಗುಣವಂತೀ; ಇವನು ಇನ್ನೂ ಮುಂಬಯಿಯಲ್ಲಿ ಕಲಿಯುವ, ಕಲಿಯುವಾಗ ಮನೆಯ ಜನರ ನೆನಪೂ ಇವನಿಗೆ ಇರುವದಿಲ್ಲವೆಂದು ಕಾಣ್ತದೆ. ಹತ್ತು ಸಲ ಕಾಗದ ಬರೆದರೂ ಊರಿಗೆ ಬರುವುದೇ ಇಲ್ಲ. ಕೈಯಲ್ಲಿ ಸಿಕ್ಕಿದಾನೆ, ಮದುವೆ ಮಾಡಿಬಿಡೋಣ ಎಂತ ಯೋಚಿಸಿದ್ದೇವೆ. ಇವನನ್ನು ಮದುವೆಯಾಗುತ್ತೀಯಾ? ನೀ ಮಾತ್ರ ಇಲ್ಲಿರುವುದು, ಆತ ಕಲಿಯುತ್ತಿರುವುದು ಮುಂಬಯಿಯಲ್ಲಿ" ಎಂದು ಕುಲು ಕುಲು ನಕ್ಕು ನುಡಿದಳು.

"ಇಲ್ಲ; ನಾನು ಮುಂದೆ ಕಲಿಯುವದಿಲ್ಲ" ಅಜಿತ ಹೇಳಿದ.

ಮುರದೇವಿ ಏನು ಭಾವಿಸಿದಳೋ "ಹೌದು. ಇನ್ನು ಏಕೆ ಕಲಿತಾನು? ಮನೆಯಲ್ಲಿ ಹೆಂಡತಿ ಬರುವಳು. ಮನೆ ನೆನಪಾಗುವದಲ್ಲ ಇನ್ನ!" ಎಂದು ಹಾಸ್ಯ ಮಾಡಿದಳು.

"ಹಾಗಲ್ಲವ್ವ. ಕಲಿಯುವದನ್ನು ಮುಗಿಸಿಯೇ ಊರಿಗೆ ಬಂದಿದೇನೆ, ಇನ್ನೇನು ಕಲಿಯುವದು? ಕಲಿಯಬೇಕಾದದ್ದನ್ನು ಕಲಿತೆ. ಇನ್ನು ಮಾಡಬೇಕಾದದ್ದನ್ನು ಮಾಡಬೇಕಾಗಿದೆ" ಎಂದು ಅಜಿತ ವಿಷಯ ಸಮರ್ಥಿಸ ಹೋದ.

"ಅಹುದು ಗುಣವಂತೀ, ನಮ್ಮ ಅಜಿತ ಎಲ್ಲ ಕಲಿತು ತೀರಿಸಿದ ಇನ್ನು ರಾಟ ಇಟ್ಟುಕೊಂಡು ನೂಲುವವನಿದ್ದಾನ!"

"ಅಹುದು. ನಾನು ನೂಲುವವನಿದ್ದೇನೆ. ಇವಳಿಗೆ ನೂಲಲಿಕ್ಕೆ ಬರುತ್ತಿದೆಯೋ?" ವಧುಪರೀಕ್ಷೆಗೆ ತೊಡಗಿದ ಅಜಿತ.

ಗುಣವಂತಿ ಲಜ್ಜೆಯಿಂದ ತಲೆ ತಗ್ಗಿಸಿದಳು.

"ಈಗಿನ ಹುಡಿಗೆಯರಿಗೆ ನೂಲಲಿಕ್ಕೆ ಎಲ್ಲಿಂದ ಬಂದೀತು? ಅವಳೂ ಏನು ಹಳೆಯ ಮುದಿಕೆಯೆಂದು ಭಾವಿಸಿದೆಯೋ? ಇನ್ನೂ ಎಳೆ ಹುಡಿಗೆ. ತಾಯಿ ಇಲ್ಲದ ಮಗಳು!" ಕನಿಕರವಿತ್ತು, ಮುರದೇವಿಯ ಮಾತಿನಲ್ಲಿ.

ಗುಣವಂತಿ ಕಣ್ಣೆತ್ತಿ ನೋಡಿದಳು ಅಜಿತನ ಕಡೆಗೆ. ನಾಲ್ಕೂ ಕಣ್ಣುಗಳೂ ಕೂಡಿದುವು. ಅವಳ ಕಣ್ಣುಗಳಲ್ಲಿ ಒಂದು ವಿಲಕ್ಷಣ ತೇಜವಿದ್ದಂತೆ ಭಾಸವಾಯಿತು ಅಜಿತನಿಗೆ. ಒಮ್ಮೆಲೇ ಆತ್ಮೀಯತೆ ಕುದುರಿತು.

ಅವನ ಅಂತಃಕರಣದಲ್ಲಿ.

"ನೂಲುವೆ, ನನಗೆ ನೂತು ಗೊತ್ತಿದೆ." ಎಂದು ಮೆಲ್ಲಗೆ ನುಡಿದಳು.

"ನನ್ನನ್ನು ಮದಿವೆಯಾದರೆ ಸುಂದರ ಒಡವೆ ವಸ್ತ್ರ ತೊಡುವ ಹಂಬಲ ಬಿಡಬೇಕು. ನಯವಾದ ಉಡಿಗೆ ತೊಡಿಗೆಗಳೂ ದೊರೆಯಲಿಕ್ಕಿಲ್ಲ. ಉರುಟು ಖಾದಿಸೀರೆ ಉಡಬೇಕಾದೀತು ನೋಡು" ಎಂದು ಹೇಳಬೇಕೆಂದಿದ್ದ ಅಜಿತನ ಕಾಲೇಜ ಶಿಕ್ಷಣದ ಕಾವು ಗುಣವಂತಿಯು ಆ ಕಣ್ಣು ಕಾಣ್ಕೆಗೆ ತಣ್ಣಗಾಗಿಬಿಟ್ಟಿತು.

ಮಗಳ ಬಗ್ಗೆ ಒಮ್ಮೆ ಮಾತೆತ್ತಿದ ಮಲಗೌಡರು 'ಗೌಡರ ಇಚ್ಛೆ' ಎಂದುಕೊಂಡು ಸುಮ್ಮನಿದ್ದರು. ಆದಗೌಡರೂ ಗಂಡಿನವನಾಗಿ ನಾನೇಕೆ ಕೆದರಿ ತೆಗೆದು ವಿಷಯ ಪ್ರಸ್ತಾಪಿಸಿ ಬಾಗಿ ಹೋಗಲಿ ಎಂದು ಭಾವಿಸಿ ಮೌನ ತಾಳಿದ್ದರು. ಆದರೆ ಮುರದೇವಿಯಲ್ಲಿಯ ಮೊಮ್ಮಗನ ಮದುವೆಯ ಆತುರ ಸುಮ್ಮನೆ ಕೂಡಗೊಡಲಿಲ್ಲ. ಮೊನ್ನೆ ಹುಡಿಗೆಯನ್ನು ಮಾತನಾಡಿಸಿ ನೋಡಿದಾಗಿನಿಂದಲೂ "ನಮ್ಮ ಅಜಿತನಿಗೆ ಗುಣವಂತಿಯೇ ಯೋಗ್ಯ ಹುಡಿಗೆ. ಅವರ ಧನ ದವಲತ್ತೇನು ನಮ್ಮ ಮನೆಗೆ ಬಾರದು. ಮನೆಗೆ ಬರುವುದು ಹೆಣ್ಣೊಂದೇ ಅಲ್ಲವೆ? ಅದೊಂದು ನೆಟ್ಟಗಿದ್ದರಾಗಲಿಲ್ಲವೆ?" ಎಂದು ಎರಡು ಮೂರು ಸಲ ಸರಸ್ವತಿಯ ಮುಂದೆ ಅಂದಿದ್ದಳು, ಅವಳ ಮನೋಗತವನ್ನರಿಯಲು.

ಸರಸ್ವತಿಯೂ "ಹುಡಿಗೆ ಮನೆಕೆಲಸವನ್ನೆಲ್ಲ ಬಲ್ಲವಳಂತೆ ಕಾಣುವಳು. ಹಿರಿಯರು ಕಿರಿಯರು ಎಂಬುದನ್ನು ಭಾವಿಸಿ ಲಕ್ಷಣವಾಗಿ ವರ್ತಿಸುವಳು" ಗುಣವಂತಿಯ ಗುಣಕಥನ ಮಾಡಿ ಪರ್ಯಾಯದಿಂದ ಒಪ್ಪಿದಂತಿದ್ದಳು.

ಅದಕ್ಕಂತಲೇ ಮುರದೇವಿಯು ಮಲಗೌಡನ ಮುಂದೆ ಮಾತು ತೆಗೆದಳು.

"ಏನಪ್ಪಾ, ಮಗಳ ಮದುವೆಯ ವಿಷಯಕ್ಕೆ ಮುಂದೆ ಮಾತೇ ತೆಗೆಯಲಿಲ್ಲ ನೀ? ಗೌಡನಂತೂ ಹಗಲಿ ರಾತ್ರಿ ತನ್ನ ಮಗನ ಮದುವೆಯೊಳಗೇ ತೊಡಗಿದ್ದಾನೆ. ಮುಂದೆ ಆಗುವದು ಹೇಗೆ?"

"ಆಗುವದೇನು? ಅಂದೇ ಗೌಡರಿಗೆ ಹೇಳಿ ಬಿಟ್ಟಿರುವೆನಲ್ಲ! ಹುಡಿಗೆ ಮನಿಯೊಳಗೇ ಅದೆ. ಮನಿಯದೇ ಅದೆ. ಬೇಕಾದಾಗ ಅಕ್ಕಿ ಕಾಳು ಒಕ್ಕೊಳರಿ. ವರದಕ್ಷಿಣೆ ಅಂದರೆ ನನ್ನ ಕೈಯಿಂದ ನೆಗೆಯೋ ಮಾತಲ್ಲ ನಾಲ್ಕು ಮಂದಿ ಹೌದ ಅನ್ನುವಂತೆ ಅಳಿಯನಿಗೆ ಒಪ್ಪುವ ಹಾಗೆ ಅರಿವೆ ತಗೊಳ್ಳತೇನೆ. ಹುಡಿಗೆಯೇನೋ ನೀವೇನೋ" ಎಂದು ಹೇಳಿದ ಮಾತನ್ನು ಹೇಳಿದಂತೆ ಹೇಳಿದ.

"ವರದಕ್ಷಿಣೆ ತಕ್ಕೊಳ್ಳಲಿಕ್ಕೆ ನಮಗೇನು ಕಡಿಮೆಯಾಗಿದೆ ತಗೋ! ನಿನ್ನ ಅಳಿಯನೇ ಮೊದಲ ವರದಕ್ಷಿಣೆಯೆಂದರೆ ಮೂರು ಮೊಳ ಹಾರುವನು."

"ಹಾಗೇ ಹೇಗಾದೀತು?" ಅಲ್ಲೇ ಹಾಯ್ದು ಹೋಗುವ ಸರಸ್ವತಿ ನುಡಿದಳು

"ಇರಲಿ ಅವ್ವ! ಅಜಿತ ಕೇಳಲಿ ನಾ ಆತ ಬೇಡಿದಷ್ಟು ಕೊಡತೇನಿ. ಆಯ್ತಿಲ್ಲೋ?"

"ಮಗನ ಮದಿವೆಯನ್ನೇ ಹೇಗೆ ಮಾಡಿದೇನು ನೋಡಿಲ್ಲ ನೀವೇ? ಹಾಗೇನು ಕೈ ಬಿಗಿ ಹಿಡಿಯುವ ಮನುಷ್ಯನಲ್ಲ; ನೋಡೋಣ. ಆ ಕಾಲಕ್ಕೆ ದೇವರು ಏನು ಶಕ್ತಿ ಕೊಡತಾನೋ ಅದನ್ನು ಮಾಡ್ತೇನು. ಆದರೆ ಇಷ್ಟೇ ಅಷ್ಟೇ ಅಂತ ಹೇಳಿ ಮೊದಲೇ ವಚನದೊಳಗ ಸಿಗುವದಿಲ್ಲ ನಾ" ಎಂದು ಕೂಡಲೆ ಮಲಗೌಡನ ಉದಾರ ಬುದ್ಧಿ ಜಾಗೃತವಾಗಿ ನುಡಿಸಿತು.

"ಅವನಿಗೆ ಹೇಳಲಿಕ್ಕೆ ಬೇಕಾಗಿಲ್ಲ ಬಿಡು. ರಾವಸಾಹೇಬನ ಮದುವೆಯನ್ನು ಮುಂದ ನಿಂತ ವೈಭವದಿಂದ ಮಾಡಿಸಲಿಕ್ಕೆ ಬಂದಂಥವ, ತನ್ನ ಮಗಳ ಮದುವೆಯನ್ನು ಏನೂ ಇಲ್ಲದೆ ಮಾಡಿಯಾನೆ?" ಎಂದು ಸೈಗುಟ್ಟಿದಳು ಮುರದೇವಿ.

ಮನೆಯಲ್ಲಿ ಮುರದೇವಿಯ ಮಾತನ್ನು ಮೀರುವವರೇ ಇರಲಿಲ್ಲ. ಅವಳ ವರ್ಚಸ್ಸೇ ಅಂಥದು. ಮನೆಯಲ್ಲಿ ಮಾತ್ರವೇ ಅಲ್ಲ, ಊರಲ್ಲಿಯೂ ಅವಳ ಮಾತನ್ನು ತೆಗೆದು ಹಾಕುವಂಥವರು ಇಲ್ಲ. ಇಬ್ಬರೂ ಗೌಡರು ದೊಡ್ಡ ಮನಸ್ಸು ಮಾಡಿ "ಆಗಲಿ!" ಎಂದು ಒಪ್ಪಿಕೊಂಡರು.

ರಾವಸಾಹೇಬನ ಬಿಂಕವೂ ಸೆಡವೂ ಮದುವೆಯ ಕಾಲಕ್ಕೇ

ಮತ್ತಿಷ್ಟು ಹೆಚ್ಚಾದುವು. ಅಳಿಯದೇವರೆಂದು ಇನ್ನಿಷ್ಟು ಮುಗಿಲಿಗೇ ಏರಿ ಕುಳಿತ. ಉಣಿಸಿ ಕೈತೊಳೆಯುವದೊಂದೇ ಬಾಕಿ ಉಳಿಯಿತು. ಎಲ್ಲವೂ ಅಕ್ಷತೆ ಬೀಳುವವರೆಗೆ ಆಪ್ತರಿಂದ ಸೇವೆ ಸಂದಿತು. ಆಪ್ತರೊಡನೆ ಮಾತನಾಡುವುದೂ ಒಂದು ತನ್ನ ಸ್ಥಾನಕ್ಕೆ ಸಣ್ಣತನವೆಂದು ಭಾವಿಸಿ ದಂತಿತ್ತು, ರಾವಸಾಹೇಬನ ನಡತೆ.

ಅವನ ವರ್ತನಕ್ಕೆಲ್ಲ ಆಪ್ತರಿಂದ ಒಂದೇ ಒಂದು ಪ್ರತ್ಯುತ್ತರವೆನ್ನು ವಂತೆ ಲಗ್ನಸಮಾರಂಭದಲ್ಲಿ ಒಂದು ಕಾರ್ಯ ನಡೆದುಹೋಯಿತು, ಮದುವೆಯ ಮರುದಿನ. ಅಂದು ರಾವಸಾಹೇಬನ ಬೀಗನ ಮದುವೆ. ಅದೂ ಅದೇ ಊರಲ್ಲಿ. ಆ ಹೆಣ್ಣಿನವರು ಇಳಿದುಕೊಂಡ ಮನೆಯಲ್ಲಿ ಮಾತ್ರ, ಆ ಮದುವೆಗೆಂದು ಈ ಹೊಸ ಅಳಿಯನನ್ನೂ ಆಪ್ತರನ್ನೂ ಇರಿಸಿಕೊಳ್ಳಲಾಗಿತ್ತು. ಮದುವೆಗೆಂದು ಬಂದ ಹೊರಗಿನ ಜನರೆಲ್ಲ ಮುನ್ನಾದಿನವೇ ಮರಳಿದ್ದರು. ಮನೆಯ ಜನ ಹಾಗೂ ಸಮೀಪದ ಗೆಳೆಯರು ಆಪ್ತರು ಇಷ್ಟೇ ಜನರಿದ್ದರು. ಮುಂಜಾನೆ ಎಲ್ಲರೂ ಅಕ್ಷತೆಗೆ ಹೋಗಿ ಬಂದರು. ಇವರು ತಮ್ಮ ಮನೆಗೆ ಬಂದು ಸೇರಿದವರು. ಆಪ್ತರು ತಿರುಗಿ ಇವರನ್ನು ಊಟಕ್ಕೆ ಕರೆಯಲಿಕ್ಕೆ ಬರಲಿಲ್ಲ. ನಾಲ್ಕು ಗಂಟೆಯ ವರೆಗೆ ದಾರೀ ಕಾಯ್ದು ಕಾಯ್ದು ಬೇಸತ್ತರು. ಅವರಾರೂ ಇವರನ್ನು ಇಟ್ಟ ಮನೆಯ ಕಡೆಗೆ ಹಾಯಲೇ ಇಲ್ಲ. ಕೊನೆಗೆ ಆದಗೌಡರು ಪೇಟೆಯಿಂದ ಅಕ್ಕಿ ತರಿಸಿ, ಅನ್ನ ಸಾರಿನ ಮೇಲೆ ಕೈಕೊಡಬೇಕಾಯಿತು. ಮುಂದೆ ಮಾಮಲೇದಾರನಾಗುವವನ ಮದಿವೆಯಲ್ಲಿ ಹಳ್ಳಿಯ ಗೌಡ ನಾದ ಬೀಗನ ನೆನಪು ಆಗಲಿಲ್ಲವೋ ಏನೋ ಅವರಿಗೆ! ಅಂತೂ ಸಂಜೆಗೆ ಹೇಳಿದರು ಸಾವಿರ ಮಾತಿನಲ್ಲಿ,—

" ಇಂಥವರೊಬ್ಬರ ಕಡೆಗೆ ನಿಮ್ಮ ವ್ಯವಸ್ಥೆಯನ್ನೆಲ್ಲ ಒಪ್ಪಿಸಿತ್ತು. ಅವರು ಮಾಡ್ತಾರೆಂದು ಅನ್ಯರಾರೂ ನಿಮ್ಮ ಕಡೆಗೆ ಲಕ್ಷ್ಯ ಹಾಕಲಿಲ್ಲ. ಮದುಮಗನೇ ಅವರನ್ನು ಇನ್ನೆಲ್ಲಿಯೋ ಬೇರೆ ಕೆಲಸಕ್ಕೆ ಕಳಿಸಿಬಿಟ್ಟಿದ್ದ ನಂತೆ. ಪಾಪ ಅವರು ಏನು ಮಾಡಬೇಕು ? ಗೊಂದಲದಲ್ಲಿ ಇನ್ನೊಬ್ಬ ರಿಗೆ ಹೇಳಿ ಹೋಗಲಿಕ್ಕೂ ಮರೆತರೇನೋ! ಬೇಡು ಅಂದರೆ ಕ್ಷಮೆಯನ್ನು ಬೇಡುವೆನೆನ್ನುವರು. ಅವರಿಗಾದರೂ ಏನನ್ನುವುದು ? "

ಅಂತೂ ರಾವಸಾಹೇಬನ ಬಿಂಕದ ನಡತೆಯು ಪರಿಣಾಮವಾಗಿ —ಆ ವ್ಯವಸ್ಥಾಪನ ಕಟುಮನಸ್ಸೇ— ಪುರೆ-ಬಾಸುಂದಿಯ ಮೇಜವಾನಿಯು ಬದಲು ಅನ್ನ ಸಾರನ್ನು ಗೌಡರ ಗಂಟಲಿಗೆ ಇಳಿಬಿಡಲು ಕಾರಣವಾಗಿತ್ತು. ಪಾಪ! ಗೌಡರೇನನ್ನುವರು? ದೊಡ್ಡವರೊಡನೆ ಶರೀರಸಂಬಂಧ ಬೇಕಾಗಿಯೇ ಬಯಸಿದ್ದರು. ಅಂತೇ ಬಾಯೊಳಗಿನ ಒಣಗಿದ ತಾಂಬೂಲವನು ಉಗುಳಿ ಬಂದು ಹೇಳಿದರು.

"ಮದುವೆಯ ಗೊಂದಲ ದೊಡ್ಡದು! ಊರೊಳಗಿನ ದೊಡ್ಡ ದೊಡ್ಡ ಅಮಲದಾರರೆಲ್ಲ ಬಂದವರು. ಅವರನ್ನೆಲ್ಲ ಎತ್ತ ಸಂಬಾಳಿಸಿಯಾರು, ಇತ್ತೆಲ್ಲಿ ಮನಸ್ಸು ಹಾಕಿಯಾರು? ಮನೆಯವರು ವ್ಯವಸ್ಥೆ ಮಾಡಲಿಕ್ಕೆ ಹೇಳಿದ್ದಾರೆ. ಮಾಡುವವನೇ ಮಾಡದಿದ್ದರೆ ಅವರ ಕಡೆಗೆ ತಪ್ಪೇನು?" ಎಂದು ಹಿರಿಯತನದ ಮಾತುಗಳನ್ನಾಡಿ ಮುಗಿಸಿದರು.

ಅಂದಿನ ತಪ್ಪಿನ ಮರೆವಿಗಾಗಿ ಆಪ್ಪಾನ್ನು ಮತ್ತೊಂಡ ದಿನ ಇಟ್ಟು ಕೊಂಡು ಸ್ವಂತ ತಮ್ಮ ಮನೆಯಲ್ಲಿಯೇ 'ಮೇಜವಾನಿ' ಮಾಡಿಸಿದರು. ಮುಂಜಾನೆಯಿಂದ ಮೂರು ಮೂರು ಸಲ ಔತಣ ಹೇಳಿದರು. ಮುಂಚಿನ ದಿನ ಕೊಡಬೇಕಾದುದನ್ನೂ ಇಂದೇ ಕೊಟ್ಟರೇನೋ. ಮೊದಮೊಲೇನೋ ರಾವಸಾಹೇಬ ಹಾರಾಡಿದ, ನಾನು ಊಟಕ್ಕೆ ಬರುವದಿಲ್ಲವೆಂದು. ಗೌಡರು ನಾಲ್ಕು ಸಮಾಧಾನದ ಮಾತುಗಳನ್ನು ಮಗನಿಗೆ ಹೇಳಿದರು.

"ದೊಡ್ಡವರು; ಅವರ ಮನಸ್ಸನ್ನು ನೋಯಿಸಬಾರದು. ಏನೋ ಒಂದು ತಪ್ಪಾಯಿತು. ನಿನ್ನೆ ಬೆಳತನಕ ಅವರ ಮನೆಯಲ್ಲಿಯೇ ಜಗಳ ಹತ್ತಿದೆಯಂತೆ. ಕೇಳಲಿಲ್ಲವೋ? ರಾತ್ರಿಯೇ ಅವರವನೇ ಒಬ್ಬ ಬಂದು ಹೇಳುತ್ತಿದ್ದ."

"ದೊಡ್ಡ ಗೊಂದಲ. ಎರಡು ಕಡೆಯ ಆಪ್ತರು. ಯಾರಿಗಾದರೂ ಹೇಳಲಿಕ್ಕೆ ಹೇಳಿರಬೇಕು. ಅವರು ಮರೆತು ಬಿಟ್ಟ ಮೇಲೆ ಮನೆಯವರೇನು ಮಾಡಬೇಕು?" ಎಂದು ಮೊದಲಾಗಿ ಅಜಿತ ರಾವಸಾಹೇಬನನ್ನು ಬೇರೆ ಕಡೆಗೆ ಕರೆದು ತಿಳಿಸಿ ಹೇಳಿದ.

ರಾವಸಾಹೇಬನಿಗೂ ಅಣ್ಣನ ವಿಚಾರ ಸರಿಯೆನಿಸಲಿಲ್ಲ. ಊಟಕ್ಕೆ ಹೋಗಬಾರದೆಂದೇ ನಿರ್ಣಯಿಸಿಬಿಟ್ಟ ಮನದಲ್ಲಿ. ಅವನ ಗೆಳೆಯರೆಲ್ಲರೂ

ಅವನ ಕಿವಿಯೂದಿದರು. “ಈಗಲೇ ಹೇಳುವುದು ಬೇಡ; ಅಡಿಗೆಯೆಲ್ಲ ಸಿದ್ಧವಾಗಲಿ; ಆಮೇಲೆ ಹೇಳೋಣವಂತೆ” ಎಂದು. ರಾವಸಾಹೇಬ ಹೂಗುಟ್ಟಿದನು, ಉಬ್ಬಿದ. ಹಾಗೆ ಹೀಗೆ ಮಾತಾಡಿದ, ಮಧ್ಯಾಹ್ನದ ವರೆಗೆ.

ಗಂಗವ್ವ ಒಳಗೆ ಕರೆದು ಮಗನಿಗೆ ಏನು ಹೇಳಿದಳೋ ಏನೋ! ಆಪ್ತರು ಊಟಕ್ಕೆ ಕರೆಯಲು ಬಂದ ಕೂಡಲೆ ಎಲ್ಲರಿಗಿಂತ ಮುಂಚೆ ರಾವಸಾಹೇಬನೇ ಸಿದ್ಧನಾಗಿ ನಿಂತ! ಅಜಿತ ಬೆರಗಿನಿಂದ ಒಳಗೆ ಹೊರಗೆ ಎರಡು ಸಲ ತಿರುಗಾಡಿದ. ಸುಧೀರ ತೆಕ್ಕೆಗೆ ಆನಿಸಿ ಕುಳಿತಲ್ಲಿಯೇ ಕುಳಿತಿದ್ದ. ಗೌಡರೇ ಅಂದರು, “ಏಳಿರಲ್ಲ, ಇನ್ನೂ ನೀವೇ ಕುಳಿತಿರುವಿರಲ್ಲ. ಅಜಿತನಂತೂ ಒಳಗೂ ಹೊರಗೂ ತಿರುಗಾಡತಿದ್ದಾನೆ. ಎಲೆ ಹಾಕಿ ಆಗಿರಬೇಕು. ಕರೆಯಲು ಬಂದು ಬಹಳ ಹೊತ್ತಾಗಿ ಹೋಯ್ತು. ಅವರೂ ಆಪ್ತರು ಬಂದಿರಬೇಕು.”

“ಅವರೇಕೆ ಎದ್ದಾರು? ಜಗಳ ಹಚ್ಚಿ ಮೋಜು ನೋಡುವವರು” ಎಂದು ಗಂಗವ್ವ ಹೊರಗೆ ಬಂದು ಹೇಳಿದಳು. ಅಜಿತ ರಾವಸಾಹೇಬನನ್ನು ಬೇರೆ ಕರೆದೊಯ್ದು ಮಾತಾಡಿದುದರ ಅರ್ಥವನ್ನು ಏನನ್ನೋ ಮಾಡಿಕೊಂಡಿದ್ದಳಾಕೆ.

“ತನಗೊಂದು ದೊಡ್ಡ ಮನೆತನದ ಹುಡಿಗೆ ಸಿಕ್ಕಲಿಲ್ಲ. ಸಿಕ್ಕವರದೂ ಕಾಣುವದಾಗುವದಿಲ್ಲ ಇವರಿಗೆ” ರಾವಸಾಹೇಬನೂ ಆಡಿಯೇ ತೋರಿಸಿದ ಹೀಗೆ.

ಅಜಿತ ಸುಧೀರರಿಬ್ಬರೂ ತಣ್ಣಗೆ ಕುಳಿತುಬಿಟ್ಟರು. ಏನೂ ಮಾತಾಡುವುದೇ ಉಳಿದಿರಲಿಲ್ಲ. ಸಿರಿವಂತಿಕೆಯ ಸಾಮರ್ಥ್ಯವೇ ಅಷ್ಟು. ಮುರದೇವಿಗೆ ಮಾತ್ರ ಸುಮ್ಮನಿರಲಿಕ್ಕಾಗಲಿಲ್ಲ.

“ಇಂಥಾ ಕೊಳಕು ಮನಸಿನವ ಇರುವಿಯಂತೇ ಈ ಕುಳ್ಳ ಹುಡಿಗೆ ಗಂಟು ಬಿತ್ತಲ್ಲ ನಿನಗ.... ಯಾರ ಮನಸು ಹೇಗೋ ಹಾಗೇ ಅವರಿಗೆ ಫಲ ಸಿಗ್ತದ” ಎಂದು ರಾವಸಾಹೇಬನ ಮುಖದ ಮೇಲೆಯೇ ಆಡಿಬಿಟ್ಟಳು.

ಎಲ್ಲರೂ ಊಟಕ್ಕೆ ಹೋದರಾದರೂ ಊರಿಗೆ ಹೊರಡುವ ವರೆಗೂ ಮುರದೇವಿ ಮುದಿಕೆ ಮಾತ್ರ ಆ ಭಾವೀ ಮಾಮಲೇದಾರ ಆಪ್ತರ

ಮನೆಯ ನೀರನ್ನೂ ಕೂಡ ಮುಟ್ಟಲಿಲ್ಲ. ವ್ಯವಹಾರಕ್ಕಾಗಿ ಸುಧೀರ ಅಜಿತರೂ ಊಟಕ್ಕೆ ಹೋದರಾದರೂ ಒಂದು ತುತ್ತೇನೂ ಅವರ ಗಂಟಲಲ್ಲಿ ಇಳಿಯಲಿಲ್ಲ.

ಊಟವಾದ ನಂತರ ಮನೆಯಲ್ಲಿ ನೀಲಾಸಾನಿಯ ಸಂಗೀತ ಕಚೇರಿಯಿತ್ತು. ಆಪ್ತರಿಗೂ ಬಂಧು ಮಿತ್ರರಿಗೂ ಆಮಂತ್ರಣವಿದ್ದಿತು. ಅದೇಕೆ ಅವರಿಗಾಗಿಯೇ ಇಟ್ಟ ಕಾರ್ಯಕ್ರಮವದು. ಅನೇಕ ಕಾಲೇಜು ವಿದ್ಯಾರ್ಥಿಗಳೂ ಆ ಸಂಗೀತಸುಧೆಯನ್ನು ಪಾನಮಾಡಿ ಸ್ವರ್ಗಸುಖವನ್ನನುಭವಿಸಲು ಬಂದಿದ್ದರು. ಆದಗೌಡರಂತೂ ಬಾಯ್ದೆರೆದು ಆಲಿಸುತ್ತಿದ್ದರು. ಅವರ ಮುಖದಲ್ಲಿ ತನ್ನ ಮಗನ ಮದುವೆಯ ಸಂಗೀತ ಕಚೇರಿಯೆಂಬ ಅಭಿಮಾನವೂ ಒಡಮೂಡುತಲಿತ್ತು. ಅದರ ಹಿಂದೆ ನಿನ್ನೆ ಆಪ್ತರಿಂದಾದ ಅಪಮಾನವು ಎಲ್ಲಿಯೋ ಅಡಗಿಹೋಗಿದ್ದಿತು.

ಅಜಿತ ತೀರ ಸ್ವಲ್ಪ ದಿನಗಳಲ್ಲಿಯೇ ಜನಜೀವನದ ಸುಖಲೋಲುಪ ವಿಭಾಗದಲ್ಲಿ ಸಂಚರಿಸುತ್ತಲಿದ್ದ. ಈ ಸುಖ ಸಂಗೀತ ಶ್ರವಣ ಮಾಡುವ ಸಮಾಜದ ಜೊತೆಗೆಯೇ ಗುಲಶನ್‌ಬಿಯ ಪರಿವಾರದ ಚಿತ್ರವೂ ಅವನ ಕಣ್ಣೆದುರಿಗೆ ಸುಳಿಯಿತು. ಸತ್ತೆ-ಅಸಹಾಯತೆ, ಸಿರಿಯ ಸೊಕ್ಕು-ದಾರಿದ್ರ್ಯದ ದೀನತೆ, ಅಜೀರ್ಣದ ಕಮರದೇಗು-ಹಸಿವಿನ ಕಳವಳ, ವಾಸನಾ ತೃಪ್ತಿಗಾಗಿ ಧನವ್ಯಯ-ಧನಪ್ರಾಪ್ತಿಗಾಗಿ ವಾಸನಾ ತೃಪ್ತಿ, ಈ ರೀತಿ ಜೀವನದ ಭಯಾನಕ ವಿಷಮತೆಯನ್ನು ಕಂಡಿದ್ದ ಅಜಿತ.

ನೋಡು ನೋಡುವಷ್ಟರಲ್ಲಿ ಅವನ ಕಲ್ಪನಾ ಸೃಷ್ಟಿಯಲ್ಲಿ ಗುಲಶನ್‌ಬಿಯ ಗುಡಿಸಲೂ ಸುಂದರ ಮಂದಿರವಾಯಿತು. ಅದೇನು? ಜಗತ್ತಿನ ದೀನ ದಲಿತರೆಲ್ಲ ಇಂಥ ಸುಂದರ ಗೃಹದಲ್ಲಿ ವಾಸಿಸತೊಡಗಿದರೇ? ಆದರೆ ಇನ್ನೂ ಆ ಬಂಗಲೆಗಳಲ್ಲಿ ಸೇವಕರ ಓಡಾಟವಿದೆಯಲ್ಲ! ಅದೇನೋ ರಾಜವಿಲಾಸಿಯ ವೈಭವದ ಸಿರಿಯು ನಲಿಯುತ್ತಿದೆ! ಕಾವಲುಗಾರರು ನಿಂತಿದ್ದಾರೆ. ಶರಬತು ಸೆರೆಗಳ ಗ್ಲಾಸುಗಳು ತುಂಬಿ ತುಂಬಿ ಬರುತ್ತಿವೆ, ಒಂದರ ಮೇಲೊಂದು. ಎಂಥ ಕುತನಿಯ ಗಾದಿಗಳವು! ಅವುಗಳ ಮೇಲೆ ಆಶೆಯ ಕಣ್ಣುಗಳಿಂದ ನೋಡುತ್ತ ಕುಳಿತ ವ್ಯಕ್ತಿಯದಾರು? ಅವನೆದುರಿಗೆಯೇ ಝಣಝುಣು ಝಣಝುಣು ಸದ್ದನ್ನೆಸಗುವ ಪೈಜಣದ

ಸಾದವೆಂಥದದು !

ಕೃಷ್ಣನಿರಬಹುದೇನು ಆತ? ಬ್ರಿಟಿಷ ಸತ್ತೆಯ ಕೆಳಗೆ ನಾಮ ಮಾತ್ರ ರಾಜನೆನಿಸುವ ಯಾವನೋ ಸಂಸ್ಥಾನಿಕನೋ? ಪ್ರಜೆಗಳಿಗೆ ಸೂರ್ಯಾಸ್ತವಾದೊಡನೆಯೇ ಅವನಿಗೆ ಸೂರ್ಯೋದಯವಾಗುವುದೇನೋ! ಹದಿನಾರು ಸಾವಿರ ಗೋಪಿಕಾ ಸ್ತ್ರೀಯರು ಕೃಷ್ಣನ ಸುತ್ತು ತಿರುಗುತ್ತಿದ್ದರಂತೆ ಗ್ರಹಮಾಲೆಯಂತೆ. ಕೃಷ್ಣನ ಈ ಸಂಸ್ಕೃತಿಯನ್ನು ಇನ್ನೂ ಕಾಯ್ದ ಶ್ರೇಯಸ್ಸೆಲ್ಲ ಸಂಸ್ಥಾನಿಕರಿಗೆಯೇ ಸಲ್ಲುವುದು!

ವಹವ್ವ! ಭಾರತದ ಗತವೈಭವದ ಸ್ಮೃತಿಯಿದು! ಆದರೆ ಕೃಷ್ಣನಂತೂ ಮಹಾ ಯೋಗಿ! ಅರ್ಜುನನಿಗೆ ಗೀತಾ ಬೋಧಿಸಿದವ! ಸುದರ್ಶನ ಚಕ್ರಧಾರಿ!

ಇಂದು ಕೃಷ್ಣನ ಯೋಗ ಬಣ ಗೀತಾಪಠಣದಲ್ಲಿ ಅಡಗಿ ಹೋಯಿತು. ಕೃಷ್ಣನ ಸಂಧಾನವನ್ನು ಇನ್ನೂ ಕೌರವರು ಒಪ್ಪರು. ಮೇಲಾಗಿ ಈಗಲೂ ಕೌರವರೇ ಭಾರತದ ಸಾಮ್ರಾಟರು! ಇನ್ನು ಕೃಷ್ಣನ ಸುದರ್ಶನ ಚಕ್ರ? ಅದೀಗ ಅಹಿಂಸಕವಾಗಿದೆ, ನಾಡಿನ ಉದ್ಧಾರಕ್ಕೆ ನಿಂತಿದೆ. ಅದನ್ನು, ಕೈಯಲ್ಲಿ ಹಿಡಿಯುದ ಬಡವರು ಭಾರತದಲ್ಲಿಯೇ ಇಲ್ಲ.

ಇನ್ನುಳಿದುದೇನು? ಕೃಷ್ಣನ ಗೋಪಿಕೆಯರು, ರಾಸಲೀಲೆ! ಒಮ್ಮೆಂದೊಂಮ್ಮೆ ಎದುರಿಗಿನ ಅದೃಶ್ಯ ಪೌರ್ಣಿಮೆಯ ಬೆಳದಿಂಗಳಲ್ಲಿಯ ರಾಸಲೀಲೆಯಲ್ಲಿ ರೂಪಾಂತರ ಹೊಂದಿತು ಇದರಲ್ಲಿ ಕೃಷ್ಣನ ವೇಷವನ್ನು ಹಾಕಿದ ಹಲವು ಕಾಲೇಜ ವಿದ್ಯಾರ್ಥಿಗಳು! ಗೋಪಿಕೆಯರಾರು? ವಿದ್ಯಾರ್ಥಿನಿಯರೋ, ರಸಿಕ ನವತರುಣಿಯರೋ! ಇದೇನು ಕೃಷ್ಣನ ರಾಸಲೀಲೆಯ ವಿಶ್ವರೂಪವೋ? ಏನು ವರ್ತಮಾನ ಕಾಲದ ಭಾರತದ ತರುಣ ತರುಣಿಯರ ಜೀವನಪಥವೊ? ಹೂದೋಟಗಳು ಕಾಲೇಜ ಅಂಗಳಗಳೂ ಚಲಚಿತ್ರ ಮಂದಿರಗಳೂ, ಈ ಲೀಲೆಯ ಸ್ಥಾನಗಳು! ಅಂದು ರಾತ್ರಿಯಲ್ಲಿ ನೃತ್ಯವಾದರೆ ಇಂದು ಹಗಲಿರುಳು ಕೂಡಿಯೇ ನೃತ್ಯ ಸಾಗಿದೆ! ಭಾರತೀಯರ ಪ್ರಗತಿಯಿದಲ್ಲವೆ? ಸಜೀವ ಸಂಸ್ಕೃತಿಯ ಪ್ರತೀಕವಲ್ಲವೆ?

"ವಹವ್ವಾ! ದಿವ್ಯ ನೃತ್ಯ!" ಯಾರೋ ಆನಂದದ ಭರದಲ್ಲಿ ಉದ್ಗಾರ ತೆಗೆದರು.

"ದಿವ್ಯ ನೃತ್ಯ? ಕಾಲಿನಲ್ಲಿ ಶೃಂಖಲೆ ಬಿಗಿಯಲ್ಪಟ್ಟು ಒದ್ದಾಡು ತ್ತಿದ್ದಾನೆ. ಅದಕ್ಕೆ ನೃತ್ಯವೆನ್ನುತ್ತಾನೆ ಮೂರ್ಖ!" ಅಜಿತ ಒದರಿದ.

ಅಕಸ್ಮಾತ್ ಅವನ ಸುತ್ತಲೂ ಚಪ್ಪಾಳೆಯಿಕ್ಕುತ ಗಂಡು ಜೋಗೆ ಯರ ಹಿಂಡೊಂದು ತಿರುಗಹತ್ತಿತು. ಪುರುಷಾಕೃತಿಯ ವ್ಯಂಗ್ಯ ಚಿತ್ರ! ದೊಡ್ಡ ಒಡಕು ಸ್ವರಲ್ಲಿ, ಹೆಣ್ಣಿನ ಮುರುಕ ಮಾಡುತ್ತ ಹಾಡತೊಡಗಿ ದರು.

ಕುಣಿ ಕುಣಿ
ಮತ್ತ ನಟಿ
ಪುಲಕಲಾ ಪ್ರಜೋದಿನಿ
ಮಣಿ ಮಣಿ
ಚೆಲುವ ಕಟಿ
ಸುಖಲತಾ ಪ್ರಬೋಧಿನಿ
ಬೆರಳ ಹರಿಸಿ
ಚೆಲುವ ಸುರಿಸಿ
ಕುಣಿದು ಬಾ ಪ್ರಮೋದಿನಿ
ಗೆಜ್ಜೆ ಕುಣಿಸಿ
ಗೀತೆವೆರೆಸಿ
ತೇಲು ಬಾ ಸುಶೋಭಿನಿ
ಸೆರಗನೆಸೆ
ಎಲರ ಮುಸೆ
ನಟಿಯೆ ಮತ್ತಕಾಶಿನಿ
ಅಲರಡಿಯು
ಕುಣಿಸುತಿಹ
ಮುಗುದೆ ಸಕಲ ಕಾಮಿನಿ

ಕಟಿ ಬಳುಕಿ
ಶಿರವಳುಕಿ
ನಟಿಸು ಸುಂದರಾಂಗಿನಿ
ನಡುಗೆ ಊರು
ಬಳಿಗೆ ಸಾರು
ಕುಣಿದು ಭಾವನಾಂಗಿನಿ
ಅಡಿ ಇಡಲು
ನೆಲ ಸುಡಲು
ಅಲರ ತೆರದಿ ಚಿಮ್ಮಿಮಣಿ
ಬಗೆಯೊಡಲು
ಕದಡಿರಲು
ಮನವ ಮೀಟಿ ನೆಗೆದು ಕುಣಿ
ವೀಣೆ ದನಿಗೆ
ಬೀರಿ ಒಸಗೆ
ಮನವ ನಲಿಸು ಮೋಹಿನಿ
ನಟಿಸಿ ಬಂದು
ಮಣಿದು ನಿಂದು
ಸುಮುವನೆರಚು ಭಾಮಿನಿ

"ಇದರಲ್ಲೂ ಹಿಂದುಗಳಿಗೇ ಮೊದಲಸ್ಥಾನ? ನಾನೆಂದೂ ಕೊಡಲಿಕ್ಕಿಲ್ಲ. ಅವರಿಗಿಂತ ಮುಂದೆ ನಾವು!" ಒಬ್ಬ ಮುಸಲ್ಮಾನ ಮುಲ್ಲಾ ಸಾರಿ ಹೇಳಿದ.

ಕೂಡಲೆ ಹಿಂದೀ ಗಂಡು ಜೋಗಿಯರ ಮುಂದೆ ಮಲಮಲಿಯ ಶರಟು, ಜರಗ ಜಾಕೀಟುಗಳನ್ನು ಧರಿಸಿದ ಫಕೀರರ ಸಾಲು ಹುಯ್ಯೆಂದು ಬಂದಿತು. ಗಾಂಜಿಯ ಹೊಗೆ ಮೇಲೇಳುತ್ತಲಿದೆ! ಅಫುವಿನ ಅಮಲಿನಲ್ಲಿ ಸ್ವರ ಅಸ್ಪಷ್ಟವಾಗಿದೆ!

ಮನ ಕರತಾ ಹೈ:

ನಂಗಾ ಹೋಕರ ಕುಛ್ ಘಂಟೋತಕ ಸಾಗರ-ತಟಪರ ಮೈಂ
ಖಡಾರಹೂಂ!

ಯೋಭಿ ಕ್ಯಾ ಕಪಡಾ ಮಿಲತಾ ಹೈ?
ಧನಪತಿಯೋಂ ಕೀ ಐಸೀ ಲೀಲಾ!
ಮನ ಕಹತಾ ಹೈ:
ನಂಗಾ ಹೋಕರದೂಂ ಆಗ ಲಗಾ, ಜೋಪಹನ ರಖಾ ಹೈ
ಉಸಮೇ ಭೀ.

ಫಿರ ಬನೂ ದಿಗಂಬರ ಬಂಭೋಲಾ
ನಂಗಾ ಹೋಕರ ವಿಷಪಾನ ಕರೂ ಸಾಗರ ತಟಪರ..
ಓ ಕಾಲಕೂಟ ತೂ ಕಹಾಂ ಗಯಾ?
ಓ ಹಾಲಾಹಲತೂ ಕಹಾಂ ಗಯಾ?
ಅಮೃತಕಿ ಬಾತ ನಹೀ ಪೂಛೋ,
ವಿಷ ತಕಕಾ ಬೂಂದ ನಹೀ.. ಮಿಲತಾ..
ದೇವತಾ ಹುಏ ನಿರ್ಲಜ್ಜ, ಸಭೀಕೋ ಛಿಪಾದಿಯಾ!
ಮನ ಕರತಾ ಹೈ:
ನಂಗಾ ಹೋಕರ ಮೈಂ ಖಡಾರಹೂಂ ಸಾಗರ ತಟಪರ.
ಕುಛ ಘಂಟೋತಕ ಕ್ಯಾ, ಜೀವನ ಭರ
ನಂಗಾ ಹೋಕರ—

"ಅವರ ಹಾಡಿಗೆ ನಾವೂ ಡೋಲು ಬಾರಿಸೋಣ." ಒಬ್ಬ ಹಿಂದೂ ಗಂಡು ಜೋಗಿ ತಲೆಯ ಜೊಲಸು ಕೂದಲನ್ನು ಕೆರೆಯುತ್ತ ಹೇಳಿದ, ಮುಂದೆ ಬಂದು.

ಹಿಂದು ಮುಸಲ್ಮಾನರ ಐಕ್ಯವು ಈ ಸ್ಥಿತಿಯಲ್ಲಿ ಕಂಗೊಳಿಸುತ್ತಿದೆ. ಇದೇ ಭಾರತ! ಇದೇ ಕರ್ನಾಟಕ! ಕರಕರ ಹಲ್ಲು ಕಡಿದು ಕೈಯೊಳಗಿನ ಕಲ್ಲನ್ನು ಆ ಗುಂಪಿನ ಮೇಲೆ ಅತ್ಯಂತ ಕ್ರೋಧದಿಂದ ತೂರಿದ ಅಜಿತ. ಕೂಡಲೆ ಅವನ ಕಣ್ಣುಗಳು ತೆರೆದುವು.

ಎಲ್ಲಿದ್ದನಾತ?

ಆ ಸಂಗೀತ ಕಚೇರಿಯಲ್ಲಿಯೋ! ಆ ವೇಶ್ಯೆ ಇನ್ನೂ ಯಾವದೋ

ಒಂದು ರಾಗದ ಆಲಾಪ ಮಾಡುತ್ತಿದ್ದಳು. ತಿಳಿದೋ ತಿಳಿಯದೆಯೋ ಎಲ್ಲರೂ ಗಾರುಡಿಗನ ಪುಂಗಿಯ ನಾದಕ್ಕೆ ಒಲಿದು ತೂಗುವ ನಾಗ ಲೋಕದಂತೆ ತಲೆದೂಗುತ್ತಿರುವರು! ಈ ವಿಷಮತೆಯನ್ನು ಕಂಡು ಅಜಿತನ ಜೀವ ತಳಮಳಿಸಿತು. ಇದೆಲ್ಲ ಅವನಿಗೆ ಅಸಹ್ಯವೆನಿಸಿತು.

ಅಜಿತ ಒಮ್ಮೆಲೇ ಎದ್ದ. ಏನೂ ವಿಚಾರ ಮಾಡದೆ ಆ ದಿವಾಣ ಖಾನೆಯನ್ನು ಬಿಟ್ಟು ಹೊರಗೆ ಬಂದ. ಆ ಗಂಡುಜೋಗಿ ಫಕೀರರ ಕುಣಿತ, ಅಟ್ಟಹಾಸ ಹಾಗೇ ನಡೆದೇ ಇತ್ತು, ಅವನ ಕಣ್ಣೆದುರಿಗೆ. ಭ್ರಮೆಯೋ? ಕನಸೊ? ನನಸೊ? ಇದರಲ್ಲಿ ಯಾವುದು ಸತ್ಯ?

## ೨೦

ಕೆಲ ದಿನಗಳಲ್ಲಿ ಅಜಿತನ ಮದುವೆಯೂ ಬಂದೇ ಬಿಟ್ಟಿತು. ಅವನ ಇಷ್ಟೆಯಂತೆ ಮದುವೆಯ ಕಾರ್ಯಕ್ರಮವೆಲ್ಲ ತೀರ ಸಾಮಾನ್ಯವಾಗಿ ಮುಗಿಸಲ್ಪಡಬೇಕಾಗಿತ್ತು. ಗೌಡರಿಗೂ ಹೆಚ್ಚಿನ ಖರ್ಚು ಬೇಕಿರಲಿಲ್ಲ ವಾದರೂ ಜನರ ಅಪವಾದಕ್ಕಾಗಿ ಹಾಗೆ ಮಾಡೋಣ ಹೀಗೆ ಮಾಡೋಣ ಎನ್ನುತ್ತಿದ್ದರು. 'ಹಾಗೆಲ್ಲವಾದರೆ ನನಗೆ ಮದುವೆಯೇ ಬೇಡ' ಎಂದು ಅಜಿತನ ಹಟ. ಒಂದೇ ದಿನ ಕಾರ್ಯಕ್ರಮ ಕೊನಗೊಳ್ಳಬೇಕು. ಆಪ್ತರು ಮುಂಜಾನೆ ಬಂದು ಸಾಯಂಕಾಲ ಹಿಂದಿರುಗಬೇಕು. ಇನ್ನೂರು ಖಾದಿ ಟೊಪ್ಪಿಗೆಗಳನ್ನು ಬಡ ಹುಡಗರಿಗೆ ಹಂಚಬೇಕು. ಮಂಟಪದಲ್ಲಿ ಚಹ ಚುಟ್ಟ ಮೊದಲಾದವುಗಳ ಪ್ರವೇಶವಾಗಕೂಡದು, ಎಂದು ಅವನ ಆಕಾಂಕ್ಷೆ, ನಿಯಮ. ಇದಕ್ಕೆಲ್ಲ ಗೌಡರ ವಿರೋಧ. ಒಂದಿನ ಪಡಸಾಲೆ ಯಲ್ಲಿ ಮನೆಯವರೆಲ್ಲರೂ ಕುಳಿತಾಗ ಗೌಡರು ತನ್ನ ಮೇಲೆ ಹಿಂದಿನಿಂದ ತಪ್ಪು ಬರಬಾರದು ಎಂಬ ವಿಚಾರದಿಂದ ಮಾತೆತ್ತಿದರು.

"ಅಜಿತ್!"

ಅಜಿತ ತನ್ನ ಕೋಣೆಯಿಂದ ಹೊರಗೆ ಬಂದ.

"ಹಾಗೆಲ್ಲ ಹಟ ಹಿಡಿಯಬೇಡ; ನಾ ಹೇಳಿದಂತೆ ಕೇಳು" ಎಂದರು ಗೌಡರು.

" ಹಟವಲ್ಲ, ಇರಬೇಕಾದುದೇ ಹೀಗೆ."

" ಅದೇಕೆ? ರಾವಸಾಹೇಬನ ಮದುವೆಯನ್ನು ನೋಡಲಿಲ್ಲವೆ? ಮನೆಗೆ ಭೂಷಣವಾಗುವಂತಿರಬೇಕು. ಜನ ಹಿಂದೆ ಆಡಿಕೊಳ್ಳುವಂತಾಗ ಬಾರದು."

" ನಾನು ರಾವಸಾಹೇಬನಲ್ಲ; ಜನರ ಮಾತಿಗಾಗಿ ನಾವು ಹೆದರ ಬೇಕಿಲ್ಲ."

ಗೌಡರಿಗೆ ಶೋಕಾದ ಮಾತಾದರೂ ಹುಡುಗರು ಎದುರು ನಿಂತು ವಾದಿಸಿದರೆ ಅವರಿಗೆ ಸಹನವಾಗದು. ಅಜಿತನ ಮೇಲೆ ತುಂಬ ಕೆರಳಿದರು. ಆದರೆ ಅದನ್ನು ಕಾಣಲಿಕ್ಕೆ ಅಜಿತ ಅಲ್ಲಿರಲಿಲ್ಲ. ಸ್ವಲ್ಪ ಹೊತ್ತು ಗೌಡ ಸುಮ್ಮನಾಗಿದ್ದು ಹೆಂಗಸರ ಕಡೆಗೆ ಹೊರಳಿ ಹೇಳಿದ. " ನಾ ಏನೋ ತಮ್ಮನ ಮಗನ ಮದಿವೆಯನ್ನೂ ನಾಲ್ಕು ಜನ ಹೌದೆನ್ನುವಂತೆ ಮಾಡಬೇಕಂದಿದ್ದೆ. ಅವನಿಗೇ ಬೇಡವಾಗಿದೆ. ಇವನಿಗೇನು ವೈಭವದ ಸುಖ ಗೊತ್ತು? ಜನ್ಮದಲ್ಲಿ ಮದುವೆಯೆಂಬುದು ಒಮ್ಮೆಯೇ ಆಗತಕ್ಕುದು. ಮೇಲಿಂದ ಮೇಲೆ ಆಗುವ ಕೆಲಸವೆ? ನಮ್ಮ ಕಣ್ಣುಗಳು ಎಂದು ಕಾಣ ಬೇಕು; ಇವರು ಹೀಗೆ ಹಟ ಹಿಡಿದರೆ?"

ಅಂತೂ ಜನರ ಮಾತಿನಿಂದಲ್ಲವಾದರೂ ಸರಸ್ವತಿಯ ಮಾತಿನಿಂದ ಗೌಡ ಪಾರಾದಂತಾಯಿತು. ಅಜಿತ ಹೇಳಿದಂತೆ ಒಂದಿನದಲ್ಲಿಯೇ ಕಾರ್ಯಕ್ರಮ ಮುಗಿಯಿತು. ಸಣ್ಣದಾದರೂ ಸುಂದರವಾದ ಮದುವೆಯ ಸಮಾರಂಭವನ್ನು ಕಂಡು ಎಲ್ಲರೂ ಸಂತಸಬಟ್ಟರು. ಆಪ್ತರು ಸಿರಿವಂತರಾದರೂ ಲಗ್ನಕ್ಕೆ ಶ್ರೀಯಲದೇವಿಯೊಡನೆ ಬಂದುದಕ್ಕೆ ಗೌಡರಿಗೆ ಅದರಲ್ಲಿಯೂ ಸಮಾಧಾನ. ಗಂಗವ್ವನಂತೂ ಹಿರಿಹಿರಿ ಹಿಗ್ಗಿದಳು.

ಶ್ರೀಯಲದೇವಿಯನ್ನು ಇದೇ ಮೊದಲನೆಯ ಸಲ ಕಂಡ ಹಳ್ಳಿಯ ಹೆಂಗಸರು ತಮ್ಮ ತಮ್ಮಲ್ಲಿ ಹೀಗೆ ಆಡಿಕೊಂಡರು :

ಒಬ್ಬಳೆಂದಳು " ಹುಡುಗನ ತಕ್ಕ ಪೋರೀನ ಅಲ್ಲ."

" ಹದಿನೆಂಟೆಲ್ಲ ನೋಡ್ತ ಹೋದರೆ ಹೀಗೇ ಆಗೋದೇಳು" ಇನ್ನೊಬ್ಬಳೆಂದಳು.

" ದೊಡ್ಡವರ ಹೆಣ್ಣುಮಕ್ಕಳು ಎಲ್ಲಿ ಚಲುವ ಇರತಾವೇಳು.

ಬರೇ ಅವರ ಅರಿವೆ ಆಯ್ತು, ಹಿಕ್ಕೊಳ್ಳೋದಾಯ್ತು, ತಿಕ್ಕೊಳ್ಳೋದಾಯ್ತು."

"ಅದೇ ನೋಡು, ಅಜಿತನಿಗ ಎಂಥಾ ಬಂಗಾರಂಥ ಹುಡಿಗೆ ಸಿಕ್ಕಿತು!"

"ಪರದೇಶಿ ಮಕ್ಕಳದ ಹೇಗಾದರೂ ಚಲೋ ಆಗ್ತದ ಏಳು. ಇವರ ಹಾಗೇ ಮಾಡೇನು ಹೀಗೇ ಮಾಡೇನು ಅಂದರ ಆಗಲಿಕ್ಕೆ ಒಲ್ಲದು! ಅವರವರ ಹಣೆಬರಹ ಹುಟ್ಟುವ ಮುಂಚೇ ಬರದ ಇಡತಾನ ದೇವರು.'

"ಇಷ್ಟೆಲ್ಲ ನೋಡಿ ಅಂಥಾ ಅಸಡ್ಡಾಳ ಹುಡಿಗೆಯನ್ನೇ ಹೇಗೆ ಗಂಟು ಹಾಕಿದರ ತಾಯಿ ರಾವಸಾಹೇಬನಿಗೆ!" ಬೆರಗಿನಿಂದ ಕಪೋಲದ ಮೇಲೆ ಬೆರಳಿಟ್ಟು ನುಡಿದಳೊಬ್ಬಳು.

ಈ ಮಾತುಗಳಲ್ಲಿ ಹಲಕೆಲವು ರಾವಸಾಹೇಬನ ಕಿವಿಗೂ ಬಿದ್ದುವು. ಆಗ ಅವನ ಸಹಜ ಸೌಂದರ್ಯಲಾಲಸೆಯು ಚೇತನಗೊಳ್ಳುವುದು. ಒಮ್ಮೊಮ್ಮೆ ಇಂಥ ಹುಡಿಗೆಯನ್ನು ತಾನು ಲಗ್ನವಾಗಬಾರದಿತ್ತೆಂದೂ ಇವಳು ತನಗೆ ಬೇಡವೇ ಬೇಡ ಎನ್ನುವ ವರೆಗೂ ಮನಸ್ಸು ಮುನ್ನೋಡುವದು. ಆದರೆ ಮದುವೆಗೆಂದು ಬಂದ ಶ್ರೀಯಲದೇವಿಯು ಮನೆಯಲ್ಲಿಯೇ ನಿಂತಳು. ಗುಣವಂತಿಯನ್ನೂ ಮದುವೆಯಾದ ನಂತರ ತವರು ಮನೆಗೆ ಕಳಿಸಲಿಲ್ಲ. ಮನೆಯಲ್ಲಿ ಹೊಸದಾಗಿ ಬಂದ ಇಬ್ಬರು ಸೊಸೆಯಂದಿರು, ಅಳಿಯ ಸುಧೀರ, ಹಡೆದ ಇಂದಿರೆ, ಹಾಗೂ ಅವಳ ಮಗ ಹೀಗೆ ಎಲ್ಲ ಬಳಗ ಬೆಳೆದಿದ್ದಿತು. ಸಂತಸ ಸಿರಿ ಸುರಿಯುತ್ತಿದ್ದಿತು. ಯಾವುದಕ್ಕೂ ಕೊರತೆಯಿಲ್ಲ. ಗೌಡರೂ ಹರುಷದಿಂದ ನಲಿಯುತಲಿದ್ದರು. ಮುರದೇವಿಯು ತನ್ನ ಕಣ್ಣ ಮುಂದೆಯೇ ಎಲ್ಲವೂ ಒಳಿತಾದುದನ್ನು ಕಂಡು ಹಿರಿಹಿರಿ ಹಿಗ್ಗಿದಳು. ಸರಸ್ವತಿಯು ಕೊನೆಗೂ ಸೊಸೆ ಚಲುವೆ ಸಿಕ್ಕಳೆಂದು ಸಮಾಧಾನಗೊಂಡಿದ್ದಳು. ಗಂಗವ್ವನಿಗಂತೂ ಎಲ್ಲವೂ ಅವಳಿಗೇ ಇದೆ. ಸೊಸೆಯ ಅಣ್ಣ ಮಾಮಲೇದಾರ! ಕೇಳುವದೇನು? ಉಬ್ಬಿ ಉಬ್ಬಿ ಮನೆಗೆಲಸ ಮಾಡುತ್ತಿದ್ದಳು.

ಶ್ರೀಯಲದೇವಿ ಅಷ್ಟು ಸುಂದರಿಯಲ್ಲದಿದ್ದರೇನಾಯಿತು? ತರುಣಿಯಲ್ಲವೇ? ಅವಳ ಉಡಿಗೆ ತೊಡಿಗೆಯ ಬೆಡಗಿಗೆ ಮನಸೋತ ರಾವ

ಸಾಹೇಬನು ಈಗೀಗ ಕೋಣೆಯನ್ನು ಬಿಟ್ಟು ಹೊರಗೇ ಬರುತ್ತಿರಲಿಲ್ಲ. ಸಿರಿವಂತರ ಮನೆಯಿಂದ ಬಂದ ಸೊಸೆಯೆಂದು ಅವನ ಹೆಂಡತಿಗೂ ಕೆಲಸವಿಲ್ಲ. ಯಾರೂ ಹೇಳರು, ಅವಳೂ ಮಾಡಳು. ಹೀಗಾಗಿ ನವ ದಂಪತಿಗಳು ಉಂಡುಂಡು ಕೋಣೆ ಸೇರತೊಡಗಿದರು. ಮನಬಂದಂತೆ ಹರಟುತಿದ್ದರು. ಗೌಡರ ಮನೆಯ ಸಂಸ್ಕೃತಿಯೇ ತಲೆಕೆಳಗಾಯಿತಿದ ರಿಂದ. ಸ್ವತಃ ಆದಗೌಡರು ಎರಡು ಮಕ್ಕಳಾಗುವ ವರೆಗೆ ಹೆಂಡತಿ ಯೊಡನೆ ಮಾತಾಡಿದ್ದನ್ನು ಯಾರೂ ಕಂಡುದಿಲ್ಲ. ಅವರೆದುರಿಗೆಯೇ ಈ ಚಿನ್ನಾಟವೇ? ಅವರಿಗಂತೂ ಇದು ಸೇರಲಿಲ್ಲ. ಮುರದೇವಿಯೇ ರಾವಸಾಹೇಬನನ್ನು ಕರೆದು, "ಅತ್ತೆಯ ಮನೆಯ ಸೊಸೆಯುಂದಿರು, ಹೀಗೆ ಉಂಡುಂಡು ಕುಳಿತರೆ ಹೇಗೆ? ನಿಮ್ಮ ಹೆಂಡಂದಿರು ಬಂದರೆಂದು ತಾಯಿಗೆ ಸ್ವಲ್ಪ ಬಿಡುವಾಗಬಾರದೆ ?" ಎಂದು ಕೇಳಿದಳು.

"ಹೌದು, ಅವಳು ಶಹರದವಳು, ಮೇಲಾಗಿ ಸಿರಿವಂತಳವಳು. ಇಲ್ಲಿ ಬಂದೊಡನೆಯೇ ನೀವು ಮುಸುರೆ ತೆಗೆಯಲು ಪಾತ್ರೆ ತಿಕ್ಕಲು ಕರೆದರೆ?" ಎಂದ ರಾವಸಾಹೇಬ.

"ಹಾಗಲ್ಲೋ! ಈಗ ಗುಣವಂತಿ ಮಾಡುವದಿಲ್ಲವೇನೋ? ಅವಳಿಗೇನು ನಾವು ಹೇಳುತ್ತೇವೆಯೇ? ತಾನೇ ಮಾಡುತ್ತಾಳಲ್ಲ ಬಂದು. ನಾವೇನು ಇಷ್ಟು ಕೆಲಸ ಮಾಡೇ ತೀರಬೇಕೆಂದು ಮುಂದೆ ನಿಂತು ಮಾಡಿ ಸುವುದಿಲ್ಲ. ಹೆಂಗಸರೆಂದ ಮೇಲೆ ಕೆಲಸ ಮಾಡಬೇಕೇ ಹೊರತು ಹೀಗೆ ಕುಳಿತರೆ ಹೇಗೆ?"

ರಾವಸಾಹೇಬನಿಗೆ ಈ ಮಾತುಗಳು ಸೇರಲಿಲ್ಲ. ಅವನು 'ಹಳೆಯ ಮುದುಕಿ ಇವಳಿಗೇನು ಗೊತ್ತು?' ಎಂದುಕೊಂಡು ಬಿಂಕದಿಂದಲೇ ಹೋಗಿಬಿಟ್ಟ. ಮೊಮ್ಮಗನ ಈ ವರ್ತನೆ ಮಾತುಗಳೆಲ್ಲವೂ ಅವಳಿಗೆ ವಿಚಿತ್ರವೇ ಎನಿಸಿದ್ದಿತು. ನಿರುಪಾಯಳಾಗಿ ಕೊನೆಗೆ ಆದಗೌಡನ ಮುಂದೆ ಮಾತ್ತೆತ್ತಿದಳು. ಅವನು ಮಗನಿಗೆ ಹೇಳುವ ಬದಲು ಸೊಸೆಗೆಯೇ ಸೂಚಿಸಿದನು, ಅವಳ ಘನತೆಗೆ ಕೊರತೆ ಬಾರದಂತೆ.

"ಮನೆಗೆ ಬರುವ ಹೋಗುವ ಜನ ಬಹಳ. ದೊಡ್ಡ ಮನೆತನ ದವರೂ ಅಷ್ಟೇ; ಚಿಲ್ಲರ ಮನೆತನದವರೂ ಅಷ್ಟೇ ಅವರವರಿಗೆ ತಕ್ಕಂತೆ

ಉಪಚಾರ ನಡೆಯಬೇಕು. ಗುಣವಂತಿ ಹಳ್ಳಿಯ ಹುಡಿಗೆ; ಮೊದ್ದು. ಅವಳಿಗೇನು ತಿಳಿಯುತ್ತದೆ? ನೀನೇ ಅಡಗಿಯ ಮನೆಯಲ್ಲಿ ನಿಂತು ನೋಡ್ತಾ ಇರು!" ಎಷ್ಟಾದರೂ ಅವಳು ದೊಡ್ಡವರ ಮಗಳಲ್ಲವೆ?

ಆದಗೌಡನಿಗೆ ಸೊಸೆ ಕೆಲಸ ಮಾಡಬೇಕೆಂಬ ಮನಸ್ಸು ಇರಲಿಲ್ಲ. ಸಿರಿವಂತರ ಮಗಳು ತಿಂದುಂಡು ಮೇಲ್ವಿಚಾರಣೆ ಮಾಡುತ್ತ ಇರಲಿ. ಇರುವುದೇ ಸರಿಯಾದುದು ಎಂದೇ ಭಾವಿಸಿದ್ದರು. ಆದರೆ ಹಗಲೆಲ್ಲ ರಾವಸಾಹೇಬನೊಡನೆ ಕುಳಿತು ಹರಟೆ ಹೊಡೆಯುವದು ಮಾತ್ರ ಅವನಿಗೆ ಸೇರುತ್ತಿರಲಿಲ್ಲ.

ಮನೆಯೊಳಗೆ ಗಂಗವ್ವನೇನೋ ಸೊಸೆ ಮನೆಗೆ ಹೊಸದಾಗಿ ಬಂದವಳೆಂದೂ ದೊಡ್ಡವರ ಮಗಳೆಂದೂ ಕೆಲಸಕ್ಕೆ ಕರೆಯುತ್ತಿರಲಿಲ್ಲ. ಮುರದೇವಿ ಏನಾದರೂ ತನ್ನ ಸೊಸೆಯ ಕೆಲಸದ ವಿಷಯಕ್ಕೆ ಗೊಣಗುಟ್ಟಿದರೆ ತಾನೇ ಮುಂದಾಗಿ "ದೊಡ್ಡವರ ಮಕ್ಕಳು ಅವರಿಗೇನು ಮಾಡಿ ಗೊತ್ತು. ನಮ್ಮ ಕೈ ಆಡುವ ವರೆಗೆ ನಾವೇ ಮಾಡತೇವಲ್ಲ" ಎಂದು ಹೇಳಿ, ಕೆಲಸಕ್ಕೆ ಕೈ ಹಾಕುತ್ತಿದ್ದಳು.

ಆದರೆ ಮುದುಕಿಯ ಸ್ವಭಾವ ಹೇಗೆ ಹೋದೀತು? ಗುಣವಂತಿಯೊಡನೆ ಶ್ರೀಯಲೆಗೂ ಕೆಲಸ ಹೇಳಿಯೆ ತೀರುತ್ತಿದ್ದಳು.

ಕೆಲ ದಿನಗಳಲ್ಲಿ ರಾವಸಾಹೇಬನ ಹರಟೆಗೆ ಚ್ಯುತಿ ಬಂದಿತು. ತನ್ನ ಹೆಂಡತಿಗೆ ಕೆಲಸ ಹಚ್ಚುವದು ಅವನಿಗೆ ಸರಿಬರುತ್ತಿರಲಿಲ್ಲ. ಆದರೆ ತಂದೆಯೇ ಈ ವಿಷಯದಲ್ಲಿ ಬಾಯಿ ಹಾಕಿದನೆಂದು ತಿಳಿಯಲು ಮೌನ ತಾಳಬೇಕಾಯಿತು. ಆದರೂ ದಿನಾಲು ರಾತ್ರಿ ಶ್ರೀಯಲದೇವಿಯ ಪುರಾಣ ಶ್ರವಣಕ್ಕೆ ಮಾತ್ರ ಅವನು ಸಿದ್ಧನಾಗಬೇಕಾಯಿತು.

"ಅಜ್ಜಿ ಮನೆ ಸಾರಿಸು ಅನ್ನುವಳು; ನನಗೆ ಸಾರಿಸಿ ಗೊತ್ತಿಲ್ಲ, ಬೀಸಿ ಕೈಗೆ ಗುರುಳಿಗಳೆದ್ದುವು! ದಿನಾ ಮುಂಜಾನೆಯೆದ್ದು ರೊಟ್ಟಿ ಬಡಿಯಬೇಕು. ಇದನ್ನೆಲ್ಲ ಯಾರು ಮಾಡಬೇಕು?" ಎಂದು ಮುನಿಸಿನಿಂದ ಗೋಣು ಕೊಂಕಿಸಿ ಹೇಳುವಳು. ಅವಳ ಆಗಿನ ಭಾವದಲ್ಲಿ "ನೀವಿದ್ದು ನನಗೇನು ಉಪಯೋಗ?" ಎನ್ನುವ ಪ್ರಶ್ನಾರ್ಥಕ ಚಿನ್ಹವಿರುವುದು. ಹಾಸಿಗೆಯ ಮೇಲೆ ಉಸ್ಸೆಂದು ದಣಿದು ಮಲಗುವಿಕೆ,

ಹೆಚ್ಚಿಗೆ ಮಾತನಾಡದಿರುವಿಕೆ, ಸಿಡುಕುತನಗಳೆಲ್ಲ ಅವನಿಗೆ ನೀರಸತನ ವನ್ನು ತಂದಿಟ್ಟವು. ಮನೆಯವರ ಮೇಲೆ ಮನದಲ್ಲಿಯೇ ಕೆರಳುವ. ಆದರೆ ಅವನಿಗೆ ಆಡಲಿಕ್ಕೂ ಬಾರದು ಮಾಡಲಿಕ್ಕೂ ಬಾರದು ಅನ್ನುವ ಸ್ಥಿತಿಯಾಯಿತು. ಹಗಲಿರುಳೂ ಏನು ಮಾಡಬೇಕೆಂಬ ಯೋಚನೆಯ ಲ್ಲಿಯೇ ಇದ್ದ.

ಅಜಿತ ಈಗೀಗ ತನ್ನ ಓದು ಬರಹದಲ್ಲಿ ತೊಡಗಿದ. ಮುಂದಿನ ಅಭ್ಯಾಸವಂತೂ ನಿಂತೇ ಹೋಗಿದ್ದಿತು. ಮನೆಯ ಹೊರಗಿನ ವ್ಯವಹಾರ ವನ್ನೆಲ್ಲ ಕಕ್ಕ ನೋಡಿಕೊಳ್ಳುವನು. ಮೈಮೇಲೆ ಹೊಣೆಗಾರಿಕೆಯೇನೂ ಇಲ್ಲ. ನೋಡಲಿಕ್ಕೆ ಹೀಗೆನಿಸುತ್ತಿದ್ದರೂ ಜಗತ್ತಿನ ಹೊಣೆಯನ್ನೆಲ್ಲ ಹೊತ್ತು ನಿಂತಿರುವೆನೆಂಬ ಚಿಂತೆಯು ಅವನಿಗೆ ಒಳಗೊಳಗೇ ಕಟಿಯುತ್ತಿ ದ್ದಿತು. ಒಂದು ದಿನ ಗೌಡನ ಹತ್ತರ ಆಳುಮಗ ಭರಮು ಏನೋ ಹೇಳುತ್ತ ಬಂದಿದ್ದ. ಅದನ್ನು ಕೇಳಿಕೊಳ್ಳುವ ಅವಕಾಶ ಅವರಿಗಿಲ್ಲ. ಮೊದಲು ಬೈಗುಳಕ್ಕೇ ಆರಂಭ. "ಅಲ್ಲೋ. ಎಷ್ಟ ಹಲಕಟ ಇದ್ದೀರಿ ನೀವು? ಅಲ್ಲಿ ತೋಟದೊಳಗ ಯಾರೂ ಆಳು ಬೇಡ? ನೀ ಹೀಗೇ ಹೋಗತೇ ನಂತ ಹೇಳ್ತಿದಿ? ಅಲ್ಲಿ ಯಾರು ನಿಮ್ಮ ಅಪ್ಪ ಬಂದು ದುಡಿಯುವನು? ಬೇಕಾದಾಗ ಬಂದು ಮನೆಗೆ ಹೋಗ್ತೇನಂತ ನಿಂತರೇ ?"

"ಅಲ್ಲ ದೇವ್ರೇ! ಕಣ್ಣ ಕೆಂಪಗ ಆಗಿವೇರಿ. ಭಾಳ ಚುಚ್ಚತಾವು. ಒಂದಿನಾ ಬೆಚ್ಚಗ ಮನೆಯೊಳಗ ಮಲಕೋತೇನೀ. ಕಣ್ಣ ನೋವ ನಿಲ್ಲಲಿ ನಿಲ್ಲದಿರಲಿ ನಾಳೆ ಬೆಳಿಗ್ಗೆ ಮತ್ತ ಕೆಲಸಕ್ಕ ಹಾಜರ ಇರತೇನ್ರಿ!" ಅಂಗ ಲಾಚುತಿದ್ದ ಆಳು.

"ಹೌದೋ ಏನ ಮೂರ್ಖ ಇದ್ದೀದಿ ನೀ! ಕೆಲಸ ಎಲ್ಲಾ ಅಲ್ಲೇದ. ಅಲ್ಲೇ ಬೀಳ್ತದ. ಇನ್ನೊಬ್ಬ ಆಳು ಬಾರದೆ ಹೇಗೆ ಗೋಗುವೆ ಅಲ್ಲಿಂದ ನೀ ?"

"ನಿನ್ನಿಂದ್ಲೂ ಹೇಳ್ಕೋಕ ಹತ್ತೇನಲ್ರಿ! 'ಯಾವನ್ನರ ಕಳಸರಿ, ನನ್ನ ಕಣ್ಣ ಗಾಳಿಗೆ ಹಾಳ ಆಗ್ತಾವ್ರೀ' ಅಂತ."

"ಹೌದಪ್ಪ ನೀ ಹೇಳೋದ ಆಯ್ತು? ಇಲ್ಲಿ ಆಳು ಮನುಷ್ಯರ ನ್ನೇನು ಕುಂಬಾರ ಮನೆಯೊಳಗೇನ ಮಾಡಿಸುವದದ? ತಿರುಗಿ ಮುರುಗಿ

ಮನುಷ್ಯರನ್ನ ಕಳಸರಿ ಮನುಷ್ಯರನ್ನ ಕಳಸರಿ ಅಂದರೆ ನಿನ್ನನ್ನೇಕೆ ಆಡಲಿಕ್ಕೆ ಚಾಕರಿ ಇಟ್ಟಕೊಂಡೇವಿ?"

"ಜೀವಕ ಭಾವಕ ಬಂದರ ಒಂದಿನ ನೋಡೋದ ಇಲ್ರಿ?"

"ಇಲ್ಲ, ಇಲ್ಲ; ಹಾಂಗಾದರ ಚಾಕರಿ ಯಾಕ ನಿಲ್ಲಬೇಕು? ಹೆಣ ಬಿದ್ದರೂ ಅಲ್ಲೇ ಬೀಳಲಿಕ್ಕೆ ಬೇಕು ತಿಳೀತು? ಹುಚ್ಚ ಸೂ— ಮೊಮ್ಮಗನ!"

ಕಕ್ಕನ ಈ ನಡತೆಯನ್ನು ಕಂಡು ಅಜಿತ ಕಳವಳಿಸಿದ, ಕುದಿಗೊಂಡ. ಊರಲ್ಲಿ ಕೂಲಿಕಾರರ ಸಂಘ, ರಾತ್ರಿ ಶಾಲೆಗಳನ್ನು ಸ್ಥಾಪಿಸಬೇಕೆಂದು ಯೋಚಿಸಿದ. ಅದರಂತೆ ನಾಲ್ಕಾರು ಜನರ ಮುಂದೆ ಮಾತಾಡಿದ. ಆದರೆ ಇವನ ವಿಚಾರ ಅವರ ಮಿದುಳನ್ನೇ ಹಿಡಿಯದು. ಇರಲಿ, ನಾನಾದರೂ ಒಬ್ಬ ಎಲ್ಲದಕ್ಕೂ ಸಿದ್ಧನಾಗುವೆ ಎಂದುಕೊಳ್ಳುವ. ಹಗಲಿರುಳೂ ರಾಜಕೀಯ ಸಾಹಿತ್ಯ ಓದುವ.

ಇದರಲ್ಲಿ ಅಜಿತನಿಗೆ ಗುಣವಂತಿಯ ಸಹವಾಸ ತುಂಬ ಹಿಡಿಯಿತು. ಅವಳೂ ಸ್ವಾವಲಂಬಿ. ಮೈಮೇಲಿನ ಸೀರೆ ಹರಿದರೆ ಮನೆಯಲ್ಲಿ ತಾನೇ ಹೊಲಿದುಕೊಳ್ಳುವಳು. ಸ್ವಾತಂತ್ರ್ಯಪ್ರಿಯಳು. ಆದರೆ ಸ್ವೈರವೃತ್ತಿಯವಳಲ್ಲ, ಶ್ರೀಯಲದೇವಿಯಂತೆ. ಮಾತಿನಲ್ಲಿ ತುಂಬ ರಸಿಕಳು. ಕನ್ನಡ ನಾಲ್ಕನೆಯ ಇಯತ್ತೆಯನ್ನೇ ಕಲಿತಿದ್ದರೂ ಚನ್ನಾಗಿ ಚರ್ಚಿಸಬಲ್ಲಳು. ಅವಳ ಚರ್ಚೆಗೆ ತಲೆಬುಡವಿರಲಿಲ್ಲ. ನಿಟ್ಟು ನಿಯಮಗಳಿರುತಿರಲಿಲ್ಲ. ಆದರೆ ಅದು ಅವಳ ತಿಳಿವಿನ ಕೊರತೆಗಾಗಿ ಎಂದು ಅಜಿತ ಆಗಲೇ ಅರಿತುಕೊಂಡ. ಅವಳ ಅರಿವನ್ನು ಮೇಲ್ಮಟ್ಟಕ್ಕೊಯ್ಯಬೇಕೆಂದು ಆಗಾಗ ಅವಳಿಗೆ ವಿಷಯಗಳನ್ನು ವಿವರಿಸುವ, ಕನ್ನಡ ಪುಸ್ತಕಗಳನ್ನು ಓದಲು ಕೊಡುವ.

ಅಜಿತನ ಸರಳ ಮನಸ್ಸಿನ ಸಹವಾಸವು ಗುಣವಂತಿಗೂ ಹಿತಕರವೆನಿಸಿತು. ತಾವಿರುವುದು ಹಿರಿಯರ ಆಧೀನದಲ್ಲಿ; ಮಾವ ಊರ ಗೌಡ. ತನ್ನ ತಂದೆಯ ಮನೆಯಲ್ಲಿ ವರ್ತಿಸುವಂತೆ ಇಲ್ಲಿ ವರ್ತಿಸಿ ಉಪಯೋಗವಿಲ್ಲ. ಅದಂತಿರಲಿ, ಪತಿಯೊಡನೆ ಹಗಲು ಸರಸವಾಗಿ ಮಾತನಾಡಲೂ ಸ್ವಾತಂತ್ರ್ಯವಿಲ್ಲ. ಹಿರಿಯರು ಬೆಳೆದ ಬಗೆಯೇ ಬೇರೆ. ಅದರಲ್ಲೂ ಕಣ್ಣೆದುರಿಗೆಯೇ ಶ್ರೀಯಲದೇವಿಯ ಸ್ಥಿತಿಯನ್ನೂ ಕಂಡಿದ್ದಳವಳು.

ಆದುದರಿಂದ ಇದ್ದೂ ಇಲ್ಲದಂತೆ ಗಂಡನ ಕೂಡ ಸವಿಯಾಗಿ ವರ್ತಿಸಿ, ಅತ್ತೆ ಮಾವರ ಮನಸ್ಸು ನೋಯುದಂತೆ ತೂಕದಿಂದ ವ್ಯವಹಸಿ ತನ್ನ ಒದನ್ನು ಸಾಧಿಸಿಕೊಳ್ಳುವಳು.

ಈ ತೂಕ ಹಿಡಿತ ಶ್ರೀಯುಲದೇವಿಗೆ ಸಿಗಲಿಲ್ಲ. ಹಿಡಿಯಲೂ ಅವಳು ಪ್ರಯತ್ನ ಮಾಡಲಿಲ್ಲ. ಆಕೆ ಶಿರಿವಂತರ ಮಗಳು. ನಗರದಲ್ಲಿ ಬೆಳೆದವಳು. ಮನೆಯಲ್ಲಿ ಸ್ವೈಚಳಿ ಬಿಟ್ಟು ವಿಹರಿಸಿದವಳು. ಮನಸ್ಸಿರಲಿ ಇಲ್ಲದಿರಲಿ ಈ ಮನೆಗೆ ಸೊಸೆಯಾಗಿ ಬಂದುದರಿಂದ ಪಿಣ್ಣಗಿನ ಬೆಕ್ಕಿನಂತೆ ಹೇಳಿದ ಕೆಲಸ ಮಾಡಿಕೊಂಡಿರಬೇಕಾಯಿತು. ಮನಬಂದಂತೆ ಅಲೆದಾಡುವುದು, ಬಾಯಿಗೆ ಬಂದಂತೆ ಹರಟುವುದು ಇವಾವುದಕ್ಕೂ ಅವಕಾಶವಿರಲಿಲ್ಲ. ಅವಳಿಗೆ ಮೊದಮೊದಲು ಇದು ನೀರಸ ಜೀವನವೆನಿಸಿತು. ‘ ಈ ಅತ್ತೆ ಮಾವರ ಕತ್ತರಿಯಲ್ಲಿ ಇರಲಾರೆ, ತವರುಮನೆಗೇ ಹೋಗುವೆ ’ ಎಂದು ಆಗಾಗ ಹಂಬಲವಾಗುವದು. ಎಷ್ಟಾದರೂ ತರುಣ ಜೀವ. ರಾವಸಾಹೇಬ ನನ್ನು ಬಿಟ್ಟು ದೂರವಿರಬೇಕಾಗುವದಲ್ಲ ! ತನಗೆ ಪ್ರಣಯದ ಮಾತು ಗಳನ್ನಾಡಲಿಕ್ಕೂ ದಾಂಪತ್ಯ ಸುಖಕ್ಕೂ ಅಲ್ಲಿ ಇರುವುದೇನು ? ಎಂದೂ ವಿಚಾರಿಸುವಳು. ಗುಣವಂತಿ ಇವಳಿಗಿಂತ ಚುರುಕು. ನಿಜವಾಗಿಯೂ ಇವಳಿಗಿಂತ ಗುಣವಂತಿ. ಇಬ್ಬರೂ ಒಂದೇ ವಯಸ್ಸಿನವರಾದರೂ ಗುಣ ವಂತಿಯ ಮುಂದೆ ಇವಳ ಬೆಳಕು ಬೀಳದು.

ಇತ್ತಿತ್ತಲಾಗಿ ಗಂಗವ್ವನ ಮನಸ್ಸಿನೊಳಗಿಂದಲೂ ಸೊಸೆ ಇಳಿದಿದ್ದಳು. ಬೆಳಗಾಂವಿಯ ಅಪ್ಪರಿಂದ ತನಗೆ— ಗೌಡತಿಯಾದ ತನಗೆ— ಸರಿಯಾದ ಮಾನ ಮರ್ಯಾದೆ ಸಿಗುತ್ತಿಲ್ಲ, ಎಂಬ ಭಾವನೆಯೇ ಅದಕ್ಕೆ ಕಾರಣವಾಗಿದ್ದಿತು.

ಒಮ್ಮೆ ಶ್ರೀಯುಲೆಯ ತಾಯಿ ತಮ್ಮಲ್ಲಿ ಬಂದಾಗ ಸರಸ್ವತಿಯನ್ನೂ ತನ್ನನ್ನೂ ಸರಿಯಾಗಿಯೇ ಕಾಣಬೇಕೆ ? ತಾನು ಊಟಕ್ಕೆ ಕರೆದರೂ ಕೂಡ ‘ ಸರಸ್ವತಿ ಬಸ್ತಿಯಿಂದ ಬರಲಿ, ಕೂಡಿಯೇ ಊಟಕ್ಕೆ ಕೂಡೋಣ ’ ಎಂದು ಹೇಳಿ ಅವಮರ್ಯಾದೆಗೊಳಿಸಬೇಕೆ ? ಎಂಬೆಲ್ಲ ಹಳ್ಳಿಯ ಗೌಡ ತಿಯ ವಿಚಾರಗಳು— ಪಟ್ಟಣದ ಸ್ತ್ರೀಯರ ಸ್ವಾಭಾವಿಕ ಸರಳ ನಡತೆಗೆ ವಿಪರೀತ ಬಣ್ಣ ಬಳೆದುಕೊಂಡು ಸೊಸೆಯ ವಿಷಯಕ್ಕೆ ಅನುದಾರ ದೃಷ್ಟಿ

ಯನ್ನುಂಟುಮಾಡಿದ್ದುವು.

ಸ್ವತಃ ಗಂಗವ್ವನೇ ಒಂದಿನ ಆದಗೌಡನ ಮುಂದೆ ಆಡಿದಳು: "ಜಗವೆಲ್ಲ ತಿರುಗಿ ಎಲ್ಲೀದ ಗಂಟ ಹಾಕಿದಿರ್‍ಯೋ ಮಗನಿಗೆ ಇಂಥಾ ಹೆಣ್ಣ! ಒಂದು ರೊಟ್ಟಿ ಮಾಡಲಿಕ್ಕೆ ಬರುವುದಿಲ್ಲ. ಕಾಯಿಪಲ್ಲೆಗೆ ಉಪ್ಪ ಹಾಕಿ ಗೊತ್ತಿಲ್ಲ. ಅದೇ ನೋಡು, ಆ ಸರಿಕದವಳನ್ನ. ಎಷ್ಟು ಚುರುಕ, ಒಂದು ಕೆಲಸ ಆಕಿ ಕೈಯೊಳಗಿಂದ ಹೋಗುವದಿಲ್ಲ. ಮಗನಿಗೆ ಒಪ್ಪ ತಾಳೇನು ಈಕೆ? ಅಸಡ್ಡಾಳ ಮೊಸಡಿ ಮಾಡಕೊಂಡ ಎಲ್ಲಿ ಕೂತಿದ್ದಳೋ ನಮ್ಮವ್ವ!"

"ನೀನೇ ಹೀಗಂದರೆ ಹೇಗೆ? ದೊಡ್ಡವರ ಹುಡಿಗೆ, ಮನೆಯೊಳಗ ಮಾಡಿ ಗೊತ್ತಿಲ್ಲ. ಈಗ ಬಂದಿದಾಳೆ. ಒಮ್ಮೆಲೆ ನೀವು ಒಲೆಯ ಮುಂದ ಕೂಡಿಸಿದರೆ ಏನು ಮಾಡುವಳು ಪಾಪ! ಸಿರಿವಂತರವರು! ಅವರಲ್ಲಿ ಅಡಗಿ ಮಾಡಿ ಏನು ಗೊತ್ತು? ಬರುತ್ತ ಬರುತ್ತ ಇಂದಿಲ್ಲ ನಾಳೆ ಬರ್‍ತದಲ್ಲ!"

"ಸಿರಿವಂತರಾದರ ಏನಾಯ್ತು? ಅವರ ಮನಿಯೊಳಗೇನ ಊಟ ತಿನಸಾ ಇಲ್ಲ?"

"ಇರತದ ಅಲ್ಲ! ಆದರ ಆಳುಹೋಳು ಇರತಾರು. ನಿನಗಾದರೂ ಏನು ಗೊತ್ತು? ನೀನೂ ಒಕ್ಕಲಿಗನ ಹೊಟ್ಟೆಯಿಂದ ಹುಟ್ಟಿದವಳು!" ಎಂದು ಸಿಟ್ಟಿನಿಂದ ನುಡಿದನು.

ನಿಜವಾಗಿಯೂ ಗಂಗವ್ವ ಒಬ್ಬ ದೊಡ್ಡ ಒಕ್ಕಲಿಗನ ಮಗಳೇ ಇದ್ದಳು. ಆದರೂ ಅವಳಿಗೆ ಗಂಡನು 'ಒಕ್ಕಲಿಗರು ಒಕ್ಕಲಿಗರು' ಎಂದು ಇಳಿಸಿ ಆಡಿದರೆ ಸಹನವಾಗದು. ಅಂತೇ ಅವಳೂ ಅಷ್ಟೇ ಬಿರುಸು ದನಿಯಿಂದ ಉತ್ತರ ಕೊಟ್ಟಳು.

"ಒಕ್ಕಲಿಗರ ಹೆಣ್ಮಕ್ಕಳೇ ಆಗಿ ನಾವು ಮನೆತನವನ್ನು ಇಷ್ಟು ಭೂಷಣಕ್ಕೆ ತಂದಿಟ್ಟಿದೇವೆ. ನಿಮ್ಮ ಸೊಸೆ ಮಾಡುವದೆಲ್ಲ ಮೇಲೇ ಕಾಣಸ್ತದೆ. ಅವರು ಸಿರಿವಂತರಂತ, ಅವರ ಮನೆಯೊಳಗ ಧನ ದವಲತ್ತು ಬಹಳಂತ, ಅದನ್ನೇನು ತೊಳದ ಕುಡಿಯೋದು ಅದೆ ಏನು?"

ಶ್ರೀಯಲದೇವಿಯು ಕೆಲ ದಿನ ಒಂದು ಬಗೆಯ ಇಕ್ಕಟ್ಟಿನ ಪಂಜರ

ದಲ್ಲಿಯೇ ಕಳೆದು ನಾಗರಪಂಚಮಿಗೆ ತವರುಮನೆಗೆ ಹೋದಳು. ಮನ ದಲ್ಲಿ ಅತ್ತೆಯ ಮನೆಯ ವಿಷಯಕ್ಕೆ ತುಂಬ ಬೇಸರಪಟ್ಟಿದ್ದಳು. ಗುಣ ವಂತಿಯ ತಂದೆಯು ಹಬ್ಬಕ್ಕೆ ಕರೆದೊಯ್ಯಲಿಲ್ಲ. ಅವಳಿಗೆ ಹೋಗುವ ಲವಲವಿಕೆಯೂ ಇರಲಿಲ್ಲ. ಮಾವ ಸೊಸೆಯನ್ನು ತಲೆಬಾಗಿಲ ವರೆಗೆ ಕಳಿಸಿ ಬಂದು ಹೆಂಡತಿಯನ್ನು ಒತ್ತಟ್ಟಿಗೆ ಕರೆದು ಹೇಳಿದ.

" ಎಷ್ಟಾದರೂ ದೊಡ್ಡವರು! ಹಬ್ಬ ಹುಣ್ಣಿವೆಗಳಿಗೆ ಮಗಳನ್ನು ಕರೆದೊಯ್ಯದೆ ಏಕೆ ಬಿಟ್ಟಾರು? ಈ ಪೋರಿ ಬರಿಗೈಯಿಂದ ನಮ್ಮ ಮನೆ ಬಂದು ಸೇರಿತು. ತಿರುಗಿ ಒಯ್ಯುವವರಿಲ್ಲ, ಮತ್ತೊಮ್ಮೆ ಕರೆಯುವವರಿಲ್ಲ" ಎಂದು ಗೆಲುವಿನ ದನಿಯಿಂದ ಆಡಿದರು.

ಗಂಗವ್ವ ಗಂಡನ ಮಾತಿಗೆ ಪ್ರತಿಯಾಗಿ ಏನೂ ಆಡದಿದ್ದರೂ ಈ ಮಾತುಗಳು ಅವಳಿಗೆ ಸೇರಲಿಲ್ಲವೆಂಬುದಕ್ಕೆ ಆವಳ ಮುಖವೇ ಕನ್ನಡಿ ಯಾಗಿತ್ತು.

ಶ್ರೀಯುಲದೇವಿ ಮನೆಯಲ್ಲಿ ಇಲ್ಲದುದರಿಂದ ರಾವಸಾಹೇಬನನ್ನು ಳಿದು ಯಾರಿಗೂ ಕೊರತೆಯೆನಿಸಲಿಲ್ಲ. ಮನೆಯ ಹೆಂಗಸರಿಗೆ ಅವಳಿದ್ದರೂ ಅಷ್ಟೇ ಇರದಿದ್ದರೂ ಅಷ್ಟೇ ಅನ್ನುವಂತೆ ಇತ್ತು. ನೆಗೆಯಣ್ಣಿ ಹೋದಂದಿ ನಿಂದ ಗುಣವಂತಿಯ ಮೇಲೆ ಎಲ್ಲರ ಊಟೋಪಚಾರದ ಹೊರೆಯು ಸ್ವಲ್ಪ ಹೆಚ್ಚಾಗಿಯೇ ಬಿತ್ತು. ಆದರೂ ಅದನ್ನು ಅವಳು ಗೊಣಗುಟ್ಟದೆ ಚನ್ನಾಗಿಯೇ ಮಾಡುತ್ತಿದ್ದಳು. ಅದರಲ್ಲಿಯೂ ತಾನು ಬಡವರ ಮನೆ ಯವಳು. ದೊಡ್ಡವರ ಮನೆ ಸೇರಿದೆ. ಒಳ್ಳೆಯವರ ಕೈ ಹಿಡಿದೆ. ಎಂಬ ಸಂತಸದಿಂದ ಎಲ್ಲರನ್ನೂ ಆದರದಿಂದಲೇ ಕಾಣುತ್ತಿದ್ದಳು. ಪತಿಯ ಸೇವೆಯ ಜೊತೆಗೆ ರಾವಸಾಹೇಬನ ಉಪಚಾರಕ್ಕೂ ಅವಳು ಕೊರತೆ ಯಾಗಗೊಡಲಿಲ್ಲ. ರಾವಸಾಹೇಬನು ಸಂಜೆ ಊಟ ಮಾಡಿ ಹೋದ ಮೇಲೆ ರಾತ್ರಿ ಅವನು ಕುಡಿಯುವ ಹಾಲನ್ನು ನಿತ್ಯಕ್ರಮದಂತೆ ಅವನ ಕೋಣೆಯಲ್ಲಿ ಒಯ್ದು ಬೆಕ್ಕು ಕುಡಿಯದಂತೆ ಚನ್ನಾಗಿ ಮುಚ್ಚಿಟ್ಟು ಬರುತ್ತಿದ್ದಳು. ಅವನು ಮಲಗುವ ಹೊತ್ತಿಗೆ ಸರಿಯಾಗಿ ಅದು ಕುಡಿಯಲು ತಕ್ಕಷ್ಟು ಆರಿರಬೇಕು. ಮುಂಜಾನೆ ಅಜಿತನ ಕೋಣೆಯ ಕಸಗುಡಿಸುವಂತೆ ರಾವಸಾಹೇಬನ ಕೋಣೆಯನ್ನೂ ಸ್ವಚ್ಛ

ಮಾಡುವಳು. ಅವಳೇನೋ ಎಲ್ಲರೂ ಒಂದೇ ಮನೆಯವರು. ನಾನು ಮಾಡದೆ ಈ ಕೆಲಸವನ್ನು ಇನ್ನಾರು ಮಾಡಬೇಕು? ಎಂದುಕೊಂಡು ಮಾಡುತ್ತಿದ್ದಳು.

ರಾವಸಾಹೇಬನ ಕಲ್ಪನೆಯೇ ಬೇರೆ. ನಾನು ಗೌಡ, ನನ್ನ ಸೇವೆಯನ್ನು ಇವರು ಮಾಡಲೇಬೇಕು. ನನ್ನ ಮನೆಯ ಕೂಳು ತಿಂದು ಇದ್ದಾರೆ ಗಂಡ-ಹೆಂಡಿರು! ಪಾಪ ಅಜಿತನ ಪಾಲೂ ಇದೆಯೆಂಬುದು ಅವನ ತಲೆಗೆ ಸುಳಿಯುತ್ತಿರಲಿಲ್ಲ. ಅದರಲ್ಲೂ ಒಮ್ಮೊಮ್ಮೆ ಅವನ ಮಲಿನ ಮನದಲ್ಲಿ "ನಾನು ಗೌಡನೆಂದು ನನ್ನನ್ನು ಪ್ರೀತಿಸುತ್ತಿರಬೇಕೇನು ಗುಣವಂತಿ?" ಎಂಬ ಪ್ರಶ್ನೆಯೊಂದು ಏಳುವುದು. ಅದರ ಜೊತೆಗೆಯೇ ಹೆಮ್ಮೆಯಿಂದ ಅವನ ಹೃದಯವೂ ಉಬ್ಬುವದು.

ಹೆಂಡತಿ ಹೋಗಿ ಕೆಲದಿನ ಕಳೆದುವು. ರಾವಸಾಹೇಬ ಮನೆಯವರಿಗೆ ಕೊಲ್ಹಾಪುರಕ್ಕೆ ಹೋಗಿ ಬರುವೆನೆಂದು ಹೇಳಿ ಬೆಳಗಾಂವಿಗೆ ಹೋದ. ಮುಂಚಿತ ಬರುವ ಬಗ್ಗೆ ಕಾಗದವನ್ನೇನೂ ಬರೆದು ತಿಳಿಸಿರಲಿಲ್ಲ. ಅದರಿಂದ ಮನೆಯಲ್ಲಿ ಪೂರ್ವಸಿದ್ಧತೆಯಿರಲಿಲ್ಲ. ಶ್ರೀಯುಲೆ ಗೆಳತಿಯರೊಡನೆ ಸಿನೇಮಾಕ್ಕೆ ಹೋಗಿದ್ದಳು. ಮನೆಯಲ್ಲಿ ಗಂಡಸರಾರೂ ಇರಲಿಲ್ಲ, ಅಳಿಯದೇವರ ಸ್ವಾಗತಕ್ಕೆ. ಅದೇ ಕಾಲಕ್ಕೆ ಮನೆಯಲ್ಲಿ ಹಾಲೂ ಇರಬಾರದೆ, ಚಹ ಮಾಡಬೇಕೆಂದರೆ? ಕೊನೆಗೆ ಆಳಿನ ಕೈಯಿಂದ ಸಮೀಪದ ಹಟೇಲಿನಿಂದ ಚಹ ತರಿಸಿ ಕೊಟ್ಟರು ರಾವಸಾಹೇಬನಿಗೆ. ತಾಸೆರಡು ತಾಸು ಬೀಗರ ದಾರೀ ಕಾಯುತ್ತ ಮಿಕಿಮಿಕಿ ಬೆಕ್ಕಿನ ಹಾಗೆ ಕೂಡಬೇಕಾಯಿತು. ಇದೆಲ್ಲ ಪಟ್ಟಣದಲ್ಲಿಯ ಸ್ವಾಭಾವಿಕ ಸಂದರ್ಭವಾದರೂ ಹಳ್ಳಿಯ ಗೌಡನ ಮಗನಿಗೆ ಸೇರಬೇಕಲ್ಲ? ಮಾವನ ಮನೆಯಲ್ಲಿ ಅಳಿಯ ಬಂದುದಕ್ಕೆ ಓಡಾಟವಿಲ್ಲ, ಆದರ ಸತ್ಕಾರಗಳ ವಿಜೃಂಭಣೆಯಿಲ್ಲ, ಏನಿದು ಅಪಮಾನ? ಎಂದು ವಿಚಾರಿಸಿ ಬಿಗುಹಿನಿಂದಲೇ ಕುಳಿತ.

ಮೂರುಸಂಜೆಯಾಗಲು ಮುದುಕ ಮಾವ ಹೊರಗಿನಿಂದ ಬಂದು, ಮೂಲೆಯಲ್ಲಿ ಕೈಯೊಳಗಿನ ಬಡಿಗೆ ಇಟ್ಟು ಹಾಗೇ ನಡುಮನೆಗೆ ಹೋದ. ಮಬ್ಬುಗತಲೆಯಲ್ಲಿ ಅಲ್ಲಿ ಕುಳಿತ ರಾವಸಾಹೇಬನ ಕಡೆಗೆ ಅವನ ದೃಷ್ಟಿ

ಹರಿಯಲಿಲ್ಲವೇನೋ! ಒಳಗೆ ಹೆಂಗಸರಿಂದ ತಿಳಿಯಲು ತಿರುಗಿ ಪಡಸಾಲೆಗೆ ಬಂದು ವಿದ್ಯುದ್ದೀಪವನ್ನು ಹೊತ್ತಿಸಿ ಅಳಿಯನೊಡನೆ ನಾಲ್ಕು ಮಾತುಗಳನ್ನಾಡುತ್ತ ಕುಳಿತ. ಈ ರೀತಿ ರಾವಸಾಹೇಬನಿಗೆ ಹೇಗೊ ಹೇಗೋ ಅನ್ನಿಸಿತು.

ಶ್ರೀಯಲೆ ಪತಿಯು ಬಂದಿರುವನೆಂದು ಎಷ್ಟು ಸಲಿಗೆಯಿಂದ ವರ್ತಿಸಿದರೂ ಈ ಪೂರ್ವಗ್ರಹದೂಷಿತನಾದ ರಾವಸಾಹೇಬನಿಗೆ ಅದರಲ್ಲಿ ಕೊರತೆಯೇ ತೋರಿತು.

ಇವೆಲ್ಲವುಗಳಿಗೆ ಕಳಸವಿಟ್ಟಂತೆ ಮರುದಿನ ನಡೆದ ಸಂಗತಿಯೆಂದರೆ ಚಿಕ್ಕ ಬೇಗ ಆಫೀಸಿಗೆ ಹೋಗಬೇಕಾದುದರಿಂದ ರಾವಸಾಹೇಬನಿಗಿಂತ ಮುಂಚಿತ ಊಟ ತೀರಿಸಿ ಹೇಳಿ, ಹೋದುದು. ಮನೆಯಲ್ಲಿ ಬೀಗ—ಹಳ್ಳಿಯ ಭಾವೀ ಗೌಡ—ಬಂದಿರಲಿಕ್ಕಾಗಿ ಅವನನ್ನು ಬಿಟ್ಟು ಮುಂಚಿತ ಊಟ ಮಾಡಿ ಆಫೀಸಿಗೆ ಹೋಗುವುದೆಂದರೆ ಎಂಥ ಅಪಮಾನ !

ಊರಿಗೆ ಬಂದು ಕೆಲ ದಿನಗಳಲ್ಲಿ ರಾವಸಾಹೇಬ ಶ್ರೀಯಲೆಗೆ ಕಾಗದ ಬರೆದ ಬರಲಿಕ್ಕೆ. ಕಾಗದದ ಒಕ್ಕಣಿಕೆ ಆರ್ಡರು ಕೊಡುವ ರೀತಿಯದಾಗಿತ್ತು. ಅವಳಿಂದ ಉತ್ತರ ಬಂತು, ಅತ್ತೆಯ ಮನೆಯ ಕಾಟದಲ್ಲಿ ಇನ್ನೂ ಬರಲಿಕ್ಕೆ ಕೆಲ ದಿನ ತಡೆಯುವೆನೆಂದು. ರಾವಸಾಹೇಬ ಕೆರಳಿದ. ಸಿಟ್ಟಿನ ಭರದಲ್ಲಿ ಅವನಲ್ಲಿ ಮೊದಲು ವಿಚಾರ ಬಂದುದೆಂದರೆ 'ನನಗೇನು ಹೆಣ್ಣುಗಳು ಕಡಿಮೆ? ಇರಲಿ ಅಲ್ಲಿಯೇ ಅವಳು!' ಎಂದು. ಗೌಡನ ಮಗನಲ್ಲವೇ ಆತ? ಮರುಗಳಿಗೆಯಲ್ಲಿ ಮನೆಯವರ ಮೇಲೆ ಸಿಟ್ಟಾದ. ಇವರು ಹಾಗೆ ನಡೆಯಿಸಿಕೊಳ್ಳದಿದ್ದರೆ ಅವಳೇಕೆ ಹೀಗೆ ನನಗೆ ಬರೆಯುತ್ತಿದ್ದಳು? ಅಲ್ಲಿ ಹೋದಾಗ ಅವಮಾನವೇಕೆ ಮಾಡುತ್ತಿದ್ದರು? ಎಂದುಕೊಂಡ. ಅದರಿಂದ ಅಂದಿನ ದಿನವೆಲ್ಲ ಅವನು ಒಳಗೆ ಊಟಕ್ಕೆ ಬಂದರೂ ಬಿಗುಹು, ಯಾರು ಮಾತಾಡಿಸಿದರೂ ಸಿಡುಕು. ಅವನ ನಡತೆಯನ್ನು ನೋಡಿ ಸಂಜೆಗೆ ಮುರದೇವಿಯು—

"ಯಾರ ಮೇಲಪ್ಪ ಇದು? ಹಾಗೆ ಸಿಟಿಯಲಿಕ್ಕೆ ಇಲ್ಲೇನು ನಿನ್ನ ಹೆಂಡತಿ ಇದ್ದಾಳೆಯೇ?" ಎಂದು ಮೊಮ್ಮಗನಿಗೆ ಚುಚ್ಚಿ ಆಡಿದಳು.

"ನೀವು ಇರಗೊಟ್ಟರೆ ಇದ್ದಾಳು?" ಎಂದ ರಾವಸಾಹೇಬ ಕೊಂಕಿನಿಂದ.

ಬೆಳಗಾಂವಿಯಿಂದ ಏನೋ ಪತ್ರ ಬಂದಿರಬೇಕೆಂದು ಅಜ್ಜಿ ಭಾವಿಸಿಕೊಂಡು ಸುಮ್ಮನಾದಳು. ಕೆಲ ಹೊತ್ತಿನ ಮೇಲೆ "ನೀನೂ ಅಲ್ಲೇ ಹೋಗಿ ಇರು ಬೇಕಾದರೆ" ಎಂದಳು.

"ಅವಳನ್ನಷ್ಟು ಕಾಡಿ ಓಡಿಸಿದಿರಿ, ನನ್ನನ್ನೂ ಅಷ್ಟು ಓಡಿಸಿ ಬಿಡಿರಿ, ಅಂದರೆ ತೀರಿತು." ಎಂದ ಹಣೆಗೆ ಹದಿನಾರು ಗಂಟು ಹಾಕಿ.

ಮಗನ ಈ ಮಾತನ್ನು ಕೇಳಿ ಗಂಗವ್ವ ಮರುಗಿದಳು. ಆದೇ ಗುಣವಂತಿ ಮಾತ್ರ 'ಯಾಕೋ ರೇಗಿಕೊಂಡಿದ್ದಾನೆ ಭಾವ' ಎಂದುಕೊಂಡು ಎರಡು ದಿನ ಮೊದಲಿಗಿಂತ ಚನ್ನಾಗಿ ಸೇವೆ ಮಾಡಿದಳು. ಮನೆಯಲ್ಲಿ ಯಾರ ಮನ ನೊಂದರೂ ಅವಳಿಗೆ ಚಿಂತೆ. ಎಲ್ಲರೂ ಒಂದಾಗಿರಬೇಕು, ಸುಖಿಯಾಗಿರಬೇಕು. ಎಂಬುದೇ ಅವಳ ಹಾರೈಕೆಯಾಗಿತ್ತು.

ಕೆಲ ದಿನ ಕಳೆದ ಮೇಲೆ ರಾವಸಾಹೇಬನಿಗೆ ಹೆಂಡತಿಯಿಂದ ಇನ್ನೊಂದು ಓಲೆ ಬಂದಿತು. ಆದರಲ್ಲಿ 'ಬರುವ ಸೋಮವಾರ ಬರುತ್ತೇನೆ. ಸಂಗಡ ತಂದೆ ಕಳಿಸಲು ಬರುವರು. ಅವರು ಮಾವನ ಮುಂದೆ ಮನೆಯ ಕೆಲಸದ ವಿಷಯಕ್ಕೆ ಮಾತು ತೆಗೆದಾಗ ನೀವೂ ಒಂದೆರಡು ಮಾತು ಹೇಳಬೇಕು' ಎಂದು ಬರೆದಿದ್ದಳು. ಪತ್ರ ನೋಡಿ ಬೀಸಿ ಒಗೆದ ರಾವಸಾಹೇಬ. ಅವನ ಅಭಿಮಾನ ಜಾಗ್ರತವಾಯಿತು. ಇಲ್ಲಿಯ ಸುದ್ದಿಯನ್ನು ಒಯ್ದು ತವರುಮನೆಗೆ ಮುಟ್ಟಿಸಿದಳೇ? ನಮ್ಮ ತಂದೆಗೆ ಇವಳ ತಂದೆಯು ಬುದ್ಧಿ ಕಲಿಸಲು ಬರುವನೆ? ಎಂದು ತನಗೆ ತಾನೇ ಕೇಳಿಕೊಂಡ. ಆ ಸಂದರ್ಭದಲ್ಲಿ ಕೋಣೆಯ ಕಸಗುಡಿಸಲು ಬಂದ ಗುಣವಂತಿಯು ಎಂಥ ಸುಂದರಿಯಾಗಿ ಕಂಡಳವನಿಗೆ!

ಅದೂ ಸೋಮವಾರ ಬಂದಾಯಿತು. ಮಾವನು ತನ್ನ ಹೆಂಡತಿಯನ್ನು ಕಳಿಸಿಕೊಟ್ಟು ಹೋಗಿಯೂ ಆಯಿತು. ಆದರೆ ಹರಿಯುತ್ತಿರುವ ನದಿಯ ಪಾತ್ರವು ವಿಶಾಲವಾಗುತ್ತ ಬರುವಂತೆ ಪತಿ-ಪತ್ನಿಯರಲ್ಲಿಯ ವೈಮನಸ್ಯ ಬೆಳೆಯುತ್ತ ಬಂತು. ಬರಬರುತ್ತ 'ಹೆಂಡತಿಯು ಹಾಲು ಚನ್ನಾಗಿ ಕಾಯಿಸಿಡುವದಿಲ್ಲ. ಹಾಸಿಗೆ ಒಳ್ಳೆಯದಾಗಿ ಹಾಸುವದಿಲ್ಲ.

ಎಂಬ ಭಾವನೆ ಬೆಳೆಯುತ್ತ ಹೋಗಿ, ಅವಳನ್ನು ಕಂಡರೆ ಮುಖಕ್ಕೆ ಗಂಟು ಹಾಕತೊಡಗಿದ. ಮನೆಯಲ್ಲಿಯ ಜನರೂ ತವರುಮನೆಯ ವರೆಗೆ ಮನೆಯ ಸಂಗತಿಯನ್ನು ಒಯ್ದು ಮುಟ್ಟಿಸಿದವಳೆಂದು ಸ್ವಲ್ಪ ಬಿಗುಹಿನಿಂದಲೇ ವರ್ತಿಸತೊಡಗಿದರು. ಎಷ್ಟಾದರೂ ಶ್ರೀಯುಲೆಯುದು ಹೆಂಗರುಳು. ಇಲ್ಲದ ಚಿಂತೆಯನ್ನು ಕಟ್ಟಿಕೊಂಡು, ಕಟ್ಟಿಕೊಂಡ ಚಿಂತೆ ಯಲ್ಲಿಯೇ ಕುಳಿತುಕೊಂಡು ಜಿನುಗಿ ಜಿನುಗಿ ಅದನ್ನೇ ಒಂದು ರೋಗ ವನ್ನಾಗಿ ಮಾಡಿಕೊಳ್ಳುವ ಜಾತಿಯದು. ಅವಳಿಗೆ ಮನೆಯ ವಾತಾ ವರಣವೇ ಒಂದು ಪ್ರಬಲ ರೋಗವಾಗಿ ಹೋಯಿತು. ತಿಂಗಳೊಪ್ಪತ್ತಿ ನಲ್ಲಿ ಅವಳ ಬಣ್ಣವೂ ಒಂದಿಳಿತ ಇಳಿಯಿತು. ಮನಸ್ಸು ಚಿಂತೆಯಲ್ಲಿ ಮುಳುಗಿರಲು ಮುಖವು ಮೊಂಕಾಗಿ ಹೋಯಿತು. ಆ ನಿಸ್ತೇಜ ಶ್ರೀಯುಲೆಯ ಮುಖದ ಎದುರಿಗೆ ಗುಣವಂತಿಯ ಸತೇಜ ಮುಖ ಮತ್ತಿಷ್ಟು ರಾವಸಾಹೇಬನಿಗೆ ಆಕರ್ಷಕವಾಗಿ ತೋರುವುದು. ತನ್ನ ಮಡದಿಯ ವಿಷಯಕ್ಕೆ ತಾತ್ಸಾರ ಬೆಳೆಯುತ್ತ ಬಂತು. ಅವನ ಮನಸ್ಸಿ ನಲ್ಲಿಯ ಭಾವ ಮುಖದಲ್ಲಿ ಮೂಡಿ ನಿಂತಾಗ ತಾನೇ ತಾಂಬೂಲನ್ನು ಕೊಡಬೇಕೆಂದು ಬಂದಿದ್ದ ಶ್ರೀಯುಲೆಯ ಹುಮ್ಮಸ್ಸು ಇದ್ದಲ್ಲಿಯೇ ಕರ ಗುವದು.

ಪಟ್ಟಣದೊಳಗಿನ ತನ್ನ ಗೆಳತಿಯರ ದಾಂಪತ್ಯಜೀವನವನ್ನು ನೆನೆದು ತನ್ನ ಬಾಳು ಹೀಗೇಕಾಯಿತೆಂದು ಕೊರಗುವಳು. ರಾವಸಾಹೇಬ ನೆಲ್ಲಿ? ಆ ತನ್ನ ಗೆಳತಿಯರ ನಲ್ಲರೆಲ್ಲಿ ? ಇಬ್ಬರಲ್ಲಿಯೂ ನೆಲ-ಮುಗಿಲು ಗಳಷ್ಟು ಅಂತರ. ಇವನೂ ಮ್ಯಾಟ್ರಿಕ್ಕಿನ ವರೆಗೆ ಓದಿರುವನಾದರೂ ಶಿಕ್ಷಣದ ಸಂಸ್ಕಾರವಿಲ್ಲವಲ್ಲ ! ಎಂದು ಒಳಗೊಳಗೇ ಕೊರಗುವಳು, ಮರಗುವಳು.

ಮತ್ತೂ ಕೆಲ ದಿನ ಕಳೆದುವು. ರಾವಸಾಹೇಬನ ಮನಸ್ಸು ಏನನ್ನೋ ಹಂಬಲಿಸಿ ಒದ್ದಾಡುತ್ತಿದೆ. ಚಿತ್ತವು ಯಾರದೋ ನಡತೆಯನ್ನು ಪುನಃ ಪುನಃ ನಿರೀಕ್ಷಿಸಿ ಚಿಂತಿಸುತ್ತಿರುವುದು. ಇದು ತನ್ನ ಪತ್ನಿಯ ಮೇಲಿನ ವೈಮನಸ್ಸಿನ ಫಲವೆಂದೆನಿಸುವುದೊಮ್ಮೊಮ್ಮೆ ರಾವಸಾಹೇಬನಿಗೆ. ಇನ್ನೊಮ್ಮೆ ಹುಚ್ಚು ಕಲ್ಪನೆಯ ಸುಖಾನುಭವದ ಸ್ಮರಣೆಯಲ್ಲಿ ಮನಸ್ಸು

ತೇಲಿ ಹೋಗಿ, ಒಂದೊಂದು ವೇಳೆ ಹೊರಗಿನ ಪ್ರಪಂಚದ ಅರಿವು ಹಾರಿ ದಾಗ, ಶ್ರೀಯುಲೆಯನ್ನು ಸಂಪೂರ್ಣವಾಗಿ ಮರೆತು ಬಿಟ್ಟು, ಆ ಇನ್ನಾವುದೋ ಮೂರ್ತಿಯ ಆರಾಧನೆಯಲ್ಲಿ ಮಗ್ನನಾಗಿ ಹೋಗುವನು. ಆ ಭಾವ ಸಮಾಧಿಯು ಮುಗಿದು ಬಾಹ್ಯಜ್ಞಾನವಾದಾಗ, 'ಅವಳನ್ನು ಕಂಡು ನಾನಿಷ್ಟು ಮುಗ್ಧನಾಗುವುದೆ? ಛೇ! ಛಿ! ಕೂಡದು! ಕೂಡದು! ಪಾಪ ಕಾರ್ಯ?' ಎಂದು ಆ ಸ್ಥಳವನ್ನು ಬಿಟ್ಟೆದ್ದು ಶ್ರೀಯುಲೆ ಇದ್ದೆಡೆಗೆ ಸುಳಿ ಯುವನು. ಯಾವದೋ ಒಂದು ಘಟಸರ್ಪದ ದವಡೆಯೊಳಗಿಂದ ಪಾರಾದಂತೆನಿಸುವುದು ಆ ಕ್ಷಣಕ್ಕೆ. ಆದರೂ ಮರುಕ್ಷಣದಲ್ಲಿ ಆ ಮೂರ್ತಿ ಮಾತ್ರ ಚಿತ್ತಭಿತ್ತಿಯಲ್ಲಿ ಕೊರೆದಂತೆಯೇ ಇರುವುದು. ಒಳ ಗಿರುವುದನ್ನು ಕಳೆಯಬೇಕೆಂದು ಕುಳಿತೆಡೆಯಿಂದ ಎದ್ದರೆ ಇದ್ದುದೆಂತು ದೂರಾದೀತು?

ಇನ್ನೊಮ್ಮೆ 'ಆ ಸುಲೋಚನೆಯನ್ನು ಬಿಟ್ಟು ಈ ಶ್ರೀಯುಲೆಯನ್ನು ಎಲ್ಲಿಂದ ಮಾಡಿಕೊಳ್ಳುವ ಬುದ್ಧಿ ಬಂದಿತೆನಗೆ. ಇವಳು ನನಗೆ ತಕ್ಕ ಹೆಂಡತಿಯೇ? ಇವಳಣ್ಣ ಮಾಮಲೇದಾರನಾದರೆ ನನಗೇನು ಬಂತು? ಸುಮ್ಮನೆ ದುಡ್ಡಿನ ಮೋಹಕ್ಕೆ ಬಿದ್ದೆ. ಮೊದಲೇ ವಿಚಾರಿಸಲಿಲ್ಲ' ಎಂದು ಪಶ್ಚಾತ್ತಾಪ ಪಡುವನು. ಆಗ ಮದುವೆಯಲ್ಲಿ ಆಪ್ತರಿಂದ ತಮಗೆ ಆದ ಅವಮಾನದ ನೆನಪಾಗಿ ಅದರಲ್ಲಿ ವಿಷ ಬೆರಸುತಲಿತ್ತು.

ಇನ್ನೆರಡು ದಿನಗಳಲ್ಲಿ ಇಂದಿರೆ ಸುಧೀರರು ಮುಂಬಯಿಗೆ ಹೋಗುವ ವರೆಂದು, ಒಂದು ದಿನ ಮನೆಯ ಹುಡುಗರೆಲ್ಲ ತೋಟದಲ್ಲಿ ಊಟಕ್ಕೆ ಹೋಗಿದ್ದರು. ಹಿರಿಯರಾರೂ ಇಲ್ಲದುದರಿಂದ ಅಲ್ಲಿ ಮನಬಂದಂತೆ ಹರಟುವುದು ನಗುವುದು ಕೆಲೆಯುವುದು, ಎಂದು ಎಲ್ಲರೂ ಮನದಲ್ಲಿಯೇ ಉಬ್ಬಿದ್ದರು. ಗಂಗವ್ವ ಸರಸ್ವತಿಯರಿಬ್ಬರೂ ಹಲವು ತರದ ಅಡಿಗೆ ಮಾಡಿ ಕಟ್ಟಿದರು. ಆಳಿನ ತಲೆಯ ಮೇಲೆ ಕೊಟ್ಟು ಕಳಿಸುವಂಥವುಗಳನ್ನು ಕೊಟ್ಟು ಕಳಿಸಿದರು. ಬಂಡಿಯಲ್ಲಿ ಇಟ್ಟುಕೊಂಡು ಒಯ್ಯುವಂಥವು ಗಳನ್ನು ತಕ್ಕೊಂಡು ಎಲ್ಲರೂ ಬಂಡಿ ಹತ್ತಿದರು. ಮನೆಯಿಂದ ತೋಟದ ವರೆಗೆ ನವದಂಪತಿಗಳ ಜೋಡು ಒಟ್ಟಿಗೆ ಒಂದೇ ಬಂಡಿಯಲ್ಲಿ ಕುಳಿತು ಅರ್ಧ ಗಂಟೆ ಪ್ರಯಾಣ ಮಾಡುವುದು! ಏನೆಲ್ಲವನ್ನೂ ಲಘುಮನಸ್ಕ

ರಾಗಿ ಹರಟಿದರು. ಮಕ್ಕಳಂತೆ ಚಪಲೆಯರಾಗಿದ್ದರಾ ತರುಣ-ತರುಣಿಯರು.

ರಾವಸಾಹೇಬನು ಎರಡು ಮೂರಾವರ್ತಿ ಗುಣವಂತಿಯ ಚಪಲತೆಯ ಕಡೆಗೆ ಲಕ್ಷ್ಯಗೊಟ್ಟು ನೋಡಿದ. ಜೊತೆಗೆ ಪತ್ನಿಯ ಚಟುವಟಿಕೆಯನ್ನೂ ನಿರೀಕ್ಷಿಸಿದ. ತೂಗಿ ನೋಡಿದ ಮನದಲ್ಲಿ. ಕುದುರೆಯ ಜೋಡಿ ಕತ್ತೆಯೇ ಎಂದುಕೊಂಡ. ಆಲ್ಹಾದದಲ್ಲಿ ಉರುಳುತ್ತಿದ್ದ ಯಾರಿಗೂ ರಾವಸಾಹೇಬನ ಭಾವ ಗೊತ್ತಾಗುವಂತಿರಲಿಲ್ಲ. ಅವನ ನಯನಗಳಿಂದ ಹೊರ ಹರಿಯುವ ಮಲಿನತೆಯ ಅರಿವು ಅನ್ಯರಿಗೆ ಆಗುವದೆಂತು ? ಅವನ ಮೌನದ ಕಾರಣವನ್ನು ಉಳಿದವರಾರೂ ಶೋಧಿಸಲು ಯತ್ನಿಸಲಿಲ್ಲ.

ತೋಟ ಸೇರಿದುದಾಯಿತು. ಎಲ್ಲರೂ ಬಾಳೆಯ ಬನದಲ್ಲಿ ಎಳೆ ಕರಿಕೆಯ ಮೇಲೆ ಹೋಗಿ ಕುಳಿತರು. ಸುತ್ತಲೂ ಅರ್ಥಸೂಚಕವಾದ ಬಾಳೆಯ ಗಿಡಗಳ ಮೌನ. ಮಂದಮಾರುತನ ಸುಖಸ್ಪರ್ಶದಿಂದ ಬಳುಕಿ ಬಾಗಿ ನಾಣ್ಚಿ ನೀಳಾದ ಬಾಳೆಯ ಗರಿಗಳು ಬಾಗಿದ್ದುವು. ಮೆಲ್ಲನೆ ಸುಧೀರನೆಂದ :

“ ಆಳು ಇನ್ನೂ ಬುತ್ತಿ ತರಲಿಲ್ಲ!? ”

“ ಆಳು ಹೊತ್ತು ತರಬೇಕು, ನಾವು ಕುಳಿತು ತಿನ್ನಬೇಕು. ಇದೇ ನ್ಯಾಯ ಎಲ್ಲೆಲ್ಲೂ ” ಅಜಿತನಂದ, ಅನ್ಯಮನಸ್ಕನಾಗಿ.

“ ಇಲ್ಲಿಯೂ ಅವೇ ವಿಚಾರ ನಿಮಗೆ! ” ಗುಣವಂತಿ ನಕ್ಕು ನುಡಿದಳು.

“ ಬುದ್ಧಿ ಹೇಳಬೇಕೆಂದು ಮುಂದಾಗುವವರ ನಿತ್ಯಜೀವನದಲ್ಲಿಯೇ ಹೀಗೆ ಆಳು-ಒಡೆಯರೆಂಬ ಭೇದಭಾವ! ಜಗತ್ತಿನಲ್ಲಿ ಸಮತೆಯನ್ನು ತರಲು ನಮ್ಮಿಂದ ಹೇಗೆ ಸಾಧ್ಯ ? ”

“ ಎಲ್ಲವೂ ಸಾಧ್ಯವಾಗುವುದು. ” ಸುಧೀರ ಬಾಯಿಂದ ಹೀಗೆ ಹೇಳಿದನಾದರೂ ನಿರಾಶೆಯು ಅವನ ಮುಖದಲ್ಲಿ ವ್ಯಾಪಿಸಿತು

ಈ ಮಾತುಗಳ ಅರ್ಥದ ಕಲ್ಪನೆಯೂ ರಾವಸಾಹೇಬನಿಗೆ ಆಗಲಿಲ್ಲ. ಅದನ್ನು ತಿಳಿದುಕೊಳ್ಳಬೇಕೆಂಬ ಪ್ರಯತ್ನವನ್ನೂ ಆತ ಮಾಡುತ್ತಿರಲಿಲ್ಲ. ಇಂದಿರೆ, ಗುಣವಂತಿ, ಶ್ರೀಯಲೆ ಇವರಲ್ಲಿ ಯಾರ ಅಂದ ಹೆಚ್ಚು,

ಯಾರದು ಕಡಿಮೆ, ಎಂಬ ಚಲುವಿನ ತರತಮಗಳ ತೂಗಾಟದಲ್ಲಿದ್ದ ಆತ.

ಇಷ್ಟರಲ್ಲಿ ಸೇವಕ ತಂದು ಬುತ್ತಿ ಇಳಿಸಿದ. ಎಲ್ಲರೂ ಊಟಕ್ಕೆ ಕುಳಿತರು. ತರುಣ-ತರುಣಿಯರದೆಲ್ಲ ಒಂದೇ ಪಂಕ್ತಿ. ನಡುವೆ ಬುತ್ತಿ. ತಮಗೆ ಬೇಕಾದುದನ್ನು ತಾವೇ ಬಡಿಸಿಕೊಳ್ಳುತ್ತಿದ್ದರು. ಮನ ಬಯಸಿದುದನ್ನು ತಿನ್ನುತ್ತಿದ್ದರು. ಬಾಯಿಗೆ ಬಂದುದನ್ನು ಆಡುತ್ತಿದ್ದರು. ಅಜಿತ ಆಳುಮಗನನ್ನು ಆಗ್ರಹ ಮಾಡಿ ಪಂಕ್ತಿಗೆ ಕರೆದುಕೊಂಡ. ಆತ ಮೊದಮೊದಲು ಹಿಂಜರಿದು ಕೊನೆಗೆ ಮುದುರಿಕೊಂಡು ಬಂದು ಕುಳಿತ. ಆದರೂ ಸಂಕೋಚದಿಂದ ಕೈ ಹಾಕಿ ತಾನೇ ಏನನ್ನೂ ತಕ್ಕೊಳ್ಳುತ್ತಿರಲಿಲ್ಲ. ಆಗ ಅಜಿತನೇ ಅವನಿಗೆ ಬಡಿಸುವ. ಈ ಎಲ್ಲ ಸಲಿಗೆ ರಾವ ಸಾಹೇಬನಿಗೆ ಸೇರದು. ಆದರೆ ಅಲ್ಲಿ ತಂದೇನೂ ಸಾಗದು; ಸುಮ್ಮನೆ ಇದ್ದ. ಅಜಿತನಿಗೆ ತಟ್ಟನೆ ಏನೋ ಒಂದು ನೆನಪಾದಂತಾಗಿ ನುಡಿದ :

" ಅಕ್ಕ, ನಿನಗೆ ಹಾಡಲು ಬರುವದಲ್ಲ ! ಈ ಊಟದ ಸವಿಗೆ ನಿನ್ನ ಹಾಡಿನ ಇಂಪೂ ಕೂಡಿತೆಂದರೆ ಎಷ್ಟು ಸೊಗಸು ನೋಡು ? "

" ಯಾವ ಹಾಡು ? " ಉಲ್ಲಸಿತ ಸ್ವರದಲ್ಲಿಯೇ ಇಂದಿರೆಯೂ ಕೇಳಿದಳು.

"ಆ ದಿನ ನಾನು ಮೊದಲು ಮುಂಬಯಿಗೆ ಬಂದಾಗ ಗುಣಗುಣಿಸುತಿದ್ದೆಯಲ್ಲ, ಅದು ! "

" ಗುಣವಂತಿಯ ಮುಂದೆ ನನ್ನ ಗುಣುಗುಣು ಹಾಡು ಬೇಕಾಯಿತೇ ನಿನಗೆ ? "

ನಗೆಗಡಲಿನಲ್ಲಿ ಬಾಳೆಯ ಬನವೆಲ್ಲ ತೇಲಿಹೋಯಿತು. ದಡ ಸೇರಿದಾಗ ಇಂದಿರೆಯು—

" ನಾನು ಹಾಡಿದರೆ ನನ್ನ ಹೊಟ್ಟೆ ಅರ್ಧವೇ ಉಳಿಯುಬೇಕಲ್ಲ ? " ಪತಿಯ ಕಡೆಗೆ ನೋಡಿ, ಬಿಂಕದಿಂದ ಅಂದಳು.

" ನಮಗೂ ಸುಮ್ಮನೆ ಕೂಡನ್ನುವೆಯಾ ಹಾಗಾದರೆ ? " ಎಂದ ಸುಧೀರ ನಕ್ಕು.

ಅರಳಿದ ಅಗಲವಾದ ಇಂದಿರೆಯ ಕಂಗಳಲ್ಲಿ ಸಂತಸದ ಸಾಗರವೇ ಇಡುಗಿತ್ತು. ಕಕ್ಕ ತಂದ ಹಸರು ಸೀರೆ ಉಟ್ಟಿದ್ದಳು. ಮಗ್ಗಲಲ್ಲಿ

ಮಗು ವಿಜಯ. ಅಂದದ ತೌರು, ಕಣ್ಣಿನ ಚೆಲುವು, ನಗೆಯ ನಲ್ಲ, ವಸಂತದ ಬನಸಿರಿಯಾಗಿದ್ದಳಾ ಇಂದಿರೆ. ಹಸುರೆಲೆಯ ತೆರೆಯ ಮೇಲೆ ಕೆಂಪಗೆ ನರ್ತಿಸುವ ಗುಲಾಬಿಯಾಗಿದ್ದಿತಾ ಮಗು. ಅದರ ಅಂದವೇ ಅಂದ. ಆಗ ಅದರ ಬಿಂಕವೇನು, ಬಣ್ಣವೇನು, ಎಲ್ಲರ ಕಣ್ಮನಗಳನ್ನು ಅಪಹರಿಸಬಲ್ಲೆನೆಂಬ ಹೆಮ್ಮೆಯೇನು! ಬಾಳೆಯ ಬನದಲ್ಲಿ ಕುಲುಕುಲು ನಗುವ ಅದರ ಸೊಬಗನ್ನು ಬಣ್ಣಿಸಲು ಅಸಾಧ್ಯ. ಇಂತಹ ಆಲ್ಹಾದದ ಉಲ್ಹಾಸದಲ್ಲಿಯೇ ಅವಳ ಬಾಯಿಂದ ಅಲ್ಲ—ಹೃದಯದಿಂದ ಒಂದು ಹಾಡು ಹೊರಟಿತು. ಊಟದ ಸವಿಗಿಂತ ಹಾಡಿನ ಸವಿಯೇ ಮಿಗಿಲೆನಿಸಿತು. ಅವಳ ಗಾನಕ್ಕೆ ಬಾಳೆಯ ಬನವೆಲ್ಲ ಒಲಿಯಿತೇನೋ!

ರಾವಸಾಹೇಬನಿಗೆ ಇದೂ ಒಂದು ಆಶ್ಚರ್ಯದ ಸಂಗತಿ. ಅಕ್ಕ ಇಷ್ಟು ಚನ್ನಾಗಿ ಹಾಡುವಳೆಂಬುದು ಅವನಿಗೆ ಗೊತ್ತೇ ಇಲ್ಲ. ಎಂದೋ ಒಮ್ಮೆ ತಾನು ಚಿಕ್ಕವನಿರುವಾಗ ತನ್ನ ತಂದೆ ಅವಳಿಗೆ "ನೀನು ಹಾಡಬಾರದು" ಎಂದು ಆಜ್ಞಾಪಿಸಿದ್ದಷ್ಟೇ ನೆನಪು ಅವನಿಗೆ. ಆಗ ಇಂದಿರೆಯೂ "ಇಲ್ಲ" ಎಂದು ಹೇಳಿ ಸುಮ್ಮನಾಗಿದ್ದಳು. ಆಮೇಲೆ ಅವಳ ದನಿಯನ್ನು ಎಂದೂ ಅವನು ಕೇಳಿರಲಿಲ್ಲ. ಇಂದು ಅದರ ಭವ್ಯತೆಯನ್ನು ಕಂಡು ಬೆರಗುವಟ್ಟ. ಆ ಬೆರಗಿನ ಭರದಲ್ಲಿ, "ನಿನಗೆ ಇಷ್ಟು ಚನ್ನಾಗಿ ಹಾಡಲು ಯಾರು ಹೇಳಿಕೊಟ್ಟರು?" ಎಂದೂ ಕೇಳದೆ ಇರಲಾಗಲಿಲ್ಲ ಅವನಿಗೆ.

ಅವಳು ಏನೂ ಹೇಳಲಿಲ್ಲ. ಗುಣವಂತಿ ಕೇಳಿದಳು ಶ್ರೀಯುಲೆಗೆ:

"ನಿನಗೆ ಹಾಡಲು ಬರುವುದೆ?"

"ಇಲ್ಲ; ನಮ್ಮ ತಂದೆಗೆ ಇಂಥದು ಸೇರದು. ಹಳೆಯ ಮನುಷ್ಯರವರು. ನಿನಗೆ ಬರುವುದೇ?" ಎಂದು ಶ್ರೀಯುಲೆಯು ಕೊಂಚ ಸಪ್ಪಗಿನ ಮುಖಮುದ್ರೆಯಿಂದ ಕೇಳಿದಳು. ಗುಣವಂತಿ ಸುಮ್ಮನಾದಳು. ಆಗ ಇಂದಿರೆಯು ಪತಿಯ ಕಡೆಗೊಮ್ಮೆ ಸೂಚಕ ದೃಷ್ಟಿಯೊಂದನ್ನು ಬೀರಿ ಹುಬ್ಬು ಹಾರಿಸಿದಳು. ಆಗ ಸುಧೀರನೆಂದ ನಗುತ್ತ,—

"ಅವಳಂತೂ ಈಗ ಹಾಡಲು ಸಿದ್ಧಳೇ ಇರುವಳಲ್ಲ!"

"ಅವ್ವ! ನನಗೆಲ್ಲಿ ಹಾಡಲಿಕ್ಕೆ ಬರುತ್ತದೆ!" ಗುಣವಂತಿಯು

ಉದ್ಗಾರವಿದು.

"ನನಗೆಲ್ಲ ಗೊತ್ತಿದೆ ಅನ್ನು!" ಸುಧೀರ ಒತ್ತಾಯ ಮಾಡಿದ.

ಅಜಿತನ ಕಡೆಗೆ ಅವಳ ಕಣ್ಣಕದಿರು ಚಲ್ಲುವರಿದುವು. ಅವಕ್ಕೆ ಒಪ್ಪಿಗೆ ಸಿಕ್ಕಿತೇನೋ. ಕೂಡಲೆ ತನ್ನಲ್ಲಿ ತಾವು ಲೀನವಾದುವು. ಮೆಲ್ಲನೆ ಬಾಯಿಂದ ಸ್ವರ ಹೊರಟಿತು.

ಎಲ್ಲಿ ಮನಕಳುಕಿರದೊ, ಎಲ್ಲಿ ತಲೆ ಬಾಗಿರದೊ,
ಎಲ್ಲಿ ತಿಳಿವಿಗೆ ತೊಡಕು ತೋರದಿಹುದಲ್ಲಿ;
ಎಲ್ಲಿ ಮನೆಯೊಕ್ಕಟ್ಟು, ಸಂಸಾರ ನೆಲೆಗಟ್ಟು,
ಧೂಳೊಡೆಯದಿಹುದೊ ತಾನಾನಾಡಿನಲ್ಲಿ;
ಎಲ್ಲಿ ಸತ್ಯದಗಾಧ ನೆಲೆಯಿಂದ ಸವಿಮಾತು,
ಸಲ್ಲಲಿತ ನಡೆಯಿಂದ ಮುಂಬರಿವುದಲ್ಲಿ;
ಎಲ್ಲಿ ದಣಿವಿರದ ಸಾಧನೆ ಸಫಲತೆಯ ಕಡೆಗೆ
ತೋಳ ನೀಡಿಹುದೊ ತಾನಾನಾಡಿನಲ್ಲಿ;
ಎಲ್ಲಿ ಸುವಿಚಾರ ನಿರ್ಮಲ ಜಲದೊಸರು ಹರಿದು,
ಕಾಳು ರೂಢಿಯ ಮಳಲೊಳಿಂಗಿ ಕೆಡದಲ್ಲಿ;
ಎಲ್ಲಿ ನೀನೆಮ್ಮ ಚಿಂತನವನುದ್ಯಮವನು ವಿ-
ಶಾಲತೆಯ ಪೂರ್ಣತೆಗೆ ಮುಂದೊಯ್ವೆ—ಅಲ್ಲಿ—
ಅಲ್ಲಿ, ಆ ಬಂಧನರಹಿತ ಸುಖಸ್ವರ್ಗದಲಿ
ಪಾಲಿಸೈ ಪಿತ! ನಮ್ಮ ನಾಡೆಚ್ಚರಿರಲಿ!

ಗುಣವಂತಿಯ ಕಂಠ ಚನ್ನಾಗಿತ್ತು. ಹೃದಯ ಕಲೆಯ ಭಾಂಡಾರ ವಾಗಿತ್ತು. ಅದಕ್ಕೊಂದು ಕ್ರಮ, ಶಾಸ್ತ್ರಪರಿಚಯವಿರಲಿಲ್ಲವಷ್ಟೇ; ಆದರೂ ಹಾಡು ಎಲ್ಲರಿಗೂ ಹರುಷವನ್ನುಂಟುಮಾಡಿತ್ತು!

ಅಜಿತ-ಸುಧೀರರು ಪದ್ಯದ ಭಾವವನ್ನು ನೆನೆನೆನೆದು ಮೆಲಕು ಹಾಕುತ್ತಿದ್ದರು. ರಾವಸಾಹೇಬನಿಗೆ ಅದರ ಗಮನವಿಲ್ಲ. ಆಸ್ಥೆಯಿಂದ ಆಶೆಯಿಂದ ಮುಗುಳು ನಗೆ ಬೀರುತ್ತ ಹಾಡುವ ಅವಳ ಅಂದದ ಮುಂದೆ ಅರ್ಥದ ತೆರೆ ಹಾಕಿಕೊಳ್ಳಲು ಅವನಿಗೆ ಇಷ್ಟವಿರಲಿಲ್ಲ.

ಗುಣವಂತಿಯು ವಿಪುಲವಾಗಿದ್ದ ತನ್ನ ಕೇಶರಾಶಿಯನ್ನು ಮನೋ

ಹರವಾಗಿ ಹೆರಳು ಹಾಕಿಕೊಂಡಿದ್ದಳು. ಅರಳಿದ ಮಲ್ಲಿಗೆಯ ದಂಡೆ ಯೊಂದು ಮೇಘಗಳೆಡೆಯಲ್ಲಿಂದ ಕಾಣುವ ಚಂದ್ರಬಿಂಬದಂತೆ ಅಲ್ಲಿ ಶೋಭಿಸುತ್ತಿತ್ತು. ಹಣೆಯ ಚಿಕ್ಕದಾದೊಂದು ಕುಂಕುಮದ ತಿಲಕದಿಂದ ಅವಳ ಮುಖದ ಆಕರ್ಷಕತೆಯನ್ನು ಮತ್ತಿಷ್ಟು ಹೆಚ್ಚಿಸುವಂತಿತ್ತು. ಕಾಮುಕನ ಬರವನ್ನು ಇದಿರು ನೋಡುತ್ತ ಇರುವ ಕಾತರಳಾದ ಕಾಮಿನಿ ಯಂತೆ ಅವಳು ಚೇತೋಹಾರಿಯಾಗಿ ಕಂಡಳವನಿಗೆ. ಅವನಿಗೆ ಈ ಹಾಡುಗಾರಿಕೆಯಿಂದ ಸುಲೋಚನೆಯು ನೆನಪಾಯಿತು. ಅವಳಿರುತ್ತಿದ್ದರೆ ಈಗ ನನ್ನವಳಾಗಿ !

ಸಾಯಂಕಾಲ ಮನೆ ಸೇರಿದುದಾಯಿತು. ಎಲ್ಲರೂ ಉಲ್ಹಾಸ ಭರಿತರಾಗಿಯೇ ಇದ್ದರು. ಗಾಡಿಯಿಂದ ಇಳಿದು ಒಳಗೆ ನಡೆದರು ಪುಟಿ ಚಂಡಿನಂತೆ. ರಾವಸಾಹೇಬನು ಮೆಲ್ಲನೆ ಇಳಿದು ಭಾರವಾದ ಮನಸಿ ನಿಂದ ತನ್ನ ಕೋಣೆಯನ್ನು ಸೇರಿದ. ಇದೀಗ ಸೇವಕ ದೀಪ ಹಚ್ಚಿ ತಂದು ಇಟ್ಟಿದ್ದ. ಸಾವಕಾಶವಾಗಿ ಅದರ ಬೆಳಕನ್ನು ಕಡಿಮೆ ಮಾಡಿ ಕುರ್ಚಿಯ ಮೇಲೆ ಒರಗಿಕೊಂಡ. ಸ್ವಲ್ಪ ಹೊತ್ತಿನಲ್ಲಿ ತನ್ನ ಉಡುಪುಗಳನ್ನು ಬದ ಲಿಸಿ ಶ್ರೀಯಲೆಯು ಕೋಣೆಗೆ ಬಂದಳು. ಕುರ್ಚಿಯೊಂದರಲ್ಲಿ ಅವನ ಪಕ್ಕದಲ್ಲಿಯೇ ಕುಳಿತಳು.

"ಊಂ! ಮೌನವೇನು?" ಅವನ ಕೈಗಳನ್ನು ತನ್ನ ತೊಡೆಗಳ ಮೇಲಿಟ್ಟುಕೊಂಡು ಕೇಳಿದಳಾಕೆ. ಇಲ್ಲ; ಆ ಮೌನ ಒಡೆಯಲಿಲ್ಲ. ಮತ್ತೂ ಕೇಳಿದಳು.

"ನನಗೆ ಹಾಡಲು ಬರುವದಿಲ್ಲ, ಇನ್ನು ಕಲಿಯಲೇ?"

ಅವಳಿಗೆ ಉತ್ತರವೇನೂ ದೊರೆಯಲಿಲ್ಲ.

ಎದುರಿಗಿನ ಕಿಡಕಿಯ ಹೊರಗೆ ಮೆಲ್ಲಮೆಲ್ಲನೆ ಕತ್ತಲು ಕವಿಯುತ ಲಿತ್ತು. ಅವನ ಕೈಬೆರಳುಗಳೆಡೆಯಲ್ಲಿ ತನ್ನ ಕೈಬೆರಳುಗಳನ್ನು ಸಿಕ್ಕಿಸಿ ಅವಳವನನ್ನು ಕೆಣಕತೊಡಗಿದಳು.

"ಕೋಣೆಯೆಲ್ಲ ತುಂಬ ಕತ್ತಲೆ! ಸುಮ್ಮನೆ ಈ ದೀಪ ಸಣ್ಣಾ ಗಿದೆ."

ಮೇಜಿನ ಮೇಲೆ ಉರಿಯುತ್ತಿದ್ದ ದೀಪವನ್ನು ಏರಿಸಿದಳು. ಕಡೆ

ಕಣ್ಣಿನಿಂದ ಅವನ ಮುಖವನ್ನು ದಿಟ್ಟಿಸುತ್ತ ಅವಳೊಮ್ಮೆ ಕಿಲಕಿಲನೆ ನಕ್ಕಳು—ಅಲ್ಲ ನಗಲು ಪ್ರಯತ್ನಿಸಿದಳು.

ಒಂದು ಪ್ರತಿಮೆಯಂತೆ ಆಗಲೂ ಅವನು ನಿಶ್ಚಲನಾಗಿಯೇ ಇದ್ದ.

" ನಾನು ಕಾಗದ ಬರೆದಾಗ ನೀನು ತವರುಮನೆಯಿಂದ ಬರಲಿಲ್ಲ ವೇಕೆ ? "

ಕೊಂಚ ಕಾಲದ ಮೇಲೆ ಒಮ್ಮೆಲೇ ಅವನ ತುಟಿಗಳಿಂದ ಈ ಮಾತು ಗಳು ಹೊರಬಿದ್ದುವು.

" ಅಯ್ಯೋ ನಾನು ಬರೆದಿದ್ದೆನಲ್ಲ! "

ಏನೋ ಹೇಳಬೇಕೆಂದಿದ್ದಳವಳು, ಬೇಡವೆನಿಸಿತೇನೋ, ಅಷ್ಟಕ್ಕೆ ತಡೆದಳು. ಅವಳ ತೊಡೆಗಳ ಮೇಲಿಂದ ತನ್ನ ಕೈಯನ್ನಾತ ತೆಗೆದುಕೊಂಡ. ಆ ಸೆಳೆತದ ರಭಸಕ್ಕೆ ಅವಳೊಮ್ಮೆ ನಡುಗಿದಳು. ಅವಳ ಚಪಲತೆಯು ಮಾಯವಾಯಿತು. ದೃಷ್ಟಿಗಳು ದೀಪದ ಮೇಲೆ ಕೇಂದ್ರೀ ಕರಿಸಿದುವು. ಎಡಗಡೆಯಿಂದ ತೀಕ್ಷ್ಣವಾದ ನೋಟವೊಂದು ಅವಳನ್ನು ನಿರೀಕ್ಷಿಸುತಿದ್ದಿತು ಆ ಬೆಳಕಿನಲ್ಲಿ, ಅವಳ ಸ್ವಲ್ಪ ಮಾಸಿದ ತಿಲಕವೂ ಗಲ್ಲದ ಮೆಲ್ಬದಿಯಲ್ಲಿರುವ ಸಣ್ಣ ಕುರುವೂ ಒಡೆದು ತೋರುತ್ತಿದ್ದುವು. ಅವಳ ತುರುಬಿನಲ್ಲಿದ್ದ ಮಲ್ಲಿಗೆಯು ಉನ್ಮಾದಕರವಾದ ಪರಿಮಳವನ್ನು ಬೀರುತಲಿತ್ತು. ಅವಳ ನಯನಗಳು ದೀಪದ ಬೆಳಕಿಗೆ ಹೊಳೆಯುತ್ತಿ ದ್ದುವು. ಅವುಗಳಲ್ಲಿ ನೀರು ತುಂಬಿದೆಯೆಂದು ಅವನು ಶಂಕಿಸಿದನು.

" ಶ್ರೀಯಲೆ ! "

ಒಂದು ಕ್ಷಣ ಇಬ್ಬರ ದೃಷ್ಟಿಗಳೂ ಒಂದುಗೂಡಿದುವು. ಅವಳ ಕೆಂದುಟಿಗಳಲ್ಲಿ ಕಿರುನಗೆಯೊಂದು ಮೂಡಿತು.

" ಇದೇಕೆ ಹೀಗೆ ! " ಅವಳ ಹುಬ್ಬುಗಳೂ ಗಂಟಿಕ್ಕಿದುವು.

" ನಿಮ್ಮವರಿಗೆ ನನ್ನ ಬೆಲೆಯಿಲ್ಲವೆ ? "

" ಅದೇಕೆ ಈಗ ? "

ನಿಶ್ಶಬ್ದ. ಸ್ತಬ್ಧವಾಗಿಯೇ ಅರ್ಧ ಗಂಟೆ ಕಳೆಯಿತು. ಅವಳ ಪ್ರಶ್ನೆಯು ಉತ್ತರ ಅವಳಿಗೆ ಸಿಕ್ಕುವುದೊತ್ತಟ್ಟಿಗಿರಲಿ ಸ್ವತಃ ರಾವಸಾಹೇಬನಿಗೇ ಸಿಕ್ಕುತ್ತಿರಲಿಲ್ಲ.

## ೨೧

ಒಂದು ದಿನ ಮುಂಜಾನೆ ಆದಗೌಡನು ಮನೆಯ ಮಕ್ಕಳಿಗೆಲ್ಲ ಉಲನದ ಸ್ವೆಟರುಗಳನ್ನು ತೆಗೆದು ಕೊಟ್ಟ. ಚಳಿಗಾಲದಲ್ಲಿ ತೊಟ್ಟು ಕೊಳ್ಳಲಿಕ್ಕೆಂದು ಕಾಯ್ದಿಟ್ಟ ಅರಿವೆಗಳವು. ಪ್ರತಿವರ್ಷ ಉಲನದ ಅರಿವೆ ಗಳನ್ನು ಎಲ್ಲಿ ಕೊಳ್ಳಲಿಕ್ಕಾಗುತ್ತದೆ? ಒಮ್ಮೆ ವೆಚ್ಚಮಾಡಿ ಸಿದ್ಧಪಡಿಸಿ ದುವುಗಳನ್ನೇ ಓರಣದಿಂದ ಉಪಯೋಗಿಸಿ, ಬೇಸಿಗೆ ಬಂದೊಡನೆ ತೆಗೆ ದಿಟ್ಟು, ಮತ್ತೆ ಅವಶ್ಯಬಿದ್ದಾಗ ಉಪಯೋಗಿಸುವುದು, ಇದು ಗೌಡರ ಮನೆಯ ಪದ್ಧತಿ. ಇದರಿಂದ ಆದಗೌಡನಿಗೆಂದು ಸಿದ್ಧಪಡಿಸಿದ ಸ್ವೆಟರು ಗಳನ್ನು ಮುಂದೆ ಅಜಿತ, ರಾವಸಾಹೇಬರೂ ತೊಟ್ಟಿದ್ದರು. ಈಗ ಗೌಡರ ಚಿಕ್ಕ ಮಗನು ತೊಡುತ್ತಿದ್ದನು. ಇನ್ನು ಮುಂದೆ ಹುಟ್ಟಬಹುದಾದ ರಾವಸಾಹೇಬನ ಮಗನೂ ಅದನ್ನೇ ಉಪಯೋಗಿಸಬೇಕಾಗುತ್ತಿದ್ದಿ ತೇನೊ.

ಗೌಡನು ಅರಿವೆಗಳನ್ನೆಲ್ಲ ತನ್ನ ಕಪಾಟಿನಿಂದ ತೆಗೆದು ಕೊಡುವ ವರೆಗೆ ಇಂದಿರೆಯು ವಿಜಯನನ್ನು ಎತ್ತಿಕೊಂಡು ಅಲ್ಲಿಯೇ ನಿಂತಿದ್ದಳು. ಮನದಲ್ಲಿ ತನ್ನ ವಿಜಯನಿಗೂ ಒಂದು ಸಣ್ಣ ಸ್ವೆಟರು ಇದ್ದರೆ ಒಳಿತಾಗು ತ್ತಿತ್ತು, ಎಂದು ಅನಿಸಿತು. ಆದರೆ ಕಕ್ಕನ ಹತ್ತರ ಬಾಯ್ತೆರೆದು ಕೇಳು ವುದಕ್ಕೆ ಸಂಕೋಚ. ಸುಮ್ಮನೆ ಇದ್ದಳು. ಆದಗೌಡ ಎಲ್ಲರಿಗೂ ಸ್ವೆಟರುಗಳನ್ನು ಕೊಟ್ಟ ನಂತರ ಅವನ ದೃಷ್ಟಿ ಇಂದಿರೆಯ ಕಡೆಗೆ ಹೊರ ಳಿತು. ಅವಳ ಕೂಸಿಗೆ ಸ್ವೆಟರು ಇಲ್ಲವಾಯಿತಲ್ಲ, ಎಂಬ ವಿಚಾರ ಅವನ ತಲೆಯಲ್ಲಿಯೂ ಮಿಂಚಿಹೋಯಿತು. ಸ್ವಲ್ಪ ಹೊತ್ತು ಏನೋ ಧೇನಿಸು ವವನಂತೆ ನಿಂತ. ಹಣೆ ಏರಿಸಿದ. ಕಪಾಟಿನ ಬಾಗಿಲನ್ನು ಇಕ್ಕಿದ, ತೆರೆದ, ಸಮಸ್ಯೆ ಬಿಡುವಂತೆ ತೋರಲಿಲ್ಲ. ವಿಜಯನಿಗೆ ಉಲನದ ಅರಿವೆ ಕೊಡದೆ ಬಿಡುವುದು ಅನುಚಿತ. ಈಗ ಕೈಯಿಂದ ಖರ್ಚು ಮಾಡಿ ಅರಿವೆ ಹೊಲಿಸ ಲಿಕ್ಕೆ ಮನಸ್ಸಿಲ್ಲ. ಹೀಗಾಗಿ ತೂಗಾಟದಲ್ಲಿ ಬಿದ್ದ. ಇವಳ ಸಮಕ್ಷಮ ಎಲ್ಲರಿಗೂ ನಾನು ಸ್ವೆಟರುಗಳನ್ನೇ ತೆಗೆದು ಕೊಡಬಾರದಿತ್ತು. ಸಹಜ ಯಾವಾಗಾದರೂ ತೆಗೆದು ಇಟ್ಟುಬಿಟ್ಟಿದ್ದರೆ ಹುಡುಗರು ತಾವೇ ಅರಿಸಿ

ಕೊಂಡು ಬಿಡುತ್ತಿದ್ದರು. ಆಗ ಈ ಅಪವಾದವೂ ನನ್ನ ಮೇಲೆ ಬರುತ್ತಿರಲಿಲ್ಲ. ಎಂಬ ವಿಚಾರಗಳೆಲ್ಲ ಅವನ ತಲೆಯಲ್ಲಿ ಆ ಕ್ಷಣ ಸುಳಿದು ಹೋದುವು. ಏನು ಮಾಡಬೇಕೆಂಬ ವಿಚಾರದಲ್ಲಿ ಕೊಂಚ ಕಾಲ ಕಳೆದ. ಬಗೆಹರಿಯದ ಪ್ರಶ್ನೆಗಾಗಿ ತಲೆ ತುರಿಸಿದ. ಅದೇನೋ ನೆನಪಾದಂತಾಗಿ ಕಪಾಟಿನಲ್ಲಿಯ ಅರಿವೆ ಗಂಟುಗಳನ್ನು ಸ್ವಲ್ಪ ಉತ್ಸಾಹದಲ್ಲಿಯೇ ಕೆಳಗಿಳಿಸತೊಡಗಿದ. ತೀರ ಬುಡದಲ್ಲಿರುವ ಒಂದೆರಡು ಹಳೆಯ ಅರಿವೆಗಳ ಗಂಟನ್ನು ಬಿಚ್ಚಿ ಹುಡುಕಾಡಿದ. ಅವನಿಗೆ ಬೇಕಾದ ವಸ್ತು ಕಣ್ಣಿಗೆ ಬೀಳಲಿಲ್ಲ.

ಇಂದಿರೆ ಇನ್ನೂ ಅಲ್ಲಿಯೇ ನಿಂತಿದ್ದಳು. ಉಳಿದ ಹುಡುಗರು ಸ್ವೆಟರುಗಳನ್ನು ತೊಟ್ಟುಕೊಂಡು, ಗುಂಡಿ ಎಲ್ಲಿ ಹರಿದಿದೆ, ಯಾರ ಸ್ವೆಟರು ಯಾವ ಬಣ್ಣದ್ದಿದೆ, ಯಾರದು ಚಂದ, ಎಂದು ಚರ್ಚಿಸುತ್ತಿದ್ದರು. ಇನ್ನೊಬ್ಬನ ಸ್ವೆಟರಿನ ಹೊಲಿಗೆ ಎಲ್ಲಿ ಉಚ್ಚಿದೆ, ಬಣ್ಣ ಎಲ್ಲಿ ಮಾಸಿದೆ, ಎಂಬುದನ್ನು ತೋರಿಸುವುದರ ಕಡೆಗೆಯೇ ಪ್ರತಿಯೊಬ್ಬರ ಲಕ್ಷ್ಯ ವೇಧಿಸುತ್ತಿದ್ದಿತು. ಬಾಲಕರ ಈ ನಡತೆಯ ಹಿಂದೆ ಅಡಗಿದ ಮಾನವರ ಸಹಜಸ್ವಭಾವವನ್ನು ನೆನೆದು ಇಂದಿರೆ ಮುಗುಳ ನಗೆ ನಗುವಳು. ಏನನ್ನೋ ವಿಚಾರಿಸುವಳು. ಹೀಗೆ ತನ್ನಲ್ಲಿಯೇ ತಾನು ಮಗ್ನಳಾಗಿದ್ದಳು.

ಇಲ್ಲಿಯ ವರೆಗೆ ಕಕ್ಕನ ಚಟುವಟಿಕೆಗಳ ಕಡೆಗೆ ಅವಳ ಲಕ್ಷ್ಯ ಹರಿದಿರಲಿಲ್ಲ. ಈಗ ಆತ ಹೆಚ್ಚಾಗಿ ಅರಿವೆಯ ಗಂಟುಗಳನ್ನು ಕೆಳಗೆ ಇಳಿಸಿಟ್ಟಿದುದರಿಂದ ಕೇಳಿದಳು.

“ ಏನು ಹುಡುಕುತ್ತಿರುವಿರಿ ? ”

“ವಿಜಯನಿಗೊಂದು ಕಬಜ ಕೊಡಬೇಕೆಂದಿರುವೆ.” ಅನುಮಾನದ ಸ್ವರದಲ್ಲಿಯೇ ಆದಗೌಡನ ಬಾಯಿಂದ ಮಾತು ಹೊರಟಿತು.

“ ಇವನ ಮೈಗೆ ಬರುವಂತಹದೂ ಇದೆಯೇ ? ” ಇಂದಿರೆ ಬೆರಗಿನಿಂದ ಅಂದಳು. ಅವಳ ಮನಸ್ಸಿನ ಬಯಕೆಯ ಭಾವ ಮಾತಿನಲ್ಲಿ ಹೊರಹೊಮ್ಮುತ್ತಿತ್ತು. “ಇತ್ತು. .” ಎಂದು ಮತ್ತೆ ಬೇರೆ ಬೇರೆ ಗಂಟುಗಳನ್ನು ಬಿಚ್ಚಿ ಹುಡುಕತೊಡಗಿದ ಗೌಡ.

ಅದು ಕಬಜ ಎಲ್ಲಿಯೂ ಸಿಕ್ಕದಾಯಿತು. ಸುತ್ತೆಲ್ಲ ಅರಿವೆಯ ಗಂಟುಗಳು ಚಲ್ಲಾಪಿಲ್ಲಿಯಾಗಿ ಬಿದ್ದಿವೆ. ನಡುವೆ ವಿಚಾರದಲ್ಲಿ ಮಗ್ನನಾಗಿ ಕುಳಿತ ಗೌಡನ ಸ್ಥಿತಿಯೂ ಹಾಗೆಯೇ ಆಗಿತ್ತು. ಈಗಾಗಲೇ ವಿಜಯನಿಗೆ ಉಣ್ಣೆಯ ಕಬಜ ಹುಡುಕಿಕೊಡುವೆನೆಂದು ಇಂದಿರೆಯ ಮುಂದೆ ಹೇಳಿಯೂ ಬಿಟ್ಟಿದ್ದ. ಇನ್ನು ಕೊಡದಿರುವುದು ಒಳಿತಲ್ಲ. ಆದರೆ ಹುಡುಕುತ್ತಿರುವ ಆ ಕಬಜವೇ ಸಿಕ್ಕದಾಯಿತಲ್ಲ! ಎಂದು ತೊಡಕಿನಲ್ಲಿರುವಾಗಲೇ ಇನ್ನೊಂದು ಸ್ಥಳ ನೆನಪಾಯಿತವನಿಗೆ. ಚಟ್ಟನೆ ಎದ್ದು, ಕಪಾಟಿನ ಮೇಲೆ ಇಟ್ಟ ಬೀಗದೊಳಗಿನ ಬೀಗದ ಕೈಯ ಸರವನ್ನು ತಕ್ಕೊಂಡು ತನ್ನ ಮಲಗುವ ಕೋಣೆಗೆ ಹೋದ. ಅಲ್ಲಿದ್ದ ಒಂದು ಪೆಟ್ಟಿಗೆಯನ್ನು ತೆರೆದು ಹುಡುಕಾಡಿದ. ಕಬಜ ಸಿಕ್ಕಿತು. ಆನಂದದಿಂದ ತಕ್ಕೊಂಡು ಹೊರಗೆ ಬಂದ.

ಇಂದಿರೆಯು ಕೋಣೆಯ ಬಾಗಿಲಿಗೇ ಬಂದು ನಿಂತಿದ್ದಳು. ಕಕ್ಕನ ಕೈಯೊಳಗಿನ ಹಳೆಯ ಕಬಜ ನೋಡಿ ಅವಳ ಮುಖದ ಬಣ್ಣ ಇಳಿಯಿತು. ಬೆಳಕಿಗೆ ತಂದು ನೋಡಲು ಗೌಡನ ಮನಸ್ಸೂ ಯಾಕೋ ಮುದುರಿತು. ಆದರೂ ಅಂದ—

"ತಗೋ ಇದನ್ನ, ವಿಜಯನಿಗೆ ಹೇಗೆ ಕಾಣುವದು ನೋಡು." ಎಂದು ಹೇಳಿ ಇಂದಿರೆಯ ಕೈಗೆ ಕೊಟ್ಟ.

ಇಂದಿರೆ ಮನಸ್ಸಿಲ್ಲದೆ ತಕ್ಕೊಂಡಳು. ಕಕ್ಕನ ಸ್ವಭಾವ ಅವಳಿಗೆ ಚನ್ನಾಗಿ ಗೊತ್ತು. ಅದರಿಂದ ತಿರುಗಿ ಏನೂ ಹೇಳಲಿಲ್ಲ. ವಿಜಯನಿಗೆ ತೊಡಿಸುವ ಆತುರತೆಯನ್ನೂ ತೋರಿಸಲಿಲ್ಲ. ಅದನ್ನು ಕಂಡು ಗೌಡರು—

"ಇದನ್ನು ರಾವಸಾಹೇಬನಿಗೆ ಹೊಲಿಸಿ ತಂದಿದ್ದರು. ನಮ್ಮ ಅತ್ತೆಗೆ ಬಹಳ ಆನಂದ. ತನ್ನ ಮೊಮ್ಮಗ—ಊರ ಗೌಡ—ಹುಟ್ಟಿದ ಅಂತ. ಭಲೋ ಉಲನಿನ ಅರಿವೆ ತಂದು ಹೊಲಿಸಿ ತಂದಿದ್ದಳು. ಈಗಿನವರಂತೆ ಪೇಟೆಯಲ್ಲಿ ತಯಾರ ಇದ್ದದ್ದನ್ನೇ ಕೊಂಡು ತಂದದ್ದಲ್ಲ. ಆಗಿನ ಕಾಲದ ಉಲನ್, ಬಹಳ ಒಳ್ಳೆಯದು." ಎಂದು ಸಿಫಾರಸು ಮಾಡಿದರು.

"ಉಲನವೇನೋ ಚನ್ನಾಗಿರಬೇಕು. ಆದರೆ ಈಗ ತೊಡಿಸುವಂತೆ

ಇಲ್ಲ" ಎಂದು ಇಂದಿರೆ ಸ್ಪಷ್ಟವಾಗಿಯೇ ಹೇಳಿದಳು.

ಆದೇತಕ್ಕೋ ಪಡಸಾಲೆಯಲ್ಲಿ ಬಂದ ಗಂಗವ್ವನು ಇಂದಿರೆಯ ಕೈಯೊಳಗಿನ ಕಬಜವನ್ನು ತಕ್ಕೊಂಡು ನೋಡಿ,—

"ಇದಕ್ಕೇನಾಗಿದೆ? ವಿಜಯನಿಗೆ ಇಂಥದು ಸಿಕ್ಕರೆ ಪುಣ್ಯ. ನಮ್ಮ ರಾವಸಾಹೇಬ ತೊಟ್ಟದ್ದಿದು" ಎಂದಳು.

ತನ್ನ ಮಗ ಗೌಡ. ಅವನು ತೊಡುವಂತಹ ಅರಿವೆಗಳು ವಿಜಯನಿಗೆ ಹೇಗೆ ಸಿಕ್ಯಾವು ಎಂಬ ಭಾವನೆಯೇ ಅವಳ ಈ ತೆರದ ನುಡಿಗೆ ಕಾರಣವಾಗಿದ್ದಿತು.

ಗಂಗವ್ವನ ಮಾತು ಕೇಳಿ ಇಂದಿರೆಗೆ ಸುಮ್ಮನಿರಲಾಗಲಿಲ್ಲ.

"ವಿಜಯನಿಗೆ ಇಂತಹ ಒಳ್ಳೆಯ ಉಲನ್ನಿನ ಹಳೆಯ ಕಬಜ ಸಿಗದಿದ್ದರೂ ಸಾದಾ ಅರಿವೆಯ ಅಂಗಿಯಾದರೂ ಸಿಕ್ಕೀತಲ್ಲ?" ಎಂದಳು.

ಈ ಮಾತಿನಿಂದ ಗೌಡರ ಮರ್ಮಕ್ಕೆ ಪೆಟ್ಟು ತಗುಲಿದಂತಾಯಿತು. ಆದರೂ ಮಾಡುವರೇನು? ತಾವು ಇಷ್ಟು ಕಷ್ಟಪಟ್ಟು ಹುಡುಕಿ ಕೊಟ್ಟ ಕಬಜ ಹುಡುಗನಿಗೆ ತೊಡಿಸುವಂತಹದೇ ಇರಲಿಲ್ಲ. ಅದರಿಂದಲೇ ಶಾಸ್ತ್ರದ ಕಡೆಗೆ ಹೊರಳಿದರು.

"ಪರಿಗ್ರಹ ತ್ಯಾಗ ಮಾಡಂತ ಶಾಸ್ತ್ರದೊಳಗ ಹೇಳೇದ ಗೊತ್ತು ಅದೇ ಏನು ನಿನಗ? ಇದ್ದ ಅವರಿವೆಗಳನ್ನೇ ಕಾಯ್ದಿಟ್ಟು ಉಪಯೋಗಿಸಬೇಕು. ತನಗೆ ಆವಶ್ಯ ಇಲ್ಲದ ಹೆಚ್ಚಿನ ವಸ್ತುಗಳನ್ನೂ ಕೂಡ ಹತ್ತರ ಇಡಬಾರದು ಅಂತ ಅದ. ಅದಕ್ಕೇ ನಾವೆಲ್ಲ ಹೀಗೆ ನುಡಿಯೋದು."

ಶಾಸ್ತ್ರವಚನ ಹೇಳತಕ್ಕ ಮಾತಾದರೂ ಒಳ್ಳೆ ಸಿಟ್ಟಿನಲ್ಲಿಯೇ ಗೌಡನ ಬಾಯಿಂದ ಹೊರಬಿದ್ದಿತು. ಇಂದಿರೆ ಅಲ್ಲಿ ನಿಲ್ಲದೆ ತನ್ನ ಕೋಣೆಗೆ ತೆರಳಿದಳು. ಮಧ್ಯಾಹ್ನ ಹೊರಗಿನಿಂದ ಸುಧೀರ ಬಂದೊಡನೆಯೇ ವಿಜಯನಿಗೊಂದು ಹೊಸ ಸ್ವೆಟರು ತರಿಸಿಕೊಂಡೇ ಬಿಡುವುದೆಂದು ನಿರ್ಧರಿಸಿದಳು ಅದೇ ವಿಚಾರದಲ್ಲಿಯೇ ಕೋಣೆಯಲ್ಲಿ ಕುಳಿತಿದ್ದಳು. ಆಗ ನಡುಮನೆಯಲ್ಲಿ ಗಂಗವ್ವ ಆಯಿಗೆ ಏನೋ ಹೇಳುತ್ತಿದ್ದುದು ಕೇಳಿಸಿತು. ಕಿವಿಗೊಟ್ಟು ಕೇಳತೊಡಗಿದಳು.

"ಕೆಲಸ ಕಳಕೊಂಡ ಗಂಡಾ ಹೆಂಡತಿ ಇಲ್ಲೇ ಬಂದ ಕುಳಿತಾರೆ.

ಮತ್ತ ಅಂಥಾ ಅರಿವೆ ಬೇಕು ಇಂಥಾ ಅರಿವೆ ಬೇಕು ಅಂತ ಹಟ ಹಿಡಿದರೆ!"

"ಹಟಾ ಹಿಡಿಯಾಕೇ ಅಲ್ಲ. ಆಕೆಯ ಅಪ್ಪನ ಹೊಲಾ ಮನಿ ಏನ ಇಲ್ಲ? ಎಲ್ಲಿ ಆದರ ಹೊರಗಿನವರ ಎತ್ತಿ ಬಂದಂಗ ಮಾಡತೀರಿ. ಅದ್ಯಾಕ? ಇಂದಿರಾ ಏನ ಬೇಡತಾಳ ಅದನ್ನು ತಂದ ಕೊಡಿರಿ. ಇಲ್ಲಾ ನಾ ಹೇಳತೇನ ನಿಲ್ಲ ನಿನ್ನ ಗಂಡಗ."

ಗಂಗವ್ವನಿಗೆ ಅತ್ತೆಯ ಈ ಮಾತು ಸೇರಲಿಲ್ಲ. ಒಳಗೆ ಹೋಗಿ ಬಿಟ್ಟಳು.

ಮಧ್ಯಾಹ್ನ ಸುಧೀರ ಬಂದೊಡನೆಯೇ ಇಂದಿರೆ ಮುಂಜಾನೆ ನಡೆದ ಸಂಗತಿಯನ್ನೆಲ್ಲ ವಿವರಿಸಿದಳು. ಕೊನೆಗೆ ವಿಜಯನಿಗೊಂದು ಒಳ್ಳೆಯ ಸ್ವೆಟರು ತಂದು ಕೊಡಲೂ ಸೂಚಿಸಿದಳು. ಸುಧೀರನ ಕೈಯಲ್ಲಿ ಈಗ ಹಣವಿರಲಿಲ್ಲ. ಕೆಲಸವಿಲ್ಲದೆ ಕುಳಿತಿದ್ದ. ಕೆಲಸ ಸಿಗುವ ವರೆಗೆ ಮಾವನ ಮನೆಯಲ್ಲಿ ನಿಲ್ಲಬೇಕೆಂದು ಯೋಚಿಸಿ ಬಂದವ. ಇಲ್ಲಿ ಅಜಿತನನ್ನು ಬಿಟ್ಟು ಉಳಿದವರಲ್ಲಿ ಅಷ್ಟು ಸಲಿಗೆಯಿಲ್ಲ. ಅಜಿತನಿಗಾದರೂ ಮನೆಯಲ್ಲಿ ಆರ್ಥಿಕ ಸ್ವಾತಂತ್ರ್ಯವಿಲ್ಲ. ಆದಗೌಡನಂತೂ ಬೇರೆ ಸ್ವಭಾವದ ಮನುಷ್ಯ. ಹೀಗಾಗಿ ಒಂದು ತರದ ಇರುಕಿನಲ್ಲಿಯೇ ಆತ ದಿನ ಕಳೆಯುತಲಿದ್ದ. ಆದುದರಿಂದ ಆತ ಹೇಳಿದ.

"ಸಣ್ಣ ಕೂಸು, ಅವನಿಗೆ ಸ್ವೆಟರು ಏತಕ್ಕೆ ಬೇಕು? ಎಣ್ಣೆಯಲ್ಲಿ ಹೊಲಸಾಗಿ ಹೋಗುವುದು" ಇಷ್ಟು ಹೇಳಬೇಕಾದರೂ ಅವನ ಮನಸ್ಸು ಹೊಯ್ದಾಡಿತು, ನಾಲಿಗೆ ಒಳಗೆಳೆಯಿತು.

"ರೂಪಾಯಿ ಇಲ್ಲದ್ದಕ್ಕ ಈ ಕುಂಟ ನೆವ ಅಲ್ಲೇನು?"

"ಇಷ್ಟು ಗೊತ್ತಿದ್ದೂ ಕೇಳತಿ ಅಲ್ಲ. ಅದ ತಾ ಇದ ತಾ ಅಂತ."

"ಒಂದು ರೂಪಾಯಿ ಲೋಕರಿ ತಂದು ಕೊಡರಿ ನಾನೇ ಹೆಣದು ಹಾಕತೇನಿ."

ಸುಧೀರ ಸುಮ್ಮನಾಗಿ ಹೊರಗೆ ಹೋಗಿಬಿಟ್ಟ. ಈ ಆರ್ಥಿಕ ಇಕ್ಕಟ್ಟು ಇತ್ತೀಚೆಗೆ ಅವನಿಗೆ ಬಹಳ ತೊಂದರೆ ಕೊಡುತ್ತಿದ್ದಿತು.

ಸೆರೆಮನೆಗೆ ಹೋಗಿ ಬಂದಾಗಿನಿಂದ ಸುಧೀರನಲ್ಲಿ ಕೂಲಿಕಾರ ಸಂಘಟನೆಯ ಬಗ್ಗೆ ಮೊದಲಿನಷ್ಟು ಹುಮ್ಮಸು ಉಳಿದಿರಲಿಲ್ಲ. 'ಸಾಯಲಿ

ಹುಚ್ಚರು? ತಮ್ಮ ಹಿತ ತಮಗೇ ತಿಳಿಯದ ಜನ, ತಿರುಗಿ ನಮ್ಮ ಮೇಲೆಯೇ ತಿರುಗಿ ಬೀಳುತ್ತಾರೆ' ಎಂದು ಜೇಲಿಗೆ ಹೋಗಲು ಕಾರಣವಾದ ಅನುಭವ ಒಡನುಡಿಯುವದು. ಇನ್ನೊಂದು ಕ್ಷಣದಲ್ಲಿ 'ಭಾಂಡವಲ ಶಾಹಿಯವರ ತಂತ್ರ ಪಾಪ ಅಜ್ಞ ಜನಕ್ಕೇನು ತಿಳಿದಾವು?' ಎಂದು ಕೂಲಿಕಾರ ವಿಷಯಕ್ಕೆ ಕಳಕಳಿಯು ಕುದುರುವುದು. ಆದರೂ ಈಗ ಅವನ ಸ್ಥಿತಿಯು ಕೂಲಿಕಾರರ ಹಿತಸಂರಕ್ಷಿಸಲಿಕ್ಕೆ ಹೋಗಿ ತನ್ನ ಮಡದಿಮಕ್ಕಳನ್ನು ಸಂಕಟದಲ್ಲಿ ನೂಕುವಷ್ಟು ಸಿದ್ಧವಾಗಿರಲಿಲ್ಲ. ಮೊದಲು ಎಲ್ಲಿಯಾದರೂ ಒಂದು ಕೆಲಸ ಹಿಡಿದು ಹಾಯಾಗಿ ಕೆಲ ದಿನ ಕಳೆಯಬೇಕೆಂಬ ಯೋಚನೆಯಲ್ಲಿದ್ದನು.

ಅದರಂತೆ ಈಗ ಅವನಿಗೆ ಮುಂಬಯಿಯಲ್ಲಿ ಒಂದು ಕೆಲಸದ ಮೇಲೆ ಹಾಜರಾಗಲು ಆರ್ಡರು ಬಂದಿತ್ತು. ಅದಕ್ಕಾಗಿ ನಾಳೆಯೇ ಸುಧೀರ ಹೊರಡಲಿದ್ದಾನೆ. ಸಂಗಡ ಹೆಂಡತಿಯನ್ನೂ ಕರಕೊಂಡೇ ಹೋಗುವುದನ್ನು ನಿಶ್ಚಯಿಸಿದ್ದ. ಅಲ್ಲಿ ತನ್ನ ಮೊದಲಿನ ಮನೆಯನ್ನೂ ತೆರವು ಮಾಡಿಸಲು ಗೆಳೆಯನಿಗೆ ಕಾಗದ ಬರೆದಾಗಿತ್ತು.

ಗುಣವಂತಿಗೆ ಇಷ್ಟು ದಿನ ಮನೆ ತುಂಬಿದಂತೆನಿಸುವುದು. ಇನ್ನು ಇಂದಿರೆ ಹಾಗೂ ಅವಳ ಕೂಸು ಹೋದರೆ ಮನೆಯಲ್ಲಿ ಹೇಗಿರುವುದವ್ವ ಎನ್ನಿಸಿತು. ಅವಳಿಗೆ ಇಂದಿರೆಯ ಮಧುರ ಸಹವಾಸವು ಮನಸ್ಸಿಗೊಂದು ಸಂತಸದ ನೆರೆ ತಂದಿದ್ದಿತು. ಅವಳ ವಿಜಯ ಇವಳ ಮಮತೆಯ ಹೂವು. ಅಜಿತನಿಗೂ ಅಷ್ಟೇ. ಇನ್ನು ಅಕ್ಕನನ್ನು ಅಗಲಿರಬೇಕಾಯಿತಲ್ಲ ಎಂದು ಸಂಕಟ. ಅಜ್ಜಿ ಮುರದೇವಿಯೂ ಮರುಗಿದಳು. "ಮನೆಗೆ ಜನ ಎಷ್ಟು ಬಂದರೂ ತೊಂದರೆಯಿಲ್ಲ. ಮನೆಯಿಂದ ಹೋಗುವದಾದರೆ ಮಾತ್ರ ಬಹಳ ಕಷ್ಟನೋಡೇ!" ಎನ್ನುವಳು. ಕೂತಾಗ ನಿಂತಾಗ ಇಂದಿರೆಗೂ ತಾಯಿ ಅಜ್ಜಿಯರನ್ನೆಲ್ಲಾ ಅಗಲಿರಬೇಕೆಂದರೆ ಕಷ್ಟ ಬಂದಿದ್ದಿತು. ಎರಡು ದಿನ ಕುಳಿತಲ್ಲಿ ನಿಂತಲ್ಲಿ ಇದೇ ಮಾತು.

ಮಾತಿಗೆ ಮಾತು ಹೊರಟು ಇಂದಿರೆ ಅಂದಳು : "ಇಷ್ಟು ದಿನ ನಾವು ನಿಮ್ಮಲ್ಲಿ ನಿಂತೆವು. ನೀವು ಕೆಲ ದಿನ ನಮ್ಮಲ್ಲಿ ಬರಬಾರದೆ?"

"ಕೂಸು ಆರು ತಿಂಗಳು ಮನೆಯಲ್ಲಿ ಹೊಲಸು ಮಾಡಿದೂ.

ಬಾಣಂತಿ ಮೂರೇ ದಿನ ಮಾಡಿದ್ದೂ ಅಷ್ಟೇ, ಅಂಬುದನ್ನು ಯೋಚಿಸು. ನೀನು ಬಂದು ನಿಂತೆಯಂತ ನಾವು ಬಂದರೆ ನಿಮಗೆ ತಾಳೀತೇ?" ಗಂಗವ್ವ ನಗೆಯಲ್ಲಿ ತೇಲಿಸಿ ಹೊಡೆದಳು.

ಅದಕ್ಕೆ ಅತ್ತೆ ಮುರದೇವಿಯೇ ಉತ್ತರವಿತ್ತಳು. "ಹೋಗs ಹುಚ್ಚೀ, ತಾಳಲಿಕ್ಕೇನು! ನಿಮ್ಮ ಮಗನನ್ನು ನಾಲ್ಕು ವರ್ಷ ಕಳಿಸಿದ್ದಿರಿ, ಹಿಟ್ಟ ಅಕ್ಕಿ ಕಳಸತಿದ್ದಿರಿ ಹೌದ ತಿಂಗಳ ತಿಂಗಳಾ?"

ಗಂಗವ್ವ ಸುಮ್ಮನಾದಳು. ಮಾತಿಗೆ ಮಾತು ಮುಟ್ಟಿಯಾಯಿತು. ಆದರೆ ಅಲ್ಲೇ ಕುಳಿತ ಗುಣವಂತಿಗೆ ಒಂದು ವಿಚಾರ ಎಬ್ಬಿಸಿ ಬಿಟ್ಟಿತೀ ಪ್ರಸಂಗ. ನಾವೂ ಒಮ್ಮೆ ಮುಂಬಯಿಗೆ ಏಕೆ ಹೋಗಿ ಬರಬಾರದು, ನಾಲ್ಕು ದಿನ? ಹೊಸದಾಗಿ ಹೋಗುವ ಅಕ್ಕನ ಕೂಸನ್ನು ಹಿಡಿಯಲಿಕ್ಕೂ ಆಗುವದು. ನಾವೂ ಊರು ನೋಡಿದಂತಾಗುವುದು ಎಂದು. ಅದರಂತೆ ಮಧ್ಯಾಹ್ನ ಅಜಿತನನ್ನು ಏಕಾಂತದಲ್ಲಿ ಕಂಡು ಈ ವಿಚಾರ ಮುಂದಿಟ್ಟಳು. ಅವನಿಗೂ ಸರಿಯೆನಿಸಿತು. ಮದುವೆಯಾದ ಮೇಲೆ ಹೆಂಡತಿಯೂ ತಾನೂ ಕೂಡಿ ಎಲ್ಲಿಯೂ ಹೋಗಿಲ್ಲ. ಒಮ್ಮೆ ಮುಂಬಯಿಗೆ ಹೋಗಿ ಬರಬೇಕು. ತನ್ನ ಹೆಂಡತಿಗೂ ವಿಶಾಲ ವಿಶ್ವದ ಪರಿಚಯ ಮಾಡಿ ಕೊಡಬೇಕು. ಸೇಡಜಿಯ ಮನೆಯಿಂದ ಗುಲಶನ್‌ಬಿಯ ಗುಡಸಲಿನ ವರೆಗಿನ— ಎರಡು ಧ್ರುವಗಳಷ್ಟು ಅಂತರದ ನಡುವಿನ ಪ್ರಪಂಚವನ್ನೆಲ್ಲ ಅವಳ ದೃಷ್ಟಿಗೂ ಕೆಡವಬೇಕು, ಎಂದು ಯೋಚಿಸಿದ. ಆದರೆ ಮುಂಬಯಿಗೆ ತಾವೂ ಹೊರಡಲಿಕ್ಕೆ ಉಪಾಯವೇನು? ಕೊನೆಗೆ ಅಕ್ಕನಿಗೇ ಶರಣು ಹೋಗಬೇಕಾಯಿತು.

ಸಾಯಂಕಾಲ ಗೌಡರು ಊಟ ಮಾಡಿ ಪಡಸಾಲೆಯಲ್ಲಿ ಎಲೆ ಅಡಿಕೆ ಹಾಕಿಕೊಳ್ಳುತ್ತ ಕುಳಿತಿದ್ದರು. ಮುಖ ಪ್ರಸನ್ನವಾಗಿರುವಂತೆ ಕಂಡಿತು ಈಗಲೇ ಮಾತು ತೆಗೆಯುವದು ಸರಿಯೆಂದೆನಿಸಿ ಇಂದಿರೆಯು ನಡುಮನೆಯ ಬಾಗಿಲ ಒಳಮಗ್ಗಲಿಗೆಯೇ ನಿಂತು,—

"ಆರು ತಿಂಗಳಾಯಿತು ಮನೆ ಬಿಟ್ಟು, ಹಡೆದು ಕೂಸಿನ ಸಂಗಡ ಹೋಗುವುದು, ಜೊತೆಗೆ ನಾಲ್ಕು ದಿನ ಯಾರನ್ನಾದರೂ ಕಳಿಸುವಿರಾ?" ಸ್ವಲ್ಪ ತಡೆದು, "ಅವರಂತೂ ಬೆಳಗಾದರೆ ಆಫೀಸಿಗೆ ಹೋಗುವವರು" ಎಂದಳು.

ಗೌಡರು ಸ್ವಲ್ಪ ಹೊತ್ತು ಸುಮ್ಮನಾದರು. ಎದ್ದು ಬಾಯೊಳಗಿನ ತಾಂಬೂಲದ ರಸವನ್ನು ಉಗುಳಿ ಬರುತ್ತ, ಆರೇಳು ತಿಂಗಳು ಬಂದು ಕುಳಿತಿದ್ದಾರೆ. ಒಮ್ಮೆ ಹೊರಬೀಳಲಿ ಬಳಗ, ಖರ್ಚಿಗೆ ಉಪದ್ರವ ಎಂದೆಲ್ಲ ವಿಚಾರಿಸಿ ಕೊನೆಗೆ, "ರಾವಸಾಹೇಬ ಬಂದರೆ ಆದೀತು?" ಎಂದರು ಮಗನು ಮುಂಬಯಿಯನ್ನು ನೋಡಿ ಬಂದಂತೆಯೂ ಆಯಿತು ಎಂಬ ವಿಚಾರಸರಣಿಯಲ್ಲಿ.

ಈ ತೊಡಕು ಬಂದೀತೆಂದು ಇಂದಿರೆಗೆ ಎನಿಸಿರಲಿಲ್ಲ. ಒಮ್ಮೆಲೇ ಕಕ್ಕನ ಪ್ರಶ್ನೆಯಿಂದ ಗೊಂದಲಿದಲ್ಲಿ ಬಿದ್ದಳು. ಆದರೂ "ಗಂಡಸರು ಬಂದು ಏನ ಮಾಡುವರು? ಹೆಂಗಸರಾರಾದರೂ ಬಂದರೆ ಒಳಿತಲ್ಲ. ಸಂಗಡ ಅವನೂ ಬರಲಿ ಬೇಕಾದರೆ" ಎಂದಳು ಮೆಲ್ಲಗೆ.

"ಸಂಗಡ ಅವ್ವನ ಕರಕೊಂಡ ಹೋಗಬೇಕಂತ ಮಾಡಿದಿಯೇನು? ಇಲ್ಲಿ ಮನೆಯೊಳಗ ನಮ್ಮಾಕೆ ಒಬ್ಬಾಕೆ ಏನು ಮಾಡಿಯಾಳು? ನಿನ್ನ ತಮ್ಮಂದಿರ ಹೆಂಡರೆಲ್ಲ ಬಾಜೀರಾಯನ ಮಕ್ಕಳೇ ಆಗಿದ್ದಾರೆ!" ಎಂದು ಹರಿದುಬಿದ್ದರು.

"ಶ್ರೀಯಲೆಯನ್ನು ಕಳಿಸಿಕೊಡಿರಿ!" ಎಂದು ಅವಳೂ ಅಷ್ಟೇ ಎತ್ತಿಹಿಡಿದಳು.

"ಆಕೆಯ ಗಂಡನನ್ನು ಕೇಳೋಣ?" ಎಂದು ಗೌಡರೂ ಮಾತು ಮುಗಿಸಿದರು.

ಅದರಂತೆ ರಾವಸಾಹೇಬನನ್ನು ಕೇಳಿಯೂ ಆಯಿತು. ಅವನಿಗೆ ಈಗ ಶ್ರೀಯಲೆ ಇದ್ದರೂ ಅಷ್ಟೇ ಹೋದರೂ ಅಷ್ಟೇ ಎಂದೆನಿಸಿತ್ತಾದರೂ ಇಂದಿರೆಯ ಊಳಿಗಕ್ಕೆ ತನ್ನ ಪತ್ನಿಯನ್ನು ಕಳಿಸುವದೆಂದರೆ ಅವನಿಗಿಷ್ಟು ಸಹನವಾಗಲಿಲ್ಲ.

"ಹೋಗುವದಿದ್ದರೆ ಅವಳ ತಮ್ಮ ಹೋಗಲಿ; ಮುಂಬಯಿಗೆ ನಿಂತು ಗೊತ್ತೂ ಇದೆ ಅವನಿಗೆ. ಅವರವರಿಗೇ ಹೊಂದತದ" ಎಂದ ಬಿಗುಹಿನಿಂದ. ತನ್ನ ಕಾರ್ಯಸಾಧನೆಯ ಮುತ್ಸದ್ದಿತನವೂ ಆ ಮಾತಿನ ಧ್ವನಿಯಲ್ಲಿ ಇದ್ದಿತೇನೊ!

"ಅಲ್ಲೋ, ಗಂಡಸರು ಹೋಗಿ ಏನು ಮಾಡುವರಲ್ಲ?"

"ಹಾಗಾದರೆ ನನ್ನ ಹೆಂಡತಿಯನ್ನು ಅವರ ಮನೆಯ ಕೆಲಸಕ್ಕೆ ಕಳುಹಿಸಲೇ? ಹೆಂಗಸರೇ ಬೇಕಾದರೆ ಅವನ ಹೆಂಡತಿ ಹೋಗಲಿ." ಎಂದ ಮಾತಿನ ಭರದಲ್ಲಿ.

ಗೌಡರಿಗೂ ಒಂದು ಪಕ್ಷಕ್ಕೆ ಮಗನ ಮಾತೂ ಸರಿಯೆನಿಸಿತು. ಕೂಡಲೆ ಇಂದಿರೆಯ ಸಂಗಡ ಗುಣವಂತಿ ಹೋಗುವಂತೆ ನಿರ್ಣಯಿಸಿ, ಒಳಗೆ ಸಿದ್ಧತೆಗೆ ಸೂಚಿಸಿದರು ಆಗ ರಾವಸಾಹೇಬನಿಗೆ ಮತ್ತೆ ಕಳವಳಕ್ಕೆ ಇಟ್ಟುಕೊಂಡಿತು. ತಾನು ಹಾಗೆ ಹೇಳಬಾರದಾಗಿತ್ತಲ್ಲ! ಎಂದು ಒಳಗೊಳಗೇ ಮರುಗಿದನು.

ಇಂದಿರೆಯ ಕೆಲಸ ಕೈಗೂಡಿದಂತಾಯಿತು. ಆದರೆ ಅಜಿತನ ಬಯಕೆ ಈಡೇರಿದಂತಾಗಲಿಲ್ಲ. ಅಂದರೂ ಅವನ ಮನಸ್ಸು ಹೋಗಲು ಹವಣಿಸುತಲಿತ್ತು. ಒಳಗೊಳಗೇ ಹೋಗುವದನ್ನು ನಿಶ್ಚಯಿಸಿಯೂ ಇದ್ದ. ಆದರೆ ಮೇಲೆ ತೋರಗೊಡಲಿಲ್ಲ ಮಾತ್ರ. ತೋರಗೊಟ್ಟರೆ ತನ್ನ ಹೆಂಡತಿಯು ಹೋಗುವುದೂ ನಿಲ್ಲುವುದೇನೋ ಎಂಬ ಹೆದರಿಕೆಯೂ ಇತ್ತು. ಆದುದರಿಂದ ಸುಮ್ಮನೆ ಇದ್ದ. ಒಳಗೊಳಗೇ ಹೆಂಡತಿಗೆ ತನ್ನ ಅರಿವೆ ಅಂಚಡಿಗಳನ್ನೂ ಟ್ರಂಕಿನಲ್ಲಿ ಹಾಕಲು ಹೇಳಿದ. ಅವಳಿಗೆ ಪತಿಯು ಸಂಗಡ ಬರುವುದು ಇಷ್ಟವಾಗಿತ್ತಾದರೂ ಅತ್ತೆ ಮಾವಂದಿರು ತನಗೆ ಏನಾದರೂ ಅನ್ನಬಹುದೆಂದು ಹೆದರಿದ್ದಳು.

"ನೀವೂ ಬರುವಿರಾ?"

"ಬೇಡವೇ?" ಎಂದ ಅಜಿತ.

"ಅಲ್ಲ; ಮಾವನವರನ್ನು ಕೇಳಿಲ್ಲವಲ್ಲ! ಅದಕ್ಕಂದೆ."

"ಎಲ್ಲವೂ ಕೇಳುವುದೆ?"

"ನೋಡಿರಿ ನಿಮ್ಮ ಚಿತ್ತ; ನನಗೆ ಬಯ್ಸಿಡುವಿರಿ ಮಾತ್ರ."

"ನಿನಗೇಕೆ?"

ಗುಣವಂತಿಯು ಇಸ್ತ್ರಿಯ ಅರಿವೆಗಳನ್ನು ಟ್ರಂಕಿನಲ್ಲಿ ಹಾಕುತ್ತ ನಕ್ಕಳು ಮಾತ್ರ.

ಮರುದಿನ ಬಂಡಿ ಬಾಗಿಲಲ್ಲಿ ಬಂದು ನಿಂತಿತು, ನಿಲ್ದಾಣದ ವರೆಗೆ ಕಳಿಸಿ ಬರಲಿಕ್ಕೆಂದು. ಸುಧೀರ, ಇಂದಿರೆ, ಗುಣವಂತಿ ಮೂವರು ಏರಿ

ದರು. ನೆರೆಮನೆಯ ಹೆಂಗಸರೂ ಇಂದಿರೆಯನ್ನು ಕಳಿಸಲು ಬಂದಿದ್ದರು. ಗೌಡರು ಮೊಮ್ಮಗನನ್ನು ಎತ್ತಿಕೊಂಡು ಬಂಡಿಯ ವರೆಗೆ ಬಂದರು. ಆಮೇಲೆ ಸರಸ್ವತಿಯ ಕೈಯಲ್ಲಿ ಕೂಸನ್ನು ಕೊಟ್ಟರು, ಇಂದಿರೆಗೆ ಕೊಡಲು. ಮುರದೇವಿಯು ಮುಂದೆ ಬಂದು, "ಕೂಸನ್ನು ತಾರೇ. ಇನ್ನೊಮ್ಮೆ ನೋಡುತೇನಿ" ಎಂದು ವಿಜಯನನ್ನು ತಕ್ಕೊಂಡು, ಚನ್ನಾಗಿ ಹತ್ತೆಂಟು ಸಲ ಮುದ್ದಿಟ್ಟಳು. ಕೂಸು ಅವಳ ಮಮತೆಯ ಅತಿರೇಕಕ್ಕೆ ಗಾಸಿಗೊಂಡು ಚೀರಿದಾಗಲೇ ಬಿಟ್ಟಳು. ಸರಸ್ವತಿಯು ಮೊಮ್ಮಗನನ್ನು ಒಯ್ದು ಮಗಳ ಕೈಯಲ್ಲಿ ಕೊಟ್ಟಳು, ನೀರು ತುಂಬಿದ ಕಣ್ಣುಗಳಿಂದ.

"ಹೊಡೆಯಿರಿ, ಗಾಡಿಗೆ ಹೊತ್ತಾಯಿತು" ಎಂದರು ಗೌಡರು.

ಕೊನೆಗೆ ಅಜಿತ ಹೇಳಿದ, "ನಾನೂ ಸ್ಟೇಶನದ ವರೆಗೆ ಹೋಗಿ ಗಾಡಿಯಲ್ಲಿ ಕೂಡಿಸಿ ಬರುವೆ!" ಮುಖದಲ್ಲಿ ತುಂಟ ನಗೆ ಹೊರ ಹೊಮ್ಮಿತು.

"ಹೋಗು, ಸಿಸ್ತಿನಿಂದ ಕೂಡಿಸಿ ಬಾ" ಎಂದರು ಗೌಡರು.

"ಏನೋ ಇವರ ತಂತ್ರವೇ ತಿಳಿಯುವದಿಲ್ಲ ತಾಯಿ! ಮಗಳು ಒಬ್ಬಾಕೆಯೇ ಹೋಗುವಳು ಎನ್ನುವುದರೊಳಗೆ ಸೊಸೆಯೂ ನಡೆದಳು. ಅವಳ ಬೆನ್ನು ಹತ್ತಿ ಇವನೂ ಹೋಗ್ತಾನಂತೆ! ಏನಂದಾರು ಮನೆಯೊಳಗಿನವರು?" ಎಂದು ಮನದಲ್ಲಿಯೇ ಸರಸ್ವತಿಯು ಅಂದುಕೊಂಡು ಮನೆಯೊಳಗೆ ಹೋದಳು.

ಮಧ್ಯಾಹ್ನ ಬಂಡಿಯವನ ಕೈಯಲ್ಲಿ ಅಜಿತ ತಾನೂ ಮುಂಬಯಿಗೆ ಹೋದೆನೆಂದು ಬರೆದು ಕೊಟ್ಟ ಕಾಗದ ನೋಡಿ, ಗೌಡನೂ ಒಂದು ತಾಸು ಒದರಾಡಿದನು.

"ಅಕ್ಕನನ್ನು ಬಿಟ್ಟು ಇರಲಿಕ್ಕೆ ಆಗಿಲ್ಲ, ಹೋಗಿದಾನ ಏಳೋ ಪಾಪ! ನಮಗೇ ಮನೆಯೆಲ್ಲ ಭಣಭಣ ಅನ್ನಲಿಕ್ಕೆ ಹತ್ತಿದೆ. ಆತ ಹೇಗೆ ನಿಂತಾನು?" ಎಂದು ಮುರದೇವಿಯು ಮಗನ ಮಾತನ್ನು ತಡೆದಳು.

ಈ ಸಲ ಅಜಿತ ಮುಂಬಯಿಗೆ ಹೆಂಡತಿಯನ್ನೊಡಗೂಡಿ ಬಂದಿದ್ದ. ತುಂಬ ಆನಂದದಲ್ಲಿದ್ದ. ಹಿಂದೆ ನಡೆದ ಸಂಗತಿಯನ್ನೆಲ್ಲ ಗುಣವಂತಿಗೆ

ವಿವರಿಸುವ. ತನ್ನ ಕಾಲೇಜು, ಪ್ರಿನ್ಸಿಪಾಲರು, ತಾನು ಹಿಂದು ಮುಸಲ್ಮಾನ ದಂಗೆಯಲ್ಲಿ ಸಿಕ್ಕದ್ದು ಎಲ್ಲವನ್ನೂ ಹೇಳುತ್ತಿದ್ದ. ಆಕೆ ಭಯಭಕ್ತಿಯಿಂದ ಕೇಳುತ್ತಿದ್ದಳು. ಕೇಳುಕೇಳುತ್ತಿದ್ದಂತೆ ಅವಳಿಗೆ ಮುಂಬಯಿಯಿಂದ ಆದಷ್ಟು ಬೇಗನೆ ಊರಿಗೆ ಮರಳಿ ಹೋಗುವುದು ಒಳಿತೆಂದು ತೋರಿತು. ಇಂಥ ಮಹಾನಗರದಲ್ಲಿ ಯಾವಾಗ ಏನಾಗುವದೋ ಅವಳಿಗೆ ಭರವಸೆ ಹತ್ತದು. ಪತಿಯು ಮನೆಯಲ್ಲಿರುವಾಗ ಅವಳಿಗೆ ಸಮಾಧಾನ. ಹೊರಗೆ ಹೋದನೋ ಯಾವಾಗ ಮನೆಗೆ ಬರುವನೆಂಬ ಚಿಂತೆ. ಸುಧೀರನಂತೂ ಆಫೀಸಿಗೆ ಹೋಗುವವನು. ಅಜಿತ ಸಂಗಡ ತಿರುಗಾಡಲು ಗುಣವಂತಿಗೆ ನಡೆಯೆನ್ನುವ. ಅದಕ್ಕೆ ಅವಳು—

"ನಡೀರಿ, ಇದೆಲ್ಲಿಯ ಹುಡುಗಾಟ?" ಎನ್ನುವಳು.

"ಹುಡುಗಾಟವೇನು! ಊರು ನೋಡಲು ನೀನೊಬ್ಬಳೇ ಹೋಗುವಿಯೇನು?"

ಆದರೂ ಅದಕ್ಕೆ ಅವಳು ಒಪ್ಪಳು ಅಜಿತನಿಗೆ ಪತ್ನಿಯೊಡನೆ ಸಮುದ್ರತೀರದಲ್ಲಿ ಹ್ಯಾಂಗಿಂಗ್ ಗಾರ್ಡನ್‌ದ ಕಡೆಗೆ ಅಡ್ಡಾಡಿ ಬರಬೇಕೆಂಬ ಹಂಬಲು. ಅವಳು ಇವನ ಜೊತೆಯಲ್ಲಿ ಹೊರಬೀಳದಾದಳು. ತಮ್ಮನ ಆತುರವನ್ನು ಕಂಡು ಇಂದಿರೆಯೂ ಒಂದೆರಡು ಸಲ ಗುಣವಂತಿಗೆ ಹೇಳಿದಳು. ಅದೂ ಉಪಯೋಗವಾಗಲಿಲ್ಲ. ಕೊನೆಗೆ "ಊರಿಗೆ ಹೋಗುವುದರೊಳಗಾಗಿ ಒಂದು ದಿನ ರವಿವಾರ ಟ್ಯಾಕ್ಸಿ ಮಾಡಿಕೊಂಡು ಎಲ್ಲವನ್ನೂ ಸುತ್ತಾಡಿ ಬರೋಣವಂತೆ" ಎಂದು ತಮ್ಮನಿಗೆ ಸಮಾಧಾನ ಹೇಳಿದಳು. ಅಜಿತ ನಿರುಪಾಯನಾಗಿ ಅಲ್ಲಿ ಇಲ್ಲಿ ಹಿಂದಿನ ಗೆಳೆಯರ ಹತ್ತರ ಹೋಗಿ ಕೂಡುವ. ಈಗ ಶೇಷನಿಗೆ ಬಿ. ಎಸ್‌ಸಿ.ಯ ಹುಚ್ಚು. ಹಗಲೂ ಇರುಳೂ ಕಾಲೇಜ ಅಭ್ಯಾಸ ಪ್ರಯೋಗಗಳಲ್ಲಿಯೇ ಮಗ್ನನಾಗಿರುವನು. ಅವನಲ್ಲಿ ಅಜಿತ ಹೋದರೂ ಅವನಿಗೆ ಮಾತನಾಡಲು ಸಮಯವಿಲ್ಲ.

ಆದರೂ ಅಜಿತ ನಿತ್ಯದಂತೆ ಈ ದಿನ ಮಧ್ಯಾಹ್ನ ಶೇಷನ ಕೋಣೆಗೆ ಹೋದ. ಆಗ ಶೇಷ ಈಗ ತಾನೇ ಹೊರಬಿದ್ದ "India in Bondage" ಎಂಬ ಪುಸ್ತಕವನ್ನು ಬಾಗಿಲ ಹಾಕಿಕೊಂಡು ಓದುತ್ತಿದ್ದ. ದಪ್ಪಗಿರುವ

ಪುಸ್ತಕವನ್ನು ಕಂಡು,—

" ಅದಾವುದಪ್ಪಾ ? " ಎಂದು ಅಜಿತ ಕೇಳಿದ.

" ಈಗ ಮಾತಾಡಿಸಬೇಡ ಅಜಿತ, ಈ ಪುಸ್ತಕವನ್ನು ನಾಳೆ ಬೆಳಗಾಗುವುದರೊಳಗೆ ಓದಿ ಕೊಡಬೇಕಾಗಿದೆ " ಎಂದ ಶೇಷ ಹಾಗೆಯೇ ಮರೆಗೆ ಮಾಡುತ್ತ.

ಪರೀಕ್ಷೆಯ ಅಭ್ಯಾಸವನ್ನು ಒದಿಗಿಟ್ಟು ಈತನು ಓದುವ ಪುಸ್ತಕವು ಯಾವುದೆಂದು ತಿಳಿಯಲು ಅಜಿತನಿಗೂ ಆತುರವಾಯಿತು. ಕಸಿದುಕೊಂಡ. ಶೇಷ ಕಕ್ಕಾವಿಕ್ಕಿಯಾಗಿ " ಅಷ್ಟು ಮಾಡಬೇಡ ಮಹಾರಾಯಾ ! ಅದು ನಿಷಿದ್ಧ ಪುಸ್ತಕ, ಎಲ್ಲಿ ಅದನ್ನು ಕಂಡರೂ ಸರಕಾರದವರು ಹಿಡಿಯಬಹುದು. ಕೊನೆಗೆ ನಿನ್ನ ಹೆಂಡತಿಯನ್ನು ಇಲ್ಲಿಯೇ ಬಿಟ್ಟು ಚಿಕ್ಕಾಡಿನ ಮನೆ ಸೇರಬೇಕಾದೀತು " ಅಂದ.

ಸುಮ್ಮನೆ ಬೇಡ ಎಂದಿದ್ದರೆ ಅಜಿತನು ಅದನ್ನು ಓದಲು ಅಷ್ಟು ಆತುರ ತೋರಿಸುತ್ತಿರಲಿಲ್ಲ. ಈಗ ಆತ ಹೆಂಡತಿಯನ್ನು ಕರಕೊಂಡು ಆರಾಮಕ್ಕೆಂದು ನಾಲ್ಕು ದಿನ ಮುಂಬಯಿಗೆ ಬಂದಿದ್ದನು ಇಷ್ಟೆಲ್ಲ ಓದಿ ತಲೆ ಕೆಡಸಿಕೊಳ್ಳಲು ಬೇಕಿರಲಿಲ್ಲ ಅವನಿಗೆ. ಆದರೂ ಪುಸ್ತಕವು 'ಪ್ರೋಸ್ಕ್ರೈಬ್ಡ' ಎಂಬುದರಿಂದ ಓದಲೇಬೇಕೆಂದು ಅನಿಸಿತು. ಅದನ್ನವನು ಕುಳಿತಲ್ಲೇ ಮುಗಿಸಲು ಹೋಗಿ, ಗುಣವಂತಿಗೆ ಬೆಳತನಕ ಕಣ್ಣೀರು ಕರೆಯಿಸಿದನು. ಬೆಳಗು ಮುಂಜಾನೆ ಶೇಷನಿಗೆ ಪುಸ್ತಕವನ್ನು ಕೊಟ್ಟು,—

" ತಗೋ ನಿನ್ನ ಪುಸ್ತಕ, ಯಾರದೋ ಅವರಿಗೆ ಕೊಟ್ಟುಬಿಡು " ಎಂದು ಹೇಳಿದನು.

" ಹೇಗೆನಿಸಿತು ? "

" ಅನಿಸುವುದೇನು? ಪರದೇಶದವನೊಬ್ಬನು ನಮ್ಮ ಪಾರತಂತ್ರ್ಯಕ್ಕೆ ಮರುಗಿದರೆ ನಮಗೆ ಅದರ ಎಚ್ಚರವೂ ಇರಬಾರದೆ? ಬ್ರಿಟಿಷರ ಆಳಿಕೆಯು ನಮ್ಮ ಹಿತಕ್ಕೆಂದೇ ಭಾವಿಸಬೇಕೇ ? ಹುಟ್ಟಾ ಕುರುಬರ ದೊಡ್ಡಿಯಲ್ಲಿ ಬೆಳೆದ ಸಿಂಹದ ಮರಿಯಂತೆ ನಮ್ಮ ಸ್ಥಿತಿಯಾಗಿದೆ. "

ಇದರಿಂದ ಅಜಿತನ ದೃಷ್ಟಿಯು ಹೊರಗೆ ಹೊರಳಿತು. ಆ ಕಾಲಕ್ಕೆ ರಾಷ್ಟ್ರೀಯ ಚಳವಳಿಯು ದೇಶದ ತುಂಬ ಪಸರಿಸುವುದರಲ್ಲಿತ್ತು.

೧೯೨೧ನೆಯ ಇಸ್ವಿಯಲ್ಲಿ ಸ್ಕೂಲಿನಲ್ಲಿದ್ದಾಗ ಅಸಹಕಾರ ಚಳವಳಿಯಲ್ಲಿ ಭಾಗವಹಿಸಿದ್ದು ಅಜಿತನ ಜ್ಞಾಪಕಕ್ಕೆ ಬಂತು. ಈಗ ಮಾತ್ರ ಅವನ ದೇಶಪ್ರೇಮದ ಜಲವು ಒಳಗಿಳಿದು ಪ್ರಾಯದ ಲಾವಾರಸಕ್ಕೆ ಕೂಡಿತು. 'ನಾನು ಇಷ್ಟು ದೊಡ್ಡವನಾದರೂ ಕೂಡ ಕೇವಲ ವಿಚಾರದಲ್ಲಿಯೆ ಕಳೆದೆನೇ ಹೊರತಾಗಿ ದೇಶಕ್ಕಾಗಿ ಕಾರ್ಯವನ್ನೇನು ಮಾಡಿದೆ?' ಎಂದು ತನ್ನ ಮನಕ್ಕೆ ತಾನೇ ಕೇಳಿಕೊಂಡ. ಊರಿಗೆ ಹೋಗಿ ಮದುವೆ, ಮನೆ-ಮಠವೆಂದು ಸಂಸಾರದ ಶೃಂಖಲೆಯನ್ನೇ ಕಟ್ಟಿಕೊಂಡೆನಲ್ಲ! ಆದರೆ ಆ ಬಂಧನ ಎಷ್ಟರದು, ಎಂದೂ ಅನ್ನಿಸಿತು. ಮುಂಬಯಿಯಲ್ಲಿ ಅಲ್ಲಲ್ಲಿ ಸಭೆ ಸೇರಿ ತಮ್ಮ 'ಇಂಕಿಲಾಬ್ ಜಿಂದಾಬಾದ್!'ನಿಂದ ಬ್ರಿಟಿಷ ಸತ್ತೆಯನ್ನೇ ಸುಟ್ಟುಬಿಡುವೆವು ಎಂದು ಕೂಗಿಕೊಳ್ಳುತ್ತಿದ್ದರು. ಇವನೂ ದೇಶಭಕ್ತಿಯ ಹುಮ್ಮಸಿನಿಂದ ಅಲ್ಲಿಗೆ ಹೋಗುವನು. ನಾಡಿನ ಮುಂದಾಳುಗಳ ದೇಶಭಕ್ತಿಪರ ಉಪನ್ಯಾಸಗಳನ್ನು ಕೇಳಿ ಆವೇಶ ತಾಳು ವನು.

ಅದು ೧೯೩೦ನೆಯ ಇಸ್ವಿಯ ಸತ್ಯಾಗ್ರಹದ ಕಾಲ. ಅತ್ತ ಗಾಂಧೀಜಿ ಯವರು ಮುಖದಲ್ಲಿ ದೃಢನಿರ್ಧಾರವನ್ನು ತೋರುತ್ತ ಕೈಯಲ್ಲಿ ದಂಡ ವನ್ನು ಹಿಡಿದು ಮುಪ್ಪಿನವರಾದರೂ ತರುಣರ ಮುಂದಾಳಾಗಿ ಸಾಗುತ್ತಿ ದ್ದಾರೆ. ಹಿಂದೆ ಧವಳವಸ್ತ್ರಧಾರಿಗಳಾದ ವೀರಭಟರು ಬೆನ್ನುಹತ್ತಿರು ವರು. ಮಹಾತ್ಮರ ವೇಷ ವಿಭೂತಿಗಳನ್ನು ಕಂಡು ಜನರು ಗುಂಪು ಗುಂಪಾಗಿ ಸುತ್ತುವರಿದು ಅಪಾರವಾದ ಗೌರವ ಪುರಸ್ಕಾರಗಳನ್ನು ತೋರುತ್ತಿದ್ದಾರೆ. ಹೆಂಗಸರು ಶುಭಸೂಚಕ ಕುಂಕುಮತಿಲಕವನ್ನಿಟ್ಟು ಹೂವಿನ ಮಳೆಯನ್ನು ಸುರಿಸುತ್ತಿದ್ದಾರೆ. ಬಾಲಗೋಪಾಲರೆಲ್ಲ ಪಾದಕ್ಕೆ ಬೀಳುವರು. ಪ್ರಾಚೀನ ಭಾರತದ ಮಹಿಳೆಯರು ಪುರುಷರನ್ನು ಸಂಗ ರಕ್ಕೆ ಬೀಳ್ಕೊಳ್ಳುವ ಸಂದರ್ಭದಂತೆ ಎಸೆಯುತ್ತಿದೆ ಆ ಯಾತ್ರೆ. ಅಹುದು, ಸಂಗರವೇ ನಿಜ. ದಾಂಡಿಯೇ ಭಾರತದ ಪಾಣಿಪತ್ತು. ಆ ಯುದ್ಧದ ಕಹಳೆಯು ನಾಡಿನ ಹಳ್ಳಿಹಳ್ಳಿಗೂ ಮೊಳಗುತ್ತಿದೆ. ಇಂಥ ಸಮಯದಲ್ಲಿ ಮುಂಬಯಿ ಪಟ್ಟಣ ದುಮುದುಮಿಸದೆ ಇದ್ದೀತೆ?

ಅಲ್ಲಲ್ಲಿ ದೇಶಪ್ರೇಮಪೂರಿತ ಭಾಷಣಗಳಾಗುವವು. ಮೆರವಣಿಗೆ

ಗಳು ಹೊರಡುವವು. ಸತ್ಯಾಗ್ರಹವನ್ನು ಸಾರುವವು. ಎಲ್ಲೆಡೆಗೂ ಸತ್ಯ ಅಹಿಂಸೆಗಳ ಮಂತ್ರಪಠನ ಸಾಗಿದ್ದವು.

ಕಾಲೇಜಿನ ವಿದ್ಯಾರ್ಥಿಗಳಂತೆ ಅಜಿತನಿಗೆ ಯಾವ ತರದ ಬಂಧನವೂ ಇರಲಿಲ್ಲ. ಬೇಕಾದಂತೆ ಹಗಲು ಹೊತ್ತಿನಲ್ಲಿಯೂ ಸಭೆಗಳಲ್ಲಿ ಸೇರು ವನು. ಶೇಷ, ಶೀತಲರನ್ನು ಕಂಡಾಗ, "ಏನಿದು ನಿಮಗೆ ಹೆದರಿಕೆ? ನಮ್ಮ ನಾಡು ಸ್ವತಂತ್ರವಾಗಬೇಕು ಅನ್ನುವ ಮಾತನ್ನು ಕೇಳಲೂ ನಮಗೆ ಹೆದರಿಕೆಯೇ? ಕದ್ದು ಕೇಳುವುದೇ?" ಎನ್ನುವನು.

"ಅಜಿತ ನೀನು ಸ್ವತಂತ್ರ; ಕಾಲೇಜದ ಕಟ್ಟುನಿಟ್ಟುಗಳು ನಿನಗಿಲ್ಲ." ಶೇಷ ಅನ್ನುವ.

"ನಮಗಿಂತ ಹೆಚ್ಚಿನ ಬಂಧನವಿದೆ ನಿನಗೆ. ಸಂಗಡ ಒಂದು ಜೀವವನ್ನು ಕಟ್ಟಿಕೊಂಡಿರುವೆ. ನೋಡು ಅವಳ ಗತಿಯೇನು? ಹೀಗನ್ನು ವವ ಲಗ್ನವಾಗಬಾರದಾಗಿತ್ತು." ಶೀತಲನ ಬುದ್ಧಿವಾದವಿದು.

"ಹೆಂಡಿರು ನಮಗೆ ಕಾಲ್ತೊಡಕಾಗಬಾರದು, ತಿಳಿಯಿತೆ? ಸತಿಯು ಪತಿಯ ಸಹಧರ್ಮಿಣಿಯು. ಕಾರ್ಯದಲ್ಲಿ ಮಂತ್ರಿಯಿದ್ದ ಹಾಗೆ, ಎಂದು ಹಿಂದೂಶಾಸ್ತ್ರ ಹೇಳುತ್ತಿದೆ. ಕೇಳಿಲ್ಲವೇನೋ?" ತನ್ನ ಧ್ಯೇಯವನ್ನೇ ಹಿಡಿದನಾತ.

"ಆಯಿತು ಶಾಸ್ತ್ರ, ಶಾಸ್ತ್ರದಂತೆ ಪ್ರತ್ಯಕ್ಷವಿರುವದಿಲ್ಲವಪ್ಪ!" ಶೀತಲ ಸೂಚಿಸಿದ.

ಈ ಮಾತಿನಿಂದ ಅಜಿತನ ಆವೇಶ ತಗ್ಗಲಿಲ್ಲ. ಗೆಳೆಯರ ಮಾತು ಗಳು ಅವನನ್ನು ಮತ್ತಿಷ್ಟು ಕೆರಳಿಸಿದುವು. ನಾಲ್ಕು ದಿನಗಳ ನಂತರ ಅಜಿತನ ಲಕ್ಷಣವನ್ನು ಕಂಡು ಸುಧೀರ ಹೇಳಿದ: "ಅಜಿತ, ನಾಲ್ಕು ದಿನ ಕಳೆಯಲೆಂದು ಹೆಂಡತಿಯನ್ನು ಕರೆದುಕೊಂಡು ನಮ್ಮಲ್ಲಿ ಬಂದಿರುವೆ. ಈ ರಾಜಕೀಯ ಭ್ರಮೆಗೆ ಬೀಳಬೇಡ. ಎಂದಾದರೂ ಉಪ್ಪು ಮಾಡಿದರೆ ಸ್ವಾತಂತ್ರ್ಯ ಸಿಕ್ಕೀತೇ? ಗಾಂಧಿಜಿಯವರ ತಪ್ಪು ಕಲ್ಪನೆ ಯಿದು. ವಿಚಾರ ಮಾಡು; ಇದು ಕೇವಲ ಒಂದು ಸುಂಟರಗಾಳಿ ಮಾತ್ರ!"

"ಉಪ್ಪು ಮಾಡುವದರಿಂದ ಮೂರೇ ದಿನಗಳಲ್ಲಿ ಸ್ವರಾಜ್ಯ ಸಿಕ್ಕು ತ್ತದೆ ತಿಳಿಯಿತೆ?"

"ತಮ್ಮ ಉಪ್ಪನ್ನು ತಾವೇ ಮಾಡಿಕೊಳ್ಳುವ ದೇಶಗಳೆಷ್ಟು ಸ್ವಾತಂತ್ರ್ಯದಲ್ಲಿವೆ?"

ಸುಧೀರನ ವಿಷಯಕ್ಕೆ ಅಜಿತನಲ್ಲಿ ತುಂಬ ಆದರವಿತ್ತು. ಅವನೆ ದುರಿಗೆ ಚಳವಳಿಯಲ್ಲಿ ಸೇರುವೆನೆಂದು ಸ್ಪಷ್ಟವಾಗಿ ನುಡಿಯುವ ಸಾಹಸ ವಾಗದು. ಬಿಡುವುದಕ್ಕೆ ಮನ ಒಪ್ಪದು. "ವಿಚಾರಿಸುತ್ತೇನೆ" ಎಂದು ಹೇಳಿ ಸುಮ್ಮನಾದ.

ಮನೆಯಲ್ಲಿ ಈ ಸಂಗತಿ ತಿಳಿಯಿತು. ಹಿಂದೆ ಪತಿಯನ್ನು ಹಿಡಿ ದೊಯ್ದ ಸಂದರ್ಭ ನೆನಪಾಗಿ ಇಂದಿರೆ ನಡುಗಿದಳು. ಗುಣವಂತಿಯ ಮನಸ್ಸೂ ಅಳುಕಿತು. ಇಂದಿರೆಯು—

"ನನ್ನ ಕೂಸನ್ನು ನಾನು ಸಂಬಾಳಿಸುವೆ. ಮುಂಬಯಿ ನೋಡಿ ದಾಯಿತು. ಒಂದೆರಡು ದಿನಗಳಲ್ಲಿ ಅವರು ಹೋಗಿಬಿಡಲಿ ತಮ್ಮೂ ರಿಗೆ." ಎಂದು ಪತಿಗೆ ಸೂಚಿಸಿದಳು.

"ನೋಡೋಣ" ಎಂದು ಸುಧೀರ ಸುಮ್ಮನಾದ.

ಅಜಿತ ಮಾತ್ರ ಗುಣವಂತಿಗೆ ಆ ಮಾತು ಈ ಮಾತು ಆಡುತ್ತ ಮೆಲ್ಲಗೆ ಕೇಳಿದ.

"ನನ್ನನ್ನು ಹಿಡಿದೊಯ್ದರೆ ಏನು ಮಾಡುವಿ?"

ಅವನನ್ನೇ ಗಟ್ಟಿಯಾಗಿ ಹಿಡಿದು ಗುಣವಂತಿ ಕೇಳಿದಳು. "ಯಾರು ಹಿಡಿದೊಯ್ಯುವರು?"

"ಪೋಲೀಸರು!"

"ಅದೇಕೆ? ನೀವೇನು ಮಾಡಿರುವಿರಿ?"

"ಮಾಡಿಲ್ಲ; ಮಾಡಬೇಕೆಂದಿರುವೆ"

"ಏನು?" ಮೈಮೇಲೆ ರೋಮಾಂಚನಗಳೆದ್ದಿದ್ದುವು ಗುಣ ವಂತಿಗೆ.

"ದೇಶಸೇವೆ!"

"ದೇಶಸೇವೆ ಮಾಡಿದರೆ ಪೋಲೀಸರೇಕೆ ಹಿಡಿಯುವರು?"

ಎಂದೆನಿಸಿತು. ಮರುಗಳಿಗೆಯಲ್ಲಿ ವಿಚಾರ ಹೊರಳಿತು. ವಿಶ್ವದೃಷ್ಟಿ ಬೇಕು. ತಾನು ಬದುಕಿದ್ದರಲ್ಲವೇ ವಿಶಾಲದೃಷ್ಟಿ? ತಾನೇ ಸಾಯುತ್ತಿರುವಾಗ, ತನ್ನ ಕಾಲ ಬುಡದಲ್ಲಿಯ ಭೂಮಿಯೇ ಇಲ್ಲವಾಗುತ್ತಿರುವಾಗ, ಎಂಥ ವಿಶಾಲ ಧ್ಯೇಯ, ವಿಶ್ವಸಮತೆ? ಎಂದು ದೇಶದ ತುಂಬ ಬೀಸುತ್ತಿದ್ದ ಬಿರುಗಾಳಿಗೆ ಮನಸ್ಸು ಸಿಲುಕಿತು. ಎದ್ದವನೇ ಮನೆಯಿಂದ ಹೊರಬಿದ್ದ. ಉಪ್ಪಿನ ಸತ್ಯಾಗ್ರಹದಲ್ಲಿ ಸೇರಿದ ಪೋಲೀಸರ ಕೈಯೊಳಗಿನ ಲಾಠಿಯನ್ನು ನೋಡಿ, ಒಮ್ಮೆ ಹುರಿಗೊಂಡ. ಹಿಂದೊಮ್ಮೆ ತಾನು ಹಿಂದು ಮುಸಲ್ಮಾನ ಹೊಡೆದಾಟದಲ್ಲಿ ಬಡಿಗೆ ಹಿಡಿದ ಪ್ರಸಂಗವನ್ನು ನೆನೆದುಕೊಂಡು ಕೆರಳಿದ. ನಮ್ಮ ಜನರೇ ನಮ್ಮ ಮೇಲೆ ದಬ್ಬಾಳಿಕೆ ನಡೆಸಿರುವಾಗ ಸ್ವಾತಂತ್ರ್ಯ ಕೇಳವುದು ಯಾರ ಹತ್ತಿರ? ಕೊಡುವವರು ಯಾರು? ಹೃದಯದಲ್ಲಿ ನೌಕರವರ್ಗದ ಮೇಲಿನ ಸಿಟ್ಟು ಹೊಗೆಯಾಡಿತು. ತೋಳು ಸ್ಫುರಿಸಿದುವು. ಮುಟ್ಟಿಗೆಗೂಡಿದುವು. ಅಷ್ಟರಲ್ಲಿ ದೇಶಭಕ್ತರೊಬ್ಬರು, "ಶಾಂತತೆ ಯಿಂದ ಸಾಗಿರಿ. ಸತ್ಯ ಅಹಿಂಸೆಗಳೇ ನಮ್ಮ ಅಸ್ತ್ರಗಳು" ಎಂದು ಸಾರಿ ದರು. ಬ್ರಿಟಿಷರ ಮೇಲಿನ ಸಿಟ್ಟು ಇಳಿದು, ನೌಕರಶಾಹಿಯ ಮೇಲಿನ ಕೋಪದ ಕಿಡಿ ನಂದಿ, ಅಹಿಂಸೆಯ ಶಾಂತರೂಪಕ್ಕೆ ತಿರುಗಿತು. ಸಾವಿ ರಾರು ಜನರೊಡನೆ ಅವನೂ 'ಗಾಂಧೀ ಮಹಾರಾಜಕೀ ಜೈ!' ಮಾಡಿದ. ಏನಾಯಿತೋ ಏನೋ— ಎಚ್ಚರಾದಾಗ ಅವನ ತಲೆಗೆ ಪಟ್ಟಿಯೊಂದನ್ನು ಕಟ್ಟಿಕೊಂಡು ಆಸ್ಪತ್ರೆಯಲ್ಲಿ ಮಲಗಿದ್ದ.

ಸಂಜೆಗೆ ಅಜಿತ ಮನೆಗೆ ಬಾರದಿದ್ದುದಕ್ಕೆ ಗುಣವಂತಿಯು ಅಧೀರೆ ಯಾದಳು. ಇಂದಿರೆಗೆ ತುಂಬ ಯೋಚನೆ. ಸುಧೀರ ಮನೆಗೆ ಬಂದ ಮೇಲೆ ತಿಳಿಯಿತು. ಅವನು ಸತ್ಯಾಗ್ರಹದಲ್ಲಿ ಸೇರಿರಬೇಕೆಂದು ಕೇಳಿ ಇಂದಿರೆ ಹುಚ್ಚಾದಳು. ಮನೆಯಲ್ಲಿ ಹಿರಿಯರಿಗೆ ಹೇಳದೆ ಮುಂಬಯಿಗೆ ಬಂದಾತ ಇಲ್ಲಿ ಜೇಲಿನಲ್ಲಿ ಬಿದ್ದರೆ ಅವರಿಗೆ ಏನೆಂದು ತಿಳಿಸುವುದು? ತಾಯಿ ಏನೆಂದುಕೊಂಡಾಳು? ನನಗೆ ಕಕ್ಕ ಏನನ್ನುವನೋ? ಎಂಬೆಲ್ಲ ವಿಚಾರ ಚಿಂತೆಗಳಿಂದ ಅವಳ ತಲೆ ಕಾಯ್ದು ಹೋಯಿತು. ಅವರಿಗೆ ಈ ಸುದ್ದಿ ತಿಳಿಸದೆ ಇರುವುದೇ ಒಳಿತು ಎಂದು ನಿರ್ಣಯಕ್ಕೆ ಬರುವ ಹೊತ್ತಿಗೆ ಸರಿಯಾಗಿ ಊರಿಂದ ಕಾಗದವೊಂದು ಬಂದಿತು. ತಮ್ಮ ಭಾಗದಲ್ಲಿ ನಡೆದ

ವರ್ಗಯುದ್ಧದ ಇತಿಹಾಸ. "ಭಾಂಡವಲಶಾಹಿಯು ಭರಭರಾಟಿ. ಆದರೆ ಅದರ ಗರ್ಭದಲ್ಲಿ ಅದರ ನಾಶದ ಸಿದ್ಧತೆಯಾಗುತ್ತಿರುವದು. ಕಡೆಗೆ ಶ್ರಮಜೀವಿಗಳ ಸತ್ತೆ ಸ್ಥಾಪಿತವಾಗಲೇಬೇಕು. ಒಕ್ಕಲಿಗರಿಗೆ ಅವರ ಭೂಮಿ, ಕೆಲಸಗಾರರಿಗೆ ಅವರ ಕಾರಖಾನೆ. ನಮಗೇನೇ ವಿಜಯ! ಅದರಿಂದ ಹೊಸ ಜಗತ್ತಿನ ನಿರ್ಮಾಣ. ಇದರಲ್ಲಿ ಎಲ್ಲರಿಗೂ ಹೊಟ್ಟೆ ತುಂಬ ಅನ್ನ, ಸ್ವಾತಂತ್ರ್ಯ ಸಿಗಬೇಕು." ಇದೆಲ್ಲ ಮಾರ್ಕ್ಸನ ಗ್ರಂಥದಲ್ಲಿ. ಪ್ರತ್ಯಕ್ಷದಲ್ಲಿ ಏನಿದೆ? ಎಂದು ಕೂಂಡು ಅಜಿತ ವಿಚಾರಿಸಿದ ಕೊನೆಗೆ.

"ನಿನ್ನ ಸಂಪು ಹಿಂದೆ ಏನು ಮಾಡಿತು?" ಎಂದ ಅಜಿತ ಕಾವಿನಿಂದ ಸುಧೀರನಿಗೆ.

"ಕೆಲಸಗಾರರೇ ತಿರುಗಿ ಬಿದ್ದ ಮೇಲೆ ಏನು ಮಾಡುವುದು? ಇಂದಿಲ್ಲ ನಾಳೆ ಅದೇ ಜಗತ್ತಿನ ಕಲ್ಯಾಣದ ಮಾರ್ಗ. ರಶಿಯದ ಕೂಲಿ ಕಾರರೊಡನೆ ಜಗತ್ತಿನ ಕೂಲಿಕಾರರೆಲ್ಲ ಒಂದಾಗಲೇಬೇಕು. ಆಗಲೇ ಕ್ರಾಂತಿ, ಸ್ವಾತಂತ್ರ್ಯ."

"ಇದೆಲ್ಲ ನೀನು ಈಗ ನೌಕರರಿಗೆ ಹತ್ತಿದುದರಿಂದ ನನಗೆ ಬುದ್ಧಿ ವಾದ ಹೇಳುವೆ" ಎಂದು ಬಿಸಿಬಿಸಿಯಾಗಿಯೇ ಮಾತನಾಡಿದ ಅಜಿತ.

"ಹೋಗು, ನಿನ್ನ ಸತ್ಯ ಅಹಿಂಸೆಗಳೇನು ಮಾಡಿದವು! ಸ್ವಾತಂತ್ರ್ಯ ವೆಂದರೇನು? ಸ್ವರಾಜ್ಯದ ಅರ್ಥವೇನು? ಪರದೇಶಕ್ಕೆ ಹೋಗುವ ದುಡ್ಡ ನ್ನಷ್ಟು ತಿರುಗಿಸಿದರೆ ತೀರಿತೆ? ನಮ್ಮಲ್ಲಿಯೇ ನಮ್ಮ ನೆತ್ತರು ಹಿಂಡುವ ಜಿಗಣೆಗಳಿಗಿದ್ದಾರೆ. ಜಮೀನದಾರರು, ಭಾಂಡವಲದಾರರು ಅವರ ಆಧಾರದ ಮೇಲೆಯೇ ಬ್ರಿಟಿಷ ಸತ್ತೆಯ ಹಾರಾಟ. ಅವರನ್ನು ಮೊದಲು ಕಾರಿಸಿರಿ. ದೇಶ ಬ್ರಿಟಿಷರ ದವಡೆಯಿಂದ ತಾನೇ ಹೊರಟೀತು."

ಕೊನೆಗೂ ತನ್ನ ಊದುವ ಶಂಖವನ್ನೆಲ್ಲ ಊದಿಯೇ ಬಿಟ್ಟ ಸುಧೀರ.

ಒಂದು ಕ್ಷಣ ಅಜಿತನ ಮನಸ್ಸು ಹೊಯ್ದಾಡಿತು. ಸುಧೀರನ ಮಾತು ನಿಜವೆಂದು ತೋರಿತು ಒಂದು ಕ್ಷಣ ಬಡವರ ಹಿತವೇ ಭಾರತದ ಹಿತ. ಅವರ ಉದ್ಧಾರವೇ ಜಗತ್ತಿನ ಉದ್ಧಾರ. ಕೇವಲ ಹಿಂದುಸ್ತಾನದ ಹಿತದೃಷ್ಟಿಯನ್ನಷ್ಟೇ ಇಡಬಾರದು. ವಿಶ್ವದಷ್ಟು ವಿಶಾಲದೃಷ್ಟಿ ಬೇಕು.

ಎಂದೆನಿಸಿತು. ಮರುಗಳಿಗೆಯಲ್ಲಿ ವಿಚಾರ ಹೊರಳಿತು. ವಿಶ್ವದೃಷ್ಟಿ ಬೇಕು. ತಾನು ಬದುಕಿದ್ದರಲ್ಲವೇ ವಿಶಾಲದೃಷ್ಟಿ? ತಾನೇ ಸಾಯುತ್ತಿರುವಾಗ, ತನ್ನ ಕಾಲ ಬುಡದಲ್ಲಿಯ ಭೂಮಿಯೇ ಇಲ್ಲವಾಗುತ್ತಿರುವಾಗ, ಎಂಥ ವಿಶಾಲ ಧ್ಯೇಯ, ವಿಶ್ವಸಮತೆ? ಎಂದು ದೇಶದ ತುಂಬ ಬೀಸುತ್ತಿದ್ದ ಬಿರುಗಾಳಿಗೆ ಮನಸ್ಸು ಸಿಲುಕಿತು. ಎದ್ದವನೇ ಮನೆಯಿಂದ ಹೊರಬಿದ್ದ. ಉಪ್ಪಿನ ಸತ್ಯಾಗ್ರಹದಲ್ಲಿ ಸೇರಿದ ಪೋಲೀಸರ ಕೈಯೊಳಗಿನ ಲಾಠಿಯನ್ನು ನೋಡಿ, ಒಮ್ಮೆ ಹುರಿಗೊಂಡ. ಹಿಂದೊಮ್ಮೆ ತಾನು ಹಿಂದು ಮುಸಲ್ಮಾನ ಹೊಡೆದಾಟದಲ್ಲಿ ಬಡಿಗೆ ಹಿಡಿದ ಪ್ರಸಂಗವನ್ನು ನೆನೆದುಕೊಂಡು ಕೆರಳಿದ. ನಮ್ಮ ಜನರೇ ನಮ್ಮ ಮೇಲೆ ದಬ್ಬಾಳಿಕೆ ನಡೆಸಿರುವಾಗ ಸ್ವಾತಂತ್ರ್ಯ ಕೇಳವುದು ಯಾರ ಹತ್ತಿರ? ಕೊಡುವವರು ಯಾರು? ಹೃದಯದಲ್ಲಿ ನೌಕರ ವರ್ಗದ ಮೇಲಿನ ಸಿಟ್ಟು ಹೊಗೆಯಾಡಿತು. ತೋಳು ಸ್ಫುರಿಸಿದುವು. ಮುಟ್ಟಿಗೆಗೂಡಿದುವು. ಅಷ್ಟರಲ್ಲಿ ದೇಶಭಕ್ತರೊಬ್ಬರು, "ಶಾಂತತೆಯಿಂದ ಸಾಗಿರಿ. ಸತ್ಯ ಅಹಿಂಸೆಗಳೇ ನಮ್ಮ ಅಸ್ತ್ರಗಳು" ಎಂದು ಸಾರಿದರು. ಬ್ರಿಟಿಷರ ಮೇಲಿನ ಸಿಟ್ಟು ಇಳಿದು, ನೌಕರಶಾಹಿಯ ಮೇಲಿನ ಕೋಪದ ಕಿಡಿ ನಂದಿ, ಅಹಿಂಸೆಯ ಶಾಂತರೂಪಕ್ಕೆ ತಿರುಗಿತು. ಸಾವಿರಾರು ಜನರೊಡನೆ ಅವನೂ 'ಗಾಂಧೀ ಮಹಾರಾಜಕೀ ಜೈ!' ಮಾಡಿದ. ಏನಾಯಿತೋ ಏನೋ— ಎಚ್ಚರಾದಾಗ ಅವನ ತಲೆಗೆ ಪಟ್ಟಿಯೊಂದನ್ನು ಕಟ್ಟಿಕೊಂಡು ಆಸ್ಪತ್ರೆಯಲ್ಲಿ ಮಲಗಿದ್ದ.

ಸಂಜೆಗೆ ಅಜಿತ ಮನೆಗೆ ಬಾರದಿದ್ದುದಕ್ಕೆ ಗುಣವಂತಿಯು ಅಧೀರೆಯಾದಳು. ಇಂದಿರೆಗೆ ತುಂಬ ಯೋಚನೆ. ಸುಧೀರ ಮನೆಗೆ ಬಂದ ಮೇಲೆ ತಿಳಿಯಿತು. ಅವನು ಸತ್ಯಾಗ್ರಹದಲ್ಲಿ ಸೇರಿರಬೇಕೆಂದು ಕೇಳಿ ಇಂದಿರೆ ಹುಚ್ಚಾದಳು. ಮನೆಯಲ್ಲಿ ಹಿರಿಯರಿಗೆ ಹೇಳದೆ ಮುಂಬಯಿಗೆ ಬಂದಾತ ಇಲ್ಲಿ ಜೇಲಿನಲ್ಲಿ ಬಿದ್ದರೆ ಅವರಿಗೆ ಏನೆಂದು ತಿಳಿಸುವುದು? ತಾಯಿ ಏನೆಂದುಕೊಂಡಾಳು? ನನಗೆ ಕಕ್ಕ ಏನನ್ನುವನೋ? ಎಂಬೆಲ್ಲ ವಿಚಾರ ಚಿಂತೆಗಳಿಂದ ಅವಳ ತಲೆ ಕಾಯ್ದು ಹೋಯಿತು. ಅವರಿಗೆ ಈ ಸುದ್ದಿ ತಿಳಿಸದೆ ಇರುವುದೇ ಒಳಿತು ಎಂದು ನಿರ್ಣಯಕ್ಕೆ ಬರುವ ಹೊತ್ತಿಗೆ ಸರಿಯಾಗಿ ಊರಿಂದ ಕಾಗದವೊಂದು ಬಂದಿತು. ತಮ್ಮ ಭಾಗದಲ್ಲಿ ನಡೆದ

ಚಳವಳಿಯನ್ನು ವಿವರಿಸಿ, ಅಜಿತನ ಬಗ್ಗೆ ಜಾಗ್ರತೆ ತೆಗೆದುಕೊಳ್ಳಲು ಸೂಚಿಸಿ, ಗೌಡರು ಕಾಗದ ಬರೆದಿದ್ದರು. ಅದನ್ನು ಕಂಡಂತೂ ಇಂದಿರೆ ತಬ್ಬಿಬ್ಬಾದಳು. ಗುಣವಂತಿಗೆ ಈ ವಿಷಯಗಳಲ್ಲಿ ಅಷ್ಟು ಪರಿಜ್ಞಾನವಿರಲಿಲ್ಲ. ಸಣ್ಣಂದಿರುವಾಗ ಹೊಸಹಳ್ಳಿಯಲ್ಲಿ ತನ್ನ ಅಣ್ಣ ಚರಕ ತಿರುಗಿಸಿದುದೂ ಸತ್ಯಾಗ್ರಹದ ಬಗ್ಗೆ ಮಾತಾಡಿದುದೂ ಅವಳಿಗೆ ನೆನಪು. ಈಗ ಅಜಿತ ಎರಡು ದಿನಗಳಿಂದ ಮನೆಗೆ ಬಾರದ ಚಿಂತೆಯೇ ಅವಳಿಗೆ ಹಿರಿದು. ಇನ್ನೆರಡು ದಿನಗಳಿಗೆ ಬರವಲ್ಲನೇಕೆ ಸುಖವಾಗಿ ಬರಲಿ ಎಂಬುವೇ ಹಾರಯಿಕೆ. ಉಳಿದವರೂ ಹೆಚ್ಚಿಗೆ ಅವಳ ಎದುರಿಗೆ ಮಾತಾಡುತ್ತಿರಲಿಲ್ಲ. ಎರಡು ದಿನಗಳ ಮೇಲೆ ಒಂದು ದಿನ ಸುಧೀರ ಮನೆಗೆ ಬಂದಾಗ ಇಂದಿರೆ ಕೇಳಿದಳು :

" ಕಾಗದಕ್ಕೆ ಉತ್ತರ ಏನೆಂದು ಬರೆಯುವದು ? ಏನು, ತಿಳಿಸುವುದೇ ಬೇಡ ? "

" ತಿಳಿಸದೆ ಇರುವುದು ಹೇಗೆ ? ಇಂದಿಲ್ಲ ನಾಳೆ ಗೊತ್ತಾಗುವುದೇ ಅಲ್ಲ ! "

" ಹಿಂದುಗಡೆ ಗೊತ್ತಾದರೆ ತಾನೇ ಆಗಲಿ. ಸ್ವಲ್ಪ ದಿನಗಳಲ್ಲಿ ಬಿಟ್ಟು ಬರುವಂತಿದ್ದರೆ ತಿಳಿಸದೇ ಇರುವುದು ಒಳಿತಲ್ಲವೆ ? "

" ಕ್ಷಮೆ ಕೇಳಿದರೆ ಕೂಡಲೆ ಬಿಡಬಹುದು."

" ಹಾಗಾದರೆ ಅಜಿತ ಕ್ಷಮೆ ಕೇಳುವನೇ ? "

" ಕೇಳುವ ಲಕ್ಷಣವಿಲ್ಲ. ' ನಮಗೆ ದೇಶಕ್ಕೆ ಆಗುತ್ತಿರುವ ಅನ್ಯಾಯ ತಿಳಿಯದು, ಮನುಷ್ಯ ಕೇವಲ ತನ್ನ ಹೊಟ್ಟೆ ಬಟ್ಟೆಗಳಿಗೆಂದೇ ಬಾಳುವದಿಲ್ಲ ' ಎಂದು ಹೇಳುತ್ತಿರುವ. ಇನ್ನೂ ಅವನ ಆವೇಶ ಇಳಿದಂತಿಲ್ಲ. "

" ನೀವೇ ಅವನಿಗೆ ಗುರುಗಳಲ್ಲ ! " ಆಗಲೂ ನಕ್ಕಳು ಇಂದಿರೆ.

" ನನ್ನಂತೆ ಅವನಿಗೂ ಹಿಂದಿನಿಂದ ಬುದ್ಧಿ ಬಂದೀತು. " ಎಂದು ಮನದಲ್ಲಿಯೇ ಅಂದ. ಎಷ್ಟಾದರೂ ಪುರುಷನಲ್ಲವೆ ? ಪತ್ನಿಯ ಮುಂದೆ ಸೋಲನ್ನೊಪ್ಪಿಕೊಳ್ಳುವನೇ ಸುಧೀರ ?

ಅಜಿತ ಆಸ್ಪತ್ರೆಯಲ್ಲಿರುವ ಸಂಗತಿಯನ್ನು ಗುಣವಂತಿಗೆ ತಿಳಿಸಿರಲಿಲ್ಲ. ಅವಳಿಗೆ ಇಂದಿರೆಯ ನಗೆಯನ್ನು ನೋಡಿ ತಳಮಳ, ಅಸೂಯೆ.

ಒಮ್ಮೊಮ್ಮೆ ಅವಳು ನಿಶ್ಚಿಂತೆಯಿಂದಿರುವಾಗ ಅಜಿತನ ಜೀವಕ್ಕೇನೂ ಕಷ್ಟವಿಲ್ಲ ಎಂದುಕೊಳ್ಳುವಳು. ಅವಳಿಗೂ ತಮ್ಮನಲ್ಲವೇ ? ನಾನೇನು ನಿನ್ನೆ ಮೊನ್ನೆ ಬಂದವಳು! ಎಂದು ಭಾವಿಸಿದಾಗ ಅದೇಕೋ ಅವಳ ಮುಖದಲ್ಲಿಯೂ ಮುಗುಳೊಡೆಯುವದು; ಆದರದು ಬೇರುವರಿದ ಬಳ್ಳಿಯಲ್ಲಿಯ ಮಲ್ಲಿಗೆಯಂತೆ.

ಕೊನೆಗೂ ನಾಲ್ಕು ದಿನ ಯೋಚಿಸಿ ಊರಿಗೆ ಕಾಗದ ಬರೆದ ಸುಧೀರ.

ಉರಿಯುತ್ತಿರುವ ಗೌಡರ ಕೋಪಾಗ್ನಿಗೆ ಬೇರೆ ಸೌದೆ ಬೇಕಾಗಿರಲಿಲ್ಲ. ಕಾಗದ ಓದಿ ಒಂದು ಕ್ಷಣ ದಿಮ್ಮೆಂದು ಕುಳಿತರು. ಅವರು ಅಜಿತನ ಹುಟ್ಟುಗುಣವನ್ನು ಬಲ್ಲವರು. ಮೊದಲಿನಿಂದಲೂ ಅದಕ್ಕೆ ವಿರೋಧಿಗಳು. ಇತ್ತೀಚೆ ತಮ್ಮ ಊರಲ್ಲೆಲ್ಲ ನಡೆದ ಚಳವಳಿಯನ್ನು ನೋಡುತ್ತಿದ್ದರು. ರಿಪೋರ್ಟು ಮಾಡಿ ತಡೆಯಲು ಯತ್ನಿಸುತ್ತಿದ್ದರು. ಅಜಿತನಿಂದ ತಮ್ಮ ಮೇಲೆ ಬರಬಹುದಾದ ಸಂಕಟಪರಂಪರೆಗಳನ್ನೆಲ್ಲ ಬಲ್ಲ ಅವರಿಗೆ ಈ ಕಾಗದ ಎಂಥ ಕಿಚ್ಚನ್ನಿಡಲಾರದು ಅವರ ಮನಸ್ಸಿಗೆ ? ' ಇವನು ತಮ್ಮನ ಮಗ—ತಂದೆಯಿಲ್ಲದ ಪರದೇಶಿಯೆಂದು ನಾನು ಮಾಡಹೋದರೆ ಅವನಿಗೇ ಬುದ್ಧಿ ಬಾರದು. ನಾನೇನು ಮಾಡುವವನು, ದೇವರೇ ಅವನ ಹಣೆಯಲ್ಲಿ ಸುಖ ಬರೆಯದಿದ್ದರೆ? ಮದಿವೆ ಮಾಡಿದೆ, ಇನ್ನೇನು ಮನೆ ಹಿಡಿದುಕೊಂಡಿರಬಹುದೆಂದರೆ ಹೇಳದೆ ಕೇಳದೆ ಹೆಂಡತಿಯ ಬೆನ್ನುಹತ್ತಿ ಮುಂಬಯಿಗೆ ಹೋದ. ಹೀಗಾದ. ಗಾಯಗೊಂಡವ ಹಾಗೆಯೇ ಹೋಗಿದ್ದರೇನೇ ಒಳಿತಾಗುತ್ತಿತ್ತು!' ತೀರ ಕೊನೆಯ ವಿಚಾರವಿದು. ನಿಜವೇ ಅವರ ಸುತ್ತಲಿನ ಪರಿಸ್ಥಿತಿಯೂ ಬೇರೆ ಇತ್ಯರ್ಥಕ್ಕೆ ಅಲ್ಲಿ ಸುಳಿಯಗೊಡುತ್ತಿರಲಿಲ್ಲ.

ಇತ್ತ ಅಜಿತ ಆಸ್ಪತ್ರೆಯಿಂದ ಜೇಲಿಗೆ ಸಾಗಿಸಲ್ಪಟ್ಟ. ಅಲ್ಲಿ ಅನೇಕ ದೇಶಭಕ್ತರ ಗುರುತಾಯಿತು. ಎಲ್ಲರೂ ಕೂಡಿ ರಾಟಿಯನ್ನು ತಿರುವಿದರು. ರಾಟಿಯನ್ನೇ ತಿರುವಿ ಸ್ವರಾಜ್ಯ ತರುವೆವೆಂದು ಹಾರಾಡಿದರು. ನಾನಾ ಊರಿನವರು, ಕಲಿತವರು, ಅನೇಕ ವಿಚಾರಗಳು ಹೊರಟವು. ಅಜಿತನಿಗೆ ಅಲ್ಲಿಯೂ ಒಬ್ಬ ತರುಣ ಗೆಳೆಯ ದೊರಕಿದ. ಅವನ ಮುಂದೆ ಇವನು ತನ್ನ ವಿಚಾರಗಳನ್ನೆಲ್ಲ ಹೇಳಿದ. ತನ್ನ ಅಭ್ಯಾಸಮಂಡಲದ ಗುರಿನೆರೆಗಳ

ನ್ನೆಲ್ಲ ಹುಮ್ಮಸ್ಸಿನಿಂದ ತೋರಿದ. ಅದನ್ನೆಲ್ಲ ಕೇಳಿಕೊಂಡ ಆತ.

ಅನೇಕ ಮಾತುಗಳನ್ನಾಡಿ ಅಜಿತನನ್ನು ಒರೆಗೆ ಹಚ್ಚಿದ. ಶುದ್ಧ ಅಪರಂಜಿಯೆಂದು ಗೊತ್ತಾಯಿತು. ಅವನಿಗೊಂದು ಕೆಲಸವಾಗಬೇಕಿತ್ತು. ಅದಕ್ಕೆ ಇಂಥ ಹುರುಪಿನ ತರುಣರೇ ಬೇಕಾಗಿದ್ದರು. ೧೯೩೫ನೆಯ ಇಸ್ವಿಯಲ್ಲಾದ ವಿಜಗಾಪಟ್ಟಣದ ಬಂಡಿನಲ್ಲಿ ಸೇರಿದ ಒಬ್ಬ ತರುಣ ಅವನ ಗೆಳೆಯನಾಗಿದ್ದ. ಅಂದಿನಿಂದ ಅವನು ತಲೆಮರೆಯಿಸಿಕೊಂಡೇ ತಿರಗುತ್ತಿದ್ದ. ಅವನ ಮೇಲೆ ಸರಕಾರವು ಹೊರಿಸಿದ ಆರೋಪಗಳನ್ನೆಲ್ಲ ನೋಡಿದರೆ ಅವನಿಗೆ ಗಲ್ಲೇ ಆಗುವುದು. ಆತ ರಶಿಯಕ್ಕೆ ಹೋಗಬೇಕೆನ್ನುವ. ಸುಳ್ಳು ಪಾಸಪೋರ್ಟಿನ ರಚನೆಯಾಗುವ ವರೆಗೆ ಎಲ್ಲಿಯಾದರೂ ಇರಬೇಕಾಗಿದೆ. ಮುಂಬಯಿಯಲ್ಲಿ ಇರಲು ಸಾಧ್ಯವಿಲ್ಲ. ಇಲ್ಲಿಂದ ಪರದೇಶಕ್ಕೆ ಹೋಗಲೂ ಶಕ್ಯವಿಲ್ಲ. ಗೋವೆಯ ಮಾರ್ಗವಾಗಿ ಕಳಿಸಬೇಕು ಇಲ್ಲಿ ಗೋಡೆ ಕಂಬಗಳೂ ಸಿ. ಆಯ್. ಡಿ. ಕೆಲಸ ಮಾಡುತ್ತಿವೆ. ಅಜಿತನ ಊರು, ಸಿದ್ದಾಪುರದತ್ತ ಇಂಥ ಗೊಂದಲ ಕಡಿಮೆ, ಅಲ್ಲಿಂದ ಗೋವೆಯೂ ಸಮೀಪ. ಎಂಬೆಲ್ಲ ಸಂಗತಿಗಳು ಅಜಿತನಿಗೆ ಅವನಿಂದ ತಿಳಿದುವು.

ಅಜಿತ ಎಲ್ಲವನ್ನೂ ಕೇಳಿಕೊಂಡು ಸುಮ್ಮನಾದ. ಒಂದೆರಡು ದಿನ ವಿಚಾರಿಸಿದ. ತರುಣರ ಮನಸ್ಸು, ತಮ್ಮ ಕಲ್ಪನೆಯಂತೆ ಎಲ್ಲ ನಡೆಯುವದೆಂದು ವಿಚಾರಿಸುವುದು. ತನ್ನ ಅಭ್ಯಾಸಮಂಡಲದಲ್ಲಿ ಶೀತಲನಿಂದ ಆಗದ ಕಾರ್ಯವು ಇವನಿಂದೇಕೆ ಆಗಬಾರದು? ಆ ಮಂಡಲ ಕಟ್ಟುವದಕ್ಕಾಗಿ ತಾನು ಪಟ್ಟ ಶ್ರಮವು ವ್ಯರ್ಥವಾಗುವುದೇ? ಬಂಧನದಲ್ಲಿರುವಾಗಲೇ ಭಾರತದ ಬಂಧಮುಕ್ತತೆಗೊಂದು ಉಪಾಯ ಸೂಚಿಸುವುದೆಂದರೆ ಇದೊಂದು ಶುಭಲಕ್ಷಣವೇ, ಯಶದ ಮುನ್ಸೂಚನೆಯೇ ಎಂದುಕೊಂಡ.

ಕೊನೆಗೆ ತನ್ನ ಹೆಸರು ವಿಳಾಸಗಳನ್ನೆಲ್ಲ ಅವನಿಗೆ ಕೊಟ್ಟ. ಈ ಕಾರ್ಯಕ್ಕೆ ನೆರವಾಗುವೆನೆಂದು ಹೇಳಿದ. ತಮ್ಮಲ್ಲಿ ತೋಟಪಟ್ಟಿ ಬೇಕಾದಷ್ಟಿದೆ. ಅಲ್ಲಿ ಅಡಗಿ ಇರಬಹುದೆಂದೂ ಸೂಚಿಸಿ, ಇದ್ದ ಅನುಕೂಲತೆಗಳನ್ನೆಲ್ಲ ವಿವರಿಸಿದ. ಆವೇಶದಲ್ಲಿ ಕಕ್ಕನ ಇರುವು, ಅನುವು ಆಪತ್ತುಗಳ ಕಲ್ಪನೆಯೇ ಅವನ ತಲೆಯಲ್ಲಿ ಸೇರಲಿಲ್ಲ.

ತರುಣರ ಸಮುದಾಯಕ್ಕೆ ಅಭಿಮಾನ ಆವೇಶಗಳೇ ಕೈದೀವಿಗೆಗಳು. ಮಾತೇ ವಿವೇಚನೆ. ಹೀಗಿರುವಾಗ ಆ ವಾತಾವರಣದಲ್ಲಿ ಅಜಿತನ ಬುದ್ಧಿಯಲ್ಲಿ ರಾಜಕೀಯ ವಿಚಾರದಲ್ಲಿ ಒಂದು ಗೊತ್ತುಗುರಿ ಬರುವುದುಂಟೇ? ಮನೆ ಮಡದಿ ನೆನಪಾಗುವುದುಂಟೆ ?

ಜೇಲಿನಲ್ಲಿರುವಾಗ ಅಜಿತನನ್ನೊಬ್ಬನನ್ನೇ ಪೋಲೀಸರು ಬೇರೆ ಕಡೆಗೆ ಒಯ್ದು ಅವನ ಭಾವಚಿತ್ರ ತಕ್ಕೊಂಡರು. ಅದೇಕೊ ಅವನಿಗೆ ಮೊದಲು ಗೊತ್ತಾಗಲಿಲ್ಲ. ವರ್ತಮಾನ ಪತ್ರಿಕೆಗಳಲ್ಲಿ ಕೊಡುವರೆಂದೆನೋ ಕಲ್ಪಿಸಿ, ಒಂದು ಕ್ಷಣ ದೊಡ್ಡ ಮನುಷ್ಯನಾಗಬೇಕೆಂಬ ಬಯಕೆಯು ಚೇತರಿಸಿ, ಉಬ್ಬಿದ. ನೆಟ್ಟಗೆ ನಿಂತ. ಕ್ರಾಂತಿಕಾರನಂತೆ ಮುಖ ತೋರಲೆಂದು ಹವಣಿಸಿದ. ಆದರೆ ಅವನಿಗೆ ಹಿಂದಿನಿಂದ ತಿಳಿಯಿತು ಆ ಗೆಳೆಯನಿಂದ "ಪೋಲೀಸರ ಗುಪ್ತ ಲಿಸ್ಟಿನಲ್ಲಿ ನಿನ್ನ ಹೆಸರು ಮೊದಲಿನಿಂದಲೂ ಇರಬೇಕು. ನಿನ್ನ ಚಟುವಟಿಕೆಗಳ ಮೇಲೆಲ್ಲ ಅವರ ಕಣ್ಣಿರುವುದು. ನೀನೆಲ್ಲಿ ಹೋದರೂ ಅವರ ಈ ಲಕ್ಷ್ಯ ತಪ್ಪದು. ಎಚ್ಚರದಿಂದ ಇರು. ಈ ಉಳಿದ ಸತ್ಯಾಗ್ರಹಿಗಳಂತೆ ನಿನ್ನ ಸ್ಥಿತಿಯಿಲ್ಲ" ಎಂದು ಸೂಚಿಸಿದ. ಹಾಗೆಯೇ ಮನದಲ್ಲಿ ತನ್ನ ಕಾರ್ಯಕ್ಕೆ ಈತನ ನೆರವು ಪಡೆಯುವದು ಸರಿಯೋ ಅಲ್ಲವೋ ಎಂಬುದನ್ನೂ ಅನುಮಾನಿಸಿದ, ವಿಚಾರಿಸಿದ. ಕೊನೆಗೆ ಮುಂಬಯಿ ಪೋಲೀಸರ ಗುಪ್ತ ಲಿಸ್ಟಿನಲ್ಲಿ ಹೆಸರು ಸೇರಬೇಕಾದರೆ ಅಜಿತನೇನು ಎಲ್ಲರ ಪಂಕ್ತಿಯೊಳಗಿನವನಲ್ಲ. ಇಂಥವನನ್ನು ಬಿಟ್ಟು ಅನ್ಯರನ್ನು ಅರಸುತ್ತ ಹೋಗುವುದು ಒಳಿತಲ್ಲವೆಂದು ನೆನೆದು ಮೊದಲಿನ ನಿರ್ಧಾರಕ್ಕೆ ಅಂಟಿಕೊಂಡ.

ಕೆಲ ದಿನಗಳಲ್ಲಿ ಜೇಲಿನಿಂದ ಹೊರಬಿದ್ದ ಅಜಿತ. ಜೇಲಿಗೆ ಹಾಕಿದವರೇ ಬಿಟ್ಟುಬಿಟ್ಟಿದ್ದರು. ಗಾಂಧಿ ಅಯರ್ವಿನ್ನರ ಸಂಧಾನದ ಫಲಿತಾಂಶವಾಗಿ ಉಪ್ಪಿನ ಸ್ವಾತಂತ್ರ್ಯ ದೊರಕಿತು. ಸೆರೆಮನೆಗಳೆಲ್ಲ ತೆರವಾದುವು. ಹೊರಬೀಳುವಾಗ ಹೊಸ ಗೆಳೆಯನಿಗೆ ತಾನು ಊರಿಗೆ ಹೊರಡುವ ಗಾಡಿಯನ್ನೂ ಹೇಳಿದ. ಅವನೂ ಪುಣೆಯ ಸ್ಟೇಶನದಲ್ಲಿ ಕೂಡುವೆನೆಂದು ಸೂಚಿಸಿದ. ಹುಮ್ಮಸ್ಸಿನಿಂದ "ಹೋ!" ಎಂದು ಬಂದ.

ಅಜಿತ ಮನೆಗೆ ಬರುವಾಗ ಒಂದು ಹೊಣೆ ಹೊತ್ತುಕೊಂಡೇ

ಬಂದಿದ್ದ. ಆದರೆ ಅದನ್ನು ಯಾರಿಗೂ ಹೇಳುವಂತಿರಲಿಲ್ಲ. ಗುಣವಂತಿಗೆ ಪತಿಯು ಮನೆಗೆ ಬಂದುದಕ್ಕೆ ಬಹಳ ಆನಂದವಾಯಿತು. ಊರಿಗೆ ಹೊರಡುವುದಕ್ಕೆ ಆತುರಗೊಂಡಿದ್ದಳು. ಮನೆಯೊಳಗೆ ಅತ್ತೆ ಮಾವಂದಿರು ಏನೆಂದಾರೆಂದು ನೆನೆಸಿ ಹೃದಯ ನಡಗುವದು, ಹಿಂಜರಿಯುವದು. ಆದರೂ ಒಮ್ಮೆ ಹಳ್ಳಿಯನ್ನು ಸೇರಬೇಕು. ಏನಂದದ್ದನ್ನಲಿ, ಅನ್ನಿಸಿ ಕೊಳ್ಳುವುದು ಬೇಕು. ಆದರೆ ಈ ಸಂಕಟ ಬೇಡ ಎಂದುಕೊಂಡಿದ್ದಳು. ಇಂದಿರೆ ಸುಧೀರರೂ ಆದಷ್ಟು ಬೇಗನೆ ಕಳಿಸಿಕೊಟ್ಟರೇನೇ ಒಳಿತು ಎಂಬ ಯೋಚನೆಯಲ್ಲಿಯೆ ಇದ್ದರು. ಈಗ ಸತ್ಯಾಗ್ರಹಿಯ ಸಂಬಂಧಿಕನೆನಿಸಿ ಕೊಳ್ಳಲು ಅವನಿಗೆ ಬೇಕಾಗಿರಲಿಲ್ಲ. ಸ್ವಲ್ಪ ದಿನ ಸುಖವಾಗಿ ಇದ್ದ ಸಂಸಾರವನ್ನು ಶಿಸ್ತುಗೊಳಿಸಿಕೊಳ್ಳಬೇಕು, ಎಂದವನ ಯೋಚನೆ. ಅಲ್ಲದೆ ಅವನ ರಾಜಕೀಯ ವಿಚಾರಗಳೂ ಬೇರೆಯಿದ್ದುವು.

ಅಜಿತ ತಾನಾಗಿಯೇ ಹೇಳಿದ. "ನಾಡದು ಮುಂಜಾನೆಯ ಗಾಡಿಗೆ ನಾವು ಊರಿಗೆ ಹೊರಡುವೆವು" ಎಂದು.

ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಅದನ್ನೇ ಎಂದಹಾಗಾಯಿತು ಇಂದಿರೆಯ ಸ್ಥಿತಿ. ಏನಾದರೂ ಆಗಲಿ ತಮ್ಮ ಸುಖ ರೂಪವಾಗಿ ತಮ್ಮೂರಿಗೆ ಹೋಗಿ ತಲುಪಲಿ ಎಂದೇ ಅವಳ ಬಯಕೆ. ಗುಣವಂತಿಯ ಮುಖದಲ್ಲಿ ಚಿಂತೆಯಾವರಿಸಿತು. ಅದರಲ್ಲಿ ಇನ್ನು ಊರಿಗೆ ಹೋಗಿ ಅತ್ತೆ-ಮಾವಂದಿರಿಗೆ ಇಂಥ ಮುಖ ತೋರಿಸಬೇಕಾಯಿತಲ್ಲ! ಎಂಬ ಹೆದರಿಕೆಯ ಚಿನ್ಹಗಳು ಒಡಮೂಡಿದ್ದುವು. ಇದೊಂದು ದೊಡ್ಡ ಅಪರಾಧ ಅವಳ ಬುದ್ಧಿಗೆ. ಆದರೆ ತನ್ನ ಪತಿಯು ಇದಾವುದರ ವಿಚಾರ ವೆತ್ತದೆ ಸ್ವಸ್ಥವಾಗಿರುವದನ್ನು ಕಂಡು ಆಶ್ಚರ್ಯವೂ ಆಗುವದು. ಒಮ್ಮೊಮ್ಮೆ ರೇಗುವಳು ಕೂಡ. ಮತ್ತೊಮ್ಮೆ "ನನಗೇಕೆ ಚಿಂತೆ ಅವರಿದ್ದಾರಲ್ಲ!" ಎಂದುಕೊಂಡು ಸಮಾಧಾನ ಹೊಂದಲು ಯತ್ನಿಸುವಳು

ಆ ದಿನ ಮುಂಜಾನೆ ಸುಧೀರ ನಿಲ್ದಾಣದ ವರೆಗೂ ಹೋಗಿ ಅಜಿತ ನನ್ನು ಗಾಡಿಯಲ್ಲಿ ಹತ್ತಿಸಿಯೇ ಬಿಟ್ಟ. ಅಜಿತ ನಿಲ್ಮನೆಯ ವರೆಗೆ ಹೋಗುವ ತನಕವೂ ಗಾಡಿ ಹತ್ತುವಾಗಲೂ ಯಾವದೋ ಒಂದು ವಿಚಾರ ದಲ್ಲಿ ಮಗ್ನನಾಗಿಯೇ ಇದ್ದ. ಹೆಚ್ಚಿಗೆ ಮಾತನಾಡಲಿಲ್ಲ. 'ಬೇಗ ಕಳಿಸಿ

ಕೊಡುತ್ತಿರುವುದಕ್ಕೆ ಹೀಗೆ ಬಿಗುಹಿನಿಂದಿರಬೇಕು ಅಜಿತ' ಎಂದು ಸುಧೀರ ಭಾವಿಸಿದ ಅವರವರ ಮನಸ್ಸಿನಂತೆ ಅವರವರ ವಿಚಾರ.

ಗಾಡಿ ಪೂನಾ ಸ್ಟೇಶನದಲ್ಲಿ ಹೊಕ್ಕಿತು. ಹೊರಗೆ ಉತ್ಸುಕತೆಯಿಂದ ಅಜಿತ ನಿರೀಕ್ಷಿಸಿದ. ಎದುರಿಗೆ, ನಾಲ್ಕಾರು ಜನ ಪೋಲೀಸರು, ಯಾವನೋ ಒಬ್ಬನನ್ನು ಹಗ್ಗದಿಂದ ಬಿಗಿದು ಒಯ್ಯುವದನ್ನು ಕಂಡ. ಎದೆ ಅಳುಕಿತು. ಆಗಲೇ ಗುಣವಂತಿ ಕೇಳಿದುದು.

" ಇಲ್ಲಿ ಗಾಡಿ ಬದಲಿಸಬೇಕಲ್ಲ ? "

" ಅಹುದು. " ಎಂದು ಅಜಿತ ಬ್ಯಾಗಿಗೆ ಕೈ ಹಾಕಿ ಕೆಳಗಿಳಿದ.

ಗುಣವಂತಿಗೆ ಅನ್ನಿಸಿತು, ' ಇದೂ ಅವರಿಗೆ ಗೊತ್ತಿರಲಿಲ್ಲವೊ ! ' ಎಂದು ಬೆರಗುಪಟ್ಟ ಮುದ್ರೆಯಿಂದ ಕೆಳಗಿಳಿದಳು. ಅಜಿತ ಪತ್ನಿಯೊಡನೆ ಮದ್ರಾಸ ಸದರ್ನ ಮರಾಠಾ ಗಾಡಿಯನ್ನು ಹತ್ತಿದ. ಆದರೂ ಅವನ ಲಕ್ಷ್ಯವೆಲ್ಲ ಹೊರಗೆ ಪ್ಲಾಟಫಾರ್ಮಿನ ಮೇಲೆಯೇ ಯಾರದೋ ಬರುವ ದಾರಿಯನ್ನು ಆತುರದಿಂದ ನಿರೀಕ್ಷಿಸುವಂತಿತ್ತು, ಅವನ ಮುಖಭಾವ. ಮೇಲಿಂದ ಮೇಲೆ ಎದ್ದು ಕಿಡಕಿಯಲ್ಲಿ ಹಣಿಕಿಕ್ಕುವ. ಅವನ ನಡತೆಯು ಸಹನವಾಗದೆ ಗುಣವಂತಿಯು ಸಿಡುಕಿನಿಂದ ಅಂದಳು :

" ಸುಮ್ಮನೇ ಕೂಡಿರಲ್ಲ ! "

" ಹೂಂ ! ಎಂದನಿಷ್ಟೇ ಅಜಿತ.

ಗಾಡಿ ಕೂಗಿತು. ಮೂರನೆಯ ಗಂಟೆಯೂ ಆಯಿತು. ಇನ್ನೇನು ಗಾಡಿ ಹೊರಡುವುದು. ನಿರಾಶೆಯಿಂದ ಅಜಿತ ಒಳಗೆ ಸ್ಥಳ ಹಿಡಿದು ಕೂಡುವುದರಲ್ಲಿದ್ದ. ಅಷ್ಟರಲ್ಲಿ ಯಾರೋ ಅವನ ಕೈಗೆ 'ಟಾಯಿಮ್ಸ' ಪತ್ರಿಕೆಯನ್ನು ಕೊಡುತ್ತ,—

" ಇಂಟರಿನಲ್ಲಿದ್ದಾರೆ, ಕೈಯಲ್ಲಿ ಪತ್ರಿಕೆಯಿದೆ! " ಎಂದು ಹೇಳಿ ಹೋದರು.

ಪತ್ರಿಕೆಯನ್ನು ತಕ್ಕೊಂಡ ಅಜಿತ. ಗಾಡಿ ಹೊರಟಿತು ಗುಣವಂತಿಯ ಮುಗ್ಗುಲಲ್ಲಿ ಬಂದು ಕುಳಿತ ಸಮಾಧಾನದಿಂದ ಆಗ. ' ಇವನ ಸಂಪರ್ಕವೂ ಇಷ್ಟು ಗುಪ್ತವಾಗಿರತಕ್ಕುದೇ ? ' ಎಂದು ಯೋಚಿಸುತ್ತ ಪತ್ರಿಕೆಯನ್ನು ತೆರೆದ.

" Arrest of the rebellers of Vijagapattan ! "

ಈ ತಲೆಬರಹವನ್ನು ನೋಡಿಯೇ ಅಜಿತನ ಎದೆ ಝಲ್ಲೆಂದಿತು. ಅದೇಕೋ ಕೈಯಲ್ಲಿಯ ಪತ್ರಿಕೆಯನ್ನು ಗಟ್ಟಿಯಾಗಿ ಹಿಡಿದ. ಮೈಯೆಲ್ಲ ಝುರ್ರೆಂದು ಬೆವೆತಿತು. ಹಾಗೆಯೇ ಕೆಳಗೆ ಕಣ್ಣಾಡಿಸತೊಡಗಿದ. ಅಲ್ಲಿ ಬರೆದುದರ ಭಾವವಿಷ್ಟು:

" ಗೋದಾವರಿ ಹಾಗೂ ವಿಜಗಾಪಟ್ಟಣ ಈ ಜಿಲ್ಹೆಗಳಲ್ಲಿ ರಾಜು ಎಂಬವನ ನೇತೃತ್ವದಲ್ಲಿ ಎದ್ದ ಬಂಡಿನೊಳಗಿನ ಇಬ್ಬರ ಬಂಧನ! ಅವ ರಿಗೆ ಆಶ್ರಯ ಕೊಟ್ಟ ಒಬ್ಬನಿಗೆ ಆರು ವರ್ಷ ಸಶ್ರಮ ಶಿಕ್ಷೆ ! "

## ೨೨

ಉಗಿಬಂಡಿಯ ನಿಲ್ದಾಣ ತೀರ ಸಣ್ಣದಿತ್ತು. ಅಜಿತ ಹಾಗೂ ಅವನ ಹೆಂಡತಿಯ ಹತ್ತರ ಅಷ್ಟೇನೂ ಸಾಮಾನು ಇರಲಿಲ್ಲ. ಆ ನಿಲ್ಮನೆಯಲ್ಲಿ ಇಳಿಯುವ ಪ್ರಯಾಣಿಕರೂ ಕಡಿಮೆಯೇ. ಬಾಗಿಲಿನಲ್ಲಿ ನಿಂತು ತಿಕೀಟು ತಕ್ಕೊಳ್ಳುವ ಮಾಸ್ತರ ಹಾಗೂ ಕಂದೀಲು ತೋರಿಸುವ ಪೋರ್ಟರ ಇಬ್ಬರೂ ನಿದ್ರೆಯಲ್ಲಿ ತೂಕಡಿಸುತ್ತಿದ್ದರು. ಒಬ್ಬ ಸಿಪಾಯಿ ಬಾಕಿನ ಮೇಲೆ ಮಲಗಿದ್ದ. ಇಂಥ ಕತ್ತಲೆಯಲ್ಲಿಯೆ ಇಬ್ಬರು ಮೂವರು—ಗುರು ತಿನ ಜನರು—ಅಜಿತನಿಗೆ ನಮಸ್ಕಾರ ಮಾಡಿದರು. ಗೌಡರ ಮನೆಯವ ನಲ್ಲವೇ ಅವನು ?

ಜೊತೆಗೆ ರಾಜಮಣಿಯೂ ಇಳಿದ. ಇಂಥ ಚಿಕ್ಕ ನಿಲ್ದಾಣದಲ್ಲಿ— ಈ ಅವೇಳೆಯಲ್ಲಿ—ಆ ಸೂಟಿನ ಮನುಷ್ಯ ಇಳಿದುದನ್ನು ನೋಡಿ, ತಿಕೀಟ ಮಾಸ್ತರನು ತಿಕೀಟನ್ನು ತಿರುವಿ ಮುರುವಿ ನೋಡಿದ. ಆಮೇಲೆ ಅವನ ಮುಖವನ್ನೊಮ್ಮೆ ನಿರೀಕ್ಷಿಸಿ ಹಿಂದಿನವರ ತಿಕೀಟಿಗೆ ಕೈ ಚಾಚಿದ. ಗೇಟಿನ ಹೊರಗೆ ಬಂದರು. ಅಪರಾತ್ರಿ. ಊರು ಅಲ್ಲಿಂದ ಎರಡು ಮೈಲು. ಸಂಗಡ ಗುಣವಂತಿ ಬೇರೆ ಇದ್ದಾಳೆ. ಮನೆ ಸೇರಲೇಬೇಕು. ಜೊತೆಯಲ್ಲಿ ರಾಜ ಮಣಿಯೊಬ್ಬ. ಕಕ್ಕ ಏನನ್ನುವನೋ ? ಎಂಬ ವಿಚಾರಗಳೆಲ್ಲ ಈಗ ಅಜಿತನ ತಲೆಯಲ್ಲಿ ಕುಣಿಯತೊಡಗಿದುವು. ಸ್ವಲ್ಪ ಹೊತ್ತು ತಣ್ಣಗೆ ನಿಂತ.

“ ಏಕೆ ನಿಂತಿರಿ ? ಗಾಡಿ ಸಿಗುವುದಿಲ್ಲವೆ ? ” ಎಂದ ರಾಜಮಣಿ ನಗುತ್ತ. ದನಿಯಲ್ಲಿ ಒಂದು ತರದ ಸವಿಯಿತ್ತು, ಆಕರ್ಷಕತೆ ಇತ್ತು.

“ ಇಂಥ ಸಂಕಟದಲ್ಲಿದ್ದವನೂ ನಗುತ್ತಿರುವನಲ್ಲ ! ” ಎಂದು ಮನದಲ್ಲಿಯೇ ಅಂದುಕೊಂಡ, ಅಜಿತ. ಅದರಿಂದ ಅವನ ಮನಸ್ಸೂ ಸ್ವಲ್ಪ ಹಗುರಾಯಿತೇನೋ !

“ ಗಾಡಿ ಸಿಕ್ಕುವವು; ತರುವೆ. ಮುಂಚಿತ ಮನೆಗೆ ಕಾಗದ ಬರೆಯಲಿಲ್ಲ. ” ಎಂದು ಬಂಡಿ ಹುಡುಕಲು ಹೊರಟ. ಗುಣವಂತಿಯೂ ಬೆನ್ನಟ್ಟಿದಳು ಅವಳಿಗೆ ಈ ರಾಜಮಣಿಯು ಪರಿಚಯವಿಲ್ಲ. ನಾಲ್ಕು ಹೆಜ್ಜೆ ಹೋದ ಮೇಲೆ ಬೆರಗುಗಣ್ಣುಗಳಿಂದ ಪತಿಯ ಕಡೆಗೆ ನೋಡಿದಳು. ನಿಲ್ಮನೆಯ ಮಂದಪ್ರಕಾಶದಲ್ಲಿ “ ಇವರಾರು ? ” ಎಂಬ ಪ್ರಶ್ನೆಯನ್ನು ಅವು ಮಾಡುತ್ತಿದ್ದುವು.

ಅಜಿತ ಹೇಳಿದ: “ ಇವರು ನನ್ನ ಗೆಳೆಯರು. ರಾಜಮಣಿ ಅಂತ ಅವರ ಹೆಸರು. ನಮ್ಮ ಮನೆಗೆ ಬಂದಿದಾರೆ, ನಾಲ್ಕು ದಿನ ಇರಲೆಂದು ” ಎಂದು ಅವಳಿಗೆ ಅಲ್ಲಿಯೇ ನಿಲ್ಲಲು ಸೂಚಿಸಿ ಹೋದ.

ಮನೆ ಸೇರುವ ಹೊತ್ತಿಗೆ ರಾಜಮಣಿಯ ಪರಿಚಯ ಅಜಿತನಿಗೆ ಚೆನ್ನಾಗಿಯೇ ಆಯಿತು. ಆತ ಹುಟ್ಟಿದ್ದು ಬಡ ಕುಟುಂಬದಲ್ಲಿ. ಹೈಸ್ಕೂಲಿಗೆ ಹೋಗುವ ಹೊತ್ತಿಗೆ ಹೆತ್ತ ತಾಯಿಯನ್ನುಳಿದು ಎಲ್ಲರನ್ನೂ ಕಳೆದುಕೊಂಡಿದ್ದ. ತಾಯಿ ದುಡಿದು ಮಗನಿಗೆ ವಿದ್ಯಾಭ್ಯಾಸವನ್ನು ಮಾಡಿಸಬೇಕಿತ್ತು. ಮಗನು ಓದಿ ಯಾವದಾದರೊಂದು ದೊಡ್ಡ ಸಂಬಳದ ಕೆಲಸ ಹಿಡಿಯಬೇಕೆಂದು ಅವಳ ಆಶೆ. ಹುಡುಗ ಓದಿನಲ್ಲಿ ಬಹಳ ಜಾಣ ಎಂದೆನಿಸಿಕೊಂಡಿದ್ದ. ಆದರೆ ಆತ ಕಾಲೇಜಿನ ಕಟ್ಟೆಯನ್ನು ಹತ್ತಿ ಇನ್ನೂ ಎರಡು ವರ್ಷ ತುಂಬುವುದರಲ್ಲಿಯೇ ಯಾರದೋ ಸಂಗತಿಯಿಂದ ವಿಜಗಾಪಟ್ಟಣದ ಬಂಡಿನವರ ಕಡೆಗೆ ಮನಸ್ಸು ಹಾಕಿದ.

ಕಾಲೇಜಿನ ವಿದ್ಯಾರ್ಥಿಗಳಲ್ಲಿ ಯಾವ ಚಟುವಟಿಕೆಗಳಿಗಾದರೂ ಆತನೇ ಮುಂದಾಳಾಗುತ್ತಿದ್ದ. ದೇಶಕ್ಕಾಗಿ ಯುದ್ಧ ಹೂಡುವುದರಲ್ಲಿಯೂ ನಾಡಗುಡಿ ಹಿಡಿದು ಮುಂದಾಗಿ ನಡೆದ. ಅವನು ಇಂದಿಗೂ ಹೇಳು

ತ್ರಿದ್ದ: “ಸೋತರೆ ಬಂಡುಗಾರರು! ಗೆದ್ದರೆ ಸ್ವರಾಜ್ಯ ಸಂಸ್ಥಾಪಕರು!” ಯಾವದಾದರೂ ಒಂದು ಪಾಲಿಗೆ ಬಂದೇ ಬರತಕ್ಕದು. ಅದಕ್ಕೆ ಯೋಚಿಸುವಂತಿಲ್ಲ. ಈಗ ತಲೆತಪ್ಪಿಸಿಕೊಂಡು ತಿರುಗಬೇಕಾದಂದಿನಿಂದ ಅನೇಕ ಪ್ರಾಂತಗಳನ್ನು ಸುತ್ತಿದ್ದಾನೆ. ತುಂಬ ಓದಿದ್ದಾನೆ. ಇಂಗ್ಲೀಷು ಚನ್ನಾಗಿ ಮಾತಾಡಬಲ್ಲ. ಹಿಂದಿಯಲ್ಲಿ ಬರೆಯಲೂ ಶಕ್ತ.

ರಾಷ್ಟ್ರಸೇವೆಯಲ್ಲಿ ಅವನಿಗಿದ್ದ ಶ್ರದ್ಧೆ ಅಚಲವಾದುದು. ಅವನ ತಾಯಿಯೊಮ್ಮೆ ಬೇನೆ ಬಿದ್ದಿದ್ದಳು. ಇವನಿಗೆ ಹಿಂದಿರುಗಬೇಕೆಂದು ಕಾಗದದ ಮೇಲೆ ಕಾಗದಗಳು ಬರತೊಡಗಿದುವು. ಆ ಕಾಗದದೊಳಗಿನ ವಿಷಯ ಅವನಾರಿಗೂ ಹೇಳುತ್ತಿರಲಿಲ್ಲ. ಆಗ ಒಂದು ಸ್ಥಳದಲ್ಲಿ ಸರಕಾರದೊಡನೆ ನಿಕರದ ಕಾಳಗವೆಸಗಲಿಕ್ಕೆ ಅವನನ್ನೇ ಮುಖಂಡನನ್ನಾಗಿ ಮಾಡಿ ಕಳಿಸಲಾಯಿತು, ಅತ್ತ ಹೆತ್ತ ತಾಯಿ, ಇತ್ತ ರಾಷ್ಟ್ರಮಾತೆ

ರಾಜಮಣಿ ತುಂಬ ಮಾತುಗಾರ. ಅದರಲ್ಲೂ ಮಾತಿನಲ್ಲಿ ತೇಲಿ ತನ್ನ ಗುಟ್ಟನ್ನು ಬಯಲಿಗಿಡದ ವಚನಚತುರ. ಮಾತಿನಿಂದಲೇ ಎದುರಿಗಿನವರ ಹೃದಯವನ್ನೇ ಸೂರೆಗೊಳ್ಳುವ ಕಲೆಯು ಅವನಿಗೆ ಕರಗತವಾಗಿದೆ. ಆಗ ತಾಯಿಗೊಂದು ಕಾಗದ ಬರೆದ.

“ದೇವರು ನಿನ್ನನ್ನು ರಕ್ಷಿಸುತ್ತಾನೆ ನೀನು ಕಾಯಿಲೆಯಿಂದ ಬೇಗ ಗುಣಹೊಂದುವೆ. ನಾನು ನಾಳೆ ಸ್ವಾತಂತ್ರ್ಯ ಸೇನಾನಾಯಕನಾಗಿ ಹೊರಡಲು ವೀಳ್ಯೆ ಎತ್ತಿದ್ದೇನೆ. ಅದಕ್ಕೆ ವಂಚಿಸಿ ಹಿಂದಿರುಗುವುದು ಸರಿಯೇ? ನೀನು ಅದನ್ನು ಯಾವ ಕಾಲಕ್ಕೂ ಸಮ್ಮತಿಸುವದಿಲ್ಲ. ತಿರುಗಿದರೆ ನೀನು ನನಗೆ ಹೇಡಿಯೆನ್ನುವಿ. ನೀನು ವೀರಮಾತೆ, ಅಲ್ಲಿಂದಲೇ ನನ್ನನ್ನು ಹರಸು. ನಿನ್ನ ಆಶೀರ್ವಾದಬಲದಿಂದ ಜಯಶಾಲಿಯಾಗಿ ಬರುವೆ.” ಟಪಾಲಿನಿಂದ ಕಳಿಸಿಕೊಟ್ಟ.

ಅವರು ಮೂವರೂ ಮನೆ ಸೇರಿದಾಗ ರಾತ್ರಿ ಒಂದು ಗಂಟೆಯಾಗಿತ್ತು. ಅಜಿತ ಬಾಗಿಲು ತೆರೆಯಲು ಕೂಗಿದ. ಗೌಡರು ಎಚ್ಚರಾಗಿದ್ದರು. ಆದರೂ ಬಾಗಿಲ ತೆರೆಯಲು ಏಳಲಿಲ್ಲ. ಹಾಗೆಯೇ ಹಾಸಿಗೆಯಲ್ಲಿ ಅತ್ತೊಮ್ಮೆ ಇತ್ತೊಮ್ಮೆ ಹೊರಳಿದರು. “ಕುಲಕಂಟಕ ರಾತ್ರಿಯ

ಹೊತ್ತಿನಲ್ಲಿ ಬಂದಿದ್ದಾನೆ. ಹಗಲು ಊರಲ್ಲಿ ಬರಲಿಕ್ಕೆ ಮುಖವೆಲ್ಲಿ ಯದು ? ” ಎಂದು ಅಲ್ಲೆ ಗುಣುಗಿದರು. ಅಜಿತ ಎರಡು ಮೂರು ಸಲ ಕೂಗಿದ. ಅವನ ಕರೆಯು ಕತ್ತಲೆಯನ್ನು ಭೇದಿಸಿ ಪ್ರತಿಧ್ವನಿಸಿತು. ಒಳಗೆ ಕೊಟ್ಟಿಗೆಯೊಳಗಿನ ದನ ಎದ್ದು ಮೈ ಕೊಡಹಿಕೊಂಡು ಅಜಿತನ ಕೂಗಿಗೆ “ ಅಂಬಾ ! ” ಎಂದು ಒಗೊಟ್ಟಿತು. ಅಜಿತ ಸ್ವಲ್ಪ ತಡೆದ. ದನಗಳ ಸದ್ದಿಗಾದರೂ ಯಾರಾದರೂ ಎಚ್ಚತ್ತು ಬಾಗಿಲ ತೆರೆಯಬಹು ದೆಂದು. ಆದರೆ ಯಾರೂ ಬರಲಿಲ್ಲ. ಮತ್ತೆ ಕೂಗಿದ ಅಜಿತ.

“ ಭೀಮಾ ! ಭೀಮಾ ! ಏಯ್ ಭೀಮಾ ! ”

ಭೀಮ ಅವರ ಮನೆಯ ಆಳುಮನುಷ್ಯ. ಆತ ಕೊಟ್ಟಿಗೆಯಲ್ಲಿಯೇ ಮಲಗಿರುವವ. ಆ ದಿನ ಮಲಗಿರಲಿಲ್ಲ. ಕೂಗು ನಡುಮನೆಗೆ ಕೇಳಿಸಿರ ಬೇಕು. ಸರಸ್ವತಿಯು ಜಗ್ಗನೆ ಹಾಸಿಗೆಯಲ್ಲಿ ಎದ್ದು ಕುಳಿತಳು. ಮಗನ ದನಿ ಕೇಳಿದಂತಾಗಿರಬೇಕವಳಿಗೆ. ಅದೇನೋ ತನ್ನ ಮನಸ್ಸಿನ ಕಲ್ಪನೆ ಯಿರಬೇಕೆಂದೆನಿಸಿತು ಮೊದಲಿಗೆ. ‘ ಈಗೆಲ್ಲಿಂದ ಬರತಾನೆ. ಕಾಗದ ವಿಲ್ಲ ಪತ್ರವಿಲ್ಲ. ಹೆಂಡತಿಯನ್ನು ಕರಕೊಂಡು ರಾತ್ರಿಯ ಗಾಡಿಗೆ ಏಕೆ ಬರಲಿಕ್ಕೆ ಹೋದಾನು ? ’ ಎಂದುಕೊಂಡು ಕೊಂಚ ಕಾಲ ವಿಚಾರದಲ್ಲಿ ಕುಳಿತಳು. ಸುತ್ತಲೂ ಸದ್ದಿಲ್ಲದ ಶಾಂತಿ. ಎಲ್ಲಿಯದೋ ನನಗೇ ಭಾಸ ವಾಗಿದೆ ಎಂದುಕೊಂಡು ಹಾಸಿಗೆಯಲ್ಲಿ ಹೊರಳಿದಳು. ಅಷ್ಟರಲ್ಲಿ ಮತ್ತೆ “ ಭೀಮಾ ! ಭೀಮಾ ! ” ಎಂಬ ಕೂಗು ಕಿವಿಗೆ ಬಿತ್ತು. ಅಹುದು ಅಜಿತ ನದೇ ದನಿ ! ಎಂದು ಕೊಂಡು ಹರುಷದಿಂದಲೇ ನಡುಮನೆಯ ಬಾಗಿಲ ದಾಟಿ ತಲೆಬಾಗಿಲಿಗೆ ಬಂದಳು ನಾಲ್ಕೇ ಹೆಜ್ಜೆಗಳಲ್ಲಿ. ಬಾಗಿಲ ತೆರೆದಳು.

ಅಜಿತ ಎದುರಿಗೆ ನಿಂತಿದ್ದಾನೆ. ಹೊರಬದಿಗೆ ಬಾಗಿಲ ತೋಳಿಗೆ ಮುದುರಿಕೊಂಡು ಗುಣವಂತಿ ನಿಂತಿದ್ದಾಳೆ. ಎದುರಿಗಿನ ರಸ್ತೆಯ ಮೇಲೆ ಯಾವನೋ ಒಬ್ಬ ಸಾಹೇಬವೇಷದಲ್ಲಿ ಶತಪಥ ತಿರುಗುತ್ತಿದ್ದಾನೆ. ಹೊಸಬನನ್ನು ನೋಡಿ ಅವಾಕ್ಕಾದಳು ಸರಸ್ವತಿ. ಮಗ ಜೇಲಿಗೆ ಹೋದ ನೆಂಬ ಸುದ್ದಿಯನ್ನು ಕೇಳಿ ಹಲವು ಸಲ ಬೈಯ್ದಿದ್ದಳಾದರೂ ಅವನೇ ಎದುರಿಗೆ ಬಂದಾಗ ಅವಳ ಹೃದಯದ ಒಲವು ಮಳೆಗಾಲದ ನದಿಯಂತೆ ತುಂಬಿ ಬಂದಿದ್ದಿತು. ಮಗನನ್ನು ತಬ್ಬಿಕೊಂಡಿದ್ದಳು. ಹೊಸಬನೊಬ್ಬ

ಅಲ್ಲಿರುವನೆಂಬ ಅರಿವಿನ ಸಂಕೋಚವು ತಾಯ್ಗರುಳಿಗೆ ಸೋಂಕಲಿಲ್ಲ. ಆನಂದದ ಭರತಿ ಇಳಿದನಂತರ ಸಾವಕಾಶವಾಗಿ ಕೇಳಿದಳು:

"ಯಾರವರು?"

"ನನ್ನ ಗೆಳೆಯ."

ಮೆಲ್ಲನೆ ಎಲ್ಲರೂ ಒಳಗೆ ನಡೆದರು. ಅಜಿತ ತಿರುಗಿ ಬಾಗಿಲ ಹಾಕಿ ಚಿಲಕ ಜಡಿದ. ಚಿರ್‍ರೆಂದಿತು ಕದ. ಮಲಗಿದಲ್ಲಿಂದಲೇ ಗೊತ್ತಿದ್ದೂ ಗೌಡರು ಕೇಳಿದರು.

"ಯಾರು ಬಾಗಿಲ ತೆಗೆದವರು?"

ಅಜಿತ ಇನ್ನೂ ಹೊರಂಗಳದಲ್ಲಿದ್ದ. ಅತ್ತೆ ಸೊಸೆಯಂದಿರಿಬ್ಬರೂ ಸ್ತಂಭಿತರಾದರು. ಆ ಮಾತಿನೊಳಗಿನ ದರ್ಪವೇ ಅವರನ್ನು ತಣ್ಣಗೆ ಮಾಡಿದ್ದಿತು.

"ಅವರೇ ಬಂದಿರಬೇಕು. ಕತ್ತೆ ತಪ್ಪಿದರೆ ತಿರುಗಿ ಹಾಳಗೋಡೆಗೇ ಬರಬೇಕಲ್ಲ!" ಮಗ್ಗುಲಿನ ಕೋಣೆಯಿಂದ ಗಂಗವ್ವನೇ ಉತ್ತರ ಕೊಟ್ಟಳು. ಅರ್ಥ ತಿಳಿಯದಿದ್ದರೂ ಕೂಡ ರಾಜಮಣಿಯು 'ಸ್ತ್ರೀಯರ ಕೋಮಲ ಕಂಠದಲ್ಲಿಯೂ ಇಂಥ ಕಠೋರತೆ ಇರುವುದೇ?' ಎಂದುಕೊಂಡ ತನ್ನಲ್ಲಿಯೇ.

ಗೌಡ ತಲೆದಿಂಬಿನ ಲಾಟಿನು ಥಾಳಾಗಿ ಮಾಡಿದ. ಚಟ್ಟನೆ ಎದ್ದು ಕುಳಿತ. ಇನ್ನೇನು ಅಜಿತನನ್ನು ಗದರಿಸುವವ, ಓಣಿಯೊಳಗಿನ ಜನರೆಲ್ಲ ಎಚ್ಚರಾಗುವಂತೆ. ಆದರೆ ಅವನ ದೃಷ್ಟಿ ಆ ಆಗಂತುಕನ ಮೇಲೆ ಬಿದ್ದು, ಬಾಯಿಗೆ ಬೀಗ ಹಾಕಿತು. ಸೂಟಿನ ಸಾಹೇಬನನ್ನು ಕಂಡು ವ್ಯವಹಾರದ ಹಾದಿಗೆ ಇಳಿದು,—

"ರಾತ್ರಿಯ ಗಾಡಿಗೆ ಬಂದಿರಿ?" ಎಂದು ಬಿಗುಹಿನಿಂದಲೇ ಕೇಳಿದ.

"ಹೂಂ!" ಎಂದು ಅಜಿತ ತನ್ನ ಕೋಣೆಯ ಕದ ತೆರೆದ. ಸರಸ್ವತಿಯು ದೀವಿಗೆ ತಂದಿಟ್ಟಳು. ರಾಜಮಣಿಗೆ ಕೂಡಲು ಹೇಳಿದ. ಕುರ್ಚಿಯೊಂದನ್ನು ತೋರಿಸಿ ಅರಿವೆ ಬದಲಿಸಲು ಹೇಳಿ ಹೊರಗಿನ ಬ್ಯಾಗ ಒಯ್ದು ಅವನಿಗೆ ಕೊಟ್ಟ. ತಾನೂ ಅರಿವೆ ಕಳೆದ. ಅವನಿಗೆ

ಗೊತ್ತು, ರಾಜಮಣಿಗೆ ನಾನೊಂದು ಕಾರ್ಯದಲ್ಲಿ ನೆರವಾಗಬಯಸಿದರೆ ನನಗೇ ಅವನು ಕಕ್ಕನ ಬೈಗುಳಿನಿಂದ ಉಳಿಸಿಕೊಂಡು ಮೊದಲು ಸಹಾಯ ಮಾಡಿದನೆಂದು. ಇಬ್ಬರೂ ಸ್ವಲ್ಪ ಹೊತ್ತು ಕೋಣೆಯಲ್ಲಿ ಕುಳಿತರು. ಗುಣವಂತಿಯು ಅರಿವೆ ಬದಲಿಸಿ ನಡುಮನೆಯಲ್ಲಿಯೇ ಕುಳಿತಳು. ಕೋಣೆಯ ಕಡೆಗೆ ಊಟದ ವ್ಯವಸ್ಥೆಯನ್ನು ವಿಚಾರಿಸಲು ಯಾರೂ ಹಾಯಲಿಲ್ಲ. 'ಇದೂ ಏನು ಮುಂಬಯಿಯೇ, ಪತಿಯ ಊಟದ ವ್ಯವಸ್ಥೆಯನ್ನು ತಾನೇ ಕೇಳಲಿಕ್ಕೆ? ಅತ್ತೆ ಇದ್ದಾಳಲ್ಲ' ಎಂದು ಕೊಂಡಳೇನೋ ಗುಣವಂತಿ. ಅಹುದು, ಹೆಂಗಸರು ಬಹು ಬೇಗ ಸುತ್ತಲಿನ ಪರಿಸ್ಥಿತಿಗೆ ಹೊಂದಿಕೊಳ್ಳುವರು. ಹೊಂದಿಕೊಳ್ಳದಿದ್ದರೆ ಬದುಕೆಲ್ಲಿ ಅವರಿಗೆ?

ಕೆಲ ಕಾಲ ನಿರೀಕ್ಷಿಸಿದ ಅಜಿತ. ಯಾರೂ ಕೋಣೆಯೆಡೆಗೆ ಹಾಯು ವಂತೆ ತೋರಲಿಲ್ಲ. ಗೌಡರು ಹೊರಗೆ ದೀಪ ಸಣ್ಣದು ಮಾಡಿ ಮಲಗಿ ದರು. ಒಳಗೂ ಸದ್ದು ಕಾಣಿಸದು. ರಾವಸಾಹೇಬನಂತೂ ಕೋಣೆ ಯನ್ನು ಬಿಟ್ಟು ಹೊರಗೆ ಬರಲಿಲ್ಲ. ಅಜ್ಜಿಯೂ ನಿದ್ರೆಯಲ್ಲಿರಬೇಕು. ಮನೆ ಸ್ವಲ್ಪ ಹೊತ್ತಿನಲ್ಲಿ ಶಾಂತವಾಯಿತು. ರಾಜಮಣಿಯು ಜೇಬಿನೊಳ ಗಿನ ಸಿಗರೇಟಿನ ಪಾಕೀಟು ತೆಗೆದು ಅಜಿತನ ಮುಂದೆ ಹಿಡಿದ.

"ನಾನು ಸೇದುವದಿಲ್ಲ." ಎಂದು ಅಜಿತ ಒಳಗೆ ನಡೆದನು.

"ಅಜಿತ, ಅಪರಾತ್ರಿಯಲ್ಲಿ ಊಟ ಮೊದಲಾದುದೇನೂ ಬೇಡ. ಹಾಲು ಒಂದು ಕಪ್ಪು ಇದ್ದರೆ ಕುಡಿದು ಮಲಗಿ ಬಿಡೋಣ!" ಎಂದ ರಾಜಮಣಿ.

"ಅದು ಹೇಗೆ?"

"ನನಗೆ ಹಸಿವಿಲ್ಲ. ಗಾಡಿಯಲ್ಲಿ ತುಂಬ ಹಣ್ಣು ತಿಂದೆ."

"ನಿನಗಿಲ್ಲವಾದರೂ ನನಗೆ ಆಗಿದೆಯಲ್ಲ!"

ಎಂದು ಹೋದ ಅಜಿತ ನಡುಮನೆಗೆ. ತಾಯಿ ಹಾಸಿಗೆಯಲ್ಲಿ ಬಾಗಿ ಕುಳಿತಿದ್ದಾಳೆ ಸುಮ್ಮನೆ. ಹೆಂಡತಿ ಹಾಸಿಗೆ ಹಾಸಿಕೊಳ್ಳುತ್ತಿರುವಳು ಪರಕೀಯಳಂತೆ. ಪತಿಯು ಬಂದುದನ್ನು ಕಂಡು ಹಾಸುವುದನ್ನು ಅಷ್ಟಕ್ಕೇ ನಿಲ್ಲಿಸಿದಳು.

" ಅವ್ವಾ ! " ಎಂದ ಅಜಿತ.

" ಬಾಽಪ್ಪಾ ! " ಎಂದಳು ಸಪ್ಪಗಿನ ಸ್ವರದಲ್ಲಿ ಸರಸ್ವತಿ. ಸಲ್ಪ ತಡೆದು, " ಊಟ ಆಗಿದೆಯೇನಪ್ಪಾ ? " ಎಂದು ಕೇಳಿದಳು ತಾಳಲಾರದೆ.

" ಇಲ್ಲ; ಏನಾದರೂ ಇದೆಯೇ ಊಟಕ್ಕೆ ? "

" ಏ....ನೊ.... ! " ನಿಟ್ಟುಸುರಿನೊಡನೆ ನುಡಿದಳು ತಾಯಿ.

" ಏನಾದರೂ ಮಾಡಿರಲ್ಲ; ಅನ್ನ ಸಾರು. "

" ಯಾರ ಮನೆಯಲ್ಲಿ ಮಾಡಲಿ ? "

ತಾಯಿಯ ಮಾತು ಕೇಳಿ ಚಕಿತನಾದ ಅಜಿತ. " ಇದೇನವ್ವ, ನಿನ್ನ ಮಾತು ನನಗೆ ತಿಳಿಯುವದಿಲ್ಲ ! "

" ನೀನು ಇಂತಹ ಮಗ, ಸರಕಾರದ ವಿರೋಧ ಕಟ್ಟಿಕೊಂಡು ಬೇಕಾದ್ದು ಮಾಡ್ತ ಹೋಗುವವ. ಗೌಡರು ನಿನ್ನ ಸಂಬಂಧ ಹೇಗೆ ಇಟ್ಟು ಕೊಂಡಾರು ? ಬೇರೆ ಮನೆಯಲ್ಲಿ ಇಟ್ಟಿದಾರೆ ನನ್ನ. ಈ ಮನೆಯಲ್ಲಿ ನನ್ನದೇನಿದೆ ? ಕತ್ತಲೆಯಾಗಲು ಮಲಗಲಿಕ್ಕಷ್ಟು ಬರತೇನೆ ಯಾರೂ ಕಾಣದಂತೆ. ಅದಕ್ಕಷ್ಟು ಅವಕಾಶ ಕೊಟ್ಟಿದಾರೆ, ತಮ್ಮನ ಹೆಂಡತಿ ಎಂದು. "

ಕಣ್ಣೀರು ಕೋಡಿಗಟ್ಟಿ ಹರಿಯುತ್ತಿದ್ದಿತು, ಅವಳ ಕಣ್ಣುಗಳಿಂದ. ಗುಣವಂತಿಯು ಒಂಟಿಗಾಲಿನ ಮೇಲೆ ಕಂಬಕ್ಕೆ ಒರಗಿ ನಿಂತು ಕೇಳುತ್ತಿದ್ದಳು. ಮುರದೇವಿಯು ಈಗ ಎಚ್ಚರಾಗಿದ್ದಳು. ಮುಪ್ಪಿನ ವಯಸ್ಸು, ವಿಷಯ ಗ್ರಹಿಸಲಿಕ್ಕೆ ಸ್ವಲ್ಪ ಹೊತ್ತು ಹಿಡಿಯಿತು. ಈಗ ಒಮ್ಮೆಲೇ ಎದ್ದು ಕುಳಿತಳು. ಸುತ್ತಲೂ ನೋಡಿ ನುಡಿದಳು.

" ಅಜಿತು ! " ಎಂದಳು ಅಕ್ಕರೆಯ ಸ್ವರದಲ್ಲಿ.

" ಓ.... " ಎಂದು ಅಜಿತ ಅವಳ ಹಾಸಿಗೆಯ ತುದಿಗೆ ಕುಳಿತ.

" ಯಾವಾಗ ಬಂದೆ ? ಗುಣವಂತಿ ಬಂದಳು ? "

" ಈಗ ಬಂದೆವು. "

" ಎಷ್ಟು ಸೊರಗಿದ್ದೀಯಪ್ಪ ! " ಮೈಮೇಲೆ ಮಮತೆಯಿಂದ ಕೈಯಾಡಿಸಿದಳು.

ಸ್ವಲ್ಪ ತಡೆದು, " ಹಾಗೇನಾದರೂ ಇದರೆ ಊರಿಗೆ ತಿಳಿಸಬಾರದೆ ?

ಊರ ಕಡೆಗೆ ನಿನ್ನವರಾರೂ ಇಲ್ಲೆಂದು ತಿಳಿದೆಯಾ? ಬೇಕಾದಷ್ಟು ದುಡ್ಡು ಸುರುವಿ ಬಿಡಿಸಿ ತರತಿದ್ದೆವಲ್ಲ! ನಿನ್ನ ಕಕ್ಕ ಕೊಡದಿದ್ದರೆ ನಾನಿದ್ದೆನಲ್ಲ. ಇನ್ನೂ ಮುದಕಿಯ ಹತ್ತರ ಅಷ್ಟೂ ಇಲ್ಲಂತ ತಿಳಕೊಂಡಿದೀ? ಜೇಲಿಗೆ ಹೋಗುವ ಸ್ಥಿತಿ ಬಂತಲ್ಲ ನಿನಗ? ನಾವೆಲ್ಲ ಇದ್ದು ಇಂಥಾ ಹೊತ್ತಿನೊಳಗ ಏನು ಮಾಡಿದಂತಾಯಿತು? ನಿನ್ನ ಹೆಸರಿಗೆ ಕಲಂಕ ಹತ್ತಬಾರದಿತ್ತು!''

"ಇದು ಕಲಂಕ ಹತ್ತುವ ಜೇಲಲ್ಲs. ಚಳವಳಿ ಮಾಡಿ ಹೋಗಿದ್ದೆವು. ಅಲ್ಲಿಯೂ ಎಲ್ಲಾ ನಮ್ಮ ಮನೆಯೊಳಗೇ ಇದ್ದಂತೆ ಇರತದ; ನಾವೇನು ತುಡುಗಗಿಡಗ ಮಾಡಿ ಹೋಗಿದ್ದೇವು?"

"ಏನು ಗೊತ್ತಪ್ಪ ನನಗ? ಯಾವುದಾದರೂ ಜೇಲೇ ಅಲ್ಲ?"

ಅಜ್ಜಿಗೆ ಸಮಾಧಾನ ಹೇಳುವ ಬಗೆ ಅವನಿಗೆ ತೋಚದಾಯಿತು. ಸುಮ್ಮನಾದ. "ಒಳಗೊಳಗೇ ಮುದುಕಿ ಮರಗುವಳಲ್ಲ'' ಎಂದ ಕರಗಿದ, ಕೊರಗಿದ. ದೀಪ ಅದೇಕೋ ಕಂದುತ್ತಲಿದ್ದಿತು. ಮುರದೇವಿಯು ಸೊಸೆಯ ಕಡೆಗೆ ತಿರುಗಿ ಕೇಳಿದಳು.

"ಸುಮ್ಮನೆ ಏಕೆ ಕುಳಿತಿರುವಿ? ಹುಡುಗರಿಗೆ ಊಟಕ್ಕೆ ಮಾಡಿ ಹಾಕು, ಹೋಗಲ್ಲ? ಯಾವಾಗ ಉಂಡಿದಾರೋ ಏನೋ? ಅವರೊಬ್ಬರು ಹಾಗೆ ಮಾಡುವರಂತ ನೀನೂ ಎರಡನೆಯವರ ಮನೆ ಅಂತ ತಿಳಿಯುವಿ ಏನು?'' ಗುಣವಂತಿಯ ಕಡೆಗೆ ಹೊರಳಿ." ಇಂದಿರೆಯ ಕೂಸು ನೆಟ್ಟಗ ಅದ? ಎಲ್ಲಾರು ನೆಟ್ಟಗೆ ಇರುವರೇನವ್ವ?'' ಎಂದಳು.

"ಎಲ್ಲರೂ ನೆಟ್ಟಗೆ ಇರುವರು.''

ಸರಸ್ವತಿಯು ಇನ್ನೂ ಕುಳಿತಲ್ಲಿಯೇ ಕುಳಿತಿದ್ದಳು. "ಹೋಗು, ನೀನಾದರೂ ಇಷ್ಟು ಅನ್ನ ಸಾರು ಮಾಡಹೋಗು. ಇಬ್ಬರೂ ಊಟ ಮಾಡುವಿರಂತೆ.'' ಎಂದು ಮುರದೇವಿಯೇ ಅಂದಳು.

ಗುಣವಂತಿಯು ಸಾವಕಾಶವಾಗಿ ಹೊರಳಿ ಒಳಗೆ ಹೊರಟಳು. ಅವಳ ಬೆನ್ನ ಹಿಂದೆಯೇ ಸರಸ್ವತಿಯೂ ಎದ್ದು ಒಳಗೆ ನಡೆದಳು.

ಅಜಿತ ಮರುದಿನ ಬೆಳಿಗ್ಗೆ ಸಿದ್ಧಾಪುರದ ಬೀದಿಗಳಿಗೆ ಮುಖ ತೋರಿಸಿದನು. ಗೆಳೆಯರೆಲ್ಲ ಕೂಡಿದರು. "ಸತ್ಯಾಗ್ರಹಿ!'' ಎಂದು

ಕರೆದರು ಆತನನ್ನು. ಅಜಿತ ಬಂದಿರುವನೆಂದು ಸುದ್ದಿ ಕೇಳಿ ಜಾಧವ ಮಾಸ್ತರರು ಧಾವಿಸಿ ಬಂದರು. ಸತ್ಯಾಗ್ರಹದ ಅನುಭವ ಕೇಳಿದರು. ಬೇಡ ಬೇಡವೆಂದರೂ ಸಾಯಂಕಾಲ ಮಾರುತಿ ದೇವಾಲಯದಲ್ಲಿ ಸಭೆ ಇಟ್ಟರು. ಊರ ಕಾಂಗ್ರೇಸ ಕಮೀಟಿಯವರೆಲ್ಲ ಮುಂದಾಗಿ ಓಡಾಡಿದರು. ಮುಂಬಯಿಯಿಂದ ಬಂದ ದೇಶಭಕ್ತ ಸಭೆಯಲ್ಲಿ ಮಾತಾಡಲೇಬೇಕಾಯಿತು.

ಅಜಿತ ವ್ಯಾಖ್ಯಾತನಾಗಿದ್ದ. ಸಮತಾವಾದದಿಂದಲೇ ವ್ಯಾಖ್ಯಾನ ತುಂಬಿದ. "ಬಡವರ ಸೇವೆಯೇ ನಮ್ಮ ಆದರ್ಶ! ಭಾರತದ ಸ್ವಾತಂತ್ರ್ಯವೇ ನಮ್ಮ ಗುರಿ!" ಎಂದು ಒದರಿ ಸಾರಿದ. ಶ್ರೀ. 'ಅಜಿತನಾಥಕೀ ಜೈ!" ಯನ್ನು ಸಂಪಾದಿಸಿದ. ಇದರಿಂದ ಹರೆಯದ ಹುರುಪು ಇಮ್ಮಡಿಸಿತು. ಇಷ್ಟು ಬೇಗನೆ ದೊಡ್ಡವನಾದೆನೆಂಬ ಹಿಗ್ಗೂ ಆಯಿತು. ಕೊರಳನ್ನು ಹೂವಿನ ಹಾರ ಅಲಂಕರಿಸಿತು. ಮೊಮ್ಮಗನ ವೈಭವ ಕೇಳಿ ಮುರದೇವಿಯು ಹರುಷಗೊಂಡಳು. "ಊರ ಜನರೆಲ್ಲ ಬಾಯ್ತುಂಬ ಹೊಗಳುವಾಗ 'ಜೇಲಿಗೆ ಹೋಗಿ ಮನೆಯ ಮಾನ ಕಳೆದ' ಅಂತ ಇದೇನು ಹೇಳುವದು?" ಎಂದು ಮಗನನ್ನೇ ಮನದಲ್ಲಿ ದೂರಿದಳಾಕ್ಷಣ.

ರಾಜಮಣಿಯು ಸಭೆಗೂ ಹೋಗಲಿಲ್ಲ, ಲೆಕ್ಚರವನ್ನೂ ಕೇಳಲಿಲ್ಲ. ಮೇಲಾಗಿ ಅವನು ಜನರಲ್ಲಿ ಹೆಚ್ಚಿಗೆ ಬೆರೆಯುತ್ತಿರಲೂ ಇಲ್ಲ. ಅಜಿತ ಒಬ್ಬನೇ ಇದ್ದಾಗ ಮಾತ್ರ ತುಂಬ ಹರಟುವ. ಜನರಾರಾದರೂ ಬಂದರೆ ಸುಮ್ಮನಾಗುವ. ಕೆಲವರು ಇವರಾರೆಂದು ಕೇಳಿದರೆ, "ನನ್ನ ಗೆಳೆಯ, ಹವೆ ಬದಲಿಸಲೆಂದು ಬಂದಿರುವನು. ಒಂದೆರಡು ತಿಂಗಳು ನಿಂತು ಹೋಗಬಹುದು" ಎಂದು ಹೇಳಿ ಬಿಡುವ ಅಜಿತ. ರಾಜಮಣಿಗೆ ಕನ್ನಡ ಬರುತ್ತಿರಲಿಲ್ಲ. ಅವನನ್ನು ವಿಶೇಷವಾಗಿ ಯಾರೂ ಮಾತಾಡಿಸುವ ಗೊಡವೆಗೂ ಹೋಗುತ್ತಿರಲಿಲ್ಲ. ಎರಡು ಹೊತ್ತು ಅಜಿತನೊಡನೆ ಊಟ ಮಾಡಿ ಏನಾದರೂ ಓದುತ್ತ ಇರುವ.

ಈಗ ಅಜಿತ ತಾಯಿ ಪತ್ನಿಯರೊಡನೆ ಬೇರೆ ಮನೆಯಲ್ಲಿಯೇ ಇದ್ದ. ಆದರೂ ಅವನ ಹೊಲಮನೆಯ ಉತ್ಪನ್ನದ ವ್ಯವಸ್ಥೆಯನ್ನೆಲ್ಲ ಅವನೆ ಕಕ್ಕನೇ ನೋಡುತ್ತಿದ್ದ. ಎರಡೂ ಮನೆಗೆ ಹತ್ತುವ ಸಾಮಾನುಗಳನ್ನು

ಅವನೇ ತರಿಸಿ ಕೊಡುತ್ತಿದ್ದ. ಅಜಿತನಿಗೆ ಮನೆಯ ಚಿಂತೆಯಿಲ್ಲ. ಬೇರೆ ಕೆಲಸವೂ ಇಲ್ಲ. ಊಟ, ಓದು, ಹರಟೆ, ಇವೇ ಅವನ ನಿತ್ಯ ಪಾರಾಯಣ ಗಳಾಗಿದ್ದುವು. ಈಗೀಗ ರಾವಸಾಹೇಬ ಗೌಡಕಿಯ ದಪ್ತರದ ಕೆಲಸ ತಕ್ಕೊಂಡಿದ್ದ. ಆದರ ಜೊತೆಗೆ ಅವನಲ್ಲಿ ಇನ್ನಿಷ್ಟು ಬಿಗುವು ಬಿಂಕ ಗಳು ಬಂದು ಸೇರಿದ್ದುವು. ಅದರಿಂದ ಅವನು ಅಜಿತನನ್ನೂ ಅವನ ಗೆಳೆಯ ನನ್ನೂ ಮಾತಾಡಿಸುತ್ತಿರಲಿಲ್ಲ. ಇವರನ್ನು ಮಾತನಾಡಿಸಿದರೂ ತಾನು ಅವರಿಗೊಂದು ತರದ ಗೌರವ ಕೊಟ್ಟಂತೆ ಆಗುವದೆಂದು ಭಾವಿಸಿದ್ದ ನೇನೋ! ಮನದಲ್ಲಿಯೇ "ಮಳ್ಳ ಜನರು ಸಭೆ ಮಾಡಿ ಹಾರ ಹಾಕಿ ದರು!" ಎಂದು ಅಜಿತನ ಉತ್ಕರ್ಷಕ್ಕೆ ಕರಬುವನು. ಇನ್ನೂ ಮುಂದೆ ಹೋಗಿ, "ನನ್ನ ಕೈಯಲ್ಲಿ ಅಧಿಕಾರವಿದ್ದರೆ ಇವರೆಲ್ಲರನ್ನೂ ಪೋಲೀಸರ ಕೈಯಲ್ಲಿ ಕೊಟ್ಟು ಒದಿಸುತ್ತಿದ್ದೆ" ಎಂದುಕೊಳ್ಳುವ. ಯಾವುದಕ್ಕಾ ದರೂ ಗುಣವಂತಿಯು ತಮ್ಮ ಮನೆಗೆ ಬಂದಾಗ, "ಗಂಡನನ್ನು ಒಯ್ದು ಸೆರೆಮನೆಯನ್ನು ಕಾಣಿಸಿ ತಂದೆಯಲ್ಲ" ಎಂದು ಕೊಂಕು ನುಡಿಯು ವನು. ಇನ್ನೊಮ್ಮೆ "ಏನು ಹುಚ್ಚೋ, ನಯವಾದ ಬಟ್ಟೆ ಧರಿಸುವು ದನ್ನು ಬಿಟ್ಟು, ಇಲ್ಲದ್ದೊಂದು ಸೀರೆ ಉರುಟು ಉಡುವುದು! ಅಯ್ಯೋ!" ಎಂದು ಕನಿಕರಿಸುವ.

ರಾವಸಾಹೇಬನ ಮಾತು ನಡೆಗಳನ್ನು ಕಂಡ ಗುಣವಂತಿಯು ಕೆಲ ದಿನಗಳಲ್ಲಿ ಇವರ ಮನೆಗೆ ಬರುವದನ್ನೇ ನಿಲ್ಲಿಸಿದಳು. ಏನಾದರೂ ಕೆಲಸವಿದ್ದರೆ ಅತ್ತೆಯನ್ನೇ ಕಳಿಸಿಕೊಡುವಳು. ತಾನೇ ಮನೆ ಕೆಲಸ ನೋಡುವಳು. ಇದರ ಕಾರಣವನ್ನರಿತ ರಾವಸಾಹೇಬನು "ಈಗಿನ ಹೆಣ್ಮಕ್ಕಳಿಗೆ ಕೂಡಿರುವುದು ಮೊದಲೇ ಬೇಡ. ಆದರಲ್ಲಿ ಅಪ್ಪನೇ ಸ್ವತಂತ್ರ ಮನೆ ಮಾಡಿ ಇಟ್ಟಿದಾನೆ. ಅಂದ ಮೇಲೆ ಕೇಳುವದೇನು ಗುಣವಂತಿಗೆ? ಆನಂದದಲ್ಲಿದ್ದಾಳೆ. ಈಗೇಕೆ ಈ ಮನೆಯ ನೆನಪಾ ದೀತು?" ಎಂದು ವಿಶಾಲ ಹೃದಯವನ್ನು ತೆರೆದಿಟ್ಟು ಸರಸ್ವತಿಗೆ ತೋರಿ ಸುವನು.

"ಆದೇಕೆ ಅಜಿತ ದಿನಾಲು ಬಂದು ಅಜ್ಜಿಯ ಹತ್ತಿರ ಕುಳಿತು ಮಾತಾಡಿ ಹೋಗುವನು. ನಾನು ಬರುವೆ. ಅವಳೇ ಒಂದೆರಡು ದಿನ

ಗಳಲ್ಲಿ ಇತ್ತ ಬಂದಿಲ್ಲವೇನೋ!" ಸರಸ್ವತಿಯು ಮಗನ ಮಾತಿಗೆ ನೊಂದು ನುಡಿಯುವಳು.

"ಸಣ್ಣ ಹುಡುಗನ ಮಾತು ಏನು ಮಾಡುವಿ ಬಿಡ ತಾಯಿ! ಅವರಪ್ಪನೇ ಮನೆಯೊಳಗ ದೆವ್ವ ಹೊಕ್ಕಿಸಿದಂತೆ ಮಾಡಿ, ಎರಡು ದಿನದೊಳಗ ಒಂದ ಕಾಲ ಮೇಲೆ ನಿಂತು ಹೊರಗ ಹಾಕಿದಾನೆ. ಮತ್ತ ಅವರಿಗೇ ಇವನು ಅಂದರೆ? ಯಾರ ಕಪ್ಪಾಳಿಗೆ ಹೊಡಿಯಲಿಕ್ಕಿಲ್ಲ? ಇವನು ಗೌಡನಾದರೆ ನಾನೇನು ಅಂಜುವವಳಲ್ಲ. ಹೀಗೆ ಅನ್ನುವವ ಎಲ್ಲರನ್ನೂ ತಂದು ಮನೆಯೊಳಗೇ ಇಟ್ಟಕೋ ಅಲ್ಲ; ನಿಮ್ಮ ಅಪ್ಪನ ಮುಂಚಿನ್ನದೇನಾದರೂ ನಡೆಯುವಂತಿದ್ದರೆ...." ಕುಳಿತಲ್ಲಿಂದಲೇ ಗದರಿಸಿದಳು ಮುರದೇವಿ.

ಸರಸ್ವತಿ ಅಂದಂತೆ ಅಜಿತ ದಿನಾಲು ಕಕ್ಕನ ಮನೆಗೆ ಹೋಗಿ ಬರುತ್ತಿದ್ದ. ಚಾವಡಿಯ ಕಾಗದ ಪತ್ರಗಳ ಕಡೆಗೂ ಲಕ್ಷ್ಯ ಹಾಕುತ್ತಿದ್ದ. ಪೋಲೀಸ ಠಾಣೆಯಿಂದ ಬರುವ ಕಾಗದಗಳನ್ನಂತೂ ಸಂಪೂರ್ಣ ಓದಿಯೇ ಬಿಡುತ್ತಿದ್ದ. ಅವುಗಳಿಗಾಗಿ ರಾವಸಾಹೇಬನ ಹತ್ತಿರ ತಾಸೆರಡು ತಾಸು ಏನಾದರೂ ಹರಟೆಯನ್ನು ಬೆಳೆಸುವನು. ರಾವಸಾಹೇಬನ ಕಲ್ಪನೆಯೇ ಬೇರೆ. ನಾನು ಗೌಡ, ಊರಲ್ಲಿ ದೊಡ್ಡ ಮನುಷ್ಯ, ಅಂತ ಅಣ್ಣ ಬಂದು ದಿನಾಲು ಹತ್ತಿರ ಕುಳಿತು ಮಾತಾಡಿ ಹೋಗುವ, ಎಂದುಕೊಳ್ಳುವ. ಭಾವನೆಗೆ ತಕ್ಕಂತೆ ಅವನ ನಡೆನುಡಿಗಳೂ ಗಂಭೀರ ಆಢ್ಯತೆಗಳಿಂದ ಕೂಡಿದುವು. ಆದರೆ ಅಜಿತ ಅತ್ತ ಗಮನವೀಯುತ್ತಿರಲಿಲ್ಲ. ಅವನ ಲಕ್ಷ್ಯ ಬೇರೆ ಕಡೆಗೆಯೇ ಇತ್ತು, ಇರುತ್ತಿತ್ತು. ಹೊಣೆ ಹೊತ್ತಂತೆ ಕೆಲಸ ಕೊನೆಗಾಣಿಸಬೇಕಲ್ಲವೆ?

ಅಜಿತ ಅಂಚೆಯಾಳಿಗೂ ಹೇಳಿಟ್ಟಿದ್ದ. ತನ್ನ ಟಪಾಲುಗಳನ್ನು ವ್ಯವಸ್ಥಿತ ರೀತಿಯಿಂದ ತನಗೇ ಮುಟ್ಟಿಸುವಂತೆ. ಅದಕ್ಕೆಂದು ಕೆಲ ಹಣವನ್ನು ಆಗಾಗ ಮೆಚ್ಚೆಂದು ಅವನಿಗೆ ಕೊಡುವನು. ಬ್ರಿಟಿಷ ರಾಜ್ಯದಲ್ಲಿ ಸಿಪಾಯರನ್ನು ಹಿಡಿದುಕೊಂಡು ದೊಡ್ಡ ದೊಡ್ಡ ಅಧಿಕಾರಿಗಳ ವರೆಗೆ ಲಂಚವಿಲ್ಲದೆ ಕೆಲಸಗಳು ಸರಿಯಾಗಿ ಆಗುವವೆ?

ಒಂದು ಎರಡು ಮೂರು ನಾಲ್ಕು ತಿಂಗಳುಗಳು ಉರುಳಿದವು.

ರಾಜಮಣಿಯು ಕೆಲಸ ಕೈಗೊಂಡಲಿಲ್ಲ. ಮುಂದಿನ ವ್ಯವಸ್ಥೆಯನ್ನು ಕುರಿತು ಯಾವ ಕಡೆಗಳಿಂದಲೂ ಕಾಗದಗಳಿಲ್ಲ. ಕ್ಷೇಮಸಮಾಚಾರದ ಕಾಗದಗಳೇನೋ ವಾರಕ್ಕೆರಡಾವರ್ತಿ ಬರುತ್ತಿದ್ದವು. ಆದರೆ ಮುಂದಿನ ಪ್ರಯಾಣದ ಮಾತೇ ಇಲ್ಲ. ಒಂದೇ ಸ್ಥಳದಲ್ಲಿ ಬಹಳ ದಿನ ಕಳೆಯುವದು ಅಷ್ಟು ಸುರಕ್ಷಿತವಲ್ಲೆಂದು ರಾಜಮಣಿಯು ಹಗಲಿರುಳು ಚಿಂತಿಸತೊಡಗಿದ. ಊರಲ್ಲಿಯೂ ಜನರು ಗುಜುಗುಜು ಮಾತಾಡತೊಡಗಿದರು. ಸಣ್ಣ ಊರು. ಹೊಸ ಮನುಷ್ಯನೊಬ್ಬ ಬಂದು ನಾಲ್ಕೈದು ತಿಂಗಳು ನಿಲ್ಲುವದೆಂದರೆ ಅದರಲ್ಲೇನಾದರೂ ಗುಟ್ಟಿರಲೇಬೇಕೆಂದರು. ತಮಗೆ ತಿಳಿಯದ ಸಂಗತಿಯನ್ನು ಕುರಿತು ಕಲ್ಪಿತಮಾತುಗಳನ್ನು ಕಟ್ಟಿ ಗುಡಿ-ಗುಂಡಾರಗಳ ಕಟ್ಟೆಯ ಮೇಲೆ ಕುಳಿತಾಗ ಆಡತೊಡಗಿದರು. ಒಂದು ದಿನ ಅಜಿತ ರಾಜಮಣಿಯರು ಕೂಡಿ ಬೀದಿಯಲ್ಲಿ ಹೊರಟುದನ್ನು ಕಂಡು, ಕಟ್ಟೆಯ ತಂಡದಲ್ಲೊಬ್ಬನೆಂದ :

" ಇಲ್ಲೇ ನಿಂತಬಿಟ್ಟನಲ್ಲೋ ? "

" ನಿಲ್ಲದೆ ಯಾರಿಗೆ ಹೇಳುವರೋ ? ಹೀಗೇ ಏನಾದರು ಒಂದು ಕಾರಭಾರ ಮಾಡಿ ಬಂದಿರತಾರೆ ತಲೆ ಉಳಿಸಿಕೊಳ್ಳಲಿಕ್ಕಂತ. ಬಂದು ಇರುತ್ತಾರೆ ಇಂಥಲ್ಲಿ. "

" ಯಾವದಾದರೊಂದು ದೊಡ್ಡ ಗಿಡದ ನೆರಳು ಹಿಡಿಯಲಿಕ್ಕೆ ಬೇಕಲ್ಲ ! " ಇನ್ನೊಬ್ಬ ಮುದುಕ ಕೆಮ್ಮುತ್ತ ನುಡಿದ.

" ಅಲ್ಲ ಏಳೋ, ಅಜಿತನ ಮಿತ್ರ ಇದ್ದಾನಂತ. "

" ಹಾಗೇ ಹೇಳೋದು. ಮಿತ್ರಾ-ಗಿತ್ರಾ ಹೀಗೆ ಆರಾರ ತಿಂಗಳ ಬಂದ ನಿಲ್ಲತಾರೇನು ? ಬಹಳ ನಿಂತರ ಹತ್ತೆಂಟ ದಿನ ಆದರ ಹೆಚ್ಚಾಗಿ ಹೋಯ್ತು. "

" ಎಲ್ಲಿಯಾದರು ಯಾವನ್ನರ ಕೊಂದಗಿಂದ ಬಂದ ಆದಾನ ಏಳೋ ! "

" ಸತ್ತ ಮಾರಿ ಹುಡುಗ, ಅದೇನ ಕೊಲ್ಲುದನೋ ! "

" ಅವರದೇನ ಹೇಳಲಿಕ್ಕೆ ಬರುವದಿಲ್ಲ ಬಿಡು ! ಹಿಂದಕ್ಕ ಒಬ್ಬ ಗೌಡನ ಬೆನ್ನಿಗೆ ಬಂದ ಬಿದ್ದಿರಲಿಲ್ಲ ? ಎಷ್ಟು ಇದ್ದ ಅವ ? ಒಂದು

ದರೋಡೆಯೊಳಗೇ ಮೂರು ಮಂದಿನ್ನ ಕೊಂದಿದ್ದ ಅಂತ ನೋಡು!"

"ನಮ್ಮ ಗೌಡ ದೊಡ್ಡ ಮನುಷ್ಯ, ಎಲ್ಲ ಸಾಹೇಬರ ಗುರುತು ಅವನಿಗೆ. ಅಂತೇ ಉಳಿಸಿದನಲ್ಲ!"

"ಏನು ಪುಕ್ಕಟ ಉಳಸತಾನು? ತಂದ ದುಡ್ಡ ಎಲ್ಲಾನೂ ತಾನೇ ನುಂಗಿದ!"

"ನುಂಗಿದ್ದನ್ನು ಕಾರಬಾರದಲ್ಲ?"

ಹೀಗೆ ಏನೇನೋ ತಲೆಬುಡವಿಲ್ಲದ ಹರಟೆಗಳು ಅಲ್ಲಲ್ಲಿ ಎದ್ದು ಮುಳುಗುತ್ತಿದ್ದುವು. ಅವುಗಳಲ್ಲಿ ಕೆಲವು ಅಜಿತನ ಕಿವಿಗೂ ಬಿದ್ದುವು. ಹಲವಾರು ಸಂಗತಿಗಳು ಗೌಡನ ಲಕ್ಷ್ಯಕ್ಕೂ ಬರತೊಡಗಿದುವು. ಅದರಿಂದ ಅಜಿತನೂ ಚಿಂತೆಗೊಳಗಾದ. ಯುಕ್ತಿಯನ್ನು ಶೋಧಿಸತೊಡಗಿದ. ಅವನ ನೆರವಿಗೆ ಯಾರೂ ಇರಲಿಲ್ಲ. ಕರಕೊಳ್ಳುವಂತಿರಲಿಲ್ಲ. ಹೇಳುವ ಸಂಗತಿಯೂ ಇದಲ್ಲ. ಕಕ್ಕನಂತೂ ಪ್ರಸಂಗ ಬಂದರೆ ಹಿಂದೆ ಮುಂದೆ ನೋಡುವಂಥವನೂ ಅಲ್ಲ. ಇಕ್ಕಟ್ಟಿನಲ್ಲಿ ಸಿಕ್ಕಂತಾಗಿದ್ದ ಅಜಿತ. ದಿನಾಲು ಟಪಾಲಿನ ದಾರೀ ಕಾಯುವನು. ಏನೂ ಬರದಿರಲು ನಿರಾಶೆಗೊಳ್ಳುವನು. ಕೊನೆಗೆ ಸೋತ ಮನಸ್ಸಿನಿಂದ,

"ಏನೂ ತಿಳಿಯುವದಿಲ್ಲವಲ್ಲ!" ಎನ್ನುವ.

"ಇಷ್ಟರಲ್ಲಿ ತಿಳಿಯಬೇಕಿತ್ತು."

"ಬಹಳ ದಿನ ಹೀಗಿರುವುದು ಘಾತುಕ."

"ಹಾಗಾದರೆ ನಾಳೆ ಹೋಗಿಬಿಡುವೆ."

"ಎಲ್ಲಿ?"

"ಎಲ್ಲಿಯಾದರೂ!"

ಅಜಿತ ಸುಮ್ಮನೆ ಕುಳಿತು ಜಂತೆಯನ್ನೆಣಿಸುವ.

ಈಗ ಒಂದೆರಡು ದಿನಗಳಿಂದ ಅಜಿತ ಕಕ್ಕನ ಮನೆಗೆ ಹೋದಾಗ ಗೌಡನು ಏನಾದರೂ ಹೇಳಬೇಕೆಂದು ಹತ್ತರ ಬರುವನು. ಅದನ್ನರಿತ ಅಜಿತನು ಆ ಸಂದರ್ಭವನ್ನು ತಪ್ಪಿಸಿ ದೂರಾಗುವನು. ಹೀಗೆ ಮೂರು ನಾಲ್ಕು ಸಲವಾಯಿತು. ಅಷ್ಟರಲ್ಲಿ ಪೋಲೀಸ ಠಾಣೆಯಿಂದ ಅತಿ ಜರೂರ ಎಂದು ಒಂದು ಟಪಾಲು ಬಂದಿತು. ಅದನ್ನು ನೋಡಿ

ಗೌಡನ ಮನಸ್ಸಿಗೆ ಇದ್ದ ಸಂಗತಿಯು ಚನ್ನಾಗಿ ಬಿಂಬಿಸಿತು. ರಾವ ಸಾಹೇಬನೂ ಆ ಟಪಾಲವನ್ನು ಓದಿದನಾದರೂ ಅವನಿಗೇನು ಅಂಥ ಸಂಶಯವಿಲ್ಲ. ತಂದೆಯೂ ಹೇಳುವ ಗೋಜಿಗೆ ಹೋಗಲಿಲ್ಲ. ಆ ಕಾಗದವನ್ನು ಚಾವಡಿಯ ಕಾಗದ ಪತ್ರಗಳ ಜೊತೆಗೆ ಇಡದೆ, ಒಂದು ಪುಸ್ತಕದ ಹೊಟ್ಟೆಯಲ್ಲಿ ಹಾಕಿ ತನ್ನ ಕೋಣೆಯಲ್ಲಿ ಒಯ್ದಿಟ್ಟ ಗೌಡ. ಅವನ ಮಗನ ಸ್ವಭಾವ ಅವನಿಗೆ ಗೊತ್ತಿಲ್ಲವೆ? ಮಧ್ಯಾಹ್ನ ಊಟವಾದೊಡನೆಯೇ ಅಜಿತನನ್ನು ಕರೆಯ ಕಳುಹಿದ. 'ಎಷ್ಟಾದರೂ ತಮ್ಮನ ಮಗ. ಅವನಿಗೆ ಪೆಟ್ಟು ಬಿದ್ದರೆ ನನಗೂ ನೋಯುವದು. ಜನರು ಯಾವ ಗೌಡನ ಮನೆತನಕ್ಕೆ ಕುಂದು ಬಂದಿತೆನ್ನುವರು? ನನಗೇ ಅಲ್ಲವೆ? ಹುಚ್ಚು ಹುಡುಗರು. ಅವರಿಗೇನೂ ಈಗ ತಿಳಿಯದು ಕೇಳಿಯಾದರೂ ನೋಡಬೇಕು. ಏನಿದೆಯೋ!' ಎಂದು ಯೋಚಿಸುತ್ತಲಿದ್ದ.

ಅಜಿತ ಕಕ್ಕನ ಕರೆ ಬಂದೊಡನೆಯೇ ವಿಚಾರದಲ್ಲಿ ಬಿದ್ದ. ಹೋದೊಡನೆಯೇ ರಾಜಮಣಿಯ ವಿಚಾರವೇ ಮುಂದೆ ಬರುವದೆಂಬುದು ಅವನಿಗೆ ಗೊತ್ತು. ಊರಲ್ಲಿ ಜನರು ಸಿಕ್ಕ ಸಿಕ್ಕದ್ದನ್ನು ಆಡಿಕೊಳ್ಳುತ್ತಿರುವರಂದ ಮೇಲೆ ಕಕ್ಕನು ಸುಮ್ಮನಿದ್ದಾನೆಯೇ? ನಾಲ್ಕು ದಿನಗಳಾದುವು. ಹಾತೊರೆಯುತ್ತಿದ್ದಾನೆ. ಕೇಳಿದರೆ ಏನು ಹೇಳಬೇಕು, ಎಂದು ಯೋಚಿಸುತ್ತಲೇ ಅಜಿತ ಕಕ್ಕನ ಪಡಸಾಲೆಗೆ ಬಂದ. ಆದಗೌಡ ಪಡಸಾಲೆಯಲ್ಲಿರಲಿಲ್ಲ. ಊಟ ಮಾಡಿ ಕೋಣೆಯಲ್ಲಿ ಅಡ್ಡಾಗಿದ್ದನು. ಅಜಿತ ಪಡಸಾಲೆಯಲ್ಲಿಯೇ ಸುಳಿದಾಡತೊಡಗಿದ. ಅದೇಕೋ ಇಂದು ಅವನಲ್ಲಿ ಕಕ್ಕನನ್ನು ಕಾಣಲು ಕೊಂಚ ಅಧೈರ್ಯ ಜನಿಸಿದ್ದಿತು. ಒಳಗೆಯೇ ಬರಲಿಕ್ಕೆ ಗೌಡರು ಹೇಳಿದರು. ಅಜಿತ ಒಳಗೆ ಹೋದ.

"ಇಲ್ಲಿ ಬಾ" ಎಂದು ಹತ್ತರ ಕಂಬಳಿಯ ಮೇಲೆಯೇ ಕೂಡಲು ಹೇಳಿದರು ಗೌಡರು. ಮಗನು ಹದಿನಾರು ವರ್ಷದವನಾದಾಗಲೇ ಸರಿಕದವನೆಂದು ತಿಳಿಯಬೇಕಲ್ಲವೆ!

"ನಿನ್ನ ಗೆಳೆಯನ ಹೆಸರು ರಾಜಮಣಿಯಂತಲ್ಲ!" ಗೌಡರು ಅಜಿತನ ಮುಖವನ್ನು ನಿಟ್ಟಿಸುತ್ತ ಕೇಳಿದರು.

"ಹೌದು; ಏಕೆ?" ಮುಖಚರ್ಯೆಯನ್ನು ಬದಲಾಗಗೊಡದೆ

ನುಡಿದ ಅಜಿತ.

"ಯಾವೂರವನು ?"

"ಗುಜರಾಥದ ಕಡೆಯುವರಿದ್ದಾರೆ, ಮುಂಬಯಿಯಲ್ಲಿ ನನ್ನ ಜೊತೆಯಲ್ಲಿ ಕಲಿಯುತ್ತಿದ್ದರು. ಅವರ ತಂದೆಯು ಅಲ್ಲಿ ಡಿಸ್ಟ್ರಿಕ್ಟ ಜಜ್‌ರಿದ್ದಾರೆ."

ಏನೋ ಅಧಿಕಾರಿಯ ಮಕ್ಕಳೆನ್ನಲು ಆದಗೌಡನು ಆದರ ತೋರಿಸುವನೆಂದುಕೊಂಡು ಅಜಿತ ಹೀಗೆ ಹೇಳಿದ. ಆದರೆ ಗೌಡನು ಇಂಥ ಉಪಾಯುಗಳಿಗೆ ಬಲಿಬೀಳುವಂತಿರಲಿಲ್ಲ. ಅವನಿಗೆ ಸಂಶಯುವು ತುಂಬ ಬಾಧಿಸಿತ್ತು.

"ಇರಲಿ, ಯಾರಿದ್ದರೆ ನನಗೇನು? ನಿನ್ನ ಕೆಲಸದ ಫಲ ನಿನ್ನ ತಲೆಯು ಮೇಲಿರುತ್ತದೆ. ಆದರೂ..." ಎಂದು ಅಜಿತನ ಮುಖವನ್ನು ನೋಡುತ್ತ ಸ್ವಲ್ಪ ಹೊತ್ತು ತಡೆದ ಗೌಡ.

"ಅಂಥದೇನಿದರಲ್ಲಿ ?"

ಅಜಿತ ಎಷ್ಟು ನಿಶ್ಚಲನಾಗಿರಲು ಪ್ರಯತ್ನಿಸಿದರೂ ಮುಖ ವಿವರ್ಣವಾಗದೆ ಇರಲಿಲ್ಲ ಧ್ವನಿಯ ಮೇಲೆಯೂ ಹೃದಯದ ಪರಿಣಾಮ ಮೂಡಿತ್ತು. ಇಷ್ಟು ದಿನಗಳಿಂದ ಪೋಲೀಸ ಗೌಡಕಿ ಮಾಡಿದ ಗೌಡನಿಗೆ ಇದರರ್ಥ ಗ್ರಹಿಸಲಿಕ್ಕೆ ವಿಲಂಬ ಹತ್ತಲಿಲ್ಲ. ಕೂಡಲೇ ಅವರು ಚಟ್ಟನೆ ಎದ್ದು ಅಲ್ಲೇ ಪೆಟ್ಟಿಗೆಯು ಮೇಲಿನ ಪುಸ್ತಕವೊಂದನ್ನು ಕೈಗೆ ತಕ್ಕೊಂಡು—

"ಏನೇ ಇರಲಿ, ಅವನನ್ನು ಮೊದಲು ಕಳಿಸಿಬಿಡು!" ಎಂದರು. ಅವರ ಸ್ವರವು ಆಜ್ಞಾಪಿಸುವ ಮಾದರಿಯುದಾಗಿತ್ತು. "ಮುಂಬಯಿ ಮವಾಲಿಗಳ ಕೈ ನಿನಗೆ ತಿಳಿಯದು. ಗೆಳಯು ಅಂತ ಮನೆಯಲ್ಲಿ ಕರೆದು ತಂದು ಇಟ್ಟುಕೊಂಡಿರುವ ನೀ ಮರುಳು. ಯಾರ ವತನದ ಮೇಲಾದರೂ ನೀರು ಹಾಕಿ ಹೋದಾನು, ಅವನಿಗೇನು? ಗೆಳೆಯರೇನು ಮನೆ ಮಠಗಳ ಬಿಟ್ಟು ಆರಾರು ತಿಂಗಳು ಹೀಗ ನಿಲ್ಲುವರೋ?" ತಮ್ಮ ಅಜಿತ ಮರುಳನೆಂದೇ ಅವರ ನಂಬುಗೆ. ಇಲ್ಲವಾದರೆ ಆತ

ಇಂಥವರಿಗೆಂದೂ ಆಶ್ರಯ ಕೊಡಲಾರನೆಂಬುದು ಅವರಿಗೆ ಸಂಪೂರ್ಣ ವಿಶ್ವಾಸ ಇತ್ತು. ಈಗ ಅಜಿತ ಇನ್ನಿಷ್ಟು ನಿಷ್ಠುರವಾಗಿ ಹೇಳಿ ನೋಡ ಬೇಕೆಂದು ಯೋಚಿಸಿ,—

"ರಾಜಮಣಿಯು ನನ್ನ ಪ್ರೀತಿಯ ಗೆಳೆಯನಿದ್ದಾನೆ. ಊರ ಜನರ ಕಲ್ಪಿತ ಮಾತುಗಳನ್ನು ಕೇಳಿ ಹೀಗೆ ನೀವು ಅನ್ನಬಾರದು" ಎಂದನು.

"ನಾನು ಯಾರ ಮಾತುಗಳನ್ನೂ ಕೇಳಿ ಅನ್ನುವವನಲ್ಲ. ಇಲ್ಲಿ ನೋಡು!" ಎಂದು ಆಢ್ಯತೆಯಿಂದ — ಇಂದು ಅದರಲ್ಲಿ ಹೆದರಿಕೆ ಯಿತ್ತು — ಪೋಲೀಸ ಠಾಣೆಯಿಂದ ಬಂದ ಹುಕುಂ ತೆಗೆದು ಮುಂದೆ ಒಗೆದರು.

ಅಜಿತ ಆ ಹುಕುಮನ್ನು ಕೈಯಲ್ಲಿ ತಕ್ಕೊಂಡು ಓದತೊಡಗಿದ. ಕೈ ನಡುಗದೆ ಇರಲಿಲ್ಲ. ಅದರಲ್ಲಿ ಬರೆದ ಆಶಯ ಹೀಗಿತ್ತು:

"....ಹಿಂದೆ ಸಾಮ್ರಾಜ್ಯ ಸರಕಾರದ ವಿರೋಧ ಬಂಡೆಬ್ಬಿಸಿದ ಜನ ರಲ್ಲಿ ಕೆಲವರು ಇನ್ನೂ ಫರಾರಿಯಾಗಿದ್ದಾರೆ. ಅವರನ್ನು ಹಿಡಿಯಲಿಕ್ಕೆ ಸರಕಾರವು ಒಂದೇಸವನೆ ಯತ್ನಿಸುತ್ತಲಿದೆ. ಅವರಲ್ಲಿ ಒಬ್ಬಿಬ್ಬರು ಈ ಭಾಗದಲ್ಲಿ ಬಂದಿರುವರೆಂದು ತಿಳಿದು ಬಂದಿರುತ್ತದೆ. ಆದುದರಿಂದ ನಿಮ್ಮ ಊರಲ್ಲಿ ಯಾರಾದರೂ ಹೊಸಬರು—ಬೇರೆ ಪ್ರಾಂತದವರು— ಬಂದಿದ್ದರೆ ಅವರ ಬಗ್ಗೆ ಸಂಪೂರ್ಣ ತಪಾಸು ಮಾಡಿ, ಎಲ್ಲ ತರದ ಮಾಹಿತಿಯನ್ನೂ ತಕ್ಕೊಂಡು ಕೂಡಲೆ ಠಾಣೆಗೆ ತಿಳಿಸತಕ್ಕದ್ದು."

## ೨೩

ಅಜಿತ ಊರಲ್ಲಿ ಬಂದಾಗಿನಿಂದ ಸಿದ್ದಾಪುರದ ರಾಜಕೀಯ ಜೀವನ ದಲ್ಲಿ ಒಂದು ನವಚೇತನೆಯು ಬಂದಂತಾಗಿದ್ದಿತು. ಕಾಂಗ್ರೆಸ ಕಮೀಟಿಗೆ ಅವನೇ ಆಧಾರಸ್ತಂಭನಾಗಿ ನಿಂತಿದ್ದ. ಖಾದಿ ತೊಡುವವರಿಗೆಲ್ಲ ಹೊತ್ತಿಗೆ ಅರಿವೆ ಸಿಗುವಂತೆ ವ್ಯವಸ್ಥೆ ಮಾಡಿದ. ಇದುವರೆಗೆ ಸಮೀಪದ ನಗರ

ಗಳಲ್ಲಿರುವ ಖಾದಿಭಾಂಡಾರಗಳಿಂದಲೇ ಇವರೂ ಕೊಳ್ಳುತ್ತಿರುವದರಿಂದ ಅದರ ಲೆಕ್ಕವೆಲ್ಲ ನೆರೆಯ ಪ್ರಾಂತವಾದ ಮಹಾರಾಷ್ಟ್ರದ ಪ್ರಾಂತಿಕ ಕಮಿಟಿಗೇ ಸೇರಿಹೋಗುತ್ತಿದ್ದಿತು. ಅದಾಗದಂತೆ ಕರ್ನಾಟಕ ಖಾದಿ ಕೇಂದ್ರದವರೊಡನೆ ಪತ್ರವ್ಯವಹಾರ ನಡೆಯಿಸಿ ಊರಲ್ಲಿಯೇ ಒಂದು ಖಾದಿ ಅಂಗಡಿ ತೆರೆದ. ಅದರ ಪರವಾಗಿ ಹದಿನಾರು ಚರಕಗಳನ್ನೂ ನಡೆಯಿಸಿದ. ಕಾಂಗ್ರೆಸ ಕಾರ್ಯಾಲಯದಲ್ಲಿ ವಾರವಾರಕ್ಕೂ ವಾಕ್ ಸ್ಪರ್ಧೆಯನ್ನು ಏರ್ಪಡಿಸಿದ. ಜಾಧವ ಮಾಸ್ತರರ ಅಂತಃಕರಣದ ನೆರವಿದ್ದುದರಿಂದ ಹಾಯ್‌ಸ್ಕೂಲಿನ ವಿದ್ಯಾರ್ಥಿಗಳಲ್ಲಿ ಅನೇಕರು ಮೇಲಾಟದಲ್ಲಿ ಭಾಗವಹಿಸುತ್ತಿದ್ದರು. ರಾಜಕೀಯ ವಿಷಯಗಳ ಚರ್ಚೆಯೂ ಆ ಸಭೆಗಳಲ್ಲಿ ವಾರವಾರವೂ ಸುಂದರವಾಗಿ ನಡೆಯುತ್ತಿದ್ದಿತು. ಹೀಗೆ ಹಳ್ಳಿಯ ತರುಣರೆಲ್ಲ ಮುಂದಾಗಿ ಕಾರ್ಯ ಕೈಕೊಂಡರೆ ತಮ್ಮೂರು ಭಾರತದಲ್ಲಿಯೇ ಆದರ್ಶ ಹಳ್ಳಿಯಾಗದೆ ಇರದೆಂದು ಊಹಿಸಿದ. ತಾಲ್ಲೂಕ್ಯಾದ ತಲೆಯಲ್ಲಿ ಸಿದ್ದಾಪುರವನ್ನು ಮಾದರಿಯ ಗ್ರಾಮವನ್ನಾಗಿ ಮಾಡಿ ಆಮೇಲೊಮ್ಮೆ ಮಹಾತ್ಮರನ್ನು ಕರೆಯಿಸೋಣ ಎಂದೂ ವಿಚಾರಿಸದೆ ಇರಲಿಲ್ಲ ಅಜಿತ.

ಊರ ಗೌಡನೇ ಹೀಗೆ ಮುಂದಾಳಾಗಿ ನಿಂತುದರಿಂದ ಉಳಿದ ಕೆಲಸಗಾರರಿಗೆ ಇರುವ ಅಲ್ಪ ಸ್ವಲ್ಪ ಹೆದರಿಕೆಯೂ ಹಾರಿಹೋಯಿತು. ಅವರೂ ಮೈ ಸಡಿಲು ಬಿಟ್ಟು ಕಾಂಗ್ರೆಸಿನ ಚಟುವಟಿಕೆಗಳಲ್ಲಿ ತೊಡಗಿದರು. ಎಲ್ಲಿಯೋ ಮೂಲೆಗುಂಪಾಗಿ ಬಿದ್ದ 'ಸೇವಾದಲ' ತಿರುಗಿ ತಲೆ ಎತ್ತಿತು. ದಿನಾಲು ಸಂಜೆಗೆ ಕವಾಯಿತು ಆರಂಭವಾಯಿತು. ಹುಡುಗರೆಲ್ಲ ಹುರುಪಿನಿಂದ ಸೇರಿದರು. ಸ್ಕೂಲಿನ ಸ್ಕೌಟ ಟ್ರುಪಿನ ಸುದ್ದಿ ಸದ್ದಿಲ್ಲದೆ ಅಡಗಿತು. ಮೊದಲೇನೋ ನಾಲ್ಕು ದಿನ ಸ್ಕೌಟ ಮಾಸ್ತರರು ಒದರಾಡಿದರು. ಕೊನೆಗೆ ತಾವಾಗಿಯೇ ಸೇವಾದಲದ ಕವಾಯಿತಿನ ಶಿಕ್ಷಕರಿಗೆ ನೆರವಾಗಿ ನಿಂತರು, ರಾಜನಿಷ್ಠೆಯ ಪ್ರತಿಜ್ಞೆಯನ್ನು ಮರೆತು.

ಅಜಿತ ಹಾಗೂ ಅವನ ಸಂಗಡಿಗರ ಉಪದೇಶದ ಪರಿಣಾಮವಾಗಿ ಎರಡು ತಿಂಗಳುಗಳಲ್ಲಿ ಊರಲ್ಲಿಯ ಮೂರು ನಾಲ್ಕು ಚಹದಂಗಡಿಗಳು ಬಾಗಿಲ ಹಾಕಿದುವು. ಮದ್ಯದ ಗುತ್ತೇದಾರನಿಗೂ ಕೈ ಸುಡದೆ ಇರಲಿಲ್ಲ.

ಆ ಸಲ. ಕದ್ದು ಅಫು ಮಾರುವವನ ಗುಟ್ಟು ಹೊರಬಿದ್ದು ಕಾಂಗ್ರೇಸ ಕಮಿಟಿಗೆ ಐವತ್ತು ರೂಪಾಯಿ ದಂಡ ತೆತ್ತೂ ಆಯಿತು.

ಹೀಗೆ ಸಿದ್ದಾಪುರದಲ್ಲಿ ಅಜಿತನೊಬ್ಬ ಸಾರ್ವಜನಿಕ ಕೆಲಸಕ್ಕೆ ಸಂಜೀವನ ಕಡ್ಡಿಯಾಗಿ ನಿಂತ. ಅವನ ನೈತಿಕ ಬಲ, ನಿರ್ಭಯ ವೃತ್ತಿ, ಸಮಭಾವಗಳು ಜನತೆಯ ಹೃದಯದಲ್ಲಿ ಅವನಿಗೊಂದು ಉಚ್ಚಸ್ಥಾನ ವನ್ನು ಕಲ್ಪಿಸಿಕೊಟ್ಟಿದ್ದುವು. ಜನರು ಅವನನ್ನು ಹೋದಲ್ಲೆಲ್ಲ ತುಂಬ ಗೌರವದಿಂದ ಕಾಣುತ್ತಿದ್ದರು. ಇದನ್ನು ಕಂಡು ರಾವಸಾಹೇಬನಿಗೆ ಒಳಗೊಳಗೇ ತಳಮಳ. ತಾನು ಗೌಡನಾಗಿಯೂ ತನಗಿಲ್ಲದ ಸ್ಥಾನ ಇವನಿಗೆ ಇದೆಯಲ್ಲ ಎಂದು ಮರಗುವನು, ಕೊರಗುವನು. ಒಂದೆರಡು ಸಲ ವಾರಕ್ಕೊಂದು ಊರ ಅಧಿಕಾರಿಯೆಂದು ಮಾಡಬೇಕಾದ ಗುಪ್ತ ರಿಪೋರ್ಟಿನಲ್ಲಿ ಅಜಿತನ ಹೆಸರನ್ನೂ ಸೇರಿಸಿದ. ಆದರೆ ಸಹಿಗೆ ತಂದೆಯ ಹತ್ತರ ಒಯ್ದಾಗ ಮತ್ತೊಂದು ತಿದ್ದುಪಡಿಯ ಪ್ರತಿಯನ್ನು ತಯಾರಿ ಸುವ ಶ್ರಮ ಮಾತ್ರ ರಾವಸಾಹೇಬನ ಪಾಲಿಗೇ ಬರುತ್ತಿದ್ದಿತು. 'ಒನ್ನೆ ಸ್ವತಂತ್ರ ಗೌಡಕಿ ಕೊಟ್ಟು ನೋಡಲಿ, ಈ ಕಾಂಗ್ರೆಸಿನ ಹೆಸರೇ ಇಲ್ಲದಂತೆ ಮಾಡುವೆ!' ಎಂದು ಮನದಲ್ಲಿಯೇ ಮುಂಡಿಗೆ ಮಾಡುವನು. ತನ್ನ ತಂದೆಯೂ ಹರೆಯದಲ್ಲಿ ಹೀಗೆಯೇ ಅನ್ನುತ್ತಿದ್ದರೆಂಬುದು ಪಾಪ ಅವ ನಿಗೇನು ಗೊತ್ತು? ಆಗ ಇವನು ಇನ್ನೂ ಎಳೆಯ ಹುಡುಗ!

ರಾಜಮಣಿಯು ಮನೆಯಲ್ಲಿರುವ ವರೆಗೆ ಅಜಿತನನ್ನು ಅವನು ಯಾವ ಕೆಲಸಕ್ಕೂ ಅಷ್ಟು ಮುಂದಾಗಗೊಡುತ್ತಿರಲಿಲ್ಲ. ಮೊಸಳೆ ತಾನಿ ರುವ ಸ್ಥಳದಲ್ಲಿ ನೀರು ಕಲಕಾಗಗೊಡದಂತೆ ಅವನ ಪ್ರಯತ್ನವಿರುತ್ತಿ ದ್ದಿತು. ಆದರಿಂದ ಅವನು ಅಜಿತನಿಗೆ ಆಗಾಗ ಎಚ್ಚರ ಕೊಡುತ್ತಿ ದ್ದನು. 'ಸ್ವಲ್ಪ ತಡೆ, ಶಾಂತನಿರು, ಈ ಹೊತ್ತು ಬೇಡ, ನೀ ಹೊತ್ತ ಹೊಣೆ ಬೇರೆಯಿದೆ' ಎಂದೂ ಸೂಚಿಸುವ. ಒಂದು ಕ್ಷಣ ಅಜಿತನಿಗೆ ಹೌದೆನಿಸುವುದು. ಆದರೂ ಮನೆಯಿಂದ ಹೊರಬಿದ್ದನೆಂದರೆ ಎಲ್ಲಿಂದಲೋ ಹುಮ್ಮಸ್ಸು ಉಕ್ಕಿ ಬಂದು ಅವನಿಗೆ ಕಾರ್ಯಮಾಡಲು ಸ್ಫುರಣಗೊಡು ತ್ತಿದ್ದಿತು.

ಇದನ್ನರಿತ ರಾಜಮಣಿಯು ಅಜಿತನನ್ನು ಮನೆಯಲ್ಲಿಯೇ ರಾಜ

ಕೀಯ ವಿಷಯಗಳ ಚರ್ಚೆಗೆಳೆಯುವವನು. ರಾಜಮಣಿಯು ಚನ್ನಾಗಿ ಅಭ್ಯಾಸಿಸಿದವ. ಚರ್ಚೆ ತೀವ್ರವಾಗಿ ಸಾಗುವದು. ಅಜಿತನು ಅಹಿಂಸಾಮಾರ್ಗಿಯಾದರೆ ಅವನು ಹಿಂಸಾಪ್ರವೃತ್ತಿಯುಳ್ಳವನು. ಆ ವಾತಾವರಣದಲ್ಲಿಯೇ ಕಾಲಕಳೆದವನಾತ.

"ಅಹಿಂಸೆ, ಸತ್ಯ, ನ್ಯಾಯ ಎಂದು ಕೂಗಾಡುವಿರಿ. ಹಿಂದಿನ ಇತಿಹಾಸದ ಕಡೆಗೆ ದೃಷ್ಟಿ ಹೊರಳಿಸಿದರೆ ಯಾರಾದರೂ ಅಹಿಂಸೆಯಿಂದ ರಾಜ್ಯಗಳಿಸಿದ್ದಕ್ಕೆ ಪ್ರಮಾಣ ಸಿಕ್ಕುವದೇ? ಸೈನ್ಯಬಲವೇ ಬೇಕು ಅದಕ್ಕೆ. ರಕ್ತ ಹರಿದರೇನೇ ಸ್ವಾತಂತ್ರ್ಯ. ಭಿಕ್ಷೆ ಬೇಡಿದರೆ ಬ್ರಿಟಿಷರು ರಾಜ್ಯ ಕೊಟ್ಟಾರೆಯೇ ನಿಮಗೆ? ರಶಿಯನ್ನ ಕ್ರಾಂತಿಯೂ ರಕ್ತ ಬೀಳದೆ ಆಗಲಿಲ್ಲ!"

"ಸೈನ್ಯಬಲ! ಸೈನ್ಯಬಲ! ಎಂದು ಹಾರಾಡುವದಾಯಿತು. ಅನಾದಿ ಕಾಲದಿಂದಲೂ ಇಂದಿನ ವರೆಗೆ ಸೈನ್ಯಬಲದ ಮೇಲೆ ಕಟ್ಟಿದ ರಾಜ್ಯ ಯಾವುದು ಸ್ಥಿರವಾಗಿ ನಿಂತಿದೆ ಹೇಳು ನೋಡೋಣ?" ಅಜಿತನ ಮರು ಸವಾಲಿದು.

ರಾಜಮಣಿಯು ಸ್ವಲ್ಪ ಹೊತ್ತು ಸುಮ್ಮನೆ ಕೂಡುವ. ಆಮೇಲೆ ಮೆಲ್ಲನೆ ನುಡಿಯುವ.

"ರಾಜ್ಯಗಳು ಸ್ಥಿರವಾಗಿ ನಿಂತಿಲ್ಲ ನಿಜ. ಸೈನ್ಯದ ಸಾಮರ್ಥ್ಯ ಕುಂದಿದಾಗಲೇ ರಾಜ್ಯಗಳು ಉರುಳಿ ಬಿದ್ದಿವೆ, ಎದುರಾಳಿಯು ಸೈನ್ಯ ಬಲದ ಮುಂದೆ ತಾಳದೆ."

"ಅದೇ ನೋಡು, ಈ ರಾಜ್ಯಗಳು ಇಂದಿಲ್ಲ ನಾಳೆ ನಷ್ಟವಾಗತಕ್ಕವೇ. ಸೈನ್ಯದ ಬಿಗುವೇ ಅಷ್ಟು ಅಸ್ಥಿರವಾದದ್ದು. ಅದೇ ಅಹಿಂಸಾ ತತ್ವದ ಮೇಲೆ ಸ್ಥಾಪಿತವಾದ ರಾಜ್ಯಕ್ಕೆ ಈ ಹೆದರಿಕೆಯಿಲ್ಲ."

ರಾಜಮಣಿಯು ಅಜಿತನ ಮಾತನ್ನು ನಡುವೆಯೇ ತಡೆದು, "ಅಹುದು. ಅಹಿಂಸೆಯಿಂದ ರಾಜ್ಯಸ್ಥಾಪನೆಯೇ ಆಗುವದಿಲ್ಲವೆಂದ ಮೇಲೆ ನಷ್ಟವೆಲ್ಲಿಂದ ಆಗಬೇಕು?" ನಗೆಯಾಡುವನದಕ್ಕೆ.

"ನಗೆಯ ಮಾತಲ್ಲ ರಾಜಮಣಿ! ಯಾವದಾದರೊಂದು ತತ್ವವನ್ನು ಪರೀಕ್ಷಿಸಬೇಕಾದರೆ ಅದನ್ನು ಸಾರ್ವಜನಿಕವಾಗಿ ಪ್ರಯೋಗಿಸಿ

ನೋಡಬೇಕು." ಅಜಿತನ ಮುಖ ಗಂಭೀರವಾಗುವುದು. "ಭಿಕ್ಷೆ ಬೇಡುವುದೇ ಒಂದು ತತ್ವವೆಂದಿಟ್ಟುಕೊಳ್ಳೋಣ. ಅದನ್ನು ಸಾರ್ವಜನಿಕವಾಗಿ ಪ್ರಯೋಗಿಸಿ ನೋಡಿರಿ ಏನಾಗುತ್ತದೆ? ಊರೆಲ್ಲ ಭಿಕ್ಷುಕರಾದೊಡನೆ ನೀಡುವವರಾರು? ತತ್ವವೇ ನಷ್ಟವಾಗಿ ಹೋಗುವದಲ್ಲಿ. ಅದರಂತೆ ಹಿಂಸೆಯನ್ನೂ ಹೋದ ಮಹಾಯುದ್ಧದಲ್ಲಿ ವ್ಯಾಪಕವಾಗಿ ಪ್ರಯೋಗಿಸಿ ನೋಡಿಯಾಗಿದೆ. ಹೊರಟ ಫಲವೇನು? ಗೊತ್ತೇ ಇದೆ. ಇದೇ ರೀತಿ ಹಿಂಸೆಯ ಪ್ರಯೋಗ ಬುನಾದಿಯಿಂದ ನಡೆಯುತ್ತ ಒಂದು ಅಯಶಸ್ವಿಯಾಗುತ್ತಲಿದೆ. ಆದರಿಂದ ಈಗ ಅಹಿಂಸೆಯನ್ನೇ ದೊಡ್ಡ ಪ್ರಮಾಣದಲ್ಲಿ ಆಚರಿಸಿ ನೋಡುವುದು. ಇದರಲ್ಲಿ ಬಲತ್ಕಾರವಿಲ್ಲ, ಹೃದಯದ ಪರಿವರ್ತನೆಯಿದೆ."

"ಇದು ಶಕ್ಯವಿದೆಯೇ?"

"ಅದೇಕೆ ಶಕ್ಯವಿಲ್ಲ? ಸೈನ್ಯಬಲಕ್ಕೆಂದರೆ ದಿನಕ್ಕೆ ಕೋಟಿಗಟ್ಟಲೆ ಹಣ ವೆಚ್ಚ ಮಾಡುವಿರಿ. ಅಹಿಂಸಾ ಪದ್ಧತಿಯೆಂದೊಡನೆ ಸುಮ್ಮನೆ ಶ್ರಮವಿಲ್ಲದೆ ಕಾರ್ಯಸಾಧನೆಯಾಗಬೇಕಲ್ಲವೆ?" ನಗೆಯ ಸರತಿ ಈ ಸಲ ಅಜಿತನದಾಗಿದ್ದು, ನಗೆಯ ಓಘ ಇಳಿದೊಡನೆ "ಅಹಿಂಸಾ ಪದ್ಧತಿಗೂ ತ್ಯಾಗ ಬೇಕು. ಧನದ ತ್ಯಾಗವಲ್ಲ, ಸ್ವಾರ್ಥತ್ಯಾಗ! ತಿಳಿಯಿತೇ?"

ಹೀಗೆ ವಿಷಯವಿವೇಚನೆಯಲ್ಲಿಯೇ ಅಜಿತ ಎಷ್ಟೋ ಸಲ ಹೊರಗೆ ಹೋಗುವದನ್ನು ಮರೆಯುತ್ತಿದ್ದ. ಆದರೂ ಅಲ್ಲಿಯೇ ಕಾರ್ಯಕರ್ತರು ಬಂದು ಏನಾದರೂ ಸಲಹೆ ತಕ್ಕೊಂಡು ಹೋಗುತ್ತಿದ್ದರು. ಇವೆಲ್ಲವುಗಳಿಂದ ಆಧ್ರಗೌಡನ ಮನಸ್ಸು ಅಳುಕುತ್ತಿದ್ದಿತು. ಒಂದು ಕ್ಷಣ 'ಅವನಿಗೂ ನನಗೂ ಸಂಬಂಧವಿಲ್ಲವಲ್ಲ! ಅವನಷ್ಟಕ್ಕೆ ಅವನು! ಮಾಡಿದ್ದನ್ನು ಉಣ್ಣುವನು!' ಎಂದುಕೊಂಡು ಸಮಾಧಾನ ತಾಳುವನು. ಆಂದರೂ ಮನೆತನಕ್ಕೆಯೇ ಕಲಂಕಪ್ರಾಯವೆನಿಸುವ ಪ್ರಸಂಗಗಳು ಬಂದಾಗ ಎಚ್ಚರ ಕೊಡದೆ ಇರುತಿರಲಿಲ್ಲ. ಅದರಂತೆಯೇ ಇಂದು ಪೋಲೀಸ ಠಾಣೆಯಿಂದ ಬಂದ ಹುಕುಮನ್ನು ಕರೆದು ತೋರಿಸಿದ್ದ ಅಜಿತನಿಗೆ ಉಭಯ ಸಂಕಟಕ್ಕಿಟ್ಟುಕೊಂಡಿತು. ಮನೆಗೆ ಹೋಗಿ ರಾಜಮಣಿಗೆ ಏನು ಹೇಳಬೇಕು? ಅವನನ್ನು ಎಲ್ಲಿ ಇಡಬೇಕು? ಅವನ ಮುಂದಿನ

ವಿಚಾರದ ಸಲುವಾಗಿಯೂ ಏನೂ ತಿಳಿಯಲಿಲ್ಲ. ಹೀಗೆಯೋ ಏನಾದರೂ ಆಗಿ ಸಿಕ್ಕುಬಿದ್ದರೆ! ತನಗೆ ಆಗುವ ಶಿಕ್ಷೆಗಾಗಿ ಅಜಿತ ಅಷ್ಟು ಯೋಚಿಸುತ್ತಿರಲಿಲ್ಲ; ಹೆದರುತ್ತಿರಲಿಲ್ಲವೂ ಕೂಡ. ಆದರೆ ರಾಜಮಣಿಯು ಮುಂದೆ ಠಶಿಯಕ್ಕೆ ಹೋಗಿ ಬಂದು, ಅವನಿಂದ ಆಗಬೇಕಾದ ರಾಷ್ಟ್ರಕಾರ್ಯ ನಿಲ್ಲುವದಲ್ಲ! ಎಂಬುದೇ ಆತನನ್ನು ಇಷ್ಟು ವಿಚಾರಕ್ಕೆ ಕೆಡವಿದ್ದಿತು. ಭಾರವಾದ ಮನಸ್ಸಿನಿಂದಲೇ ಮನೆಗೆ ಬಂದು ತಲುಪಿದ. ಬರುವಷ್ಟರಲ್ಲಿ ರಾಜಮಣಿಯು ಸಂತೋಷದಿಂದ ಒಂದು ಮುಚ್ಚೋಲೆಯನ್ನು ಅಜಿತನಿಗೆ ತೋರಿಸಿ, "ನಾಳೆ ಮುಂಜಾನೆಯ ಗಾಡಿಗೆ ನನ್ನನ್ನು ಲೋಂಡಾ ಸ್ಟೇಶನಕ್ಕೆ ತಲುಪಿಸಿ ಬರುವ ಕೆಲಸವನ್ನಷ್ಟು ಮಾಡು ಅಂದರಾಯಿತು." ಗೆಲುವಿನ ಮುದ್ರೆಯಿಂದ ನುಡಿದ.

ಅಜಿತನ ಮನಸ್ಸಿಗೆ (Pass port) ಸಿಕ್ಕುದಕ್ಕೆ ಹಗುರೆನಿಸಿತು. ಚಿಂತೆ ದೂರಾದಂತಾಯಿತು. ಕಾಗದ ಓದಿದ. ಮುಂದಿನ ಪರದೇಶದ ಪ್ರಯಾಣದ ವ್ಯವಸ್ಥೆಯೆಲ್ಲ ಆಗಿದೆಯೆಂದು ಅದರಲ್ಲಿ ಬರೆದಿದ್ದಿತು. ವೇಷ ಬದಲಿಸಲೂ ಸೂಚನೆಯಿತ್ತು. ಸಹಿಯಿಲ್ಲದ ಕಾಗದವದು. ನೋಡಿ, ಠಕ್ಕ ತನ್ನನ್ನು ಕರೆಯಿಸಿದ ಕಾರಣವನ್ನು ಬಿಚ್ಚುಮನಸ್ಸಿನಿಂದ ವಿವರಿಸಿದ, ಅಜಿತ. ಆಗ ರಾಜಮಣಿಯೂ ಹೇಳಿದ :

"ಇಂತಹ ರಾಜನಿಷ್ಠ ಗೌಡರ ಮನೆಯಲ್ಲಿ ನಾನೂ ನೆಮ್ಮದಿಯಾಗಿಲ್ಲ. ನನ್ನ ಪ್ರಾಂತವನ್ನು ಬಿಟ್ಟು ಬಹುದೂರ ಬಂದುದಕ್ಕೆ— ಇಲ್ಲಿ ಗುರುತಿಸುವವರು ಯಾರೂ ಇಲ್ಲೆಂದು—ಸ್ವಲ್ಪ ಶಾಂತವಾಗಿದ್ದೆನಷ್ಟೇ. ರಾತ್ರಿಯ ಗಾಡಿಗೆ ಬಂದು ಇಳಿದುದರಿಂದ ಯಾವ ತರದ ಗಲಾಟೆಯೂ ಆಗಲಿಲ್ಲ. ಇಲ್ಲವಾದರೆ ಗುಪ್ತ ಪೋಲೀಸರು ಈ ಮೊದಲೆ ನನ್ನನ್ನು ಪೀಡಿಸಬಹುದಾಗಿತ್ತು. ಹಲವರ ಹತ್ತರ ನನ್ನ ಭಾವಚಿತ್ರಗಳಿವೆ!"

ಆಮೇಲೆ ಸ್ವಲ್ಪವೂ ವೇಳೆಗಳೆಯದೆ ಅವರು ಮಾಡಿದ ಕೆಲಸವೆಂದರೆ ರಾಜಮಣಿಯ ವೇಷವನ್ನು ಬದಲಾಯಿಸಿದುದೇ. ಮರುದಿನ ನಸುಕಿನಲ್ಲಿ ಒಬ್ಬ ಕ್ಷೌರದವನು ಬಂದು ರಾಜಮಣಿಯ ತಲೆಯನ್ನು ನುಣ್ಣಗೆ ಬೋಳಿಸಿದ ಅಜಿತ ತಮ್ಮ ಮನೆಯ ಆಳಿನ ಕಡೆಯಿಂದ ತರಿಸಿ ಅತ್ಯಂತ ಸಾಮಾನ್ಯ ತರಗತಿಯ ಉಡಿಗೆ ತೊಡಿಗೆ ಕೊಟ್ಟ. ಅಂತೂ ಮರುದಿನ ರಾಜಮಣಿಯು

ಅಜಿತನ ಬ್ಯಾಗನ್ನು ಉಗಿಬಂಡಿಯಲ್ಲಿ ಎತ್ತಿಟ್ಟು, ಹಿಂದಿನ ಡಬ್ಬಿಗೆ ಓಡು ವಾಗ ತರುಣ ಹಮಾಲನೆಂದೇ ಎಲ್ಲರೂ ಗುರುತಿಸುವಂತಿತ್ತು.

ರಾಜಮಣಿಯು ಅತ್ಯಂತ ಚತುರ ಉಪಾಯಗಳಿಂದ ಸಿ. ಆಯ್. ಡಿ. ಗಳ ಕಣ್ಣಿಗೆ ಮಣ್ಣೆರಚಿ ಭಾರತವನ್ನು ಬಿಡಬೇಕಾಗಿದ್ದಿತು. ಆತನ ವ್ಯವಸ್ಥೆ ಗೆಂದು—ಭೆಟ್ಟಿಗೆಂದು—ಲೋಂಡಾ ಜಂಕ್ಷನ್ನಿನಲ್ಲಿ ಹಲವರು ಗೆಳೆಯರು ನಿಂತಿದ್ದರು. ಪ್ರವಾಸಿಕರ ಗೊಂದಲದಲ್ಲಿ ಗುರುತು ಬೇಗನೇ ಸಿಕ್ಕ ಬೇಕೆಂದು ಒಬ್ಬಿಬ್ಬರ ಕೈಯಲ್ಲಿ ಸಾಂಕೇತಿಕ ಹಳದಿ ಬಣ್ಣದ ಅರಿವೆ ಗಳಿದ್ದುವು. ಗಾಡಿಯು ಬಂದಿತು. ರಾಜಮಣಿಯು ಮುಗುಳು ನಗೆ ಯೊಡನೆ ಇಳಿದನು. ಅಜಿತನೂ ದೂರದಲ್ಲಿ ಇಳಿದಿದ್ದನು. ರಾಜಮಣಿಯು ಬೀಡಿಯ ತುಂಡೊಂದನ್ನು ಹೊತ್ತಿಸಿ ಬಾಯಿಗಿಟ್ಟ. ಸೂಚನೆಯನ್ನು ಕಂಡು ಅಜಿತ ಅವನ ಗೆಳೆಯರು ಬಂದಿರುವರೆಂದು ಅರಿತ. ಮುಖ ಕಾನಾಗಿಯೇ ಗೆಲುವಿನ ನಗೆ ಬೀರಿತು. ಪೋಲೀಸರ ಸುಳಿದಾಟದಲ್ಲಿಯೇ ಹಮಾಲ ರಾಜಮಣಿಯು ಕೆಲ ತರುಣರ ಸಾಮಾನು ಹೊತ್ತುಕೊಂಡು ಇನ್ನೊಂದು ಗಾಡಿಗೆ ಸಾಗಿದ. ಉಳಿದವರೂ ಬೆನ್ನುಹತ್ತಿದರು.

ಅಜಿತನ ಗಾಡಿ ಕೂಗು ಹೊಡೆಯಿತು. ತಿರುಗಿ ಗಾಡಿಯಲ್ಲಿ ಏರಿದ. ಅವನ ತಿಕೀಟು ಹುಬ್ಬಳ್ಳಿಯ ವರೆಗೂ ಇತ್ತು, ಇರಬೇಕಾಗಿತ್ತು. ಹೊರ ಡುವ ಹೊತ್ತಿಗೆ, "ಹಲೋ ಫ್ರೆಂಡ್!" ಎಂದು ಯಾವನೋ ಒಬ್ಬ ಶೇಕ್‌ಹ್ಯಾಂಡ ಕೊಟ್ಟು, ಅದರೊಡನೆಯೇ ಒಂದು ಚೀಟಿಯನ್ನಿತ್ತು ಹೋದ. ಅದರಿಂದ ಅಜಿತನಿಗೆ ಗೊತ್ತಾಯಿತು. "ರಾಜಮಣಿಯು ಭಾರತದಿಂದ ಹೊರಗೆ ಹೋಗುವ ವರೆಗಿನ ಹೊಣೆಯನ್ನು ಗೋವೆಯಲ್ಲಿ ರುವ ಪ್ರಸಿದ್ಧ ವ್ಯವಹಾರಿಯೊಬ್ಬನು ಹೊತ್ತಿದ್ದ. ಆ ವ್ಯವಸ್ಥೆಯಲ್ಲಿ ಕೆಲ ಭಾಗ ಈಗಾಗಲೇ ಆಗಿದ್ದಿತು. ಆ ವ್ಯಾಪಾರಿಯ ಮಗನೂ ಇಲ್ಲಿಯ ವರೆಗೆ ಬಂದಿದ್ದನಂತೆ. ನೋಡಿ ಹರಿದು ಕೈಯಲ್ಲಿ ಕೊಟ್ಟ ಅಜಿತ, ಆ ಚೀಟಿಯನ್ನು.

ಅಜಿತ ಮರಳಿ ಊರಿಗೆ ಬರುವಷ್ಟರಲ್ಲಿ ಸುಧೀರನ ಓಲೆ ಬಂದಿದ್ದಿತು. ಗುಣವಂತಿಯು ತಂದು ಕೈಗಿಡುತ್ತ, "ನೋಡಿರಿ! ಗೆಳೆಯ ಗೆಳೆಯ ಎಂದು ಹಗಲಿರುಳೂ ಅವನಲ್ಲಿಯೇ ಮಗ್ನನಾಗಿ ಎಂಥ ಸಂದರ್ಭವನ್ನು ಕಳೆದು

ಕೊಂಡಿರಿ!" ಎಂದು ನಕ್ಕಳು ನಲ್ಲೆ.

ಅಜಿತ ಕಾಗದವನ್ನು ಕೈಯಲ್ಲಿ ತಕ್ಕೊಂಡು ರಾಜಮಣಿಯ ನಿಜ ಸಂಗತಿಯನ್ನು ಅರುಹಿದ, ನಾಲ್ಕು ಮಾತುಗಳಲ್ಲಿ, ನಗೆಯನ್ನು ಬೀರುತ್ತ. ಆಮೇಲೆ ಕಾಗದ ಅವಳಿಗೆ ಓದ ಹೇಳಿದ. ಅವಳು ಮೆಲ್ಲಗೆ ಓದತೊಡಗಿದಳು.

"ಕ್ರಾಂತಿಗೆ ಗೆಲವು"

ಮುಂಬಯಿ

೧—೧—೩೨

"ಕಾಮ್ರೇಡ ಅಜಿತನಿಗೆ—

ಮೊನ್ನೆ ೨೮ನೆಯ ತಾರೀಖಿಗೆ ಮಹಾತ್ಮರು ಲಂಡನದಿಂದ ಬಂದಿಳಿದರು. ಆಗ ನೋಡಬೇಕಿತ್ತು, ಮುಂಬಯಿ ನಗರದ ಸೊಬಗನ್ನು. ನೀನಿದ್ದರೆ ಅಂದೇ ನಿನ್ನ ಕಣ್ಣಿನ ಸಾಫಲ್ಯವಾಯಿತೆಂದು ಭಾವಿಸುತ್ತಿದ್ದೆಯೇನೋ! ನನಗೇನೇನೋ ಅನ್ನಿಸಿತು. 'ಈ ಜನಸಮೂಹದಲ್ಲಿ ಅಲ್ಲಲ್ಲಿ ಕೆಂಪು ಧ್ವಜಗಳನ್ನು ಹಿಡಿದು ಭಾವಚಿತ್ರ ತೆಗೆಯಿಸಿ, ಭಾರತದಲ್ಲಿ ಕೂಲಿಕಾರರ ಸಂಪಿನ ಕಾಲದ ಸಂದರ್ಭವೆಂದೂ ಪರದೇಶದ ಪತ್ರಿಕೆಗಳಿಗೆ ಕೊಡಬೇಕು' ಎಂದು ಕಲ್ಪನೆ ಹೊಳೆಯಿತು. ಜನಸಮುದಾಯ ಸಮುದ್ರಕ್ಕೆ ಪ್ರತಿಸ್ಪರ್ಧಿಸುತ್ತಿರುವಂತೆ ತೋರುತ್ತಿದ್ದಿತು ಮಹಾತ್ಮರ ಸ್ವಾಗತದ ಜನಸಮ್ಮರ್ದವಿಷ್ಟು! ಇದು ಅವರಿಗಿದ್ದ ಜನತೆಯ ಸಹಾನುಭೂತಿಯ ಪ್ರತೀಕವೇ ಅಲ್ಲವೆ? ಅದರಲ್ಲಿಯೂ ಒಂದು ವಿಶೇಷ ಸಂಗತಿ ಘಟಿಸಿತು. ಅದಕ್ಕೆ ನಾನು ವಿಶೇಷ ಸಂಗತಿಯೆಂದೇ ಅನ್ನುವೆ. ಡಾ. ಅಂಬೇಡಕರ ಪಾರ್ಟಿಯವರು ಮಹಾತ್ಮರಿಗೆ ಕಪ್ಪು ನಿಶಾನೆಯನ್ನು ತೋರಿಸುವುದೆಂದು ನಿಶ್ಚಯಿಸಿದ್ದರು ಅದಕ್ಕಾಗಿ ಹಳ್ಳಿಹಳ್ಳಿಗಳಿಂದ ಸಾವಿರಾರು ಜನ ಅಶಿಕ್ಷಿತರನ್ನು ಕರೆದು ತಂದಿದ್ದರಂತೆ. ಮುಂಚಿತ ತಾಲೀಮೂ ಕೊಟ್ಟಿದ್ದರೆಂದು ಕೇಳುವೆನು, "ಹುಚ್ಚು ಗಾಂಧಿ" ಎನ್ನುವುದಕ್ಕೆ; ನಿಶಾನೆಯೆತ್ತುವುದಕ್ಕೆ. ಪಾಪ ನಗರಗಳಲ್ಲಿ ಅಂಬೇಡಕರರಿಗೆ ಯಾರು ಸಿಗಬೇಕು! ಆದರೆ ಗಾಂಧಿಜಿಯವರು ಬರುವ ದಿನ ಬಂದಂತೆ ಸಾವಿರದ ಸಂಖ್ಯೆ ನೂರಕ್ಕಿಳಿಯಿತು. ಇನ್ನೂ ಒಂದು ಚಮತ್ಕಾರದ ಸಂಗತಿ

ಮಹಾತ್ಮರು ಹಡಗದಿಂದಿಳಿಯುವಾಗ ಕರಿ ನಿಶಾನೆಗಳು ಎಲ್ಲಿಯೋ ಮಾಯವಾಗಿ ಹೋಗಿ, ಪ್ರಚಂಡ ಜನಸಮೂಹದ ಜಯಜಯಕಾರ ದೊಡನೆ ಆ ಜನವೂ "ಗಾಂಧೀ ಮಹಾರಾಜಕೀ ಜೈ!" ಎಂದೇ ಘೋಷಿಸ ಬೇಕೇ? ಅಂಬೇಡಕರರ ಪ್ರಯತ್ನದ ಫಲಶ್ರುತಿಯಿದು! ಏನಾಗಲೂ ಈಗ ಭಾರತ ಎಚ್ಚತ್ತಿದೆ. ಇಂದಿಲ್ಲ ನಾಳೆ ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ಕಟ್ಟಿಟ್ಟುದೇ. (ಆದರೆ ಅದು ನಿನ್ನ ಮಾರ್ಗದಿಂದಲ್ಲ. ಇನ್ನೊಂದು ಮಾರ್ಗದಿಂದ ಮಾತ್ರ.)

ಇರಲಿ. ಆ ಸಂದರ್ಭದಲ್ಲಿ ನೀನಿರುತ್ತಿದ್ದರೆ ಎಷ್ಟು ಆನಂದ! ಎಂದು ಸೌಭಾಗ್ಯವತಿಯು ನೆನೆದಳು. ವಿಜಯನೊಡನೆ ಇಬ್ಬರೂ ಹೋಗಿ ದ್ದೆವು."

ನಿನ್ನ
"ಸುಧೀರ"

ಗುಣವಂತಿಯು ಓದಿಯಾದ ಮೇಲೆ ಅಜಿತನ ಕೈಗೆ ಕೊಟ್ಟಳು. ಅವನು ಅದನ್ನೇ ಇನ್ನೊಮ್ಮೆ ನೋಡನೋಡುತ್ತ ಮುಗುಳು ನಗೆ ಯೊಂದನ್ನು ಬೀರಿದ ಅದರೊಡನೆಯೆ.

"ಇನ್ನೂ ತನ್ನ ಹಟ ಬಿಟ್ಟಿಲ್ಲವಲ್ಲ ಸುಧೀರ?" ಎಂದನು.

"ಏನು ಅವನ ಹಟವೇನು ಕಂಡಿರಿದರಲ್ಲಿ?" ಬೆರಗಿನಿಂದ ಕೇಳಿ ದಳು ಗುಣವಂತಿ.

"ಇನ್ನೂ ಕಾಂಗ್ರೆಸಿನ ಮಾರ್ಗದಲ್ಲಿ ಅವನಿಗೆ ಅಷ್ಟು ವಿಶ್ವಾಸ ವಿಲ್ಲ. ಒಬ್ಬೊಬ್ಬರ ವಿಚಾರ ಒಂದೊಂದು ರೀತಿ. ರಾಜಮಣಿಯು ರಕ್ತಪಾತದಿಂದ ಸ್ವರಾಜ್ಯವೆಂದರೆ ಈತ ಕೂಲಿಕಾರರ ಸಂಘಟನೆಯಿಂದ ಸ್ವರಾಜ್ಯವೆನ್ನುವನು ಮಹಾತ್ಮರು ಅಹಿಂಸೆಯೇ ನಮ್ಮ ಅಸ್ತ್ರವೆನ್ನು ವಾಗ ಸಾವರಕರರ ಪಕ್ಷದವರು ಮುಸಲ್ಮಾನರನ್ನು ಹಣ್ಣಿಗೆ ತಂದರೇನೇ ಭಾರತಕ್ಕೆ ಸ್ವಾತಂತ್ರ್ಯವೆನ್ನುವರು. ಬ್ಯಾ. ಜಿನ್ನಾಸಾಹೇಬನು ಪಾಕಿ ಸ್ತಾನ ಬೇಡಿದರೆ ಅಂಬೇಡಕರರು ಹರಿಜನಸ್ತಾನವೇಕಿಲ್ಲ? ಎಂದು ಕೂಗು ಹೊಡೆದು ಕರಿನಿಶಾನೆಯೆತ್ತುವನು. ಕೂಸು ಸತ್ತರೂ ಅಡ್ಡಿ ಯಿಲ್ಲ, ನಮ್ಮ ಪಾಲಿನ ಹೋಳು ನಮಗೆ ದೊರೆಯಲೇ ಬೇಕು ಎನ್ನುವ

ಸುಳ್ಳುಗರುಳಿನ ತಾಯಿಯ ಹಟವಿದ್ದಂತೆ ಇವರ ನ್ಯಾಯ. ಇಂತಹ ವಿಚಿತ್ರ ಭಾವಾವೇಶದ ಮುಂದಾಳುಗಳ ಕೈಯಲ್ಲಿ ಸಿಕ್ಕ ಭಾರತವು ಸುಂಟರಗಾಳಿಯಲ್ಲಿ ಸಿಕ್ಕ ರವದೆಯಂತೆ ನೆಲೆಗಾಣದೆ ತಿರುಗತೊಡಗಿದೆ. ಅಯ್ಯೋ! ಭಾರತದ ದುರ್ವಿಧಿಯೇ!"

ಹೀಗೆಯೇ ಅಜಿತನ ಗೂಡ ಮಾತು ಬೆಳೆಯುವದೆಂದು ಗುಣವಂತಿಯು ಸುಮ್ಮನಾದಳು. ಮುಂದೆ ಆವನ ಮಾತಿಗೆ ಪುಷ್ಟಿಯನ್ನು ಕೊಡಲಿಲ್ಲ.

ಅಜಿತ ಸುಖವಾಗಿ ಒಂದು ವಾರ ಮನೆಯಲ್ಲಿ ಕಳೆದಿರಬೇಕು. ಸರಕಾರವು ಕಾಂಗ್ರೇಸ ಕಮೀಟಿಗಳು ಕಾಯಿದೆಯ ವಿರುದ್ಧವೆಂದು ಸಾರಿತು. ಮಹಾತ್ಮರಿಗೆ ಸೆರೆಮನೆಯ ಔತಣ ಬಂದಿತು. ಕಾಯಿದೆ ಭಂಗದ ಬಿರುಗಾಳಿಯು ಭಾರತದ ತುಂಬೆಲ್ಲ ಬೀಸಿತು.

ಎಲ್ಲೆಲ್ಲೂ ಗುಜುಗುಜು. ಸರಕಾರದವರು ಹೊಸ ಹೊಸ ಶಾಸನ ಬಾಣಗಳನ್ನು ತಯಾರಿಸಿದ್ದಾರಂತೆ. ಭಾರತೀಯರ ಚಳವಳಿಯನ್ನೇ ಇಲ್ಲದಂತೆ ಮಾಡುವುದೇ ಅವುಗಳ ಉದ್ದೇಶ. ಉತ್ತರ ದೇಶದಲ್ಲಿ ಜನತೆ ಬಿಸಿಬಿಸಿಯಾಗಿ ಕೆಲಸ ಮಾಡಿದುದೇ ಅದಕ್ಕೆ ಕಾರಣ. ಈಗ ಶಾಸನಕ್ಕೆ ತಲೆಬಾಗಿಸಿ ಮನೆಯನ್ನು ಹಿಡಿಯಬೇಕು. ಇಲ್ಲವಾದರೆ ಸರಕಾರದ ಕೈಗೆ ಸಿಕ್ಕದೆ ಏನಾದರೂ ಕೆಲಸ ಮಾಡಬೇಕು. ಇವೆರಡೇ ಮಾರ್ಗಗಳು ಕಾರ್ಯಕರ್ತರ ಮುಂದುಳಿದುವು.

ಈಗಾಗಲೇ ಆರ್ಡಿನೆನ್ಸ್‌ಗಳು ಪ್ರಾರಂಭವಾಗಿವೆ. ಬಹಿರಂಗವಾಗಿ ಚಳವಳಿಯನ್ನು ನಡೆಯಿಸುವುದು ಅಸಾಧ್ಯ. ಮುಂದೆ ಹೋದ ಮುಖಂಡರನ್ನಷ್ಟು ಹಿಡಿದೊಯ್ದರೆ ಜನತೆಯೇ ಚಳವಳಿಯನ್ನು ಸಾಗಿಸುವಷ್ಟು ಸುಧಾರಿಸಿಲ್ಲ. ಏನು ಮಾಡಬೇಕೆಂಬುದು ವಿಚಾರಕ್ಕೆಯೇ ಇಟ್ಟುಕೊಂಡಿತು ಅಜಿತನಿಗೆ. ಏನಾದದ್ದಾಗಲಿ ವಲ್ಲಭಭಾಯಿ ದಿನವನ್ನು ಆಚರಿಸುವದೆಂದು ಕಾಂಗ್ರೇಸ ಕಮೀಟಿಯಲ್ಲಿ ನಿಶ್ಚಯಿಸಿದ. ದಿನಾಚರಣೆಗೆ ಸರಕಾರವು ಅಡ್ಡಿ ಪಡಿಸುತಲಿತ್ತು. ಮೊದಲೇ ಸಾರ್ವಜನಿಕ ಸಭೆಗಳಿಗೆ ಒಪ್ಪಿಗೆಯಿರಲಿಲ್ಲ. ಅಂದು ಅಧ್ಯಕ್ಷನನ್ನು ಆರಿಸುವದಕ್ಕೆ ಯೋಚನೆ ನಡೆಯಿತು. ಕೆಲವರು ಅನುಮಾನಿಸಿದರು. ಈಗ ಅಜಿತ ಮುಂದಾಗದೆ ಗತಿಯಿರಲಿಲ್ಲ; ತನ್ನ ಹೆಸರನ್ನು

ಅಧ್ಯಕ್ಷಸ್ಥಾನಕ್ಕೆ ತಾನೇ ಸೂಚಿಸಿದ. ಎರಡೇ ದಿನಗಳಲ್ಲಿ ಕಾರ್ಯಸಿದ್ಧತೆ ಯಾಯಿತು. ಈ ಸಂಗತಿಯನ್ನು ಅಜಿತ ಕಕ್ಕನಿಗೂ ತಿಳಿಸಿದ.

ಗೌಡರು ಒಂದು ಗಳಿಗೆ ಮಾತನಾಡಲಿಲ್ಲ. ಆಶ್ಚರ್ಯವೂ ಆಗಲಿಲ್ಲ ಅವರಿಗೆ. ಮುಖ ಮಾತ್ರ ಚಿಂತೆಗೆ ಒಳಗಾಯಿತು. ಏನೋ ಯೋಚಿಸಿ ಸ್ವಲ್ಪ ಹೊತ್ತಿನ ಮೇಲೆ ಕೇಳಿದರು. ಧ್ವನಿ ವ್ಯಂಗ್ಯವಾಗಿತ್ತು.

"ಇದರಿಂದ ಸ್ವರಾಜ್ಯ ಸಿಕ್ಕುವುದೋ? ಸೆರೆಮನೆ ಲಭಿಸುವುದೋ!"

"ನನ್ನ ಮನದಲ್ಲಿ ಈಗಲೇ ಸ್ವರಾಜ್ಯ ನೆಲೆಗೊಂಡಿದೆ. ಇನ್ನು ಮುಂದೆ ಸ್ವರಾಜ್ಯವಾಗಲಿ ಸೆರೆಮನೆಯಾಗಲಿ ಯಾವದೇ ಬರಲಿ, ಅದಕ್ಕೆ ನಾನೇನು ಚಿಂತಿಸುವದಿಲ್ಲ."

"ತತ್ವಜ್ಞಾನ ಹೇಳಲಿಕ್ಕೆ ಬಹಳ ಸುಲಭವಪ್ಪಾ, ಆದರೆ ಈಗ ಅದನ್ನು ಅನುಭವಿಸುವವರು ಯಾರು?"

"ಇಡೀ ದೇಶವೇ ಅನುಭವಿಸುತ್ತಿದೆಯಲ್ಲ?"

"ದೇಶದ ಗೊಡವೆ ನಮಗೇನು? ನಮ್ಮ ಮನೆಗೆ ಬೆಂಕಿ ಹತ್ತಿ ದಾಗಲೇ ನಮಗೆ ಅದರ ಸುಖ-ದುಃಖ ಗೊತ್ತು."

ನಾಡಿನ ಗೌಡರೆಲ್ಲ ವತನ ಕಾಯ್ದುಕೊಳ್ಳುವದಕ್ಕಾಗಿ ಮಾಡಿ ದಂತೆ ಆದಗೌಡನೂ ಪೋಲೀಸ ಠಾಣೆಗೆ ರಿಪೋರ್ಟು ಕೊಡಬೇಕಾಯಿತು. ಕೊಟ್ಟರು. ಮುಂಚಿತ ನಾಲ್ಕು ಜನ ಪೋಲೀಸರು ಊರಲ್ಲಿ ಬಂದು ಬಿಟ್ಟರು. ಜನರಲ್ಲೆಲ್ಲ ಸುದ್ದಿ 'ಸಂಜೆ ಸಭೆ, ಅಧ್ಯಕ್ಷ ಅಜಿತ, ಅವನನ್ನೇ ಹಿಡಿದೊಯ್ಯುವರು, ಅದಕ್ಕೇ ಪೋಲೀಸರು ಬಂದಿರುವರು' ಎಂದು ಹಲ ಕೆಲವರು ತಮಗೆ ತಿಳಿದಂತೆ ಆಡಿಕೊಳ್ಳುತ್ತಿರುವರು. ಮುಪ್ಪಿನವನೊಬ್ಬ ನೆಂದ ಸ್ವಯಂಸೇವಕನಿಗೆ—

"ನೋಡಿದಿರಾ, ನಿಮ್ಮ ಹುಡುಗಾಟದ ಪರಿಣಾಮ? ಸರಕಾರಕ್ಕೆ ನಿಮ್ಮ ಚಳವಳಿಯಿಂದ ಏನಾಗಬೇಕಾಗಿದೆ? ಗುಡ್ಡದ ಮೇಲೆ ಗುಂಗೀ ಹುಳ ಕುಳಿತಂತೆ."

"ಗುಂಗೀಹುಳವೋ, ವಜ್ರಾಘಾತವೋ ಕಾಣುವಿರಂತೆ!" ಎಂದು ಹೇಳಿ ಹೋದನಾತ. ಅವನಿಗೆ ಮಾತಾಡುತ್ತ ನಿಲ್ಲಲು ಸಮಯ ವೆಲ್ಲಿ?

ಎಷ್ಟೋ ಹೆಂಗಸರು 'ದೇವರಂಥ ಮನುಷ್ಯನನ್ನು ಹಿಡಿದೊಯ್ದರೆ ದೇವರು ಅವರ ಕಲ್ಯಾಣ ಮಾಡುವನೇ!' ಎಂದು ಮನೆಮನೆಗೂ ಆಡಿಕೊಳ್ಳುತ್ತಿರುವರು

ಸರಸ್ವತಿಗೆ ನಿನ್ನೆಯೇ ಎಲ್ಲ ಗೊತ್ತಾಗಿದ್ದಿತು. ಮಗನಿಗಾಗಿ ಮನಸ್ಸು ಮರಗುತ್ತಿದ್ದಿತಾದರೂ ಅವನು ಕೆಟ್ಟ ಕೆಲಸ ಮಾಡುವದಿಲ್ಲವೆಂದು ಅವಳಿಗೆ ನಂಬುಗೆ. ಆದರಿಂದ ಅವನ ಮುಂದೆ ಅವಳಾವ ಮಾತನ್ನೂ ಎತ್ತಲಿಲ್ಲ. ಇಂದು ಸಭೆಗೆ ಹೋಗುವ ಮುಂಚೆ ತಾಯಿಯ ಸನ್ನಿಧಿಗೆ ಹೋದ ಅಜಿತ. ಅವಳು ಮನೆಯಲ್ಲಿರಲಿಲ್ಲ. ಜಿನಮಂದಿರಲ್ಲಿದ್ದಳು. ಅಲ್ಲಿ ಕುಳಿತು ಪ್ರಾರ್ಥಿಸುತ್ತಿದ್ದಾಳೆ. ಭಕ್ತಿಭಾವದಲ್ಲಿ ಮುಳುಗಿದ್ದಾಳೆ. ಜಿನನ ಮುಂದೆ ಎರಡು ದೀಪಗಳು ಉರಿಯುತ್ತಿವೆ, ಬೆಳಗುತ್ತಿವೆ.

ಇದೇ ತಕ್ಕ ಸಮಯವೆಂದು ಅಜಿತ ಹೋಗಿ ತಾಯಿಯನ್ನು ಕಂಡ.

"ಅವ್ವಾ, ಹೋಗಿ ಬರುವೆ ಆಶೀರ್ವದಿಸು!"

ಆಶ್ಚರ್ಯದಿಂದ ಅಜಿತನನ್ನು ಕಂಡಳಾಕೆ. ನೋಡಿದರೂ ಕೂಡಲೆ ಅವನೊಡನೆ ಮಾತಾಡಲಿಲ್ಲ. ಸ್ವಲ್ಪ ತಡೆದು....

"ಇಷ್ಟು ಸಭೆಗಳನ್ನು ಮಾಡಿದರೂ ನನಗೆ ಹೇಳಿ ಹೋಗಲಿಲ್ಲ, ಈಗೇಕಪ್ಪಾ?"

ಇದರ ಕಾರಣ ಸರಸ್ವತಿಗೆ ಅಷ್ಟು ಗೊತ್ತಿಲ್ಲ. ಗೌಡರು ಹೇಳಿದ್ದರಾದರೂ ಅವಳಿಗೆ ಅವರ ಮಾತಿನ ಮೇಲೆ ವಿಶ್ವಾಸವಿರಲಿಲ್ಲ. ಮಗನ ಬಾಯಿಂದಲೇ ಕೇಳೋಣವೆಂದು ಅವಳ ವಿಚಾರ. ಅಜಿತ ಕೊಂಚ ಕಾಲ ದಿಗಿಲುಬಡಿದು ನಿಂತ. ಕೊನೆಗೆ ಅವನಾಗಿಯೇ ಹೇಳಿದ:

"ಹೇಳಿ ಹೋಗಬೇಕಾಗಿದೆ ತಾಯೀ! ದಿನದಂತೆ ಇಂದು ಸಭೆ ಮುಗಿಸಿ ಮನೆಗೆ ಬಂದೇನೆನ್ನುವ ಹಾಗಿಲ್ಲ!"

ಇದೇ ಅವಳು ಮಗನಿಗೆ ಒಂದೆರಡು ಮಾತುಗಳನ್ನು ಆಡಲಿಕ್ಕೆ ಸುಸಂದರ್ಭ.

"ಒಳ್ಳೇ ಬುದ್ಧಿವಂತನಪ್ಪಾ ನೀನು. ಮುಂಬಯಿಗೆ ಹೋಗಿ ಸುಖವಾಗಿ ತಿರುಗಿ ನಾಲ್ಕು ದಿನಗಳಲ್ಲಿ ಬಂದೆಯಪ್ಪ ನೀನು! ನಮ್ಮನ್ನು ನಡುನೀರೊಳಗೆ ಬಿಟ್ಟು ಹೋಗುವೆಯೇನು?"

ಮಾತನ್ನು ಬೇರೆ ಹಾದಿಗೆ ತಿರುಗಿಸಿ ಬಿಟ್ಟ ಅಜಿತ. ತಾನು ಹೊರಟು ಹೋದ ಮೇಲೆ ಅವರು ವರ್ತಿಸಬೇಕಾದ ರೀತಿಯನ್ನು ದೀರ್ಘವಾಗಿ ವರ್ಣಿಸಿದನು. ಕಕ್ಕನ ಮನೆಯಲ್ಲಿ ಇರಲಿಕ್ಕೆ ಸೂಚಿಸಿದನು. ಗುಣ ವಂತಿಯು ಅವಳೂ ಹೊಂದಿಕೊಂಡಿರುವುದು, ಅವಳಿಗೆ ತಾಳ್ಮೆಯಿಂದಿ ರಲು ಹೇಳುವುದು, ಇತ್ಯಾದಿ ಇತ್ಯಾದಿ.

* * * *

"ಅಂಥದೇನು ಗಹನ ವಿಚಾರ ಮಾಡುತ್ತಿರುವಿ?" ಅಜಿತನ ಮಾತು ಗುಣವಂತಿಯ ಕಿವಿಗೆ ಬಿತ್ತು.

ಅವಳಿಗೆ ಈ ಮಾತಿನಿಂದ ಏನೂ ವಿಶೇಷವೆನಿಸಲಿಲ್ಲ. ಹಿಂದಿನ ಸಲ ಹೇಳದೆ ಕೇಳದೆ ಹೋದವರು ಇಂದು ಹೇಳಿಯಾದರೂ ಹೊರಟಿರು ವರಲ್ಲ, ಎಂದಿಷ್ಟೇ ಸಮಾಧಾನ. ಅಂದರೂ ಹೆಣ್ಣಿನ ಹೃದಯವಲ್ಲವೇ?

"ವಿಚಾರ ಮಾಡುವದನ್ನೆಲ್ಲ ಬಿಟ್ಟುಬಿಟ್ಟಿದ್ದೇನೆ."

"ಹೇಗೆ ಬಿಟ್ಟಿರುವಿ? ಯಾವಾಗಿನಿಂದ ನಾನು ನಿನ್ನ ಮುಂದೆ ಬಂದು ನಿಂತಿರುವೆ. ನನ್ನನ್ನು ನೋಡದಂತೆಯೇ ನಿಂತಿರುವಿಯಲ್ಲ?"

"ನಿಜವಾಗಿಯೂ ನಾನು ನಿಮ್ಮನ್ನು ನೋಡಿಲ್ಲ."

"ಅದಕ್ಕೇ ಅನ್ನುವದಲ್ಲ, ನೀನು ಯಾವದೋ ಗಹನ ವಿಚಾರ ದಲ್ಲಿರುವೆಯೆಂದು."

"ಒಪ್ಪುವೆ, ನೀವು ಮನೆಗೆ ಬಂದಾಗ ನಾ ಎಂದಿಗೂ ಹೀಗೆ ಅಸಭ್ಯ ಳಾಗಿ ವರ್ತಿಸಿಲ್ಲ."

"ಹೀಗೆ ಚುಚ್ಚಿ ಮಾತಾಡಬೇಡ. ನಿನ್ನ ವಿಷಯಕ್ಕೆ ನಾನೇ ಅಸಭ್ಯ ನಾಗಿ ನಿಂತಿರುವೆ."

ಮಾತನ್ನು ಮುಖ್ಯ ವಿಷಯದ ಕಡೆಗೆ ಹೊರಳಿಸಿದ ಅಜಿತ.

"ಅಸಭ್ಯವೇನಿದರಲ್ಲಿ? ಮದುವೆಗೆ ಮುಂಚೆಯೇ ಹೇಳಿದ್ದಿರಲ್ಲ!" ನಗಲು ಪ್ರಯತ್ನಿಸಿದಳು ಗುಣವಂತಿ.

"ಏನು ಹೇಳಿದ್ದೆ?"

"ನನ್ನನ್ನು ಮಾಡಿಕೊಂಡರೆ ಸುಖ ಸಿಗದೆಂದು."

"ಅಹುದು, ನಾನು ಹಿಂದುಸ್ಥಾನದಂತಹ ಪರರ ಆಳಿಕೆಗೆ ಒಳಗಾದ

ದೇಶದ ಪ್ರಜೆಯಾಗಿರುವೆನೆಂದೇ ಹಾಗೆ ಹೇಳಿದ್ದೆ."

"ನಾನೂ ಇದೇ ದೇಶದವಳಲ್ಲವೆ ?"

"ನನಗೆ ಅದರ ಅರಿವಿದೆ."

"ಅಂದರೆ ?"

"ಅಂದರೆ ಹೀಗೆ: ಭಾರತದ ಪಾರತಂತ್ರ್ಯ ನನಗೆ ಸಹನವಾಗುವದಿಲ್ಲ. ನನ್ನ ಮನಸ್ಸಿಗೂ ದೇಹಕ್ಕೂ ಅದರ ವೇದನೆಯಾಗುತ್ತಿದೆ. ಶೂಲದಂತೆ ಇರಿಯುತ್ತಿದೆ."

"ಎಲ್ಲರಿಗೂ ಅದರ ದುಃಖವಿದೆ."

"ನಿಜವಾಗಿಯೂ ಎಲ್ಲರಿಗೆ ವೇದನೆಯಾಗುತ್ತಿದ್ದರೆ ದೇಶ ಇನ್ನೂ ದಾಸ್ಯದಲ್ಲಿ ಉಳಿಯುತ್ತಿರಲಿಲ್ಲ. ನೀನೇ ನೋಡು ಗೌಡರ ಮನೆತನದ ಹೆಂಗಸಾಗಿ ಏನು ಮಾಡುತ್ತಿರುವೆ ?"

"ನನಗೆ ಶಕ್ಯವಿದ್ದಷ್ಟು ನಾನು ಮಾಡುವುದು!"

"ಅದೇ ಅನ್ನುವೆ ! ನಾನಾದರೂ ! ಹಿಂದುಸ್ತಾನದಲ್ಲಿ ಅದನ್ನೂ ಮಾಡುವವರಿಲ್ಲ."

ತುಸು ಹೊತ್ತು ಯೋಚಿಸಿ ಗಂಗವ್ವ ಕೇಳಿದಳು :

"ನನ್ನದೊಂದು ಮಾತು ಕೇಳುವಿರಾ ?"

"ಕೇಳಲಿಕ್ಕೆ ಬಂದಿಲ್ಲ; ಹೇಳಲಿಕ್ಕೆ ಬಂದಿರುವೆ."

"ಅದೇ...."

"ಅದೇ ಏನು ?"

"ನಿಮ್ಮ ಪ್ರಯತ್ನಕ್ಕೆ ಅನುಕೂಲ ದಾರಿಯೊಂದಿದೆ."

"ಏನು ?"

"ಸಭೆ ಮುಗಿದೊಡನೆಯೇ ಪೋಲೀಸರ ಕೈಗೆ ಸಿಕ್ಕಕೂಡದು. ಮುಂದೆ ಗುಪ್ತರೀತಿಯಿಂದ ಕೆಲಸ ಮಾಡುವುದು."

ಅಜಿತ ಒಂದು ಕ್ಷಣ ಹೆಂಡತಿಯ ಮುಖವನ್ನು ನಿರೀಕ್ಷಿಸಿದ. ಬೆದರಿದ ಚಿಗರೆಯಂತಾಗಿದ್ದಿತವನ ಸ್ಥಿತಿ. ಇಷ್ಟು ಗೌಪ್ಯವಾಗಿ ಇಟ್ಟ ಸಂಗತಿಯನ್ನು ಇವಳು ಹೇಗೆ ಅರಿತುಕೊಂಡಳು ? ಎಂಬ ಬೆರಗು ಅವನ ಕಣ್ಣುಗಳಲ್ಲಿ ಆವರಿಸಿದ್ದಿತು. ಆದರೂ ಕೇಳಿದ :

" ಶಕ್ಯವಿದೆಯೇ ? "

" ಶಕ್ಯವಾಗದೆ ಏನು ? ಮಾಡಬೇಕಾದದ್ದೇ. "

ಅಜಿತ ಗುಣವಂತಿಯನ್ನು ತೀರ ತೀಕ್ಷ್ಣವಾದ ದೃಷ್ಟಿಯಿಂದ ನೋಡಿ, ಕೆಲಕಾಲ ತಡೆದು :

" ಹಾಗೇ ಮಾಡುವೆವು" ಎಂದ.

ಅಜಿತ ಹೋದ ದಾರಿಯನ್ನೇ ನೋಡುತ್ತ ನಿಂತಳು ಗುಣವಂತಿ. ಅದೆಷ್ಟು ಹೊತ್ತೋ ಏನೋ ! ಕೊನೆಗೆ, " ನಾ ಅಂದಂತೆ ಆದರೆ ಆ ಮೇಲೆ ರಾವಸಾಹೇಬನಿಗೆ ಗೊತ್ತಾಗುವುದು, ಅವರ ಕೈ ! " ಎಂದು ಕೊಂಡು ಎದ್ದು ಒಳಗೆ ಹೋದಳು

ಸಭೆಗೆ ಮುಂಚೆ ಮುರುಕು ಮನೆಯೊಂದರಲ್ಲಿ ಕೆಲಸಗಾರರ ಗುಪ್ತ ಸಭೆ ಸೇರಿತು. ಬಹಳ ಹೊತ್ತಿನ ವರೆಗೆ ಏನೇನೋ ಚರ್ಚೆಯಾಗಿ ಒಂದು ನಿರ್ಣಯಕ್ಕೆ ಬಂದು ಹೊರಬಿದ್ದರು. ಅಲ್ಲಿ ಜಾಧವ ಮಾಸ್ತರರೂ ಬಂದಿದ್ದರು.

ದೊಡ್ಡ ಹಳ್ಳಿ, ಸಭೆಯ ಪ್ರಚಾರವು ಚನ್ನಾಗಿಯೇ ಆಗಿದ್ದಿತು. ಸಾರ್ವಜನಿಕ ಸಭೆಗಳಿಗೆ ಸರಕಾರವು ಬಂದಿ ಹಾಕಿದ್ದಿತು. ಅದನ್ನು ಮುರಿಯಲಿಕ್ಕಂದೇ ಈ ಸಭೆ ಇಟ್ಟದು, ವಲ್ಲಭಭಾಯಿಯ ದಿನ ನಿಮಿತ್ತ. ಹೊತ್ತು ಮುಳುಗುತ್ತಲೇ ಸಭೆಗೆ ಜನ ಬರತೊಡಗಿತು. ತಾಸು ರಾತ್ರಿಯೊಳಗಾಗಿ ಹನುಮನ ದೇವಾಲಯದ ಮುಂದಿನ ಬಯಲೆಲ್ಲ ಜನರಿಂದ ಕಿಕ್ಕಿರಿದು ತುಂಬಿದ್ದಿತು. ಸಭೆಗೆ ಆರಂಭವಾಗುವುದರಲ್ಲಿದ್ದಿತು. ಪೋಲೀಸರು ಅಲ್ಲಿಯೇ ಕುರ್ಚಿಗಳನ್ನು ಹಾಕಿಸಿಕೊಂಡು ರಿಪೋರ್ಟು ತಯಾರಿಗಾಗಿ ಕುಳಿತಿದ್ದರು. ಅಜಿತನ ಮೇಲಿನ ವಾರಂಟೂ ಅವರ ಕಿಸೆಯಲ್ಲಿತ್ತು. ತಮ್ಮ ತಮ್ಮ ಸಿದ್ಧತೆಯಲ್ಲಿಯೇ ಬಂದಿದ್ದರೆಲ್ಲರೂ. ಅಧ್ಯಕ್ಷರ ಸ್ಥಾನಕ್ಕೆ ಅಜಿತನ ಹೆಸರು ಸೂಚಿತವಾಯಿತು. ಗೌಡರ ಮುಖ ನಿಂತಲ್ಲಿಯೇ ಜರ್‍ರೆಂದು ಇಳಿಯಿತು. ಮನಸ್ಸು ಕಳವಳಗೊಂಡಿತು. ಹುಡುಗನಿಗೆ ಬುದ್ಧಿ ಬಾರದಲ್ಲ ! ಎಂದು ಪರಿತಪಿಸಿದ, ಮನಸ್ಸು ಕೇಳಲಿಲ್ಲ. ಇನ್ನೂ ಕೆಲಸ ಕೈ ಮೀರಿಲ್ಲೆಂದು ಭಾವಿಸಿ ಇಬ್ಬರು ಹಿರಿಯ ಜನಗಳಿಂದ ಅಜಿತನನ್ನು ಒಳಗೆ ಕರೆದು ಇನ್ನೊಮ್ಮೆ ಹೇಳಿ ನೋಡಬೇಕೆಂದ. ಕೊನೆಗೆ

ತಾನು ಹೇಳದೆ ಉಳಿದವರಿಗೇ ಸೂಚಿಸಲು ಹೇಳಿ ತಾನು ಪೋಲೀಸರ ಕಡೆಗೆ ಬಂದ. ಗೌಡನ ಚಲನವಲನದ ಮೇಲೆಯೂ ಪೋಲೀಸರ ದೃಷ್ಟಿಯಿತ್ತು.

ಅಜಿತನಿಗೆ ದೇಶದೇವಿ ಕರೆಯುತ್ತಿದ್ದಳು. ಯಾರ ಮಾತೂ ಕಿವಿ ಸೇರುವಂತಿರಲಿಲ್ಲ. ಮೊದಲು ಭಾಷಣವನ್ನೇ ವಿಸ್ತಾರವಾಗಿ ಮಾಡಿದ. ಹೇಳಬೇಕೆನಿಸಿದುದನ್ನೆಲ್ಲ ಹೇಳಿದ. ಕುಳಿತ. ಆಮೇಲೆ ಇನ್ನೊಬ್ಬರು ಭಾಷಣಕ್ಕೆ ಎದ್ದರು. ಅವರಿಗೆ ಈ ಮೊದಲೇ ಜೇಲ ಸಂದರ್ಶನವಾಗಿತ್ತು. ಮೊದಲೇನೋ ಸಾವಕಾಶವಾಗಿ ಉಪನ್ಯಾಸ ಆರಂಭಿಸಿದರು. ಬರಬರುತ್ತ ಮಾತು ಕಾವೇರಿತು, ಪುಟಗೊಂಡಿತು, ಹೊತ್ತಿತು, ಕಿಡಿ ಹಾರತೊಡಗಿತು. ಸಿಡಿಯಿತು !

ಪೋಲೀಸರು ಬರೆದುಕೊಳ್ಳುವದರಲ್ಲಿ ಮಗ್ನರಾಗಿದ್ದರು. ಅಜಿತ ಮೇಜಿನ ಮೇಲೆ ಟೊಪ್ಪಿಗೆ ತೆಗೆದಿಟ್ಟ. ಕಾಲೊಳಗಿನ ಕೆರವುಗಳನ್ನು ಬಿಟ್ಟಲ್ಲಿಯೇ ಬಿಟ್ಟ. ಎದ್ದವನೇ ಹೊರಗೆ ನಡೆದ. ಪೋಲೀಸರು ನೋಡಿರಲಿಲ್ಲವೇನೋ! ಜನ ಮೂತ್ರವಿಸರ್ಜನೆಗೆ ಹೊರಟನೆಂದುಕೊಂಡಿರಬೇಕು. ದಾರಿ ಬಿಟ್ಟರು, ಮೆಲ್ಲನೆ ಹೊರಗೆ ಹೋದ. ಹೋದವನು ಹೊರಳಿ ಬರಲಿಲ್ಲ.

ಭಾಷಣ ಮುಗಿಯಿತು. ಅಧ್ಯಕ್ಷರ ಆಸನದ ಕಡೆಗೆ ದೃಷ್ಟಿ ಬೀರಿದರು ಪೋಲೀಸರು. ಅಧ್ಯಕ್ಷನಿಲ್ಲ. ಕೆಲ ಹೊತ್ತು ದಾರಿ ಕಾಯ್ದರು. ಅಜಿತನ ಸುಳಿವಿಲ್ಲ. ಅಜಿತನ ಮೇಲೆ ಬಜಾಯಿಸಲು ತಂದ ವಾರಂಟು ಜೇಬಿನಲ್ಲಿಯೇ ಉಳಿಯಿತು. ಆ ಸೇಡನ್ನು ಕೆಲ ಕಾರ್ಯಕರ್ತರ ಬಂಧನದಿಂದ ತೆಗೆಯಬೇಕೆಂದರೆ ಭಾಷಣಕಾರರನ್ನುಳಿದು ಬೇರೆ ಕಾರ್ಯಕರ್ತರ ಸುಳಿವೂ ಅಲ್ಲಿ ಇರಲಿಲ್ಲ. ನಿರುಪಾಯರಾಗಿ ಕೆರಳಿದ ಪೋಲೀಸರು ಆದ ಗೌಡನ ಮೇಲೆ ಬಂಧನದ ಬಲೆಯನ್ನು ಬೀಸಿದರು.

## ೨೪

ಹಳ್ಳಿಯಲ್ಲಿ ಗೌಡನೇ ಅಧಿಕಾರಿಗಳ ಅಧಿಕೃತ ಪ್ರತಿನಿಧಿಯು. ತನ್ನ ಅಣ್ಣ-ತಮ್ಮಂದಿರನ್ನು ಸುಲಿಯಲಿಕ್ಕೂ ಬಂಧಿಸಲಿಕ್ಕೂ ಇವನೇ ಏಜೆಂ

ಇವರೆಲ್ಲ ಸೇದುವದನ್ನು ನೋಡಿ ಅವನಿಗೂ ತಲಬು ಆಗಿರಬೇಕು. ಮೆಲ್ಲನೆ ಕೇಳಿದ, ಯಾಚಕನಂತೆ—

" ಯಪ್ಪ ಒಂದಿಟ ಬೆಂಕಿ ಒಗಿತಿರೇನ್ರಿ ಇತ್ತ ? "

" ಒಂದಿಷ್ಟ ಏಕೋ, ಬೇಕಾದಷ್ಟ ತಗೋ ಅಲ್ಲ." ಸಹಾನುಭೂತಿಯಿಂದ ಒಬ್ಬ ಹೇಳಿದ, ತನ್ನ ತಂಬಾಕದ ಚಿಲುವೆಯ ಮೇಲೆ ಬೆಂಕಿ ಹೇರುತ್ತ.

" ಯಾಕ ಕುಂತೀರೋ ಇಷ್ಟ್ಯ ಜನ? ಒಬ್ಬಿಬ್ರು ನಿಂತು ಉಳಿದವರೆಲ್ಲಾ ಹೋಗಬೇಕಿಲ್ಲೋ ? " ಓಲೇಕಾರರಲ್ಲಿಯ ನಾಯಕ ನುಡಿದ.

"ಉದ್ಯೋಗ ಇಲ್ಲ ಏನ ಇಲ್ಲ ನಿನ್ನಿಂದ ಬಂದ ಬಿದ್ದಿದೇವೂ ಹೋಗ ಅನ್ನವಲ್ಲರು ಗೌಡರು ಯಪ್ಪ ! "

" ನಿಮುಗ ಹೋಗಂತ ಹೇಳಲಿಕ್ಕೆ ಅವರಿಗೆಲ್ಲಿ ಮನಸು ಸ್ಥಿರ ಅದ ಹೋಗು. "

" ಕೂಡವಲ್ಲಿರೇಕೆ ಉರಿ ಮಾಡಿ ಕಾಯಿಸಿಕೊಳ್ಳಿರಿ ! ಚಳಿಯೊಳಗ ನಡಿಗೇ ಸತ್ತೀರಿ ! "

ಕಂಬಳಿಯನ್ನು ಸರಿಯಾಗಿ ಹೊತ್ತುಕೊಳ್ಳುತ್ತ ಮುದುಕನೊಬ್ಬ ಸೂಚಿಸಿದ.

" ಅದ್ಹೇಗೆ ಕಾಯಿಸ್ಸಿಕೊತೀರಿ ಯಪ್ಪ! ಇದರಿಂಗೇ ಗೌಡ ನಿಂತದಾನು " ಎಂದು ಹೊಲೆಯ ತಂಬಾಕು ಸೇದಿ ಹೋದ.

" ಅಷ್ಟ ಅಂಜೂ ದಿನಮಾನ ಇಲ್ಲೋ ಈಗs ? "

" ಒಳ್ಳೆ ಒಳ್ಳೆ ಸರಕಾರಂದರ ದರಕಾರ ಇಲ್ಲದ ಹೋದ ಅಜಿತ. ಇವ ಇನ್ನೂ ಗೌಡನ ಮುಂದ ಕಾಯ್ಸಿಕೊಳ್ಳಲಿಕ್ಕೆ ಹೆದರತಾನ."

" ದರಕಾರ ಇಲ್ಲದ ಹೋದ. ಆದರ ಇನ್ನ ಹತ್ತಿತು, ನೋಡು ಅವರ ಮನೆಗೆ ಏಷ್ನ. ಮೂರ ತಲೆ ಮೊರೆತನಕ ಏರಿಕೆಯ ಸ್ಥಿತಿಗೇನೇ ಮನೆ ಇರಬೇಕಾದರೆ ಬಹಳ ಪುಣ್ಯ ಮಾಡಿರಲಿಕ್ಕೆ ಬೇಕು. ಅಪ್ಪನ ಕಾಲದಿಂದಲೂ ನಡೆದು ಬಂದ ಭರಭರಾಟಿ ಎಲ್ಲಾ ಒಮ್ಮೆಲೇ ಇಳದು ಹೋಯ್ತು ಈ ಹುಡುಗ ಹುಟ್ಟಿ. "

" ಈ ಹುಡುಗನಿಗೆ ಏನು ಸಂಬಂಧ? ಇಂದಿಲ್ಲ ನಾಳೆ ಅವನು

ಬೇರೆಯೇ ಇದಾನೆ. ತಮ್ಮನ ಮಗ ಅಂತೇ ಗೌಡನ ಜೀವ ಹರಿಯು ವದು. ರಾವಸಾಹೇಬ ಏನು ಕಡಿಮೆ ಇದಾನು? ಒಳ್ಳೇ ವಿಚಿತ್ರ ಮನುಷ್ಯನಾತ."

"ಅವನ ಒಯ್ದು ಸುಡು! ಅವನಲ್ಲಿ ಏನ ಕೆಲಸ ಮಾಡುವ ಲಕ್ಷಣ ಇದ್ದಾವ ಅನ್ನುವಿಯೇನ?"

"ಹೊಂದೋ, ಹಗಲಿ ರಾತ್ರಿ ಆ ತಳವಾರ ನಿಂಗೀ ಮನೆಯೊಳಗs ಇರತಾನಲ್ಲ ನಿನ್ನ ಗೌಡ?" ನಡುವೆಯೇ ಒಬ್ಬ ಮುದುಕ ಬೆರಗಿನಿಂದ ತರುಣ ಹಳಬನಿಗೆ ಹೇಳಿದ.

"ದೊಡ್ಡವರ ನಡತಿ, ನಾವ ಆಡಬಾರದು?" ಎಂದ ಆ ತರುಣ.

"ಒಳ್ಳೇ ಶಹಾಜೋಗ ಮಗಾ! ಯಾವಾಗ ಎಲ್ಲಾ ಅವನ ಸಂಗತೀ ಲೇನs ಇರತಿ ಮತ್ತ ವ್ಯಾಲ ಜಣ್ಣದ ಮಾತು ಹೇಳತಿ!"

"ಅಲ್ಲಪ್ಪ ಅವರ ನೌಕರೀನ ಮಾಡತೇವ ಅಂದ ಮೇಲೆ ಇರಲಿಕ್ಕೆ ಬ್ಯಾಡಾ?"

"ದೊಡ್ಡ ಗೌಡ ನಿನ್ನ ವ್ಯಾಲ ಉರಿತಿರಬೇಕಲ್ಲೋ?" ಇನ್ನೊಬ್ಬ ಕೇಳಿದ.

"ಉರಿಲಿಕ್ಕೆ ನಾನೇನ ಮಾಡೇನಿ?" ಸ್ವಲ್ಪ ತಡೆದು, "ಅವನ ಮಗನಿಗೇನ ರಂಡೇರನ್ನ ಮಾಡಂತ ಹೇಳೇನಿ?"

"ನೀ ಯಾತಕ್ಕ ಹೇಳಿ ಮಗನ, ಅಷ್ಟs ಕರೆದ ಕರೆದ ಜೋಡಿಸಿ ಬಿಡತಿ ಆಯ್ತು?"

"ಗೌಡ ಹಾಗಂತಾನೇನು ಕೇಳಬೇಕಾದರ?" ರಹಸ್ಯದ ನಗೆ ಬೀರುತ್ತ ನುಡಿದ ಆ ತರುಣ ಹಳಬ.

"ಗೌಡ ಏನ ಅಂತಾನು? ಮಗನನ್ನು ಕಾಯುಲಿಕ್ಕೆ ನಿನಾ ಇಟ್ಟಾನ ಹುಚ್ಚ! ತುಡಗನ ಬಾಗಿಲ ಕಾಯುಲಿಕ್ಕೆ ಇಟ್ಟಾಂಗ."

"ಇರಲ್ಯೋ ಆ ಚಂದ್ರಿ ಪ್ರಕರಣ ಏನಾಯ್ತು?"

"ಆಗೋದೇನು? ಸೋಡಚೀಟಿ ಆಗತದ ಅಲ್ಲ?"

"ಮುಂದ?"

"ಮುಂದೇನು? ನಮ್ಮ ರಾವಸಾಹೇಬ ಇದ್ದಾನಲ್ಲ?"

ಇವರೆಲ್ಲ ಸೇದುವದನ್ನು ನೋಡಿ ಅವನಿಗೂ ತಲಬು ಆಗಿರಬೇಕು. ಮೆಲ್ಲನೆ ಕೇಳಿದ, ಯಾಚಕನಂತೆ—

" ಯಪ್ಪ ಒಂದಿಟ ಬೆಂಕಿ ಒಗಿತಿರೇನ್ರಿ ಇತ್ತ ? "

" ಒಂದಿಷ್ಟ ಏಕೋ, ಬೇಕಾದಷ್ಟ ತಗೋ ಅಲ್ಲ." ಸಹಾನುಭೂತಿಯಿಂದ ಒಬ್ಬ ಹೇಳಿದ, ತನ್ನ ತಂಬಾಕದ ಚಿಲುಮೆಯ ಮೇಲೆ ಬೆಂಕಿ ಹೇರುತ್ತ.

" ಯಾಕ ಕುಂತೀರೋ ಇಷ್ಟ್ಯ ಜನ ? ಒಬ್ಬಿಬ್ರು ನಿಂತು ಉಳಿದವರೆಲ್ಲಾ ಹೋಗಬೇಕಿಲ್ಲೋ ? " ಓಲೇಕಾರರಲ್ಲಿಯ ನಾಯಕ ನುಡಿದ.

"ಉದ್ಯೋಗ ಇಲ್ಲ ಏನ ಇಲ್ಲ ನಿನ್ನಿಂದ ಬಂದ ಬಿದ್ದೇವೂ ಹೋಗ ಅನ್ನವಲ್ಲರು ಗೌಡರು ಯಪ್ಪ !"

" ನಿಮಗ ಹೋಗಂತ ಹೇಳಲಿಕ್ಕೆ ಅವರಿಗೆಲ್ಲಿ ಮನಸು ಸ್ಥಿರ ಅದ ಹೋಗು."

" ಕೂಡವಲ್ಲಿರೇಕೆ ಉರಿ ಮಾಡಿ ಕಾಯಿಸಿಕೊಳ್ಳಿರಿ ! ಚಳಿಯೊಳಗ ನಡಿಗೇ ಸತ್ತೀರಿ !"

ಕಂಬಳಿಯನ್ನು ಸರಿಯಾಗಿ ಹೊತ್ತುಕೊಳ್ಳುತ್ತ ಮುದುಕನೊಬ್ಬ ಸೂಚಿಸಿದ.

" ಅದ್ಹೇಗೆ ಕಾಯ್ಸಿಕೊತೀರಿ ಯಪ್ಪ ! ಇದರಿಗೇ ಗೌಡ ನಿಂತಿನಾನು " ಎಂದು ಹೊಲೆಯ ತಂಬಾಕು ಸೇದಿ ಹೋದ.

" ಅಷ್ಟ ಅಂಜೂ ದಿನಮಾನ ಇಲ್ಲೋ ಈಗs ?"

" ಒಳ್ಳೆ ಒಳ್ಳೆ ಸರಕಾರಂದರ ದರಕಾರ ಇಲ್ಲದ ಹೋದ ಅಜಿತ. ಇವ ಇನ್ನೂ ಗೌಡನ ಮುಂದ ಕಾಯ್ಸಿಕೊಳ್ಳಲಿಕ್ಕೆ ಹೆದರತಾನ."

" ದರಕಾರ ಇಲ್ಲದ ಹೋದ. ಆದರ ಇನ್ನ ಹತ್ತಿತು, ನೋಡು ಅವರ ಮನೆಗೆ ವಿಘ್ನ. ಮೂರ ತಲೆ ಮೊರೆತನಕ ಏರಿಕೆಯ ಸ್ಥಿತಿಗೇನೇ ಮನೆ ಇರಬೇಕಾದರೆ ಬಹಳ ಪುಣ್ಯ ಮಾಡಿರಲಿಕ್ಕೆ ಬೇಕು. ಅಪ್ಪನ ಕಾಲದಿಂದಲೂ ನಡೆದು ಬಂದ ಭರಭರಾಟಿ ಎಲ್ಲಾ ಒಮ್ಮೆಲೇ ಇಳದು ಹೋಯ್ತು ಈ ಹುಡುಗ ಹುಟ್ಟಿ."

" ಈ ಹುಡುಗನಿಗೆ ಏನು ಸಂಬಂಧ ? ಇಂದಿಲ್ಲ ನಾಳೆ ಅವನು

ಬೇರೆಯೇ ಇದಾನೆ. ತಮ್ಮನ ಮಗ ಅಂತೇ ಗೌಡನ ಜೀವ ಹರಿಯು ವದು. ರಾವಸಾಹೇಬ ಏನು ಕಡಿಮೆ ಇದಾನು? ಬಳ್ಳೇ ವಿಚಿತ್ರ ಮನುಷ್ಯನಾತ."

"ಅವನ ಒಯ್ದು ಸುಡು! ಅವನಲ್ಲಿ ಏನ ಕೆಲಸ ಮಾಡುವ ಲಕ್ಷಣ ಇದ್ದಾವ ಅನ್ನುವಿಯೇನ?"

"ಹೊಂದೋ, ಹಗಲಿ ರಾತ್ರಿ ಆ ತಳವಾರ ನಿಂಗೀ ಮನೆಯೊಳಗs ಇರತಾನಲ್ಲ ನಿನ್ನ ಗೌಡ?" ನಡುವೆಯೇ ಒಬ್ಬ ಮುದುಕ ಬೆರಗಿನಿಂದ ತರುಣ ಹಳಬನಿಗೆ ಹೇಳಿದ.

"ದೊಡ್ಡವರ ನಡತಿ, ನಾವ ಆಡಬಾರದು?" ಎಂದ ಆ ತರುಣ.

"ಒಳ್ಳೇ ಶಹಾಜೋಗ ಮಗಾ! ಯಾವಾಗ ಎಲ್ಲಾ ಅವನ ಸಂಗತೀ ಲೇನs ಇರತಿ ಮತ್ತ ಮ್ಯಾಲ ಬಣ್ಣದ ಮಾತು ಹೇಳತಿ!"

"ಅಲ್ಲಪ್ಪ ಅವರ ನೌಕರೀನ ಮಾಡತೇವ ಅಂದ ಮೇಲೆ ಇರಲಿಕ್ಕೆ ಬ್ಯಾಡಾ?"

"ದೊಡ್ಡ ಗೌಡ ನಿನ್ನ ಮ್ಯಾಲ ಉರಿತಿರಬೇಕಲ್ಲೋ?" ಇನ್ನೊಬ್ಬ ಕೇಳಿದ.

"ಉರಿಲಿಕ್ಕೆ ನಾನೇನ ಮಾಡೇನಿ?" ಸ್ವಲ್ಪ ತಡೆದು, "ಅವನ ಮಗನಿಗೇನ ರಂಡೇರನ್ನ ಮಾಡಂತ ಹೇಳೇನಿ?"

"ನೀ ಯಾತಕ್ಕ ಹೇಳಿ ಮಗನ, ಅಷ್ಟs ಕರೆದ ಕರೆದ ಜೋಡಿಸಿ ಬಡತಿ ಆಯ್ತು?"

"ಗೌಡ ಹಾಗಂತಾನೇನು ಕೇಳಬೇಕಾದರ?" ರಹಸ್ಯದ ನಗೆ ಬೀರುತ್ತ ನುಡಿದ ಆ ತರುಣ ಹಳಬ.

"ಗೌಡ ಏನ ಅಂತಾನು? ಮಗನನ್ನು ಕಾಯುಲಿಕ್ಕೆ ನಿನ್ನಾ ಇಟ್ಟಾನ ಹುಚ್ಚ! ತುಡಗನ ಬಾಗಿಲ ಕಾಯುಲಿಕ್ಕೆ ಇಟ್ಟಾಂಗ."

"ಇರಲ್ಯೋ ಆ ಚಂದ್ರಿ ಪ್ರಕರಣ ಏನಾಯ್ತು?"

"ಆಗೋದೇನು? ಸೋಡಚೀಟಿ ಆಗತದ ಅಲ್ಲ?"

"ಮುಂದ?"

"ಮುಂದೇನು? ನಮ್ಮ ರಾವಸಾಹೇಬ ಇದ್ದಾನಲ್ಲ?"

" ಆಯ್ತು ಊರ ಮಂದಿ ಕಡಿಂದ ಮೋರೆಯ ಮೇಲೆ ಉಗಳಿಸಿ ಕೋತಾನ ಆಯ್ತು ! "

" ಇನ್ನೂ ಆ ಅಜಿತ ಊರ ಮಂದಿಗೆಲ್ಲ ಬೇಕಾಗಿದಾನ. "

" ಬೇಕಾಗಿದಾನ ಎಲ್ಲಾ ಪರಂತೂ.. "

" ಬಿಡೋ ಇಂಥಾವರಿಗೆಲ್ಲ ದಿನಾ ಸಿಕ್ಯಾನ ಆತ. ಅವನ ಹಿಡಿ ಬೇಕಾದರ ಇವರ ಕಣ್ಣ ಬೆಳ್ಳಗ ಆದಾವು ! ಅಷ್ಟ ತಯಾರಿ ಇಲ್ಲದ ಹೋಗಿ ದಾನೇನು ? " ಹೆಮ್ಮೆಯಿಂದ ಹೇಳಿದ ಆ ತರುಣ ಹಳಬ.

" ಆಯ್ತು ! ಎಲ್ಲ ಗೌಡನ ಕೊರಳ ಸುತ್ತು ಉರುಲ ಅದ, ಮುಪ್ಪಿನ ಕಾಲಕ್ಕ. "

ಇಷ್ಟರಲ್ಲಿ ದೂರದಲ್ಲಿ ಏನೋ ಗೊಂದಲವೆದ್ದಂತೆ ಭಾಸವಾಯಿತು. ಎಲ್ಲರೂ ಮಾತು ನಿಲ್ಲಿಸಿ ಕಿವಿಗೊಟ್ಟು ಆಲಿಸತೊಡಗಿದರು.

ದನಗಳ ಮೇವಿನ ಹುಲ್ಲನ್ನು ಕಾಯುವ ದಯಾಳು ಸರಕಾರ !

ಸಿಂದಿಯ ಗಿಡಗಳ ಹೆಚ್ಚಿಗೆ ಬೆಳೆಸುವ ಹಲಕಟ ಸರಕಾರ !

ಹಾಡಿನ ಗರ್ಜನೆಯು ಮುಂಜಾನೆಯ ನೀರವ ವಾತಾವರಣವನ್ನು ಭೇದಿಸಿ ಬರುತ್ತಲಿತ್ತು. ಸ್ವಲ್ಪ ಹೊತ್ತಿನಲ್ಲಿ ಚಾವಡಿಯ ಓಣಿಯೆಲ್ಲ ಗಜಬಜೆಯಿಂದ ತುಂಬಿತು. ನೂರಾರು ಜನರ ಮೆರವಣಿಗೆ. ಎಲ್ಲರ ಹೆಗಲುಗಳ ಮೇಲೆಯೂ ಹಾಸಿಗೆ ಹೊದಿಕೆಗಳಿವೆ. ಕೈಯಲ್ಲಿ ಕೊಡಲಿ. ಸಿಂದಿಯ ಬನಗಳನ್ನು ಉರುಳಿಸಿಯೇ ಬಂದ ಚಿನ್ಹ ಒಡಮೂಡುತಲಿತ್ತು. ಮುಂದೆ ನಾಲ್ಕಾರು ಜನ ಮುಖಂಡರಿದ್ದಾರೆ. ಕೈಯಲ್ಲಿ ರಾಷ್ಟ್ರಧ್ವಜ. ಆ ದೃಶ್ಯವನ್ನು ವರ್ಣಿಸುವುದು ಹೇಗೆ ? ಗೆಲುವಿನ ಉತ್ಸಾಹದಲ್ಲಿ ಹಾಡಿನ ತಾಳಕ್ಕೆ ಹೆಜ್ಜೆಯಿಕ್ಕುತ್ತ ಮುಂದೆ ಬಂದರು.

ಕೂಡಲೆ ಇನಸ್ಪೆಕ್ಟರನು ಚಹ ಕುಡಿಯುವದನ್ನು ನಿಲ್ಲಿಸಿ ಹೊರಗೆ ಬಂದ. ಪೋಲೀಸರಿಗೆ ಜನರನ್ನು ಬಂದೂಕು ತೋರಿಸಿ ಹೆದರಿಸಲು ಸೂಚಿಸಿದ. ಅವನಿಗೆ ಇನ್ನೂ ಗೊತ್ತಾಗಿರಲಿಲ್ಲ. ಹೆದರಿ ಓಡಲಿಕ್ಕೆ ಬಂದ ಜನವಲ್ಲ; ಸಿಂದಿಯ ಗಿಡವನ್ನು ಕಡಿದು ಹಾಜರಾಗಲಿಕ್ಕೆಂದು ಬಂದವರು ಎಂದು !

ಇನಸ್ಪೆಕ್ಟರರ ಆಜ್ಞೆಯ ಮೇರೆಗೆ ಪೋಲೀಸರು ಕೋವಿಗಳನ್ನು

ನೆಗೆದರು. ಜನ ಹಿಮ್ಮೆಟ್ಟದೆ ನೆಟ್ಟಗೆ ಚಾವಡಿಗೇ ಬಂದಿತು. ಸ್ವಲ್ಪ ಹೊತ್ತಿನಲ್ಲಿ ಫೌಜದಾರ ಅವರೆಲ್ಲರ ಜವಾಬು ತೆಗೆದುಕೊಂಡು, ಬಂಧಿಸ ಬೇಕಾಯಿತು. ಇದೊಂದು ಹೆಚ್ಚಿನ ಕೆಲಸವೇ ಅವನಿಗೆ. ಆ ಸಿಂದಿಯ ಗಿಡ ಗಳನ್ನು ಸಂಹರಿಸಿದ ಅಪರಾಧಿಗಳೊಡನೆಯೇ ಗೌಡನನ್ನೂ ಹಿಡಿದುಕೊಂಡ ಠಾಣೆಯ ಹಾದಿಯನ್ನು ಮೊದಲು ಹಿಡಿದರು. ಗೌಡನನ್ನು ಹಿಡಿದ ಸುದ್ದಿ ಊರಲ್ಲಿ ತಿಳಿಯದಂತೆ ಕುಲಕರ್ಣಿ ಎಚ್ಚರ ತಕ್ಕೊಂಡ. ಎಲ್ಲರೂ ಸಹ ಠಾಣೆಗಳಲ್ಲವೆ? ಅಜಿತನ ಶೋಧನೆಯ ಕಾರ್ಯವನ್ನು ಇಲ್ಲಿ ಕುಳಿತು ನಡೆಯಿಸುವುದು ಕ್ಷೇಮವಲ್ಲೆಂದು ಭಾವಿಸಿದರೇನೋ ಆ ಅಧಿಕಾರಿಗಳು! ತಮ್ಮ ಒಡೆಯನ ಅಂಗಳದಲ್ಲಿಯೇ ಹೋಗಿ ನಿಂತು ಬಗಳುವ ನಾಯಿ ಗಳಂತೆ ಅವರ ನಡತೆಯಿತ್ತಾಗ.

ಆ ಎರಡು ದಿನಗಳು ಗೌಡರ ಮನೆಯ ಮೇಲೆ ಸೂತಕದ ಕಳೆ ಯನ್ನೇ ತಂದಿದ್ದವು. ಮನೆಯಲ್ಲಿ ಯಾರೋ ಮೃತರಾದಂತೆ ಭಣಗುಡು ತ್ತಿದ್ದಿತು. ಮುರದೇವಿಯು ಒಂದು ದಿನ ಹಾಸಿಗೆಯನ್ನೇ ತೆಗೆಯಲಿಲ್ಲ. ಮಗನು ಹೋದವನು ಅತ್ತ ಕಡೆಗೇ ಹೋದನಲ್ಲ ಎಂದು ಚಿಂತಿಸುವಳು. ಅಜಿತನ ವಿಷಯಕ್ಕೂ ಅವಳು ಯೋಚಿಸಿ ಯೋಚಿಸಿ ಸಣ್ಣಾಗಿದ್ದಳು. ಇಂಥ ಸಂದರ್ಭದಲ್ಲಿ ಬೇರೆ ಮನೆಯಲ್ಲಿದ್ದೇನು? ಎಂದುಕೊಂಡು ಸರಸ್ವತಿಯು ಸೊಸೆಯನ್ನು ಕರೆದುಕೊಂಡು ಗೌಡರ ಮನೆಯಲ್ಲಿಯೇ ಬಂದಿದ್ದಳು. ಆದರೂ ಎಲ್ಲರ ಮುಖದ ಮೇಲೆಯೂ ಮ್ಲಾನತೆಯೇ. ಗಂಗವ್ವ ಆಗಾಗ ಅನ್ನುವಳು, "ಈಕೆಯು ಮಗನ ಸಲುವಾಗಿಯೇ ಇದೆಲ್ಲ!" ಎಂದು, ಅಸಹ್ಯತೆಯಿಂದ. ಮನೆಯಲ್ಲ ಭಣಭಣ! ರಣರಣ! ಊರಲ್ಲಿಯ ಕೆಲ ಜನರೂ ಮನೆಗೆ ಬಂದು ಹೋಗುತ್ತಲಿದ್ದಾರೆ, ಸಮಾ ಧಾನ ಹೇಳಲಿಕ್ಕೆಂದು.

ರಾವಸಾಹೇಬನು ಕೋಣೆ ಹಿಡಿದವ ಹಣಿಕಿಕ್ಕಲೇ ಇಲ್ಲ. ಇಂಥ ಸಂಕಟ ಕಾಲದಲ್ಲಿ ಪತ್ನಿಯು ತವರುಮನೆಯಲ್ಲಿದ್ದುದು ಒಳಿತೆಂದೇ ಭಾವಿಸಿದ. ಅಜಿತ ಎಲ್ಲಿಯೋ ಕಣ್ಮರೆಯಾಗಿಬಿಟ್ಟ. ಅದಕ್ಕಾಗಿ ತಮ್ಮ ಮನೆಯ ಹೆಂಗಸರು ಮಕ್ಕಳಿಗೆಲ್ಲ ತ್ರಾಸ ಎಂದು ಚಿಂತಿಸುವನು. ಅದ ಕಲ್ಲೂ ರಾವಸಾಹೇಬನಿಗೊಂದು ಮಿಂಚು ಮೂಡುವದು. ಸೂಕ್ಷ್ಮ

ವಿಚಾರ ವಿನುಗುವುದು. (ಹೃದಯದ ಆಳದಲ್ಲಿ ಹೆಂಡತಿಯ ಜೊತೆಗೆ ಗುಣವಂತಿಯ ಚಿತ್ರ ಬಂದು ಸ್ಪರ್ಧಿಸುತ್ತದೆ.) ಅದು ಅವನ ಮನವನ್ನು ಆಕರ್ಷಿಸುತ್ತಿದೆ. ಪತ್ನಿಯು ಅಸಂದಿಗ್ಧ ಶ್ರದ್ಧೆಯಿಂದ— ಯಾವ ಬಯಕೆಯ ಮುಂಗುರುತಿನಿಂದಲೋ ಯಾರಿಗೆ ಗೊತ್ತು?— ನಿಶ್ಚಿಂತಳಾಗಿ ನಿರುದ್ವಿಗ್ನಳಾಗಿ ತವರೂರಿಗೆ ಹೋಗಿದ್ದಾಳೆ. ಅವಳ ಶಾಂತ ಸ್ಥಿರ ಮುಖಭಾವವನ್ನು ನೆನೆದು ಒಂದು ಕ್ಷಣ ಅವನ ಹೃದಯ ಅಳುಕುವುದು. ಅವಳೆಂದೂ ಯಾವ ತಪ್ಪು ಮಾಡಿಲ್ಲ. ತನ್ನ ನಡತೆಯನ್ನೇ ನೆನೆಸಿಕೊಂಡಾಗ ರಾವಸಾಹೇಬನ ಮುಖದಲ್ಲಿ ನಾಚಿಕೆ ಒಡಮೂಡುವುದು. ಅವಳ ಮುಖದಲ್ಲಿಯೂ ಪತಿಯು ತನ್ನೊಡನೆ ವರ್ತಿಸುತ್ತಿರುವ ಈ ಬಗೆಯನ್ನು ಕಂಡಾಗ ನಿಗೂಢ ವಿಸ್ಮಯದ ತೀವ್ರ ವೇದನೆಯ ಅಸ್ಪಷ್ಟ ರೇಖೆಯೊಂದು ಮೂಡುತ್ತಿದ್ದುದು ಅವನಲ್ಲದೆ ಇನ್ನಾರೂ ಅರಿಯರು. ನಿರ್ಜನವಾದ ಕೋಣೆಯೊಳಗೆಯೇ ಈ ಕೀಳ ಕಲ್ಪನಾ ಮಾತ್ರದಿಂದಲೇ ಅವನ ಮುಖವು ಲಜ್ಜೆ ತಿರಸ್ಕಾರಗಳಿಂದ ಅವನತವಾಗುವುದು.

ಗುಣವಂತಿಯು ಗಂಭೀರಳಾಗಿದ್ದಳು. ಮನೆಗೆಲಸದಲ್ಲಿ ತೊಡಗಿದ್ದಳು. ಅವಳ ಮುಖವೂ ಇಳಿದಿದ್ದಿತಾದರೂ ರಾವಸಾಹೇಬನನ್ನು ಕಂಡಾಗ ಅದರಲ್ಲಿ ರಹಸ್ಯದ ಗೆಲುವಿನ ಸೂಕ್ಷ್ಮ ಮಂದಹಾಸವೊಂದು ಹೊರಹೊಮ್ಮುತಲಿದ್ದಿತು. 'ಅಜಿತನನ್ನು ಪೋಲೀಸರು ಕೈದು ಮಾಡಿ ಒಯ್ಯುವರು' ಎಂದು ಆಢ್ಯತೆಯಿಂದ ಹೇಳುತ್ತಿದ್ದ ರಾವಸಾಹೇಬನ ಮಾತುಗಳು ಎಷ್ಟು ಪೊಳ್ಳಾದುವು ಎಂಬುದು ಆ ನಗೆಯ ಮೂಲಕಾರಣವಾಗಿದ್ದರೆ ಅವನಿಗೊಂದು ಬೇರೆ ಭಾವನೆಯನ್ನೇ ಉದ್ರೇಕಿಸುತ್ತಿತ್ತು ಅವಳ ಆ ಮುಖ. ಸ್ತ್ರೀಯರ ಸಹಜ ಹಾವಭಾವ ವಿಭ್ರಮಗಳೆಲ್ಲಕ್ಕೂ ಕಾಮುಕ ತರುಣರೊಂದು ಅರ್ಥ ಕಲ್ಪಿಸಿ ಅಭಿಮಾನ ಪಡುಹರಲ್ಲವೆ?

ಮೂರನೆಯ ದಿನ ಮಧ್ಯಾಹ್ನದಲ್ಲಿ ಕುಲಕರ್ಣಿ ರಂಗಣ್ಣನು ಮೊಣ್ಣಯೆಳೆಯುತ್ತ 'ನಾರಾಯಣ ನಾರಾಯಣ' ಎನ್ನುತ್ತ ಗೌಡರ ವಾಡೆಗೆ ಬಂದು, "ಅಜ್ಜಿ ಎಲ್ಲಿರುವಳಪ್ಪಾ!" ಎಂದು ಇದೇ ಎದ್ದು ಹೊರಗೆ ಬಂದ ರಾವಸಾಹೇಬನನ್ನು ಕೇಳಿದ. ದನಿಯು ಆಯಾಸದಿಂದ ಕೂಡಿ

ದ್ದಿತು.

"ಇದ್ದಾರೆ; ಒಳಗೆ ಮಲಗಿದ್ದಾರೆ. ಹೇಳುತ್ತೇನೆ." ಎಂದವನೇ ರಾವಸಾಹೇಬನು ಯಾವದೋ ಒಂದು ವಿಚಾರದ ತಂದ್ರಿಯೊಳಗಿಂದ ಎದ್ದು ಒಳಗೆ ಹೊರಟ.

"ಬೇಡ. ನಾನೇ ಅಲ್ಲಿಗೆ ಹೋಗುವೆ." ಎಂದು ಅವನನ್ನು ತಡೆದು ರಂಗಣ್ಣನೇ ನಡುಮನೆಗೆ ನಡೆದನು.

ಕುಲಕರ್ಣಿಯು ಮನೆಗೆ ಬಂದುದನ್ನು ಕಂಡು, ಮುರದೇವಿಯು ಎದ್ದು ಕುಳಿತಳು.

"ಬಾಪ್ಪಾ!" ಎಂದು ಸ್ವಾಗತಿಸಿ, ಸುತ್ತಲೂ ನೋಡಿ "ಯಾರಿಲ್ಲೇನು? ಕುಲಕರ್ಣೀರಿಗೆ ಏನಾದರೂ ಹಾಸಿ ಕೊಡಿರಿ!" ಎಂದಳು.

ಒಳಗಿನಿಂದ ಸರಸ್ವತಿಯೇ ಮುಂದೆ ಬಂದು ಕಂಬಳಿಯೊಂದನ್ನು ಹಾಸಲು ಹವಣಿಸಿದಳು. ಅಷ್ಟರಲ್ಲಿ ರಾವಸಾಹೇಬನು ತಾನೇ ಬಂದು ಕಂಬಳಿ ಹಾಸಿದ. "ಇರಲಿ ಬಿಡು" ಎನ್ನುತ್ತ ರಂಗಣ್ಣನು ತಾನೇ ಕಂಬಳಿ ಸರಿಗೊಳಿಸುತ್ತ "ನಾರಾಯಣ ನಾರಾಯಣ!" ಎಂದು ಕುಳಿತ. ಮುರದೇವಿಯು ಮೌನವಾಗಿದ್ದಳು. ರಂಗಣ್ಣನೇ ಹೇಳತೊಡಗಿದ:

"ಇಂದು ಸಂಜೆಗೆ ಇಲ್ಲಾದರೆ ನಾಳೆ ಮುಂಜಾನೆ ಬರತಾರೆ ಗೌಡರು" ಎಂದು. ಮುದುಕಿಯ ಸುಕ್ಕುಗೊಂಡ ಮುಖ ಅರಳಿತು. ಮುಂದೆ ರಂಗಣ್ಣ ಹೇಳತೊಡಗಿದ ಸ್ವಲ್ಪ ಹೆಮ್ಮೆಯಿಂದ ಕೂಡಿದ ಸ್ವರ ತೆಗೆದು. "ಇನ್ನೇನು ಕಾಳಜಿ ಮಾಡುವ ಕಾರಣವಿಲ್ಲ. ಎಲ್ಲಾ ತೀರಿದಂತೆಯೇ ಆಗಿದೆ. ಅದೇನೋ ದೊಡ್ಡವರ ಸಂಬಂಧ ಅಂತ ಸುತ್ತೆಲ್ಲ ಲಗೂನ ಬಿಗುವು ಆಯ್ತು. ನೆಟ್ಟಗಾಯ್ತು. ಎಷ್ಟು ಆದರೂ ವತನದಾರರು. ಬಹಳ ಅಂಜಿ ನಡೆಯಬೇಕಾಗ್ತದ. ಈಗಿನ ಹುಡುಗರಿಗೆ ತಿಳಿಯುವದಿಲ್ಲ." ಎಂದು ರಾವಸಾಹೇಬನ ಕಡೆಗೆ ದೃಷ್ಟಿ ಬೀರಿ "ನಾವು ಕಲಿತವರಂತ ತಲೆಯ ಮೇಲೆ ಕೂದಲು ಕಾಯ್ದು ತಿರಗಲಿಕ್ಕೆ ಬಲ್ಲರು! ಆದರೆ ವೇಳೆ ಪ್ರಸಂಗಕ್ಕ ಹೇಗೆ ನಡೆಯಬೇಕು, ಏನ ಮಾಡಬೇಕು, ಅಂಬುವದು ಒಂದೂ ತಿಳಿಯುವದಿಲ್ಲ. ತಂದೆಯು ಮೂರು ದಿನ ಆಯ್ತು ಏಕೆ ಬಂದಿಲ್ಲ

ಟಿಕ್ಕಿಲ್ಲ ಏನು ಕತೆ ಅಂಬುವ ವಿಚಾರವನ್ನಾದರೂ ಇವನು ಮಾಡಿರುವನೇ? ಎಲ್ಲಾರೂ ಹೀಗೇ. ನಮ್ಮ ಹುಡುಗರೂ ಏನು? ಗಾಂಧಿ ಟೊಪ್ಪಿಗೆ ಒಂದು ಹಾಕಿಕೊಂಡು ಸರಕಾರ ಹಾಗೆ ಹೀಗೆ ಅಂತ ಹೇಳ್ತ ನಡೆದರೆ.''

"ಕಲಿತವರೆಲ್ಲ ಹಾಗೇ ಇರತಾರಂಬೂದೇನ ಇಲ್ಲ.'' ರಾವ ಸಾಹೇಬನು ತನ್ನ ಮೇಲಿನ ಮಾತು ಹೊರಳಿಸಲೆತ್ನಿಸಿದ.

"ಎಲ್ಲರೂ ಒಂದೇ. ನಿನಗಷ್ಟ ಸುತ್ತಲೂ ಅಂಜಿಕೆ ಆದ ಅಂತ ಸುಮ್ಮನೆ ಬೆಕ್ಕಿನಂತೆ ಇರುವಿ ಆಯ್ತು. ನೋಡಲಿಲ್ಲಾ ಆ ದಿನ ನೋಡ ನೋಡತ ಊರ ಜನರೆಲ್ಲ ಸಭೆಯೊಳಗ ಸೇರಿದರು. ಏನ ಅದನೊ ಏನೋ ಅದರೊಳಗ. ಎಲ್ಲರೂ ಕಿವಿಯೊಳಗ ಗಾಳಿ ತುಂಬಿದಂತೆಯೇ ಮಾಡು ವರು!''

"ಇರಲಿ ರಂಗಣ್ಣನೋರೇ ಠಾಣೆಯ ಸುದ್ದಿಯೇನು?''

"ಸುದ್ದಿಯೇನು? ಅದನ್ನೇ ಹೇಳಲಿಕ್ಕೆ ಬಂದಿರುವೆನಲ್ಲ. ನಿಜ ವಾಗಿಯೂ ಗೌಡನ ಮೇಲೆ ಇಂತಹ ಪ್ರಸಂಗ ಬಂದೀತೆಂದು ನಾನೆಣಿಸಿ ರಲಿಲ್ಲ. ಅಜಿತ ಇಷ್ಟು ಮುಂದಿನ ಮೆಟ್ಟಲಿನವನಿರುವನೆಂದು ನನ್ನ ಕನಸುಮನಸಿನೊಳಗೂ ಇರಲಿಲ್ಲ. ಸ್ವತಃ ಹವಾಲದಾರನೂ ಅವನ ಚಾತುರ್ಯ ನೋಡಿ ಬೆರಳು ಕಡಕೊಂಡ.''

"ಮೊದಲಿನಿಂದಲೂ ಅಜಿತ ಹಾಗೇ ಇದ್ದಾನ. ಗೌಡರ ರಕ್ತ ಅದು. ಇಂಥಾ ಸೊಟ್ಟ ಪೋಲೀಸರಿಗೆ ಸಿಕ್ಯಾನ ಆತ?'' ಹೆಮ್ಮೆಯಿಂದ ನುಡಿದಳು ಮುರಡೇವಿ.

ಅವಳ ಮಾತನ್ನು ಕೇಳಿ ರಂಗಣ್ಣ ಕೊಂಚ ಕಾಲ ದಿಮ್ಮೆಂದು ತಲೆ ಹಿಡಿದು ಕುಳಿತ.

"ವಯಸ್ಸಾಯ್ತು ಪಾಪ! ಅರವತ್ತರ ಅರವು ಮರವು; ಇವಳಿಗೇನು ಗೊತ್ತು?'' ಎಂದುಕೊಂಡ ಮನದಲ್ಲಿಯೇ. ಅಷ್ಟರಲ್ಲಿ,—

"ಅವ್ವಾ!''

ಹದಿನೇಳು ಹದಿನೆಂಟು ವರುಷದ ಹುಡಿಗೆಯೊಬ್ಬಳು ಪಕ್ಕನೆ ಒಳಗೆ ಹಣಿಕಿಕ್ಕಿ ಪರರೊಬ್ಬರಿರುವುದನ್ನು ಕಂಡು ಹಿಂದೆ ಸರಿದಳು.

"ಏಕೆ ಗುಣವಂತಿ? ಬಾಅವ್ವಾ, ರಂಗಣ್ಣನವರೇ ಇದ್ದಾರೆ. ಠಾಣೆಗೆ

ಹೋಗಿ ಬಂದಿದಾರೆ. ಅಜಿತನ ಪರಾಕ್ರಮವನ್ನೇ ಹೇಳ್ತಿದಾರು" ಎಂದಳು ಮುರದೇವಿ.

ಪೋಲೀಸ ಠಾಣೆಯಿಂದ ಬಂದಿರುವರೆಂದು ಕೇಳಿ ಅವಳಿಗೂ ಸ್ವಲ್ಪ ಕುತೂಹಲ ಹುಟ್ಟಿತು. ಸುದ್ದಿ ಕೇಳಲಿಕ್ಕೆ ಮುಂದೆ ಬಂದಳು. ಗುಣವಂತಿಯದು ಉಜ್ವಲ ಸುವರ್ಣ ವರ್ಣ. ಕೆನ್ನೆ, ಗದ್ದ, ಹಣೆ ಒಟ್ಟು ಮುಖದ ಮಾಟ, ಚಲುವಿಕೆಗೆ ಒಪ್ಪವಿಟ್ಟಂತೆ. ಕೋಮಲ ಕಣ್ಣುಗಳಲ್ಲಿ ಸ್ಥಿರಬುದ್ಧಿಯ ಹೊಳಪು. ಬಂದು ದೂರದಲ್ಲಿಯೇ ಕಂಬಕ್ಕೆ ಆನಿಸಿ ಕುಳಿತುಕೊಂಡಳು. ಆಗ ಮುರದೇವಿ ಹೇಳತೊಡಗಿದಳು.

"ಮಾವನ ವಿಷಯ ಕೇಳಿದೆಯಲ್ಲ ? ಇನ್ನೂ ಏಕೆ ಬರಲಿಲ್ಲವೆಂದು ಚಡಪಡಿಸುತ್ತಿದ್ದಿವು. ಕೇಳಿಲ್ಲಿ—ಇವರು, ಗೌಡರು ಇನ್ನೂ ಏಕೆ ಬರಲಿಲ್ಲವೆಂದು ಅಲ್ಲಿತನಕ ಹೋಗಿ ಬಂದರು ! ರಾವಸಾಹೇಬನಂತೂ ಮನೆ ಬಿಟ್ಟು ಹೊರಗೆ ಹೋಗುವದಿಲ್ಲ. ಅಜಿತ ಇದ್ದರೆ ಇಂಥದೇನಾದರೂ ಮಾಡುವವ."

ಅಜ್ಜಿಯ ಅಕಲ್ಪಿತ ಉತ್ಸಾಹವನ್ನು ಕಂಡು ಗುಣವಂತಿಯ ಮುಖ ಬಿಳುಪೊಡೆಯಿತು. ರಾವಸಾಹೇಬನು ಇಬ್ಬರ ಮಾತೂ ತಿಳಿಯದೆ ಗೊಂದಲದಲ್ಲಿ ಬಿದ್ದಂತಾದನು. ರಂಗಣ್ಣನಂತೂ ಕಟ್ಟಿಗೆಯ ಗೊಂಬೆಯಂತೆ ಮುರದೇವಿಯನ್ನೇ ನೋಡುತ್ತ ಅವಾಕ್ಕಾಗಿ ಮಿಟ್ಕು ಮಿಸುಕದೆ ಕುಳಿತಿದ್ದ. ತಾನು ಹೇಳುವ ಸಂಗತಿಯೇ ಮುದಿಕಿಗೆ ಸರಿಯಾಗಿ ತಿಳಿಯುವದೋ ಇಲ್ಲವೋ ಎಂಬ ಸಾಶಂಕವೃತ್ತಿಯುವನಾದ. ಆದರೂ ಅವಳ ಮಾತಿನ ಕೊನೆಯ ಎಳೆಯನ್ನೇ ಹಿಡಿದು ತನ್ನ ವಿಷಯ ಮುಂದುವರಿಸಿದ.

"ಅಜಿತ ಇದ್ದರೆ ಮಾಡುವಂಥವನೇ, ನೀವು ಹೇಳಿದಂತೆ. ಇಂಥ ಅಜಿಂಕ್ಯ ಕೆಲಸ ಮಾಡಿದವನಿಗೆ ಈ ಕಾರ್ಯ ಕಸಕಸಿಯ ಕಾಳಿನಂತೆ. ಅದರ ವಿಷಯಕ್ಕೆ ನಮಗಾರಿಗೂ ತಪ್ಪಿಯೂ ಅವಿಶ್ವಾಸವಿಲ್ಲ. ಅಪ್ರಿಯವಾದರೂ ಕಠೋರವಾದರೂ ಘಾತುಕವೆನಿಸಿದರೂ ಅವನು ಮಾಡಿದ ಕೆಲಸ ದೊಡ್ಡ ಸಾಹಸದ್ದು. ಹಿಂದೆ ಅವನೊಮ್ಮೆ ಕಾಂಗ್ರೇಸ ಕಮಿಟಿಯೊಳಗ ಮಾತಾಡಿದ್ದನ್ನು ಕೇಳೇ ಅವನ ಪರಾಕ್ರಮ ಕಲ್ಪಿಸಿಕೊಂಡಿದ್ದೆ-

ಇಂಥ ಧೀರನನ್ನು ನಾನು ಎಲ್ಲಿಯೂ ಕಂಡಿಲ್ಲ. ಸಭೆಯೊಳಗಿಂದ ನೋಡ ನೋಡ್ತ ಹೋಗಿಬಿಟ್ಟ. ಪೋಲೀಸರು ಸುತ್ತೆಲ್ಲ ನಿಂತಿದಾರೆ! ಟೊಪ್ಪಿಗೆ ಇಟ್ಟಲ್ಲಿಯೇ ಇದೆ! ಎಂಥ ಯುಕ್ತಿ! ಏನು ವಿಚಾರ! ಎಲ್ಲಿ ಮಾತು! ಎಂಥಾ ಕತೆ! ಲೋಕದೊಳಗ ಆಗದ ಕೃತಿ!"

"ಟೊಪ್ಪಿಗೀನೂ ಬಿಟ್ಟ ಹೋಗಿದ್ದ?"

"ಇಲ್ಲಾದರೆ ವಾರಂಟು ಇತ್ತು ಹವಾಲದಾರ ಬಿಟ್ಟಾನೇ?"

"ಬಹಳ ಯುಕ್ತಿ ಅವನ ಹತ್ತರ! ಸಣ್ಣಾಗಿನವ ಇದ್ದಾಗಿನಿಂದೂ ನಾವು ಮನೆಯೊಳಗ ನೋಡತ ಬಂದೇವ ಅಲ್ಲ!"

ಮುರದೇವಿಯು ವಿಚಾರಸರಣಿಯನ್ನು ಹೇಗೆ ಹೊರಳಿಸಬೇಕೆಂಬುದು ರಂಗಣ್ಣನಿಗೆಯೇ ತಿಳಿಯದಾಯಿತು. ಊರನ್ನೇ ತಿರಗಿಸುವ ತಂತ್ರಗಾರನಾತ. ಗುಣವಂತಿಯು ಒಳಗೊಳಗೇ ನಗುತ್ತಿದ್ದಳು. ಅವಳ ಕಣ್ಣು ಮಾತ್ರ ರಾವಸಾಹೇಬನ ಮೇಲೆ. ರಾವಸಾಹೇಬನು ಅಜ್ಜಿಯ ಹುಚ್ಚುತನಕ್ಕೆ ಸಿಟ್ಟು ಬೆಂಕಿಯಾಗಿದ್ದ. ಆದರೆ ಮಾಡುವದೇನು? ಮಾತಿನ ಆರಂಭದಲ್ಲಿಯೇ ರಂಗಣ್ಣನು ಅವನ ಮೇಲೆಯೇ ಚಾಟಿಯ ಏಟು ಕೊಟ್ಟಿದ್ದ. ಕೊನೆಗೆ ಕುಲಕರ್ಣಿಯವರೇ ಸ್ಪಷ್ಟವಾದಿಯಾಗಬೇಕಾಯಿತು.

"ಸಣ್ಣವನಿರುವಾಗ ಸಲಿಗೆ ಕೊಡತ ಬಂದುದಕ್ಕೆ ಇಂದ ಸಾವಿರಾರು ರೂಪಾಯಿ ಖರ್ಚು ಮಾಡಬೇಕಾಯಿತಲ್ಲ, ಗೌಡರು ತಿರುಗಿ ಮನೆ ಕಾಣಬೇಕಾದರೆ.."

"ಏಕೆ ಏನಾಯ್ತು?" ಬೆರಗಿನಿಂದ ಕೇಳಿದಳು ಮುರದೇವಿ ನಡುವೆಯೇ.

ತನ್ನ ನಿಷ್ಠುರ ಸತ್ಯವಾಕ್ಯ ಮುರದೇವಿಯ ಹೃದಯದಲ್ಲಿ ಆಳದವರೆಗೆ ನಟ್ಟಿತೆಂದು ರಂಗಣ್ಣನಿಗೆ ಈಗ ಮನದಟ್ಟಾಯಿತು. ಅವಳ ಮಾತಿನ ಆವೇಗವನ್ನು ಕಂಡು—

"ನಿನ್ನ ಮೊಮ್ಮಗ ಓಡಿ ಹೋದುದಕ್ಕೇ ಗೌಡನನ್ನು ಒಯ್ದು ಮೂರು ದಿನ ಠಾಣೆಯೊಳಗ ಕೂಡಿಸಿದಾರೆ. ಇಲ್ಲಿಂದನಃ ಕೈಯೊಳಗ ಕಾಲೊಳಗ ಬೇಡಿ ಹಾಕಿಕೊಂಡೇ ಒಯ್ಯುವರಿದ್ದರು! ಹಾಗೆ ಮಾಡಬಾರದಂತ ಫೌಜದಾರನಿಗೆ ಕೊಟ್ಟೇವಃ ಮುನ್ನೂರ! ಅಲ್ಲಿಂದ ಬರಬೇಕಾದರೆ

ಮಳೆ ಸುರಿದಂತೆ ರೂಪಾಯಿ ಸುರಿಯಲಿಕ್ಕೆ ಬೇಕಾಗೇದ ಇನ್ನೂ. ಅದೇ ಯತ್ನದೊಳಗೇ ಇದ್ದೇನಿ. ಅದಕ್ಕೇ ಊರಿಗೆ ಬಂದೆ.''

ಹೃದಯದಲ್ಲಿ ಇಲ್ಲಿಯ ವರೆಗೆ ತುಂಬಿಕೊಂಡ ಹವೆಯನ್ನೆಲ್ಲ ಒಮ್ಮೆಲೇ ಉಸ್ಸೆಂದು ಹೊರಗೆ ಬಿಟ್ಟಳು ಮುರದೇವಿ. ಆಮೇಲೆ ಅಂದಳು: ''ಅಜಿತ ಓಡಿ ಹೋದರೆ ಇವನ ಸುತ್ತೇಕೆ ?''

''ಇವನ ಸುತ್ತ ಅಷ್ಟೇಕೆ? ಮನೆಯ ಜನವೆಲ್ಲ ಹೋಗಬೇಕಾಗ್ತದ. ಅಲ್ಲೇದ ಅಲ್ಲಿಯೇ ಎಲ್ಲರ ಬಾಯಿ ಕಟ್ಟತ ಹೊರಟಿದ್ದೇವೆ. ನಿನ್ನೆ ಬೆಳಗಾಂವಿಯಿಂದನೂ ಇವನ ಬೀಗ ಬಂದ ಹೋದ. ಫೌಜದಾರನೂ ಅವನೂ ಕೂಡಿ ಕಲತವರಂತೆ. ಏನೇ ಆಗಲಿ ಒಮ್ಮೆ ಗೌಡರು ಬಿಡುಗಡೆಯಾಗಲಿ. ಈ ಸಂಬಂಧ ಬಹಳ ಕೆಟ್ಟ. ಅಂದೇ ಗೌಡರು ಬೇರೆಯಾದದ್ದು ಚಾವಡಿಯೊಳಗ ದಾಖಲೆ ಇತ್ತಂತ ನೆಟ್ಟಗಾಯ್ತು. ಇಲ್ಲಾದರೆ ವತನಕ್ಕ ವತನನೇ ಹೋಗಿಬಿಡೋದ.''

ಈಗ ಎಲ್ಲರಿಗೂ ಗೊತ್ತಾಯಿತು, ಗೌಡನನ್ನು ಹಿಡಿದೊಯ್ದದದ್ದು. ಇಲ್ಲಿಯ ವರೆಗೆ ಸಿಂದಿಯ ಗಿಡವನ್ನು ಕಡಿಯಲು ಹೋದ ಹುಡುಗರನ್ನು ಬಿಡಿಸಿ ತರಲಿಕ್ಕೆಯೇ ಗೌಡ ಠಾಣೆಗೆ ಹೋಗಿದಾನೆ ಅಂತ ಮನೆಯವರ ಕಲ್ಪನೆ. ಊರಲ್ಲಿಯೂ ಹಾಗೆಯೇ ರಂಗಣ್ಣನು ಸುದ್ದಿಯನ್ನು ಹಬ್ಬಿಸಿದ್ದ. ರಾವಸಾಹೇಬನು ಈಗ ಚಿಂತೆಗೊಳಗಾದ, ತಂದೆಯ ಬಂಧನಕ್ಕಾಗಿ. ಸಾವಿರಾರು ರೂಪಾಯಿ ಲಂಚ ಕೊಡಬೇಕಾಗಿ ಬಂದುದಕ್ಕೆ ಅಜಿತನ ಮೇಲೆ ಒಳಗೊಳಗೆಯೇ ಸಿಟ್ಟಾದ. ಅದರಲ್ಲಿಯೂ 'ನಾ ಬರೆದಂತೆಯೆ ಅಂದು ಅಜಿತನ ಮೇಲೆ ರಿಪೋರ್ಟು ಕೊಟ್ಟು ಬಿಟ್ಟಿದ್ದರೆ ತಂದೆಯ ಮೇಲೆ ಈ ಪ್ರಸಂಗ ಏಕೆ ಬರುತ್ತಿತ್ತು! ಎಂದುಕೊಂಡು ತನ್ನ ಮುತ್ಸದ್ದಿತನಕ್ಕೆ ತಾನೇ ಮರುಳಾಗಿ ತಲೆದೂಗಿದ ಅದರೊಡನೆಯೇ ಅತ್ತ ಕಡೆಗೆ ಆಪ್ತರು ಬಂದು ಪ್ರಸಂಗಕ್ಕೆ ನೆರವಾದುದಕ್ಕೆ ಕೊಂಚ ಹೆಮ್ಮೆಯೂ ಉದಿಸಿತು. ಅದರ ಬೆಳವಣಿಗೆಯ ಭರದಲ್ಲಿಯೇ ''ದೊಡ್ಡವರ ನಡತನ ಇದ್ದರೆ ಯಾವಾಗಾದರೂ ಉಪಯೋಗ ಬೀಳ್ತದ ನೋಡು'' ಗುಣವಂತಿಯ ಮುಖವನ್ನು ಕೆಣಕುದೃಷ್ಟಿಯಿಂದ ನೋಡುತ್ತ, ''ಇಲ್ಲಿಯದೇ ಒಂದು ಬಡವರ ಹುಡಗಿಯನ್ನು ನಾವೂ ಕಟ್ಟಿಕೊಂಡಿದ್ದರೆ ಅಜಿತನಂತೆ ನಾನೂ

ಓಡಿಹೋಗುವ ಸರತಿನೇ ಬರತಿತ್ತು." ಎಂದ.

"ಅದಕ್ಕೇ ನಾನೂ ಯತ್ನ ಮಾಡಿ ಬೆಳಗಾಂವಿ ದೇಶಪಾಂಡೇರ ಹುಡುಗಿಯನ್ನು ಮಾಡಿದೆನಲ್ಲ. ಶಹರ ಊರ ಹುಡುಗೆಯರು ಹಳ್ಳಿಯೊಳಗ ಬಂದ ಇರಲಿಕ್ಕೇ ಮೂಗು ಮುರಿತಾರೆ! ಇರವಲ್ಲರು ಅಲ್ಲಿ ನಾಲ್ಕು ತಿಂಗಳ, ಇಲ್ಲಿ ಎರಡ ತಿಂಗಳ ನಮ್ಮದೇನ ಅಂತ ಮಾಡಿ ಬಿಟ್ಟೆ." ಅಂತ-ರಂಗದ ಆನಂದದ ಗುರುತೆಂಬಂತೆ ಜೇಬಿನೊಳಗಿನ ಚಂಚಿಯನ್ನು ತೆಗೆದು ನುಡಿದ ರಂಗಣ್ಣ.

ಗುಣವಂತಿಯು ತಲೆ ತಗ್ಗಿಸಿಕೊಂಡು ನೀರವವಾಗಿ ಕುಳಿತಿದ್ದಳು. ಒಳಬದಿಗೆ ನಿಂತ ಗಂಗವ್ವನೇ ತಟ್ಟನೆ ನುಡಿದಳು.

"ನಿಮ್ಮದ ನೋಡಿಯೇ ಇವರೂ ಹಾರಿಕೊಂಡರಲ್ಲ, ಬೆಳಗಾಂವಿ ಮನೆಗೆ. ಇಲ್ಲಾದರ ಎಂತೆಂತಹ ಹುಡಿಗೇರ ಬಂದಿದ್ದರು ನಮ್ಮ ರಾವ ಸಾಹೇಬನಿಗೆ! ಎಲ್ಲರನ್ನು ಬಿಟ್ಟು ಈ ಮಂಗನಂತಹ ಹೆಣ್ಣು ತಂದು ನುಗನ ಕೊರಳೊಳಗ ಕಟ್ಟಿದರು. ಮಗನೂ ಸಿಟ್ಟಿಗೆ ಬಂದರ ಬರವಲ್ಲ ನೇಕೆ ನನ್ನ ಮಾತಿಗೆ? ನನಗೇನು ಸೊಸೆ ಮನಸಿಗೆ ಬಂದಿಲ್ಲ ನೋಡಪ್ಪ!"

"ಈಗ ಆ ಮಾತು ತಕ್ಕೊಂಡು ಏನು ಮಾಡುವಿರಿ? ಈಗ ಗೌಡರ ಮೇಲೆ ಎಂಥಾ ಪ್ರಸಂಗ ಬಂದದ, ಅದಕ್ಕ ಯಾರ ಮದ್ದತ ಮಾಡಿದರು ನೋಡರಿ!" ರಂಗಣ್ಣ ಎಚ್ಚರಿಸಿದ.

"ಚಾವಡಿ ಕೆಲಸ ಏನೋ ಗಂಡಸರೇನೋ. ಕೆಲಸ ಹತ್ತಿತೆಂದರೆ ನಾಲ್ಕ ನಾಲ್ಕ ದಿನ ಹೋಗ್ತಾರೆ ಬರ್ತಾರೆ. ಅದನ್ನು ತಕ್ಕೊಂಡ ನಮ ಗೇನು ಮಾಡೋದು?"

ಇವರು ಮಾತಾಡುವ ವಿಷಯ ಕೇಳಿಕೊಳ್ಳದೆ ತನಗೇನೂ ಸಂಬಂಧ ಸಿಲ್ಲವೆಂಬಂತೆ ನುಡಿಯಹೋದಳು. ಅವಳ ಮಾತನ್ನು ಅಷ್ಟಕ್ಕೆಯೇ ತಡೆದು ಮುರದೇವಿಯು—

"ಆಕೆಯ ಮಾತು ತಗೊಂಡು ಏನು ಸುಡತೀರಿ? ಈಗ ಬಂದ ಎಲ್ಲಿ ತುದಿ ತುದಿ ಕೇಳಿದಾಳ ಏನೋ! ನೀವು ಮಾತ್ರ ದುಡ್ಡಿಗೆ ಹಿಂದ ಮುಂದ ನೋಡಬೇಡಿರಿ. ಗೌಡನೊಬ್ಬ ನಿಮಗೆ ತಮ್ಮನೇ ಇದ್ದಂತೆ-ಏನು ಬಿದ್ದದ್ದು ಹಾಕಿರಿ. ನಿಮಗೆ ಸಿಗದಿದ್ದರ ನನಗ ಹೇಳಿರಿ ನಾ ನಿಮಗೆ

ಹತ್ತಿದಷ್ಟು ಕೊಡತೇನಿ. ಆದರೆ ಮಗ ಕೂದಲೆಳೆ ಕೊಂಕದೆ ಮನೆಗೆ ಬರಲಿ!" ತಾಯ್ಗರುಳೀಗ ಮಿಡಿಯಿತು, ನಿಜಸ್ವರೂಪವನ್ನು ಅರಿತು.

"ಅದರ ಚಿಂತಿ ಬಿಡರವ್ವ! ನನಗೂ ಅವರೇನು ಉಪಕಾರ ಸಣ್ಣದು ಮಾಡಿಲ್ಲ? ಸತ್ಯ ಸಮಾಜದ ಕಾಲಕ್ಕ ಇವರೊಬ್ಬರು ನನ್ನ ಕಡೆಗೆ ನಡ ಕಟ್ಟಿ ನಿಲ್ಲದಿದ್ದರೆ ನನ್ನ ಮನೆಯ ಮೇಲಿನ ಹಂಚ ಆದರೂ ನಿಲ್ಲತಿದ್ದು ವೇನು? ನಾವು ಊರೊಳಗ ಬಾಳ್ವೆ ಮಾಡೋದ ಒತ್ತಟ್ಟಿಗಿರಲಿ!"

"ಇರಲಿ, ಒಬ್ಬರ ವೇಳೇಕ್ಕ ಒಬ್ಬರ ಆಗೋದಲ್ಲ! ಅಜಿತನ ಸ್ಥಿತಿ ಗತಿ ಹೇಗೋ ಅವನ ಸಲುವಾಗಿನೂ ನೀವೇ ಮುಂದಾಗಿ ವ್ಯವಸ್ಥೆ ಮಾಡ ಲಿಕ್ಕೆ ಬೇಕು! ಅದಕ್ಕೂ ಪ್ರಯತ್ನ ಬೇಕು. ಆದೂ ನಮ್ಮ ಕೆಲಸವೇ ಅಲ್ಲವೆ? ತಿಳಿಯದೆ ಹುಡುಗ ಹಾಗೆ ಮಾಡಿದರೇನಾಯಿತು? ಹಿರಿಯರು ಸುಮ್ಮನಿರುವ್ವದೇ?"

ಸ್ವಲ್ಪ ಹೊತ್ತು ತೆಪ್ಪಗೆ ಕುಳಿತ ರಂಗಣ್ಣ. ಮೊಮ್ಮಗನ ವಿಷಯಕ್ಕೆ ಮುದಕಿಯ ಮನಸ್ಸು ಹರಿಯುವದೆಂದು ತಿಳಿದುಕೊಂಡ. ಆದರೂ ಸತ್ಯಸಂಗತಿಯನ್ನು ಸ್ಫುಟವಾಗಿ ಹೇಳಿದನು.

"ಅವನ ಸಲುವಾಗಿ ಪ್ರಯತ್ನ ಮಾಡುವದೆಂದರೆ ಕಲ್ಲು ಕಟ್ಟಿ ಕೊಂಡು ಹೊಳೆಯಲ್ಲಿ ಈಸು ಬಿದ್ದಂತೆಯೇ. ಈಗಂತೂ ಗೌಡರು ಸ್ಪಷ್ಟ ವಾಗಿ ನನಗೂ ಅವನಿಗೂ ಏನೂ ಸಂಬಂಧ ಇಲ್ಲಂತ ಬರೆದು ಕೊಟ್ಟ ಬಿಟ್ಟಿದಾರೆ!" ಸ್ವಲ್ಪ ತಡೆದು, ಎದುರಿಗೆ ಗುಣವಂತಿಯೂ ಇದ್ದಾಳೆಂಬು ದನ್ನು ಗಮನಿಸಿ, "ಹಾಗೆ ಬರೆದುಕೊಟ್ಟರೆಂದೇ ಉಳಿದರು."

"ಆಳು ಕರೆಯಲಿಕ್ಕೆ ಬಂದಿದಾನೆ!" ಹೊರಗಿನ ಮನುಷ್ಯನೊಬ್ಬ ಬಂದು ಎಚ್ಚರಿಸಿದ.

ರಂಗಣ್ಣನು ಸ್ವಲ್ಪ ಶುಷ್ಕಭಾವದಿಂದೆದ್ದು ಹೇಳಿದನು: "ನೀವೇನೂ ಚಿಂತಿಸುವ ಕಾರಣವಿಲ್ಲ. ಮತ್ತೆ ಸಾಯಂಕಾಲ ಬರುವೆ. ಹಣದ ವಿಚಾರ ಆಗಲೇ ಮಾತಾಡೋಣ" ಎಂದು ಮುಖ್ಯ ಕಾರ್ಯವನ್ನು ಬಜಾಯಿಸಿ 'ನಾರಾಯಣ ನಾರಾಯಣ!' ಎನ್ನುತ್ತ ಹೋದರು.

ರಂಗಣ್ಣನು ದುಡ್ಡಿನ ವಿಷಯ ಸಂಜೆಗೆ ಮಾತಾಡೋಣವೆನ್ನಲು ಮುರ ಡೇವಿಯು ಮೆಲ್ಲನೆ ಸ್ಥಳ ಬಿಟ್ಟಳು. ಒಳಗೆ ಸೊಸೆಯಂದಿರ ಕಡೆಗೆ ವಿಚಾರ

ವಿನಿಮಯಕ್ಕೆ ಹೋದಳು. ಪುರುಷರಾರೂ ಮನೆಯಲ್ಲಿಲ್ಲ. ಇದ್ದವನೂ ರಾವಸಾಹೇಬನೊಬ್ಬ; ವ್ಯವಹಾರವರಿಯದ ಹುಡುಗ. ಅವಳ ದೃಷ್ಟಿಯಲ್ಲಂತೂ ಅವನು ತುಟಿಯ ಮೇಲಿನ ಹಾಲು ಆರದ ಹಸುಳೆ. ಅಂದ ಮೇಲೆ ಮನೆಯಲ್ಲಿಯ ಮೂವರೂ ಹೆಂಗಸರಲ್ಲಿಯಾದರೂ ಮಾತುಗಳು ಒಂದು ಮೆಟ್ಟಲಿಗೆ ಬರಲಿಕ್ಕೆ ಬೇಡವೆ?

ಆಗ ಅಲ್ಲಿ ಉಳಿದಿಬ್ಬರ ದೃಷ್ಟಿಗಳೂ ಕೂಡಿದುವು. ಪುನಃ ಪುನಃ ಇಬ್ಬರೂ ಮುಖ ತಗ್ಗಿಸಿದರು. ತುಸು ಹೊತ್ತು ಸುಮ್ಮನಿದ್ದು ರಾವಸಾಹೇಬನು ಮಾತೆತ್ತಿದ:

" ನನಗಿಂತ ಅಜಿತ ಹಿರಿಯವ, ಆದರೂ ಅವನ ನಡತೆಗಾಗಿ ನಾನು ತಲೆ ಕೆಳಗೆ ಹಾಕಬೇಕಾಗಿದೆ. "

ಗುಣವಂತಿಯು ಮೃದುಕಂಠದಿಂದ ಉತ್ತರವಿತ್ತಳು.

" ನೀವೇನು ನಾಚಿಕೊಳ್ಳುವ ಕಾರಣವಿಲ್ಲ. "

" ಇದೆಂಥ ಮಾತು! ಅವನ ಹುಚ್ಚುತನಕ್ಕಾಗಿ ಹುಂಬತನಕ್ಕಾಗಿ ತಮ್ಮನಾದ ನಾನು ನಾಚದೆ ಇನ್ನಾರು ನಾಚುವರು? ನನ್ನಿಂದ ಎಲ್ಲವನ್ನೂ ಮುಚ್ಚಿಡುತ್ತಿದ್ದಾನೆಂದ ಬಳಿಕ ಅದರಲ್ಲಿ ಏನೋ ದೊಡ್ಡ ದೋಷವಿದೆಯೆಂದು ಆಗಲೇ ನಾನು ತಿಳಿದುಕೊಂಡಿದ್ದೆ. "

" ಅವರು ದೇಶಭಕ್ತರು, ನಿಮಗೆ ದೇಶಸೇವೆ ಸೇರುವದಿಲ್ಲ. ಮೇಲಾಗಿ ಸರಕಾರದ ನೌಕರರು, ವತನದಾರರು, ಅಂತೆಯೇ ನಿಮ್ಮ ಮುಂದೆ ಹೇಳಿರಲಿಕ್ಕಿಲ್ಲ. "

ರಾವಸಾಹೇಬನಿಗೆ ಈ ಮಾತು ಸರಿಬರಲಿಲ್ಲ. ಪತಿಯ ತಪ್ಪನ್ನು ಒಪ್ಪವಿಟ್ಟುಕೊಳ್ಳುವದಕ್ಕಾಗಿ ಅವಳು ತನ್ನೆದುರಿಗೇ ಹೀಗೆ ಪ್ರಯತ್ನಿಸುವಳೆಂದು ಆತ ಇನ್ನೂ ವರೆಗೆ ತಿಳಿದಿರಲಿಲ್ಲ. ಅಂತೇ ಉಗುಳು ನುಂಗಿ ನುಡಿದ:

" ಈ ವಿಷಯ ನಿನಗೆಲ್ಲ ಹೇಳಿದಂತೆ ತೋರುತ್ತದೆ ? "

" ಅಹುದು; ಅವರೇ ಒಂದಿನ ಅಂದಿದ್ದರು ! "

ಗುಣವಂತಿಯು ಮ್ಲಾನಭಾವದಿಂದ ನಸು ನಕ್ಕು ಮುಂದೆ ನುಡಿದಳು.

“ಇದೇನು ದೋಷವೇ? ಎಲ್ಲರ ಪ್ರವೃತ್ತಿ ಒಂದೇ ಇರುವುದಿಲ್ಲ. ಯಾರಿಗೆ ಯಾವುದು ಬೇಡವೋ ಅವರಿಗೆ ಅದನ್ನು ತಿಳಿಸದೆ ಇರುವುದರಲ್ಲಿ ನನಗೇನು ತಪ್ಪು ಕಾಣಿಸುವದಿಲ್ಲ!”

ಈ ಉತ್ತರ ರಾವಸಾಹೇಬನ ಮನಸ್ಸಿನ ಪ್ರತಿಬಿಂಬವಾಗಿದ್ದಿತು. ಇದನ್ನು ಮತ್ತಾರಾದರೂ ಆಡಿದ್ದರೆ ನಕ್ಕುಬಿಡುತ್ತಿದ್ದ. ಪತಿಯ ಕೃತಿಯಿಂದ ವಿಯೋಗಿನಿಯಾದ ತರುಣಿಯ ಬಾಯಿಂದ ಈ ಮಾತು ಹೊರಟುದು ಅವನಿಗೆಷ್ಟೂ ಸೇರಲಿಲ್ಲ. ವಾಸ್ತವವಾಗಿ, ಈ ಪ್ರತಿಪಾದನವನ್ನು ಕೇಳಲೆಂದು ಆತನು ಮಾತನಾಡಲಿಲ್ಲ. ಆದರೆ ತನ್ನ ಕಲ್ಪನೆ ಎಷ್ಟರ ಮಟ್ಟಿಗೆ ಈ ಸಮಯದಲ್ಲಿ ನಿಜದ ನೆಲೆಗೆ ನಿಲ್ಲುವದೆಂಬದನ್ನು ಅಳೆಯಲು ಇಷ್ಟಪಟ್ಟಿದ್ದ. ಈ ಹುದುಗಿದ ಬಯಕೆಯನ್ನು ಗುಣವಂತಿ ಊಹಿಸದೆ ಇರಲಿಲ್ಲ. ಅಂತೆಯೇ ಅವಳು ಅವನ ಪ್ರಶ್ನೆಗೆ ಸರಳ ಗಂಭೀರ ಉತ್ತರ ಕೊಟ್ಟು ಸುಮ್ಮನಾದಳು.

ರಾವಸಾಹೇಬ ವಿಷಣ್ಣನಾಗಿ, “ನನಗೆ ಯಾವ ವಿಷಯ ಸೇರುವುದೋ ಸೇರಲಾರದೋ ಎಂಬುದನ್ನು ಮುಂದೆ ಅಜಿತನನ್ನೇ ಕೇಳಿ ತಿಳಿದುಕೊಳ್ಳು. ಅವನ ಮೇಲೆ ಈ ಮೊದಲೇ ಎರಡು ಸಲ ರಿಪೋರ್ಟು ಮಾಡುವ ಪ್ರಸಂಗ ಬಂದಿದ್ದರೂ ನಾನು ಮಾಡಲಿಲ್ಲ, ಎಂದು ನಾನು ಹೇಳಿದರೆ ನೀನು ನೀನು ನಂಬದಿರಲಿಕ್ಕಿಲ್ಲ. ಹೀಗಿದ್ದೂ ನಾನು ಅವನ ಮೇಲೆ ಇಂಥ ಸಂಕಟ ಬರಗೊಡುತ್ತಿದ್ದೆನೆ? ಅವನೇ ಆ ಸಂಗತಿಯನ್ನು ಆಗ ತಿಳಿಸಲಿಲ್ಲ. ಮೊದಲು ಕಳಕೊಂಡು ಹಿಂದಿನಿಂದ ಹುಡಿಕಿದರೆ ಹೇಗೆ ಬಂದೀತು?”

ಗುಣವಂತಿಯು ರಾವಸಾಹೇಬನ ಮುಖವನ್ನು ನಿಟ್ಟಿಸುತ್ತ ಅವಿಚಲಿತ ಸ್ವರದಿಂದ ನುಡಿದಳು: “ಅವರನ್ನೆಂದೂ ನೀವು ಕೇಳಲಿಲ್ಲವಲ್ಲ?”

ರಾವಸಾಹೇಬನು ಅಚ್ಚರಿಯಿಂದ ಮುಂಗಾಣದಾದ. ಹುಡಿಗೆಯು ಇಷ್ಟು ಶಾಂತವಾಗಿ ಧೃಢವಾಗಿ ಉತ್ತರ ಕೊಡಬಹುದೆಂಬುದನ್ನು ಕೂಡಲೇ ನಂಬದಾದ. ಅವನಿಗೆ ಮೊದಲಿನಿಂದಲೂ ಸಂಯಮದ ಅಭ್ಯಾಸವೇ ಇಲ್ಲ. ಅದರಿಂದಲೇ ವ್ಯೈಮರೆತು ನುಡಿದ:

"ಅವನೂ ನಾನೂ ಹುಟ್ಟಾ ಕೂಡಿಯೇ ಕಲಿತವರು. ಅವನ ಗುಣದ ಪರಿಚಯು ನಿನ್ನೆ ಮೊನ್ನೆ ಬಂದ ನಿನಗಿಂತ ನನಗೆ ಚನ್ನಾಗಿ ಇದೆ. ಹೀಗೆ ಕೈ ಹಿಡಿದ ಹೆಂಡತಿಯು ಕುತ್ತಿಗೆ ಕೊಯ್ದು ಹೋಗುವದೇನು ಸತ್ಕಾರ್ಯವಲ್ಲ!"

ಗುಣವಂತಿಯು ಮೊದಲಿನ ಶಾಂತ ಸ್ವರದಲ್ಲಿಯೇ "ಅವರು ನನ್ನ ಕುತ್ತಿಗೇ ಕೊಯ್ದಿಲ್ಲವಲ್ಲ!" ಎಂದಳು.

"ನಿನ್ನೆ ನಿಮ್ಮ ಅಣ್ಣನೇ ಇಲ್ಲಿ ಬಂದಾಗ ಅಂದ. ಹೋಗಲಿ, ನಿನ್ನ ಹತ್ತರ ತಾನು ಮಾಡುವ ಕೆಲಸವನ್ನು ಹೇಳದಿರುವುದು ಸರಿಯೆ? ಪತ್ನಿಯನ್ನು ವಿಪತ್ತಿನಲ್ಲಿ ನೂಕುವಂತಹ ಮಹಾಪರಾಧವನ್ನು....ಅದಿರಲಿ, ನಮ್ಮಂತಹರ ಮುಂದೆ ಹೇಳದಿರಲಿ—ನಿನಗಾದರೂ ಸ್ಪಷ್ಟ ತಿಳಿಸಿದ್ದರೆ ಉಚಿತವಾಗುತ್ತಿತ್ತು." ಗುಣವಂತಿಯು ನೀರವವಾಗಿದ್ದಳು. ರಾವಸಾಹೇಬ ಮಾತು ಮುಂದುವರಿಸಿದ: "ನೀನೇನೋ ಅವನ ತಪ್ಪು ಮುಚ್ಚಿಡುವುದು ಸಹಜ. ಆದರೆ ಯೋಚಿಸಿ ನೋಡು, ಈ ವಿಷಯು ಮೊದಲೇ ಗೊತ್ತಾಗಿದ್ದರೆ ಅವನನ್ನು ಮದುವೆಯಾಗುತ್ತಿದ್ದೆಯೋ?" ಗುಣವಂತಿಯು ಈಗಲೂ ಸುಮ್ಮನಿದ್ದಳು. ಅದರಿಂದ ರಾವಸಾಹೇಬನು ಇನ್ನಿಷ್ಟು ಉತ್ತೇಜನಗೊಂಡು ಪುನಃ ಹೇಳತೊಡಗಿದ: "ನನ್ನೆದುರು ಅವನೇ ಹೇಳಿದ್ದಾನೆ. ಅವನಿಗೆ ಮದುವೆಯಾಗುವ ಇಚ್ಛೆಯೇ ಇರಲಿಲ್ಲವಂತೆ. ಹೆಂಡತಿಯೆಂಬ ಬಂಧನವನ್ನೇ ಅವನು ಕಟ್ಟಿಕೊಂಡಿಲ್ಲವಂತೆ. ಹೀಗನ್ನುವವ ಮದುವೆಯನ್ನಾದರೂ ಏಕೆ ಆಗಬೇಕಿತ್ತು? ಇನ್ನೊಬ್ಬರ ಹೆಣ್ಣುಮಕ್ಕಳಿಗೆ ಆಗುವ ಕಷ್ಟವನ್ನು ಸ್ವಲ್ಪ ಯೋಚಿಸಬೇಡವೆ? ದೇಶಸೇವೆಯೆಂದು ಮನೆಯ ಮಡದಿಯನ್ನೂ ಮರೆಯಬೇಕೆ?" ಎಂದು ಅವನು ಉತ್ತರಾಪೇಕ್ಷೆಯಿಂದ ಮುಖವೆತ್ತಿ ನೋಡಿದ. ಗುಣವಂತಿಯು ಮೋರೆ ಕೆಳಗೆ ಮಾಡಿಕೊಂಡು ಚಿಂತಾಮಗ್ನಳಾಗಿ ಕುಳಿತಿದ್ದಳು. ಅವಳಿಂದ ಉತ್ತರ ಸಿಗದಿದ್ದರೂ ಮಾತು ಫಲಿಸಲಿದೆಯೆಂದು ಭಾವಿಸಿದ. "ನೋಡು, ಇನ್ನೇನು ಅವನು ಕೈಗೆ ಹತ್ತುವಂತಿಲ್ಲ. ನಾನೇನು ಅವನ ನಿಂದೆ ಮಾಡುತ್ತಿಲ್ಲ. ನಿನ್ನ ಸ್ಥಿತಿಯನ್ನು ನೋಡಿ ನೆನೆದು ನನಗೆ ಕನಿಕರ ವಾಯಿತಿಷ್ಟೇ. ಯಾರಿಗೂ ಇಂಥ ವಿಪತ್ತು ಒದಗಬಾರದು ಪ್ರಾಯದಲ್ಲಿ.

ಂದರಲ್ಲಿಯೂ ನಿನ್ನನ್ನು ಸಮಾಧಾನಗೊಳಿಸುವುದು ನನ್ನ ಮೊದಲ ಕರ್ತವ್ಯ. ಏಕೆಂದರೆ ಅವನ ವಿಪತ್ತು ಬೇಕೆಂತಲೇ ತಂದುಕೊಂಡುದು. ಂದರ ಕಹಿ ಫಲ ನೀನು ಭೋಗಿಸಬೇಕಾಯಿತು. ನಿನ್ನ ತಂದೆ ನನ್ನ ಉಡಿ ಯೊಳಗೆ ಹಾಕಿದುದರಿಂದಲೇ ನಾನು ಈ ಹೊಣೆ ಹೊರಬೇಕಾಯಿತು. ಬಿಟ್ಟರೆ ಅನ್ಯಾಯವಾಗಲಿಕ್ಕಿಲ್ಲವೆ ? ”

“ ಅವರಿಗೆ ಸಂಕಟ ಕಾಲದಲ್ಲಿ—ಅದು ಸಂಕಟವಿರಲಿ, ಇಚ್ಛಿತ ಕಾರ್ಯವಿರಲಿ—ನೆರವಾಗುವ ಆಶೆಯಿದೆಯೇ ನಿಮಗೆ ? ” ಗುಣವಂತಿ ಕೇಳಿದಳು.

“ ನೆರವಾಗಬಹುದು. ಹುಚ್ಚನಂತೆ ನಿನಗೆ ಕಷ್ಟ ಕೊಡುತ್ತಿ ದ್ದಾನಲ್ಲ. ಹೆಣ್ಣು ಹೃದಯ ಎಷ್ಟು ಕೋಮಲವೆಂಬುದು ಅವನಿಗೆ ತಿಳಿಯುವದಿಲ್ಲ! ಅವನು ಹೋದ ಸ್ಥಳವೇನಾದರೂ ಗೊತ್ತಿದ್ದರೆ ಹೋಗಿ ಅವನಿಗೆ ಬುದ್ಧಿ ಹೇಳುತ್ತಿದ್ದೆ. ತಪ್ಪಿಗೆ ಪ್ರಾಯಶ್ಚಿತ್ತ ಕೊಡಿಸುತ್ತಿದ್ದೆ.”

“ ಅಲ್ಲ; ನೀವೆತಕ್ಕೆ ಅವರನ್ನು ಕಾಣುವಿರಿ ? ಗೌಡರು ! ವತನಕ್ಕೆ ಬಾಧೆ ಬಂದೀತಲ್ಲ ? ಮಾವನವರಿಗೆ ಬೇಕಾದರೆ ತಿಳಿಸಿರಿ ನೆರವಾಗಲಿಕ್ಕೆ; ಇಲ್ಲಿಂದ ರಾಜಾಪುರವೇನು ಬಹಳ ದೂರಿಲ್ಲ. ”

ರಾವಸಾಹೇಬನಿಗೆ ಆಶ್ಚರ್ಯವಾಯಿತು. “ ರಾಜಾಪುರ ! ಹೋದ ಸ್ಥಳವೂ ನಿನಗೆ ಗೊತ್ತಿದೆಯೋ ? ಇನ್ನೂ ಏನೇನು ಹೇಳಿರುವ ಅಜಿತ ? ’ ಎಂದ.

ಗುಣವಂತಿಯು ಸಹಜಭಾವದಿಂದ ನುಡಿದಳು. “ ನೀವು ನನ್ನ ದುಃಖ ಕಂಡು ಮರಗುವದಕ್ಕಿಂತ ಹೆಚ್ಚಾಗಿ ಅವರು ಮರುಗಿದ್ದಾರೆ ! ಆದರೆ ಅವರಿಗೆ ಒಂದೆಡೆ ಕೈಹಿಡಿದ ಹೆಂಡತಿ ಇನ್ನೊಂದೆಡೆ ಮಾತೃಭೂಮಿ! ಯಾರ ದುಃಖ ಹೆಚ್ಚು ಯಾರ ದುಃಖ ಕಡಿಮೆ ಎಂದು ತೂಗಿ ನೋಡಿ ಕೊನೆಗೆ ಕೆಲಸಕ್ಕೆ ಧುಮುಕಿದ್ದಾರೆ. ”

“ ಆದರೆ ಹೆಂಡತಿಯ ಸ್ಥಿತಿಗತಿ ? ”

“ ಹೇಗಾದರೂ ಉತ್ಪನ್ನವಿದೆ. ತಿಂದುಂಡು ಇರುತ್ತೀರಲ್ಲ ಎಂದರು. ”

“ ತಿನ್ನುಣ್ಣಲಿಕ್ಕಾದರೆ ಆಯಿತೆ ? ” ಮತ್ತೂ ಕೆಣಕಿ ಸ್ವ

ಕೇಳಿದ ರಾವಸಾಹೇಬ.

“ನಾಡಿನ ಕಷ್ಟದ ಮುಂದೆ ನಮ್ಮಂತಹರ ಕಷ್ಟ ಎಷ್ಟರದು? ಪ್ರಸಂಗ ಬಂದಾಗ ಸ್ವಲ್ಪ ಸಹನ ಮಾಡಲಿಕ್ಕೆ ಬೇಡವೆ? ಕಾರ್ಯ ಮಾಡ ಲಿಕ್ಕಾಗದಿದ್ದರೂ ಕುಳಿತಲ್ಲಿಯೇ ಕಷ್ಟ ಸಹಿಸಿಯಾದರೂ ಸಹಾನುಭೂತಿ ತೋರಿಸೋಣ. ಎಂತೆಂಥವರೂ ದೇಶಕ್ಕಾಗಿ ಜೀವವನ್ನೇ ಕೊಡುತ್ತಿ ದ್ದಾರೆ. ನಾವೇನು ಇಷ್ಟು ತಾಳುವುದು ಹಿರಿದೇ?”

ಅಪ್ರತಿಭನಾಗಿ ರಾವಸಾಹೇಬ ಹೊರಗೆ ಹೋದ. ಆಗ ಅವನ ಮನಸ್ಸು ದೇಹಗಳೆರಡೂ ಅಸ್ಥಿರವಾಗಿದ್ದುವು. ಹೊರಗೆ ಬಿಸಿಲಿನ ತಾಪ ಹೆಚ್ಚಾಗುತ್ತಲಿತ್ತು. ಪ್ರಶಸ್ತವಾದ ಪಡಸಾಲೆ. ಎಲ್ಲವನ್ನೂ ಮರೆತು ಶಾಂತವಾಗಿ ಕುಳ್ಳಿರಬೇಕೆಂದರೆ ಗುಣವಂತಿಯ ಮುಖ ನಡೆನುಡಿಗಳೆ ಲ್ಲವೂ ಮನಸ್ಸಿನಲ್ಲಿ ಪುನಃ ಪುನಃ ಸುಳಿದು ಅವನನ್ನು ಕೆರಳಿಸುತ್ತಿದ್ದುವು.

ಗುಣವಂತಿಯು ಅಲೌಕಿಕ ಸುಂದರಿಯಲ್ಲ. ನಡೆನುಡಿಗಳೂ ಅಷ್ಟು ಅಪರೂಪವಲ್ಲ. ಆದರೂ ಎಂಥ ಅಗಾಧ ಹುಡಿಗೆ! ಇಂಥವಳ ಗುಣವನ್ನು ಇದು ವರೆಗೂ ತಾನು ಅರಿಯದೆ ಹೋದೆನಲ್ಲ, ಎಂದೆನಿಸು ತ್ತಿತ್ತು ಅವನಿಗೆ! ಈ ಆಗಮ್ಯತೆ ಏತರದು? ತನ್ನನ್ನಿಷ್ಟು ಬೆರಗುಗೊಳಿ ಸಿದ ಗುಣ ಯಾವುದು? ಎಂದು ತನ್ನಲ್ಲಿ ತಾನೇ ಕೇಳಿಕೊಂಡ. ಈ ಗುಣವಂತಿಯಲ್ಲಿ ಅಂಥದೇನನ್ನು ಕಂಡೆ? ತನ್ನ ಮನಸ್ಸು ಯಾವುದರಲ್ಲಿ ತಲ್ಲೀನವಾಗಿದೆ? ಏನನ್ನು ಬಯಸಿ ಪಡೆಯದೆ ವ್ಯಾಕುಲವಾಗಿದೆ? ಇಂಥ ಹುಡಿಗೆಯನ್ನು ನಾನು ಇಲ್ಲಿಯ ವರೆಗೂ ಕಾಣಲಿಲ್ಲ. ಆದರೆ ಇಂಥವಳನ್ನು ವರಿಸುವುದಕ್ಕೆ ಯಾವ ಪುರುಷನಿಗೂ ಭಾಗ್ಯ ಬೇಕು. ವಿಚಾರ ಮಾಡುತ್ತಿದ್ದಂತೆ ವಿಚಾರಧಾರೆಯು ತಕ್ಕ ಸ್ಥಳಕ್ಕೆ ಹೋಗಿ ನೆಲೆಸಿತು. ಗುಣವಂತಿಯು ಶಿಕ್ಷಣ, ಜ್ಞಾನ, ವಯಸ್ಸು ಎಲ್ಲದರಲ್ಲಿಯೂ ತನಗಿಂತ ಕಿರಿಯಳಾದರೂ ನಾಲ್ಕಾರು ಮಾತುಗಳಲ್ಲಿ ತನ್ನನ್ನು ಸೋಲಿಸಿ ದುದು ಸಂಯಮ ತ್ಯಾಗಗಳಿಂದಲ್ಲವೆ? ಎಂದು ಅವನಿಗೆನಿಸಿತು. ಶಾಂತ ಳಿದ್ದಷ್ಟೂ ದೃಢ; ಇಷ್ಟು ಗೊತ್ತಿದ್ದೂ ಮೌನ! ಅಜಿತನ ಬಗ್ಗೆ ನನಗೆಲ್ಲವೂ ಗೊತ್ತಿದ್ದಂತೆ ಪ್ರಗಲ್ಭನಾಗಿ ಒಂದೇ ಸವನೆ ಗಳಹಿದೆ. ಸುಮ್ಮನೆ ತಲೆ ತಗ್ಗಿಸಿಕೊಂಡು ಕುಳಿತಿದ್ದಳು. ಎಂಥಾ ತಾಳ್ಮೆ! ಚಂಚಲಳಾಗಿ ನನ್ನ

ಇಂಗಿತವನ್ನರಿತು ಜಗಳವಾಡಿ ತಾನು ಕೀಳುತನ ಕಟ್ಟಿಕೊಳ್ಳಲಿಲ್ಲ. ನನ್ನ ಕೀಳುತನವನ್ನು ಮಾತ್ರ ಹೊರಗೆಡವಲು ತುಂಬ ಅವಕಾಶವಿತ್ತಳು. ಜೊತೆಗೆಯೇ ಪತಿಯನ್ನು ತಾನೆಷ್ಟು ಪ್ರೀತಿಸುವಳೆಂಬುದನ್ನು ತೋರಿಸ ದಿದ್ದರೂ ತನ್ನ ಶ್ರದ್ಧೆ ಎಳ್ಳಷ್ಟೂ ಕುಗ್ಗಲಿಲ್ಲವೆಂಬುದನ್ನು ತೋರಿಸದಿರ ಲಿಲ್ಲ.

ಈ ಗುಣವನ್ನು ಅವಳು ಅಜಿತನಿಂದಲೇ ಕಲಿತುಕೊಂಡಿದ್ದಾಳೆ, ಎಂದು ಅವನು ಮನಸ್ಸಿನಲ್ಲಿಯೇ ಅಂದುಕೊಂಡ. ಅವಳ ವಿಷಯಕ್ಕೆ ತನ್ನಲ್ಲಿದ್ದ ಪಾಪಬುದ್ಧಿಯನ್ನು ನೆನೆದು ನಾಚಿ ಮುಖ ಮುಚ್ಚಿಕೊಂಡ, ಎರಡೂ ಕೈಗಳಿಂದ ಅವನ ಸುಂಸ್ಕೃತ ಸಭ್ಯ ಮನೋಭಾಗದಂಶವು ತಾನಾಗಿಯೇ ಅವನ ತಲೆಯನ್ನು ಅವನತಗೊಳಿಸಿತು.

ಹೀಗೆ ಎಷ್ಟೋ ಸಮಯ ಉರುಳಿತು. ಸಂಜೆಯಾಯಿತು. ಆದ ಗೌಡ ಠಾಣೆಯಿಂದ ಕಾಲು ಎಳೆಯುತ್ತ ಬಂದ. ತಂದೆಯನ್ನು ಕಂಡ ಕೂಡಲೆ ಆನಂದವಾಯಿತು. ತೆಕ್ಕೆಗೆ ಕುಳಿತವನು ಒಮ್ಮೆಲೇ ಎದ್ದು ನಿಂತು ಆದರದಿಂದ ಆನಂದವನ್ನು ಪ್ರದರ್ಶಿಸಿದ. ಆಮೇಲೆ—

“ ಇಂದಿನ ವರೆಗೆ ನಮಗೊಂದೂ ಸಂಗತಿ ತಿಳಿಯಲಿಲ್ಲವಲ್ಲ ! ನೀವು ಚಾವಡಿಯಿಂದ ಅಂದು ಸೂಚನೆಯನ್ನೂ ಕಳಿಸಲಿಲ್ಲ ! ”

“ ಹೇಗೆ ತಿಳಿಯಬೇಕು, ಕೋಣೆ ಹಿಡಿದು ಕುಳಿತ ಮೇಲೆ ? ” ಎಂದು ತ್ರಸ್ತ ಸ್ವರದಿಂದಲೇ ನುಡಿದರು, ಗೌಡರು.

ಆದಗೌಡನ ಸ್ವರ ಕೇಳಿ ಮನೆಯೊಳಗಿನ ಸ್ತ್ರೀಯರೆಲ್ಲರೂ ಪಡ ಸಾಲೆಗೆ ಓಡಿ ಬಂದರು. ಆದರೂ ಯಾರೂ ಮಾತಾಡದಾದರು. ಎಲ್ಲ ರಲ್ಲಿಯೂ ಒಳಗೊಳಗೇ ಅಪಮಾನದ ಸಂಕೋಚ ಸುತ್ತುತ್ತಿದ್ದಿತು. ಗೌಡರ ಮುಖದ ಕಡೆಗೆ ನೋಡುವರು. ಆ ನೋಟಗಳಲ್ಲಿ ನಿರಾಶೆ, ಅಂತರಂಗದ ಆಳವಾದ ದುಃಖಗಳೆಲ್ಲ ಬೆರೆತಿದ್ದುವು. ಸ್ವಲ್ಪ ಹೊತ್ತಿನ ಮೇಲೆ ಮುರದೇವಿಯೇ ಕೇಳಿದಳು:

“ ಹೋದ ಕೆಲಸ ಏನಾಯ್ತು ? ”

“ ಆಗೋದೇನು ! ಧರ್ಮ, ಜಾತಿ ಎಲ್ಲಾನೂ ಹಾಳಿಗೆ ಹಚ್ಚಿ ಬಂದೆ ! ”

ಬಿಗಿದ ಕಂಠದಿಂದ ನುಡಿದರು ಗೌಡರು. ಆ ಮುಜ್ಜುಂಜೆಯು ತಿಳಿಗತ್ತಲೆ ಯಲ್ಲಿಯೂ ಅವರ ಕಣ್ಣುಗಳಲ್ಲಿ ನೀರಾಡಿದುದು ಎಲ್ಲರಿಗೂ ಕಾಣದಿರ ಲಿಲ್ಲ. ಗಂಗವ್ವನೂ ಅಲ್ಲೇ ಬಾಗಿಲ ಒಳಮಗ್ಗಲಿಗೆ ನಿಂತಲ್ಲಿಯೇ ಕಣ್ಣೀರು ಒರಸಿಕೊಂಡಳು. ಮೆಲ್ಲಗೆ ಅಂದಳು—

" ನಾನು ಎರಡ ದಿವಸ ಆಯ್ತು, ರಾವಸಾಹೇಬನಿಗೆ ಹೇಳಿ ಹೇಳಿ ಕೂತೆ. ' ಹೋಗಿ ಬಾರಪ್ಪ ಠಾಣೆಗೆ ಏನಾಯಿತು? ಏಕೆ ಬರಲಿಲ್ಲ? ತಿಳ ಕೊಂಡ ಬಾ. ಅವರು ಎರಡನೆಯವರಲ್ಲಿ ನೀರು ಕುಡಿಯುವದಿಲ್ಲ. ಏನೂ ಇಲ್ಲ. ಎಲ್ಲಿ ಉಂಡರೊ ಏನು ಮಾಡಿದರೊ! ಅಲ್ಲಿ ದೇವದರ್ಶನ ಆಗತದನೋ ಇಲ್ಲೋ!' ಅಂತ. "

" ಅಲ್ಲಿ ಬಂದರೂ ಏನು ಆಗೋದು? ಅಲ್ಲೇನು ಇಂಥ ಹುಡುಗ ರಿಗೆ ಬರಲಿಕ್ಕೆ ಕೊಡತಾರೆ? ನಾನೇ ಅಂತಹ ಅಪರಾಧಿಯಾಗಿ ಕೂತಿದ್ದ ಅಂದ ಮೇಲೆ. "

" ನಿಂದೇನು ಅಪರಾಧ? " ಮುರದೇವಿ ಕೇಳಿದಳು.

" ಮಗನನ್ನು ಮುಚ್ಚಿಟ್ಟದ್ದು! "

" ನೀ ಯಾತಕ್ಕ ಮುಚ್ಚಿ ಇಡಲಿಕ್ಕೆ ಹೋಗುವಿ ಅವನನ್ನು? ಇಂಥಾ ಕೆಲಸವೇ ಬೇಡ ಅಂತ ಹಗಲೀ ರಾತ್ರಿ ಹೇಳ್ತಿದ್ದಿ. ಎಲ್ಲಾ ಬಿಟ್ಟು ನಿನ್ನ ಸುತ್ತೇ ಏಕೆ ಇಂಥಾ ಪೀಡಾ? "

" ಹಿಂದಿನ ಜನ್ಮದ ಕರ್ಮ! ಮಾಡಿದ್ದು ಉಣಲಿಕ್ಕೆ ಬೇಡಾ? ಪೋಲೀಸರ ಕೈಯೊಳಗ ಸಿಕ್ಕ ಮೇಲೇನು? ಮನುಷ್ಯನ ಮಾನವತೆ ಯನ್ನು ಉಳಿಯಗೊಡುವದಿಲ್ಲವರು! "

" ಎಲ್ಲಾ ಹೇಳಿದರು, ಮಧ್ಯಾಹ್ನದೊಳಗೇ ರಂಗಣ್ಣನೋರು. "

" ಬೆಳಗಾಂವಿಯಿಂದ ಯಾರ ಬಂದಿದ್ದರು? " ರಾವಸಾಹೇಬ ಕೇಳಿದ ನಡುವೆಯೇ.

" ಸುರೇಂದ್ರನೇ ಬಂದಿದ್ದನಲ್ಲ....ಇಲ್ಲೇ ನಡೆ; ನಾಳೆ ಹೋಗವಿ ಯಂತ ಅಂದರೆ ಬರಲಿಲ್ಲ. ' ಅಲ್ಲಿ ಶ್ರೀಯಲೆ ಮಾವನಿಗೆ ಹೀಗೇಕೆ ಆಯ್ತೆಂದು ಎರಡೂ ದಿನ ನೀರೂ ಬಾಯಲ್ಲಿ ಹಾಕದೆ ಕುಳಿತಿರುವಳಂತ.' ಹೇಳಿ ಸಂಜೆಯ ರೇಲಿಗೆ ಅತ್ತ ಹೋದ. "

“ ನಿಮಗ ಹೀಗಾದುದನ್ನು ಕೇಳಿ ಹೇಗೆ ಸುಮ್ಮನಿದ್ದಾಳು? ಲಗೂನೆ ಅಣ್ಣನನ್ನು ಓಡಿಸೇ ಬಿಟ್ಟಿದಾಳ ಆಯುತು!”

“ ಅಂತೇ ಅವರೆಲ್ಲ ಇಷ್ಟ ಮೈಮೇಲೆ ತಕ್ಕೊಂಡು ಕೆಲಸ ಮಾಡಿದರಲ್ಲ! ಇಂಥ ಸಂಜೆಗೇನ ಬಿಡತಿದ್ದರೇನು ಪೋಲೀಸರು? ರಂಗಣ್ಣ ರೂಪಾಯಿ ತರುವ ತನಕ ಹೊರಗೆ ಬಿಡುವ ಲಕ್ಷಣವೇ ಇದ್ದಿಲ್ಲ. ಆದರೆ ಸುರೇಂದ್ರ ಬಂದ; ಏನೇನೋ ಇಂಗ್ಲೀಷಿನಲ್ಲಿ ಇನಸ್ಪೆಕ್ಟರ ಗೂಡ ಮಾತಾಡಿದ; ಆಗ ಹೋಗ ಅಂದರು. ಇಲ್ಲಾದರೆ ಅಲ್ಲೇ ಬೀಳೋದೇ ಹೊಟ್ಟೆಗಿಲ್ಲದೆ!”

“ ಅವರು ಬಂದರೆಂದೇ ನೆಟ್ಟಗಾಯ್ತಲ್ಲ! ನಮಗಿದೇನೂ ಗೊತ್ತೇ ಇಲ್ಲ. ನಾವು ಇಲ್ಲೇ ಸುಮ್ಮನೆ ಕೂಡುವವರು, ನೀವು ಅಲ್ಲಿ ಕಷ್ಟ ಸಹಿಸುವವರು!” ಸ್ವಲ್ಪ ಆಶ್ಚರ್ಯ ಸ್ವಲ್ಪ ಅಜ್ಞಾನ ಮಿಶ್ರಿತ ಸ್ವರದಲ್ಲಿ ರಾವಸಾಹೇಬ ಹೇಳಿದ.

“ ಹುಡುಗ ಹೀಗೆ ಹೋಗಿರಬೇಕಾದರೂ ಎಲ್ಲಿ?” ಮುರದೇವಿಯು ವಿಚಾರಮುದ್ರೆಯಿಂದ ಮಗನಿಗೆ ಕೇಳಿದಳು, ಕೆಲ ವೇಳೆ ಕಳೆದ ಮೇಲೆ.

“ ಅಜಿತನ ಮಾತನ್ನೇ ಮನೆಯೊಳಗ ತೆಗೆಯಬೇಡಿರಿ. ಎಲ್ಲಿಯೋ ಹೋಗಲಿ ಆತ! ಹಾಳ ಬಾವಿ ಬಿದ್ದ. ಅವನು ತನ್ನ ಪೂರ್ತೆ ತಾ ಸತ್ತು ಹೋದ. ಅವನ ಹೊಲಾ ಮನಿನೂ ಎಲ್ಲ ಜಪ್ತ ಆಗಿ ಹೋಗ್ತದ ನಾಲ್ಕು ದಿನದೊಳಗ. ಈಗೇನು ನಮಗ ಸಾವಿರ ಎರಡು ಸಾವಿರ ದಂಡ ಹಾಕಿದ ಅಷ್ಟೇ ಸಾಕು. ಕಡಿದಷ್ಟು ತುಂಬಿಸಿಕೊಂಡು ತಣ್ಣಗೆ ಕೂಡೋದೇ ಹಿತ.” ತುಚ್ಛತೆಯಿಂದ ನುಡಿದರು ಗೌಡರು. ಸ್ವಲ್ಪ ತಡೆದು ಸರಸ್ವತಿಯ ಕಡೆಗೆ ಹೊರಳಿ, “ನಾ ಹೀಗೇಕೆ ಅನ್ನುವೆನಂತ ಮನಸಿಗೆ ಹಚ್ಚಿಕೊಳ್ಳುವ ಕಾರಣ ಇಲ್ಲ. ಪರದೇಶಿಗಳಂತೆ ಅಲ್ಲಿ ಇಲ್ಲಿ ತಿರುಗಬೇಡಿರಿ. ಆ ಮನೆಗೆ ಬೀಗ ಜಡದ ಬಿಡರಿ! ಏನಾದರೂ ಬೆಲೆಯುಳ್ಳ ಒಡವೆ ವಸ್ತ ಇದ್ದರ ರಾತ್ರಿ ಇಲ್ಲಿ ತರಿಸಿಬಿಡೋಣ; ಆಮೇಲೆ ನಾಳೆ ಒಂದು ದಿನ ನೀವು ಅಲ್ಲೇ ಇರ್ರಿ! ಸರಕಾರ ಬಂದು ಏನ ಜಪ್ತ ಮಾಡಿಕೊಂಡು ಹೋಗ್ತಾರ ಹೋಗಲಿ!” ಎಂದೂ ಸಮಾಧಾನ ಹೇಳಿದ. ಮತ್ತೂ ಸ್ವಲ್ಪ ತಡೆದು,

ನಿನ್ನ ಸೊಸೆಯು ಮನಸ್ಸು ಇಲ್ಲಿ ಇರುವುದಿದ್ದರೆ ಇರಲಿ, ಇಲ್ಲಾದರೆ ತವರ ಮನೆಗೆ ಹೋಗತೇನಂದರ ಹೋಗಲಿ. ಹೀಗೇ ಮಾಡ ಅಂತ ನಾನೇನೂ ಹೇಳುವಂತಿಲ್ಲ. ಆಕೆ ಗಂಡನ ಸಲುವಾಗಿ ನಮ್ಮ ಮನೆಯು ಹೆಂಗಸ ರೆಲ್ಲಿ ಕಚೇರಿಯು ಕಟ್ಟೆ ಏರಬೇಕಾಗ್ತದನೋ ಏನೋ.'' ವಿಷಾದದಿಂದ ಗೌಡರು ನುಡಿದು ಸುಮ್ಮನಾಗಿಬಿಟ್ಟರು.

"ತವರಮನೆಗೆ ಯಾತಕ್ಕ ಹೋಗತಾಳ, ಇಲ್ಲೇ ಇರಲಿ ಅಲ್ಲ!" ರಾವಸಾಹೇಬನು ಸೂಚನೆ ಕೊಟ್ಟ. "ಈಕೆಯು ಗಂಡ ಹೋಗಿ ಈ ಗತಿ ತಂದ ಇಟ್ಟಿದಾನೆ. ಮತ್ತ ಈಕೆಯೋ ತವರುಮನೆಯೊಳಗ ಹೋಗಿ ಸುಖ ಭೋಗಸತ ಇರಲಿ. ನಾವಿಲ್ಲಿ ಕಷ್ಟ ಭೋಗಸಬೇಕು ಹೌದ? ಸರಕಾರದವರಿಂದ.." ಮಾತೇನೋ ಕಠೋರವಾಗಿದ್ದಿತಾದರೂ ಅದರಲ್ಲಿ ಕೋಪದ ಕಾವಿರಲಿಲ್ಲ.

"ಅಜಿತನೂ ಎಲ್ಲಿ ಹೋಗ್ತಾನ ಬಿಡು? ಎಷ್ಟು ದಿವಸ ಹೀಗೆ ಅಡಗಿ ಇದ್ದಾನು? ಬಹಳಂದರೆ ಹದಿನೈದು ದಿನ ತಿಂಗಳ ಇಷ್ಟೇ ಅಲ್ಲ?" ಅಜ್ಜಿಯು ಆಶೆಯಿದು.

"ಇದ್ದಾನಲ್ಲ ಈಗೇನ ಮೊನ್ನೆಯೇ ಹೋಗಿದಾನ! ಇಂಥಾ ಸರಕಾರ ಅಂದರೆ ಅವರಿಗೂ ಕಾಂಗ್ರೇಸ ಕಮೀಟಿಗಳು ಎಲ್ಲೆಲ್ಲಿ ಅವೆ ಅವೂ ಗೊತ್ತ ಹತ್ತದಂಗ ಆಗಿವೆ. ಅಂತೆ ಇಷ್ಟು ಗುಪ್ತ ಇದ್ದಾರೆ ಅಂದ ಮೇಲೇನ ಲಗೂನ ಸಿಗತಾರೆ....ಪೋಲೀಸರೇ ಹೀಗೆ ಮಾತಾಡತಿದ್ದರು!"

"ಅಜಿತ ಏನು ಆ ಕಿಮ್ಮತ್ತಿನವನಲ್ಲ ಬಿಡು! ಇವನೇನು ಅಂಥ ದೂರ ಸ್ಥಳಕನೂ ಹೋಗಿಲ್ಲ.."

ರಾವಸಾಹೇಬನ ಮಾತನ್ನು ನಡುವೆಯೇ ತಡೆದು ಗುಣವಂತಿಯು ಹೇಳಿದಳು.

"ಹೋಗೋದ ಒಂದು ಹಾದಿ. ಹೇಳೋದು ಇನ್ನೊಂದು ಹಾದಿ. ಅವರದು ಯಾವಾಗಲೂ ಹೀಗೇ. ತಲೆತಿರುಗಿದಂತೆ ಆಗಿ ಅಲ್ಲಿ ಇಲ್ಲಿ ಅಡಗತ ಇದ್ದಾರ ಆಯ್ತು!"

"ಈಗೆಲ್ಲಿಯಾದರೂ ಅವನು ಇರುವುದು ತಿಳಿದರೆ ಬಹಳ ನೆಟ್ಟಗೆ! ಹೊಲ-ಮನೆಗಳೂ ಜಪ್ತ ಆಗದೆ ಉಳಿಯುವವು. ಕಡೆಗೆ ನಮಗೂ ಸಿಘಾ

ರಸು! ಇಗೇನು ಆದದ್ದು ಆಗಿ ಹೋಯ್ತು ನನಗೆ! ಇನ್ನು ಅವನ ಒಬ್ಬನೆ ಪೂರ್ತೆ ಏನ ಆಗೋದು ಆಗ್ತದ! ಅಲ್ಲ?"

ಆದಗೌಡ ಉತ್ಸುಕತೆಯಿಂದ ಕೇಳಿದ, ಆತುರ ದೃಷ್ಟಿಯಿಂದ ಸೊಸೆಯ ಮುಖವನ್ನು ನಿರೀಕ್ಷಿಸುತ್ತ. ಆ ಹಸಿದ ದೃಷ್ಟಿಯಲ್ಲಿ ಗುಣವಂತಿಯ ಅಂತರಂಗವನ್ನೆಲ್ಲ ಹೀರುವೆನೆನ್ನುವಷ್ಟು ತೀಕ್ಷ್ಣತೆಯಿತ್ತು.

## ೨೫

ಮುಗಿಲು ತುಂಬೆಲ್ಲ ಮೋಡಗಳು ಮುಸುಕಿವೆ. ಸೂರ್ಯ ಇನ್ನೂ ಮುಳಗಿರುವನೋ ಇಲ್ಲವೋ ಎಂಬುದನ್ನು ಕಲ್ಪಿಸುವುದಕ್ಕೂ ಕಷ್ಟ. ಮೇಘಾಚ್ಛಾದಿತ ಆಕಾಶದಿಂದ ಈಗ—ಇನ್ನೊಂದ ಕ್ಷಣದಲ್ಲಿ—ಮಳೆ ಬರುವುದು; ಬಂದೀತು ಎನ್ನುವ ಲಕ್ಷಣ. ಪೂರ್ವ ದಿಕ್ಕಿನಿಂದ ತಂಗಾಳಿ ಬೀಸುತ್ತಲಿದೆ. ಅದರ ಜೊತೆಗೆ ಒಂದು ತರದ ವಾಸನೆಯು ಪಸರಿಸಿ, ಸಮೀಪದಲ್ಲಿಯೇ ಮಳೆಯಾಗುತ್ತಿರುವುದರ ಮುನ್ಸೂಚನೆಯನ್ನು ಸಾರುತ್ತಿರುವುದು. ಆಕಾಶದಲ್ಲಿ ಒಮ್ಮೆ ಗುಡುಗಿತು. ಪರ್ವತದಂತಹ ಎರಡು ಮೋಡಗಳು ಹೊಡೆದಾಡಿ ಕಿಡಿ ಕಾರಿದುವು, ಜಾಧವ ಮಾಸ್ತರರ ಎದುರಿಗೆಯೇ. ಅವರ ಕಣ್ಣುಗಳು ಒಮ್ಮೆಲೇ ಮುಚ್ಚಿದುವು, ಆ ಪ್ರಖರ ದೀಪ್ತಿಯನ್ನು ತಾಳಲಾರದ. ಆದರೂ ಅವರ ನಡಿಗೆಯು ಓಟ ನಿಲ್ಲಲಿಲ್ಲ. ಒಂದೇಸವನೆ ಮುಂದೆ ಧಾವಿಸುತ್ತಿದ್ದಾರೆ. ಸುತ್ತಲೂ ನೋಡುವರು. ಮೋಡಗಳ ಭೀಕರತೆಯನ್ನು ಕಂಡು ಒಂದು ಕ್ಷಣ ಚಿಂತಿಸುವರು. ಅಂದರೂ ತಡೆಯರು. ಮುಂದೆ ಸಾಗಿದಷ್ಟೂ ಮಳೆಯ ಹೊಡೆತ ಕಡಿಮೆ ಬೀಳುವುದು, ಎಂಬುದು ಅವರ ಹವಣಿಕೆ. ಮನದ ಇನ್ನೊಂದು ಮೂಲೆಯಲ್ಲಿ 'ಅಪರಿಚಿತ ಹಳ್ಳಿ. ಹೊತ್ತು ಹೋಯಿತು. ಮೇಲೆ ಮಳೆ. ಯಾರಲ್ಲಿ ಹೋಗುವುದು? ಏನೆಂದು ಕೇಳುವುದು? ಇಂಥದೇ ಸ್ಥಳವೆಂದು ನಿಶ್ಚಿತ ಗೊತ್ತಿಲ್ಲ. ಏನೋ ಕಾಗದ ಬಂತು. ಹೊರಟು ಬಂದೆ.' ಎಂಬ ಚಿಂತೆಯು ಮನೆ ಮಾಡಿಕೊಂಡಿತ್ತು. ಅದಕ್ಕೆ ಹೃದಯದ ಉತ್ಸಾಹವು 'ನಡೆ ಮುಂದೆ ನಡೆ ನುಗ್ಗಿ ನಡೆ ಮುಂದೆ!' ಎಂದು ಉತ್ತರ ಕೊಡುತ್ತಿತ್ತು.

ಮಾಸ್ತರರು ಹಾಗೆಯೇ ಸಾಗಿದ್ದರು, ಪೂರ್ವದಿಕ್ಕಿನಲ್ಲಿ ಸಮೀಪದಲ್ಲಿಯೇ ಕೃಷ್ಣೆ ಕಲಕಲ ರವದೊಡನೆ ಹರಿಯುತ್ತಿದ್ದಳು. ಅವಳ ತಡಿಯ ನೆಲವೆಲ್ಲ ಹಸುರುಡಿಗೆಯುಟ್ಟು ಸಿರಿಯ ಸೊಬಗಿನಿಂದ ಶೋಭಿಸುತ್ತಿದೆ. ಇನ್ನೊಂದು ಮಗ್ಗಲು ದೃಷ್ಟಿ ಹರಿಯುವ ವರೆಗೆ ಬಯಲೇ ಬಯಲು. ಮುಂಗಾರಿನ ಸುಗ್ಗಿಯೆಲ್ಲ ತೀರಿಹೋಗಿದೆ. ಜೋಳ ಕೊಯ್ದ ಬಯಲು ಭೂಮಿಯು ಬರ್ಚಿಗಳನ್ನು ನೆಟ್ಟಂತೆ ಕಾಣುತ್ತಿದೆ, ಭಾರತಾಂಬೆಯ ಹೃದಯದಲ್ಲೆಲ್ಲ ಪಾರತಂತ್ರ್ಯದ ಬರ್ಚಿಗಳು ಹೀಗೆಯೇ ನೆಟ್ಟಿರುವವೇ ? ಸ್ವಾತಂತ್ರ್ಯವೀರರಿಗೆ ಕಾಲಿಡಲೂ ಸ್ಥಳವಿಲ್ಲದಾಗಿದೆ, ಎಂಬ ಕಲ್ಪನೆಯೊಡನೆ ನಿಟ್ಟುಸುರೊಂದು ಅವರ ಮುಖದಿಂದ ಹೊರಬಿದ್ದಿತು.

ನಿರ್ಜನ ಅಡವಿ. ಬಿರುಮಳೆ ಬರುವ ಸಮಯ. ದೂರದಲ್ಲಿ ಮಳೆಯ ಸದ್ದು ಕೇಳುವ ಕ್ಷಣ. ಅದರಲ್ಲೂ ಊರು ಇನ್ನೂ ಮೈಲಿನ ಮೇಲೆ. ಆದರೂ ಕಾಣುತ್ತಲಿದೆ. ಪುಟ್ಟ ಹಳ್ಳಿ. ನೂರೆರಡು ನೂರು ಮನೆಗಳು. ಸುತ್ತಲೂ ಅಸ್ಪೃಶ್ಯರ ಗುಡಿಸಲುಗಳು. ಕೃಷ್ಣೆಯ ಮಗ್ಗಲಲ್ಲಿಯ ತಪೋವನದಂತೆ ತೋರುತ್ತಿದೆ, ದೂರದಿಂದ ಆ ಹಳ್ಳಿ. ಅಲ್ಲಿ ಹೋಗಿ ತಲುಪಬೇಕು. ಮಳೆಯಂತೂ ಬಂದೇ ಬಿಟ್ಟಿತು. ಕೈಯಲ್ಲಿ ಕೊಡೆಯೂ ಇಲ್ಲ. ಮನೆಯಿಂದ ಹೊರಡುವಾಗ ಮಳೆಯ ಲಕ್ಷಣವೂ ಇರಲಿಲ್ಲ. ವಿಸ್ತೀರ್ಣವಾದ ದಿಗಂತದ ಮೂಲೆಯೊಂದರಲ್ಲಿ ಎಲ್ಲಿಯೋ ಒಂದೆರಡು ಕಪ್ಪು ಮೋಡಗಳ ತುಣುಕುಗಳಿದ್ದುವು. ಆದರೆ ಒಂದೆರಡು ತಾಸಿನವಕಾಶದಲ್ಲಿ ವಿಶ್ವವನ್ನೇ ವ್ಯಾಪಿಸಿದುವಲ್ಲ ಅವು!

ಕೋಟಿನ ಗುಂಡಿಗಳನ್ನು ಹಾಕಿ ಜಾಧವ ಮಾಸ್ತರರು ಓಡಲೆಂದು ಹೆಜ್ಜೆಯನ್ನೆತ್ತಿದರು. ಅಷ್ಟರಲ್ಲಿ—

"ಇಲ್ಲೇ ಬರ್ರಿ!"

ಮಗ್ಗುಲಿನಿಂದ ಒಬ್ಬ ಬಾಲಕನ ಸ್ವರ ಕೇಳಿಸಿದಂತೆ ಭಾಸವಾಯಿತು ಅವರಿಗೆ! 'ಜನರ ಸುಳಿವೂ ಇಲ್ಲದ ಸಮಯ, ಸ್ಥಳ; ಇಲ್ಲಾರು ನನ್ನನ್ನು ಕರೆಯುವರು? ಕೇವಲ ಆಭಾಸ' ಎಂದು ಜೋರಿನಿಂದಲೇ ಓಡತೊಡಗಿದರು, ಜಾಧವ ಮಾಸ್ತರರು.

"ಇಲ್ಲೇ ಬರ್ರೆಲ್ಲಾ!"

ಎಂದು ಮತ್ತೂ ಕರೆದಂತಾಯಿತು, ಅದೇ ಸ್ವರ. ಈಗ ಹೊರಳಿ ನೋಡಿದರು ಮಾಸ್ತರರು. ಬದಿಯ ಜೊಗಚಿಯ ಸಾಲಿನ ಗುಂಟ ಹನ್ನೆರಡು ಹದಿಮೂರು ವರ್ಷದ ಹುಡುಗನೊಬ್ಬ ತಮ್ಮ ಕಡೆಗೆಯೇ ಓಡಿ ಬರುತ್ತಿದ್ದಾನೆ. ಕಂಡು ಮಾಸ್ತರರು ನಿಂತರು. ಬರುವ ಬಾಲಕನನ್ನು ನಿರೀಕ್ಷಿಸಿದರು. ಕೈಯಲ್ಲಿ ಕುಡಗೋಲು, ತಲೆಯ ಮೇಲಿನ ಗಾಂಧಿ ಟೊಪ್ಪಿಗೆಗೆ ಸುತ್ತಿದ ಕವಣೆ, ಮೈಮೇಲಿನ ಬಟ್ಟೆಗಳೆಲ್ಲ ಸ್ವಲ್ಪ ಮಾಸಿದುವೇ, ಕಾಲಲ್ಲಿ ಹರಕು ಕೆರವು, ಹುಲ್ಲು ಕೊಯ್ಯುವ ಹಳ್ಳಿಯ ಹುಡುಗ. ಅಪರಿಚಿತ ಮುಖ. ಅದರಲ್ಲಿ ಹೊಳೆಯುವ ನಯನಗಳ ಕಾಂತಿಯು ಏನೋ ಒಂದು ರಹಸ್ಯದಿಂದ ಕೂಡಿದಂತಿದ್ದಿತು. ಜಾಧವ ಮಾಸ್ತರರು ಒಂದು ಕ್ಷಣ ನೋಡುತ್ತ ನಿಂತರು. ಹಾಗೇ ನಿಂತರು, ಬೆರಗಾಗಿ, ಬೆರಳು ಬಾಯಲ್ಲಿಟ್ಟು.

" ಇಲ್ಲೇ ಬರ್ತೀರಿ ಅಲ್ಲಾ ? "

ಸಮೀಪಕ್ಕೆ ಬಂದು ಆತ ಚಿರಪರಿಚಿತರಂತೆ ಮತ್ತೊಮ್ಮೆ ಕೇಳಿದ. ಹುಡುಗನಿಗೆ ಗೊತ್ತು. ಇಂಥ ಆವೇಳೆಯಲ್ಲಿ ಈ ಹಾದಿಯಿಂದ ಅವರೇ ಬರುವವರು. ಅವರೇ ಇರಲಿಕ್ಕೆ ಬೇಕಿವರು ಎಂದು. ಆದರೆ ಜಾಧವ ಮಾಸ್ತರರ ಎಂ. ಎ. ಪದವಿಯ ವರೆಗಿನ ಶಿಕ್ಷಣ ಅಲ್ಲಿ ಉಪಯೋಗಬೀಳದಾಯಿತು. ಓಡುವ ಉತ್ಸಾಹದಿಂದ ಎದೆಯಲ್ಲಿ ತುಂಬಿದ ಹವೆಯ ಒತ್ತಡವನ್ನಿಷ್ಟು ತಡೆಹಿಡಿದುಕೊಂಡು ನಿಧಾನವಾಗಿ ಅಂದರು :

" ಏತಕ್ಕೆ ? "

ಹುಡುಗ ಸ್ವಲ್ಪ ಗೊಂದಲದಲ್ಲಿ ಬಿದ್ದ, ಏನೋ ಹೇಳಬೇಕೆಂದು. " ಮಳೆ ಬಂತು ಕರೆದೆ, ಆಸರಕ್ಕೆ ಕೂಡಲಿಕ್ಕೆಂದು " ಎಂದ ಅನುಮಾನದ ಸ್ವರದಿಂದ. ಮುಖದ ತೇಜ ಇಳಿಯಿತು.

ಹುಡುಗನ ಸೌಜನ್ಯಕ್ಕೆ ಮಾಸ್ತರರು ಮೆಚ್ಚಿದರು ಮೊದಲು. ಬರಬರುತ್ತ 'ಮಳೆಯೊಳಗೆ ಮಳೆಗೆಯಲ್ಲಿ ಸಿಕ್ಕಿದಾನೆ ಪಾಪ! ಒಬ್ಬನಿಗೇ ಹೆದರಿಕೆಯಾಗುವದೇನೋ ಕರೆಯುತ್ತಿದ್ದಾನೆ! ಮಳೆ ಹನಿಗಳೂ ಉದುರಹತ್ತಿವೆ. ಸ್ವಲ್ಪ ತಡೆದು, ಊರಲ್ಲಿಯ ಅವರ ಗುರುತನ್ನಾದರೂ ಇವನ ಹತ್ತರ ಕೇಳಿಕೊಂಡು ಮಳೆ ನಿಂತ ಮೇಲೆ ಹೋದರಾಯಿತು' ಎಂದು ಅನುಕೂಲದ ಸೂತ್ರವನ್ನು ಹಿಡಿದು ಹುಡುಗನ ಕಡೆಗೆ ಹೊರಳಿ ನಡೆದರು. ಹೋಗು

ಹೋಗುತ್ತ—

"ಗುಡಿಸಲು ದೂರವಿದೆಯೇ ?" ಎಂದು ಕೇಳಿದರು.

ಮಾಸ್ತರರ ಮಾತಿಗೆ ನೇರವಾಗಿ ಉತ್ತರ ಹೇಳುವ ಬದಲು ಆತ "ಸಿದ್ಧಾಪುರದ ಮಾಸ್ತರ ಅಲ್ಲೇನ್ರಿ ನೀವು ?" ಎಂದು ಕೇಳಿದ.

"ಅಹುದು. ನಿನಗೇನು ಗುರುತು ?"

"ನಿಮ್ಮ ಹೆಸರು ಜಾಧವ ಮಾಸ್ತರ ಅಲ್ಲರಿ ?" ಮತ್ತೂ ಚಿಕಿತ್ಸೆ ಮಾಡಿದನಾತ.

"ಹೌದು."

ಬಾಲಕನ ಮುಖ ಅರಳಿತು. ಒಗಟು ಒಡೆದಂತಾಯಿತವನಿಗೆ. ಸುತ್ತಲೂ ನಿರೀಕ್ಷಿಸಿ ನೋಡಿದ. ನುಡಿದ, "ಗೌಡರು ಇಲ್ಲೇ ಇದ್ದಾರರೀ."

ಮಾಸ್ತರರ ತಲೆಯಲ್ಲಿ ಪ್ರಕಾಶ ಬಿದ್ದಿತೀಗ. "ಹೀಗೋ! ನಾ ಊರಿಗೆ ನಡೆದಿದ್ದೆನಲ್ಲ."

"ಇಂದು ಮಧ್ಯಾಹ್ನಕ್ಕ ನಿಮಗ ಚೀಟಿ ಮುಟ್ಟಿತಲ್ಲರೀ?" ಮತ್ತೂ ಮನಸ್ಸಿಗೆ ನಂಬುಗೆ ಹುಟ್ಟುವದಕ್ಕಾಗಿ ಕೇಳಿದ ಆ ಅಪರಿಚಿತ ಹುಡುಗ.

"ಅಹುದು. ನೀನು ನನ್ನ ಗುರುತು ಹೇಗೆ ಹಿಡಿದೆ ?"

"ಈಗ ಒಂದು ತಾಸಿನಿಂದಲೂ ನಿಮ್ಮ ದಾರಿ ನೋಡ್ತ ಅಲ್ಲೇ ಹಾದಿಗೆ ಕುಳಿತಿದ್ದೇನೆ."

"ನನಗ ಎಲ್ಲಿ ಕಾಣಿಸಲಿಲ್ಲಲಾ ?"

"ಹಾಗೆ ಹಾದಿಯ ಮೇಲೇ ಹೇಗೆ ಕೂಡಕ ಬಂದೀತು ? ಇಲ್ಲೇ ಒಳಮಗ್ಗಲಿಗೆ ಹುಲ್ಲು ಕೊಯ್ಯುವವರಂತೆ ಹೊಂಚು ಹಾಕಿ ಕುಳಿತಿದ್ದೆ. ಈಗ ನಮ್ಮೂರ ಜನಕ್ಕೆ ಬಹಳ ಸಂಶಯ. ಮೊನ್ನೆ ಪೋಲೀಸರು ಬಂದು ಹೋದಾಗಿನಿಂದೂ ಇತ್ತಿತ್ತಲಾಗಿ ದಿನಾ ಒಬ್ಬರಿಬ್ಬರ ಚಾವಡಿಯೊಳಗ ಬಂದಿರತಾರೆ."

"ಗೌಡರು ಇಲ್ಲಿ ಬರುವ ಸುಳುವು ಹತ್ತಿರಬೇಕೇನು ?"

"ಅದೇ ಏನೋ ಇದ್ದಂತೆ ತೋರುವುದು."

"ಅಂತೂ ಇದು ಸುರಕ್ಷಿತ ಸ್ಥಳವಲ್ಲ ಅನ್ನು." ಸ್ವಲ್ಪ ಹೆದರಿಕೆಯಿಂದ ನುಡಿದರು ಜಾಧವ ಮಾಸ್ತರು. ಎಷ್ಟಾದರೂ ಅವರು ನೌಕರ

ರಲ್ಲವೆ ?

" ಏನ ಆಗ್ತದ ಬಿಡರಿ ! ಜೀವ ಹೋದರೂ ಅಜಿತಗೌಡರನ್ನು ಅವರ ಕೈಗೆ ಕೊಟ್ಟೇವೇನು ? "

ಹುಡುಗನ ಹೆಮ್ಮೆ ತ್ಯಾಗಗಳನ್ನು ಕಂಡು ಮಾಸ್ತರರಿಗೇ ನಾಚಿಕೆಯಾಗಿರಬೇಕು. ಆ ವಿಷಯವನ್ನೇ ಬದಿಗಿಟ್ಟು, " ಯಾವಾಗ್ಗೆ ಬಂದರು ಗೌಡರು ? " ಎಂದರು. ದನಿಯಲ್ಲಿಯ ಹೆದರಿಕೆಯ ಚಿನ್ಹವನ್ನು ಅಳಿಸಲು ತುಂಬ ಯತ್ನಿಸಲಾಗಿತ್ತು.

" ನಿನ್ನೆ ಸಂಜೆಗೇ ಬಂದಿದಾರೆ. ಮಧ್ಯಾನ್ಹದಿಂದಲೂ ನಿಮ್ಮ ದಾರಿ ನೋಡ್ತ ಇದೇವಿ. ಇಂದು ಶನಿವಾರ ನಿಮಗ ಸೂಟಿ ಅಲ್ಲ? "

" ಹೌದು; ಹೊರಡಲಿಕ್ಕೆ ನಾನೇ ಹೊತ್ತು ಮಾಡಿದೆ. "

ಹಾಗೆಯೇ ಹೊಳೆಯ ಕಡೆಗೆ ಮುಖಮಾಡಿ ಕಾಲುದಾರಿಯಿಂದ ಹುಡುಗನ ಬೆನ್ನುಹತ್ತಿ ನಡೆದಿದ್ದರು. ಎರಡೂ ಕಡೆಗೆ ಬೆಳೆದ ಬಿಳಿಜೋಳವು ಮಕ್ಕಳ ರಕ್ಷಣೆಗೆ ಭೂಮಾತೆಯು ಕತ್ತಿಗಳನ್ನು ಹಿರಿದು ನಿಂತಿರುವಳೋ ಎನ್ನುವಂತೆ ಹೊಡೆ ಹೊರಬಿದ್ದು ನಿಂತಿದೆ. ಮುಂದೆ ಸಾಗಿದಂತೆ ನೆಲವು ಹೊಳೆಯು ಒತ್ತಾದುದರಿಂದ ಇಳುಕಲಾಗುತ್ತ ಹೋಗಿದ್ದಿತು. ಕಾಲಲ್ಲಿ ಅವರೆ-ಕುಂಬುಳ ಬಳ್ಳಿಗಳು ತೊಡಕಿ ಅಡ್ಡಿಯನ್ನುಂಟು ಮಾಡುತ್ತಿವೆ. ಹಾಗೆಯೇ ನಡೆದಿದ್ದಾರೆ, ಅಲ್ಲ—ಧುಮುಕುತ್ತಿದ್ದಾರೆ. ಸ್ವಲ್ಪ ದೂರ ಹೋದ ಬಳಿಕ, " ಸಾವಕಾಶ ಬರ್ರೀ, ಕಾಲ ಜಾರಿದರೆ ಹೋಗಿ ಹೊಳೆಯನ್ನೇ ಕೂಡೋದು " ಎಂದು ಹುಡುಗ ಎಚ್ಚರಿಸಿದ.

ಮಾಸ್ತರರು ಹೆಜ್ಜೆಗಳನ್ನು ಸ್ಥಿರವಾಗಿಡುತ್ತ, " ಇನ್ನು ಎಷ್ಟು ದೂರಪ್ಪ ? " ಎಂದರು

" ಈಗs ಹೀಗಂದರೆ ಹೇಗರಿ ? " ಮಾಸ್ತರರ ಮನಸ್ಸಿನಂತೆಯೇ ಇದ್ದಿತೀ ಪ್ರಶ್ನೆ. ಸ್ವಲ್ಪ ಹೊತ್ತು ಸುಮ್ಮನೆ ಸಾಗಿದರು. ಆಮೇಲೆ ಎದುರಿಗಿನ ಕೊಳ್ಳದಡಿಯೊಂದನ್ನು ತೋರಿಸುತ್ತ ಹುಡುಗ ಹೇಳಿದ :

" ಅದೇ ನೋಡಿರಿ ಗುಡಿಸಲು, ಅಲ್ಲೇ ಇರತಾರ ಗೌಡರು."

" ಇಲ್ಲೇ ಸಮೀಪಕ್ಕ ಅದೇ ತಗೊ ! "

ಗುಡಿಸಲನ್ನು ಕಂಡು ಉತ್ತೇಜಿತರಾಗಿ ನುಡಿದರು ಮಾಸ್ತರರು.

" ಇಲ್ಲೇ ಕಾಣ್ತದೆ, ಆದರೂ ದೂರ ಅದೆ, ಅಲ್ಲಿ ಹೋಗಬೇಕಾದರೆ

ಇನ್ನೂ ಸುತ್ತು ಹಾಕಿ ಹೋಗಬೇಕು. ನೆಟ್ಟಗೆ ಇಳಿಯಲಿಕ್ಕೆ ಹೋದರೆ ಸತ್ತೇ ಹೋಗೋದು."

"ಅಂಥಲ್ಲಿ ಯಾತಕ್ಕ ಪೋಲಿಸರು ಬರ್‍ತಾರ ಸಾಯ್ಲಿಕ್ಕೆ!" ಧೈರ್ಯದಿಂದ ಅಂದರು ಮಾಸ್ತರರು, ಸಮಾಧಾನದ ನಗೆಯೊಂದನ್ನು ಬೀರುತ್ತ.

"ಬರಲಿಕ್ಕೇ ನಿಂತರಂದರ ಬೇಕಾದ ಪ್ರಯತ್ನ ಮಾಡಿ ಬರತಾರೆ. ಹಿಂದಕ್ಕೆ ಸೆರೆ ಭಟ್ಟಿ ಹಿಡಿಯುವ ಮುಂದ ಇದಕ್ಕೂ ಕೆಳಗೆ ಹೋಗೇ ರಾತ್ರಿ ಹಿಡಿದರಲ್ಲ!" ಎಂದ ಸಹಜವಾಗಿ.

ಹಳ್ಳಿ ಹಳ್ಳಿಗಳಿಗೂ ಸೆರೆ ಮುಟ್ಟಿದೆಯಲ್ಲ ಎಂಬ ಉದ್ಗಾರದೊಡನೆಯೇ ಹಳ್ಳಿಗಾಡಿನ ಭೀಕರ ಚಿತ್ರವೊಮ್ಮೆ ಅವರ ಕಣ್ಣೆದುರಿಗೆ ಸುಳಿದು ಹೋಯಿತು. ಸುತ್ತಲಿನ ಜೋಳದ ಎಲೆಗಳ ಮೇಲೆ ಉದುರುವ ಜಿನಗು ಮಳೆ ಹನಿಗಳು ಸಣ್ಣಾಗಿ ಸದ್ದು ಸೈನಗುತ್ತಿದ್ದುವು. ಬಳಿಯಲ್ಲಿಯೇ ಕೃಷ್ಣೆಯ ಪ್ರವಾಹವು ತೆರೆಗಳಿಂದ ಏರಿಳಿತವಾಗಿದ್ದರೂ ಮಬ್ಬುಗತ್ತಲಲ್ಲಿ ಸಮನಾಗಿ ತೋರುತ್ತಿದ್ದಿತು ರಾಜಮಾರ್ಗದಂತೆ. ಯಾವನೋ ಒಬ್ಬ ಹಳ್ಳಿಯ ಹರೆಯದ ಒಕ್ಕಲಿಗನು—

"ಹೋರಿ ಹರಕೊಂಡು ಹುಚ್ಚೆದ್ದು ಓಡ್ತ ಇದೆ. ಹಿಡಿಯಿರಿ! ಹಿಡಿಯಿರಿ!" ಎಂದು ಒದರುತ್ತಿದ್ದಾನೆ

"ಮೈಮೇಲೆ ಬರಬಹುದೇನಪ್ಪ?" ಎಂದರು ಜಾಧವ ಮಾಸ್ತರರು ವಿಚಾರವನ್ನುಳಿದು.

"ಹೊಳೆ ಆಚೆಯ ದಡಕ್ಕ ಅದೆ ಆ ಸ್ವರ!" ಎಂದ ಆ ಹುಡುಗ.

ಅಷ್ಟರಲ್ಲಿ "ನಮಸ್ಕಾರರೀ ಮಾಸ್ತರರ!" ಎಂಬ ಮಾತು ಕೇಳಬಂತು.

ಎದುರಿಗೆ ನೋಡಿದರು ಮಾಸ್ತರರು. ಅಜಿತ ನಿಂತಿದ್ದ. ಕೈಯಲ್ಲಿ ತಂಬಿಗೆ ಇತ್ತು. ಜಾಧವ ಮಾಸ್ತರರು ಏನೋ ಮಾತಾಡಬೇಕೆಂದಿರುವದರಲ್ಲಿಯೇ ಮುಂದೆ ನುಡಿದ.

"ನೀವು ಬರುವಿರೋ ಇಲ್ಲೋ ಅಂತ ನನಗೆ ಸಂಶಯವಿತ್ತು!"

"ಏಕೆ? ನಿನ್ನ ಗುರುವಲ್ಲ ನಾನು?" ಎಂದರು ಹೆಮ್ಮೆಯಿಂದ.

"ಗುರುಗಳೇನೋ ಹೌದು; ನೀವು ಕುಳಿತು ಬೇಕಾದದ್ದನ್ನು

ಮಾಡಬಹುದು. ಆದರೆ ಇಲ್ಲಿ ಬಂದೀರೆಂದು ನನಗೆ ಎನಿಸಿರಲಿಲ್ಲ."

"ನಿನ್ನ ಕಾಗದ ನೋಡಿದಾಕ್ಷಣ ಹಾಗೇ ಅನಿಸಿತ್ತು." ಸತ್ಯವಾಗಿಯೇ ನುಡಿದರು ಜಾಧವ ಮಾಸ್ತರರು. ಸತ್ಯ ಅಹಿಂಸೆಗಳೇ ಸಾಧನಗಳಲ್ಲವೆ, ಸ್ವಾತಂತ್ರ್ಯ ಸಂಪಾದನೆಗೆ ?

"ನನ್ನ ಅಕ್ಷರಗಳ ಗುರತು ಸಿಕ್ಕಿತೇ ?"

"ಸಿಗದೆ ಏನು ? ನಾಲ್ಕೇ ಸಾಲು ಬರೆದಿದ್ದೆ. ಎಲ್ಲಿ ಅಂತ ಹೋಗಬೇಕು ಎಂದುಕೊಂಡು ಸುಮ್ಮನಿದ್ದೆ. ಆದರೆ ಹೊತ್ತು ಹೊರಳಿದಂತೆ ನನ್ನ ಮನಸ್ಸೂ ಹೊರಳಿತು."

"ಎಲ್ಲಿ ಅಂತ ಅನುಮಾನಿಸಲಿಕ್ಕೇನು ? ನೆಟ್ಟಗೆ ರಾಜಾಪುರಕ್ಕೆ ಹೋಗಿದ್ದರೂ ನಿಮ್ಮನ್ನಿಲ್ಲಿ ತಂದು ಮುಟ್ಟಿಸುತ್ತಿದ್ದರಲ್ಲ !"

"ಅಪರಿಚಿತ ಹಳ್ಳಿ, ಅಲ್ಲಿ ಹೋಗಿ ಯಾರನ್ನಂತ ಕೇಳುವುದೆಂದು ಯೋಚನೆಯಲ್ಲಿದ್ದೆ. ಅಷ್ಟರಲ್ಲಿ...."

"ಅಲ್ಲಿಯೂ ವ್ಯವಸ್ಥೆ ಇಡಲಾಗಿತ್ತು. ಇಲ್ಲಿಯ ಗೌಡರೇ ನಮಗೆ ನೆರವಾಗುತ್ತಿದ್ದಾರೆ!"

"ಹೇಗೋ, ಅದೆಲ್ಲಿಂದ ಬುದ್ಧಿ ಬಂದಿತವರಿಗೆ ?"

"ಎಲ್ಲರೂ ಹಾಗೇ ಇರುವರೇನ್ರಿ ? ಈ ಸಲವೇ ಇವರೂ ಕೆಲಸಕ್ಕೆ ರಾಜೀನಾಮೆ ಕೊಡಲಿದ್ದರಾದರೂ ನಾನೇ ಬೇಡವೆಂದು ತಡೆದಿದೇನೆ, ಆಶ್ರಯಸ್ಥಾನವೊಂದು ಬೇಕೆಂದು. ಬಹಳ ಹುರುಪು. ಇನ್ನೂ ತರುಣ. ಯಾವುದಕ್ಕೂ ಸಿದ್ಧ."

"ಇಷ್ಟು ತಯಾರಿಯೋ ?"

"ಹೌದು ಮತ್ತೆ ! ನಾಳೆ 'ರಾಷ್ಟ್ರ ದಿನ' ನಿಮಿತ್ತ, ಈ ತಾಲೂಕಿನ ಇಪ್ಪತ್ತು ಜನ ಗೌಡರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಡುವುದೆಂದು ಗೊತ್ತು ಮಾಡಿದೆ."

"ಬಹಳ ಕ್ರಾಂತಿಯಾಯಿತು ಬಿಡಪ್ಪ !"

"ಈಗೇನಾಗಿದೆ ? ಸ್ವಲ್ಪ ತಡೆದು ಮಾಡಬೇಕಾದರೆ ಕೆಲಸ ಬೇಕಷ್ಟಿದೆ. ಆದರೆ ಮಾಡುವವರೇ ಇಲ್ಲ."

"ಮಾಡಹೋದಂತೆ ಆಗದು ಬಿಡು. ಯಾವಾಗ್ಗೆ ನಮ್ಮ ಜನರೇ

ನಮ್ಮ ಮೇಲೆ ತಿರುಗಿ ಬಿದ್ದಾರೆಂಬುವ ನಿಯಮವಿಲ್ಲ" ಎಂಬ ಮಾತು ಜಾಧವ ಮಾಸ್ತರರ ಮನದಲ್ಲಿಯೇ ಮೂಡಿದ್ದಿತು. ಅಷ್ಟರಲ್ಲಿ ಅಜಿತನೇ "ಹಳ್ಳಿಯ ಜನರು ಬಹಳ ವಿಶ್ವಾಸಿಕರು. ಮುಂದಾಗಿ ಮಾರ್ಗದರ್ಶಕರು ಬೇಕವರಿಗೆ. ಅಂದರೆ ಬೇಕಾದದ್ದನ್ನು ಮಾಡುವರು. ಜೀವದ ಪರಿವೆ ಯಿಲ್ಲ ಹಳ್ಳಿಗರಿಗೆ, ನಾವೇ—ಕಲಿತವರೇ—ಬುದ್ಧಿಯ ತೋಳಲಾಟದಲ್ಲಿ ಹಿಂದೆ ಮುಂದೆ ನೋಡುವೆವು." ಎಂದು ಅವರ ಭಾವನೆಯನ್ನು ಅಲ್ಲಿಯೇ ಅಳಿಸಿಬಿಟ್ಟ.

ಕೊಳ್ಳದಡಿಯಲ್ಲಿ ಚಿಕ್ಕ ಗುಡಿಸಲು. ಸಂಪೂರ್ಣ ಜೋಳದ ದಂಟಿನಿಂದಲೇ ಕಟ್ಟಲ್ಪಟ್ಟಿದೆ. ಮೇಲೆ ರವಡೆ ಹೊಚ್ಚಿದ್ದಾರೆ. ಎಂಥ ಮಳೆ ಬಂದರೂ ನೀರಿಳಿಯುವಂತಿಲ್ಲ. ಸಮೀಪದಲ್ಲಿ ಸ್ವಲ್ಪ ಅಗಿದು ನೀರಿನ ಗುಂಡಿಯನ್ನು ತಯಾರಿಸಲಾಗಿದೆ. ಅಲ್ಲಿಂದ ನದಿಯು ತೀರ ಸಮೀಪಕ್ಕೆ ಇದ್ದಿತಾದರೂ ಹೋಗಿ ನೀರು ತರಲು ಬರುವಂತಿರಲಿಲ್ಲ. ಅಷ್ಟು ದಟ್ಟಾಗಿ ಗಲಗು ಬೆಳೆದಿದೆ. ಈ ಮಗ್ಗಲು ಎತ್ತರವಾದ ಭೂಭಾಗ. ಇನ್ನೂ ತಾಸು ಹೊತ್ತಿರುವಾಗಲೇ ಅಲ್ಲಿ ಸೂರ್ಯಾಸ್ತ. ಅಂತೂ ಅಲ್ಲಿಯವರಿಗೆ ಹತ್ತೇ ತಾಸಿನ ಹಗಲು. ಇಂಥಲ್ಲಿದೆ ಆ ಗುಡಿಸಲು. ಗುಡಿಸಲು ಚಿಕ್ಕದಾದರೂ ಚೊಕ್ಕಾದದು. ಒಳಗೆ ಹತ್ತೆಂಟು ಜನರು ಒತ್ತೆ ಒತ್ತೆಯಾಗಿ ಕೂಡಬಹುದು. ನೆಲದ ಮೇಲೆ ಕಂಬಳಿ ಹಾಸಿ ಮೇಲೆ ಜಮಖಾನೆ ಹಾಸಿದೆ. ಅಲ್ಲಿ ಬರೆಯುವ ಸಾಧನಗಳೆಲ್ಲ ಇಟ್ಟವೆ. ದೀಪವೊಂದು ಉರಿಯುತ್ತಿದೆ. ಹೊರಗಿನಿಂದ ಎಷ್ಟು ನಿರೀಕ್ಷಿಸಿದರೂ ಅಲ್ಲಿ ದೀಪವಿರಬೇಕೆಂಬ ಕಲ್ಪನೆಯೂ ಕೂಡ ಯಾರಿಗೂ ಬಾರದು.

ಹಾಸಿಗೆಯ ಮೇಲೆ ನೆಲಗಡಲೆಯ ಕಾಯಿಗಳು ಕೆಲವು ಬಿದ್ದಿವೆ. ಜೊತೆಗೆ ಸ್ವಲ್ಪ ಸೊಪ್ಪೆಯೂ ಇದೆ. ಕಾಗದದಲ್ಲಿ ಸ್ವಲ್ಪ ಬೆಲ್ಲವೂ ಇತ್ತು. ಅಜಿತ ಮಾಸ್ತರರನ್ನು ಒಳಗೆ ಕರೆದೊಯ್ಯುತ್ತ ಅಂದ—

"ಕಾಯಿ ತಿನ್ನುವಿರೇನು? ತಿನ್ನಿರಿ!"

"ಯಾರೋ ತಿನ್ನುತ್ತ ಅರ್ಧಕ್ಕೆಯೇ ಬಿಟ್ಟಿರುವರಲ್ಲ!"

"ನಾನೇ ಈಗ ತಿನ್ನುತ್ತ ಕುಳಿತಿದ್ದೆ. ಊಟ ಬರಲಿಕ್ಕೆ ಇನ್ನೂ ಅವಕಾಶವಿತ್ತು, ಯಾಕೋ ಹಸಿವಾಗಿತ್ತು. ಹಸಿದಾಗ ಇವೇ ನಮ್ಮ

ಬದಾಮು—ಬಡವರ ಬದಾಮು— ನೀವು ಮಾತಾಡಿದ ಸದ್ದು ಕೇಳಿ ಹೊರಗೆ ಬಂದೆ."

"ತಿನ್ನುತ್ತ ತಿನ್ನುತ್ತಲೇ ಶೌಚಕ್ಕೆ ಹೋಗಿದ್ದೆಯೋ?"

"ಶೌಚಕ್ಕೆ ಹೋಗಿರಲಿಲ್ಲ ನಾನು. ಯಾರು ಬಂದರೆಂದು ಮರೆಗೆ ಕುಳಿತು ನೋಡುತ್ತಿದ್ದೆ ಅಷ್ಟೇ"

"ಇಂಥಲ್ಲಿ ಹೆದರಿಕೆಯೇನಪ್ಪ?"

"ಕೆಲಸ ಮಾಡುವಾಗ ಮೈತುಂಬ ಕಣ್ಣಿರಬೇಕು. ಆಲಸ್ಯ ಮಾಡಿ ಉಪಯೋಗವಿಲ್ಲ. ಹಾಗೆ ಅರಿವುಗೇಡಿಗಳಾಗಿದ್ದರೆ ಇಷ್ಟರಲ್ಲಿ ಕಾಂಗ್ರೇಸ ಕಮೀಟಿಗಳು ಸರಕಾರದ ಬಲಿಗೆ ಬೀಳದೆ ಇರುತ್ತಿದ್ದುವೇ? ಎಷ್ಟು ಬಿಗುವು. ಎಂಥ ಸಿ. ಆಯ್. ಡಿ. ತಪಾಸಣೆ!"

"ನೀವು ಅವರಪ್ಪ ಆಗಿಬಿಟ್ಟಿದೀರಲ್ಲ!"

"ಇನ್ನೂ ಆಗಬೇಕು" ಎಂದು ಕಾಯಿಗೆ ಕೈ ಹಾಕಿದ ಅಜಿತ.

ಕಾಯಿಗಳನ್ನು ತಿನ್ನುತ್ತ ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಿದ್ದರು. ಬಳಿಯ ಗುಂಡಿಯೊಳಗಿನ ನೀರಲ್ಲಿ ಒಂದು ಕಪ್ಪೆ ಒದರುತಲಿತ್ತು. ಸುತ್ತಲೂ ಭೀಕರ ಕತ್ತಲೆ. ಎಲ್ಲಿಯೋ ದೂರದಲ್ಲಿ ಗೀಜಗನ ಹಕ್ಕಿಯೊಂದು ಗುಜ ಗುಡುತ್ತಿದ್ದಿತು. ಹೊರಗೆ ಸಣ್ಣಾಗಿ ಮಳೆ ಹಣಿಯುತ್ತಲೇ ಇತ್ತು. ಅಜಿತ ಬಾಗಿಲ ಕಡೆಗೆ ಹೊರಳಿ ಅಲ್ಲಿ ಕೂತ ಹುಡುಗನಿಗೆ ಎಂದ, "ನಿನಗೆ ಇವರ ಗುರುತು ಹೇಗೆ ಸಿಕ್ಕಿತೋ?"

"ಗುರುತ ಎಲ್ಲೀದು, ಅಜಮಾಸದ ಮೇಲೇ ಕರೆದೆ."

"ಅಂತೂ ಚಲೋ ಕೆಲಸ ಮಾಡಿದಿ; ಇಲ್ಲಾದರೆ ಮಾಸ್ತರರು ದಣಿಯುತ್ತಿದ್ದರು. ಈಗ ಮತ್ತೊಂದು ಕೆಲಸಕ್ಕೆ ನೀನೇ ಹೋಗ ಬೇಕಾಯಿತು!"

"ಏನು ಹೇಳಿರಲ್ಲ!" ಉತ್ಸಾಹದಿಂದ ಕೇಳಿದ ಆತ.

"ಊರಿಗೆ ಹೋಗಿ ಇಬ್ಬರ ಊಟಕ್ಕೆ ತರಲಿಕ್ಕೆ ಹೇಳಬೇಕು."

"ಓಹೋ!" ಎಂದು ಎದ್ದ ಹುರುಪಿನಿಂದ ಹುಡುಗ.

"ಎಲ್ಲಿ ತ್ರಾಸು ಕೊಡತಿ ಬಿಡಪ್ಪ, ಇಂತಹ ಕತ್ತಲೆಯೊಳಗ? ತಂದದರೊಳಗ ತಿಂದು ಬಿಡೋಣು ಇಬ್ಬರು" ಎಂದರು ಜಾಧವ

ಮಾಸ್ತರರು. ಸ್ವಲ್ಪ ತಡೆದು—

"ಊಟಕ್ಕಂತ ಇಲ್ಲಿ ಬಂದಿಲ್ಲ ನಾ?"

ಹುಡುಗ ಅಲ್ಲಿಂದ ಮಿಂಚಿನಂತೆ ಮಾಯವಾಗಿಬಿಟ್ಟಿದ್ದ. ಆದರೂ ಅಜಿತ ಹೊರಗೆ ಹೋಗಿ ಹೇಳಿದ. "ಗೌಡರಿಗೂ ಬರಲಿಕ್ಕೆ ಹೇಳು, ಮಾಸ್ತರರು ಬಂದಾರಂತ."

"ಹೂಂ!" ಎಂದವನೆ ಕಾಲ್ಕಿತ್ತಿದನಾತ.

"ಅವನಿಗಷ್ಟು ಕಾಯಿರಿ ತಿನ್ನಲಿಕ್ಕೆ ಕೊಡಲ್ಲ" ಎಂದರು ಮಾಸ್ತರರು.

"ಯಾತಕ್ಕ ಬಿಡರೀ, ಹಗಲಿ ರಾತ್ರಿ ಅಪರೊಳಗೇ ಇದ್ದೇವಲ್ಲ!" ಎಂದು ಕತ್ತಲೆಯಲ್ಲಿ ಮಾಯವಾಗಿಬಿಟ್ಟ.

ತಿರುಗಿ ಒಳಗೆ ಬರುತ್ತ ಅಜಿತ ಕೇಳಿದ: "ಊರ ಕಡೆಯ ಸುದ್ದಿ ಏನರಿ? ಹತ್ತು ಹದಿನೈದು ದಿನಗಳಲ್ಲಿ ಏನೂ ತಿಳಿದಿಲ್ಲ. ಅಜ್ಜಿಯ ಮೈಯೊಳಗೆ ಹೇಗಿದೆ? ನಮ್ಮ ಮನೆಯ ಕಡೆಗೆ ಎಂದು ಹೋಗಿದ್ದಿರಿ?"

"ಮೊನ್ನೆಯೇ ಹೋಗಿದ್ದೆ. ಮುರದೇವಿಗೆ ಹಾಗೇ ಇದೆ. ನಡದೇ ಇರತದೆ, ಗೌಡರ ಕೆಲಸ. ಅದನ್ನೇನ ಕೇಳುವಂತಿಲ್ಲ ಹೇಳುವಂತಿಲ್ಲ" ಎಂದು ಮಾಸ್ತರರು ಅನುಮಾನಿಸುತ್ತ ನುಡಿದರು.

"ಆಂ! ಆಯಿಗೆ ಹೇಗಿದೆ?" ಎಂದು ತೀಕ್ಷ್ಣ ದೃಷ್ಟಿಯಿಂದ ಮಾಸ್ತರರ ಮುಖವನ್ನು ನಿರೀಕ್ಷಿಸುತ್ತ ವ್ಯಾಕುಲನಾಗಿ ಕೇಳಿದ ಅಜಿತ. ಅಜಿತನ ಗಾಬರಿಯನ್ನು ಕಂಡು,—

"ಏನು ಗಾಬರಿಯಾಗಬೇಡ; ಮುರದೇವಿಗೆ ಏನೂ ಆಗಿಲ್ಲ. ಆದರೆ ನಿನ್ನ ಆಸ್ತಿಯೆಲ್ಲ ಜಪ್ತ ಆಗಿ ಹೋದಾಗಿನಿಂದಲೂ ಅವಳ ಜೀವ ಒಳಗಿಂದೊಳಗೇ ಕೊರಗತ ಇದೆ. ಈ ಬೇನೆಯೊಳಗಿಂದೇನೂ ಉಳಿಯುವಂತಿಲ್ಲವೇನೋ!" ಮಾಸ್ತರರು ಹೇಳಿದರು.

"ಇಷ್ಟು ಜೋರಾಗಿದೆಯೋ?" ವಿಚಾರದ ತಾಕಲಾಟದಲ್ಲಿಯೇ ಕೇಳಿದ ಅಜಿತ.

"ಹೌದು; ಈ ಎರಡು ತಿಂಗಳಲ್ಲಿ ಅವಳಿಗೆ 'ಹೀಗೇಕಾಯಿತು? ಅಜಿತನ ಗತಿ ಏನು?' ಇದೇ ಧ್ಯಾಸ. ಆದರಿಂದ ಮೇಲಿಂದ ಮೇಲೆ ಮನೆಗೆ

ಪೋಲೀಸರು ಬರುವದರಿಂದಂತೂ ಹುಣ್ಣಿನ ಮೇಲೆ ಬರೆಯೆಳೆದಂತಾಗುತ್ತಿದೆ."

ಅಜಿತ ನಿಮಿಷ ಮಾತ್ರ ಮುಖ ಹೊರಳಿಸಿದ. ಬಹುಶಃ ದೀರ್ಘ ನಿಶ್ವಾಸವನ್ನು ಹತ್ತಿಟ್ಟಿರಬೇಕು. ಬಳಿಕ ಈ ಕಡೆಗೆ ತಿರುಗಿ ನಕ್ಕು ನುಡಿದ:

"ನಿಮ್ಮಿಂದಲೇ ಅಲ್ಲ; ಮಾಸ್ತರರೇ, ಈ ಸಂಗತಿಯನ್ನು ನಾನು ಹಿಂದಕ್ಕೆ ಹಲವರಿಂದ ಕೇಳಿದ್ದೇನೆ. ಆದರೆ ಅಜ್ಜಿಯ ಕಷ್ಟ ನಿಷ್ಠುರಗಳ ಬೆಲೆ ದೇಶಕಾರ್ಯದ ಮುಂದೆ ಇಲ್ಲ. ಇದ್ದಿದ್ದರೆ ಮಾನವನು ಹೀಗೆ ದೇಶಕ್ಕಾಗಿ ತ್ಯಾಗ ಮಾಡಲು ಎಂದೂ ಶಕ್ಯವಿಲ್ಲ."

ಅಜಿತನ ಮಾತಿನಿಂದ ಗೌಡರ ನಡತೆ ನೆನಪಾಯಿತವರಿಗೆ. ಆಗ ಅವರೆಂದರು:

"ದೇಶ ಹಾಳಾದರೂ ತನಗೆ ನೋವಾಗಬಾರದೆಂಬುದೇ ಹಲವರ ಆಶೆ. ಎಂಥ ಕಷ್ಟ ಒದಗಿದರೂ ಮಾನವನು ಸಾಯಲಿಚ್ಛಿಸುವದಿಲ್ಲ."

ಅಂತರ್ವೇದನೆಯು ಅಜಿತನ ಮುಖದಲ್ಲಿ ಮೂಡಿತು. ಗೋಣ ಅಲ್ಲಾಡಿಸಿ ಅವನೆಂದ:

"ಅಲ್ಲ ಮಾಸ್ತರರೆ, ಹಾಗಲ್ಲ. ಮನುಷ್ಯ ನಿಜವಾಗಿ ಸಾವನ್ನಪೇಕ್ಷಿಸುವ ಸಂದರ್ಭಗಳೂ ಉಂಟು. ಊರಿಂದ ಹೊರಬಿದ್ದ ಮೇಲೆ ಕೆಲ ದಿನ ಏನೂ ಕೆಲಸವಾಗಲಿಲ್ಲ. ಎಲ್ಲಿ ಹೋದರೂ ನಿರಾಸೆ, ನಿರುತ್ಸಾಹ. ಆಗ, ಮಾಡದಿದ್ದರೆ ಮಡಿಯುವುದೇ ಲೇಸೆನಿಸಿತೆನಗೆ, ಒಂದಿನ. ಆದರೆ ಅದೇ ಸಂಜೆಗೆ ನನ್ನಂತೆ ಮನೆ ಬಿಟ್ಟ ನಾಲ್ಕು ಜನರು ನನ್ನನ್ನು ಕೂಡಿದಾಗ ಆ ನಿರಾಶೆಯೆಲ್ಲ ಎಲ್ಲಿಯೋ ಹೋಗಿಬಿಟ್ಟಿತು. ಈಗಂತೂ ಸಾವೆಂದರೆ ಹೆದರಿಕೆ."

"ಅಂತೂ ಹೆದರುವೆಯೆನ್ನು?"

"ಹೌದು; ಹೆದರಿಕೆ ಅಸಾರ್ಥಕ ಸಾವಿಗಷ್ಟೇ. ಉಳಿದುದಕ್ಕೆ ಭೀತಿಯೆಂಬುದೇ ಇಲ್ಲ, ಸ್ವಾತಂತ್ರ್ಯ ವೀರರಿಗೆ."

ಈ ಮಾತಿನಲ್ಲಿ ದೇಶಸೇವೆಯ ಕಳವಳ ಎಷ್ಟು ಗಭೀರವಾಗಿದೆಯೆಂಬುದು ಹೊಳೆಯಲಿಕ್ಕೆ ಮಾಸ್ತರರಿಗೆ ವಿಲಂಬವಾಗಲಿಲ್ಲ. ಅವರ

ಹೃದಯದಲ್ಲಿಯೂ ದೇಶಭಕ್ತಿಯ ಬಿರುಗಾಳಿಯೆದ್ದಿತು. ಅವರು ಕೆಲ ಹೊತ್ತು ಹೊರಗಿನ ಕತ್ತಲೆಯನ್ನೇ ನಿಟ್ಟಿಸುತ್ತಿದ್ದು, ಬಳಿಕ ಮುಖದಿರುವಿ ಹೇಳಿದರು :

" ಹೇಳು, ನನ್ನ ಸಲುವಾಗಿ ಯಾವ ಕೆಲಸವನ್ನು ನಿಯಮಿಸುವೆ, ಹೇಳು? ನಾನೀಗ ಯಾವ ಕೆಲಸವನ್ನೂ ಮಾಡಲಿಕ್ಕೆ ಸಿದ್ಧ. ಈ ಪಾರತಂತ್ರ್ಯ ನಾಡಿನಲ್ಲಿ ಗೌರವಾರ್ಹವಾದದ್ದೇನಾದರೂ ಇದ್ದರೆ ನಿನ್ನಂತಹ ಸ್ವಾತಂತ್ರ್ಯ ಸೈನಿಕರಿಗೆ ನೆರವಾಗುವುದೇ ಸರಿ!" ಎಂದು ಅವರು ಜಿಜ್ಞಾಸು ದೃಷ್ಟಿಯಿಂದ ಅಜಿತನ ಕಡೆಗೆ ನೋಡಿದರು. ಆದರವನು ಹೊರಗಿನಿಂದ ಯಾರೋ ಬರುತ್ತಿದ್ದುದನ್ನು ನಿಟ್ಟಿಸುತ್ತಿರುವುದರಿಂದ ಮಾತನಾಡಲಿಲ್ಲ.

ಸ್ವಲ್ಪ ಹೊತ್ತಿನಲ್ಲಿ ಇಬ್ಬರು ಮೂವರು ತರುಣರು ಒಳಗೆ ಪ್ರವೇಶಿಸಿದರು. ಒಬ್ಬರ ತಲೆಯ ಮೇಲೆ ಬುತ್ತಿಯ ಗಂಟಿತ್ತು. ಉಳಿದವರು ಬರಿಗೈಯಿಂದಲೇ ಬಂದಿದ್ದರು. ಎಲ್ಲರೂ ತೊಟ್ಟುದು ಕೈನೂಲಿನ ಬಟ್ಟೆ. ಬಂದವರಲ್ಲಿ ಒಬ್ಬನು ಹೇಳಿದ :

" ಆ ಕೆಲಸ ತೀರಿಸಿ ಬಂದೆವು. ಎಲ್ಲೆಲ್ಲಿ ಏನೇನು ಮಾಡಬೇಕೆಂಬುದನ್ನೂ ಸೂಚಿಸಿ, ಅದಕ್ಕೆಲ್ಲ ಜನರನ್ನು ನಿಯಮಿಸಿದೆವು. ಇನ್ನು ನಾವೆಲ್ಲಿ ಕೆಲಸಕ್ಕೆ ಹೋಗಬೇಕೆಂಬುದನ್ನು ಹೇಳಿರಿ, ಎಂದರಾಯಿತು."

ಆಗ ಆತನು ಹೊಸಬರಾದ ಮಾಸ್ತರರನ್ನು ನಿಟ್ಟಿಸುತ್ತ ಇದ್ದ. ಮಾತಿನಲ್ಲಿ ತುಂಬ ಉತ್ಸಾಹವಿದ್ದಿತು.

" ಮೊದಲು ಊಟವಾಗಲಿ, ಆಮೇಲೆ ಮಾತನಾಡುವಿರಂತೆ." ಎಂದು ಇನ್ನೊಬ್ಬಾತನು ಬುತ್ತಿಯನ್ನಿಳುಹುತ್ತ ಹೇಳಿದ.

" ಇವರು ನನ್ನ ಗುರುಗಳು. ಹುಡುಗರನ್ನು ಸಿದ್ಧಗೊಳಿಸಲಿಕ್ಕೆ ಬಹಳ ಕೈಚಳಕ ಇವರದು!" ಎಂದು ಅಜಿತ ನಗುತ್ತ ಜಾಧವ ಮಾಸ್ತರರ ಪರಿಚಯವನ್ನು ಬಂದವರಿಗೆ ಮಾಡಿಕೊಟ್ಟನು.

ಕೂಡಲೆ ಎಲ್ಲರೂ ಊಟಕ್ಕೆ ಕುಳಿತರು. ಅರ್ಧ ಗಂಟೆಯಾಯಿತು ಎಲ್ಲ ತೀರಲಿಕ್ಕೆ. ಆ ಸ್ವಯಂಸೇವಕರನ್ನು ಮಾಸ್ತರರು ಬಾಯಿತುಂಬ ಹೊಗಳಿದರು. ಅವರ ಕಾರ್ಯದಕ್ಷತೆಯನ್ನು ಕಂಡು ಅಭಿನಂದಿಸಿದರು.

ಅದಕ್ಕೆ ಈಗ ಬಿಸಿಬಿಸಿಯಾದ ಅನ್ನವೂ ಹೊಟ್ಟೆಯಲ್ಲಿ ಹೋದುದೂ ಕೊಂಚ ಕಾರಣವಾಗಿರಬೇಕು. ಒಂದೊಂದು ದಿನ ಅನ್ನವೂ ಇಲ್ಲ, ನೀರೂ ಇಲ್ಲ! ಹೀಗೇ ಇದ್ದು ಕಾರ್ಯ ಮಾಡುತ್ತಿದ್ದಾರೆಂಬುದು ಅವರಿಗೇನು ಗೊತ್ತು ?

"ನಿಮ್ಮ ಶಿಷ್ಯ ಒಳ್ಳೇ ದಕ್ಷನಾದ ಕಾರ್ಯಕರ್ತ. ಕಾರ್ಯಾಲಯವನ್ನು ಚಲೋ ಸಿಸ್ತಿನಿಂದಿಟ್ಟಿದ್ದಾನೆ. ಎಲ್ಲಾ ಅಚ್ಚುಕಟ್ಟಾಗಿದೆ. ಪತ್ರವ್ಯವಹಾರದ ಕ್ರಮ, ವ್ಯವಸ್ಥೆ ಚನ್ನಾಗಿದೆ. ಇಡೀ ತಾಲೂಕಿನಲ್ಲಿ ಸಮರ್ಥರಾದ ಓಲೇಕಾರ ದಳವನ್ನು ಏರ್ಪಾಡು ಮಾಡಿದಾನೆ. ಇಂಥ ಪ್ರದೇಶದಲ್ಲಿ ಅದೇನು ಸಣ್ಣ ಕೆಲಸವಲ್ಲ. ಕೆಲಸ ನಡೆಯಿಸುವ ಬಗೆಯನ್ನು ನೋಡಿ ನನಗೆ ಬಹಳ ಅಚ್ಚರಿ. ದೇಶಸೇವಕನು ಪ್ರತಿಯೊಬ್ಬನೂ ತನ್ನ ಪಾಲಿನ ಕೆಲಸವನ್ನು ಸ್ವಲ್ಪವೂ ಗೊಣಗದೆ ನಗುನಗುತ್ತ ಮಾಡುತ್ತಾನೆ. ಈ ಸೇವೆಗೆ ಸಿಗುವ ಪ್ರತಿಫಲವೆಂದರೆ ಈ ಕ್ಷಣಕ್ಕೋ ಇನ್ನೊಂದು ಕ್ಷಣಕ್ಕೋ ಕಾದಿರುವ 'ವಾರಂಟು'. ಆದರೆ ಅಜಿತನ ಹತ್ತಿರ ಏನು ಜಾದುವಿದೆಯೋ ಏನೋ ಎಲ್ಲರೂ ಮಂತ್ರದ ಗೊಂಬೆಗಳಂತೆ ತಿರುಗುತ್ತಾರೆ!" ಇನ್ನೊಬ್ಬ ಸ್ವಯಂಸೇವಕನ ಮಾತು.

ಈ ಸ್ತುತಿಯಿಂದ ಅಜಿತನಿಗೆ ಸ್ವಲ್ಪ ಸಂಕೋಚವೆನಿಸಿದಂತಾಯಿತು. ಮಾತಿನ ದಿಕ್ಕು ಬದಲಿಸುವದಕ್ಕಾಗಿ ಅವನು ನಕ್ಕು ನುಡಿದ: "ಅವರಂತೂ ನನ್ನ ಗುರುಗಳೇ ಇದ್ದಾರೆ. ಅವರಿಗೆ ಗೊತ್ತಿಲ್ಲವೊ? ಅವರು ನನಗಿಂತ ಹಿರಿಯರೋ ಕಿರಿಯರೋ ?

"ಹಿರಿಯನಿದ್ದರೂ ಕೆಲಸದಲ್ಲಿ ಕೇಳಬೇಡಿ" ಎಂದರು ಮಾಸ್ತರರು.

"ಎಲ್ಲರೂ ಇದೇ ಕೃತಿ ಮಾಡಬೇಕಿಲ್ಲ ಮಾಸ್ತರರೆ, ಕಾರ್ಯಕರ್ತರಿಗೆ ಬೆಂಗಾವಲಾಗಿ ನಿಂತರೆ ಎಷ್ಟೋ ಕೆಲಸ ಮಾಡಿದಂತಾಯಿತು. ಎಲ್ಲರಿಗೂ ಎಲ್ಲ ಕೆಲಸ ಯಾವಾಗಲೂ ಸಾಧ್ಯವಿಲ್ಲ."

"ಅಂಥ ಕೆಲಸವನ್ನಾದರೂ ಮಾಡಬೇಕಲ್ಲ? ಮುಂದಾದವರು ಕಷ್ಟ ಸಹಿಸಿಯೇ ಸಹಿಸುವರು. ಹಿಂದೆ ನಿಂತವರು ನಿಂತೇ ಬಿಡುವರು. ಹಿಂದಿನ ಸಲ ಕರಬಂಧಿಯ ಕಾಲಕ್ಕೆ ಕಾಣಲಿಲ್ಲವೆ? ನವಕರಿ ಕಳಕೊಂಡ

ವರು ಇನ್ನೂ ಅನ್ಯಾನ್ಯಗತಿಕರಾಗಿ ತಿರಗುತಲಿದ್ದಾರೆ. ಇತ್ತ ಪ್ರಪಂಚ ವನ್ನೂ ಅತ್ತ ದೇಶವನ್ನೂ ಹಿಡಿದು ಕೆಲಸ ಮಾಡುತ್ತೇನೆಂದರೆ ಹೇಗೆ ಸಾಧ್ಯ? ದೇಶಕ್ಕಾಗಿ ಸಂಪೂರ್ಣ ಆತ್ಮಾರ್ಪಣ ಬೇಕು”

ಅಜಿತನಿಗೆ ಒಣ ಚರ್ಚೆ ಬೇಕಿರಲಿಲ್ಲ. ಮುಖ್ಯ ವಿಷಯವನ್ನೇ ಹೇಳ ಬೇಕಾಗಿದ್ದಿತು

“ಆತ್ಮಾರ್ಪಣ ಮಾಡಲು ಎಲ್ಲರಿಗೂ ಸಾಧ್ಯವಿಲ್ಲ. ಆದೇ ತಮ್ಮಿಂದಾದಷ್ಟು ನೆರವಾಗಬೇಕು. ಅದಾದರೂ ಆದೀತಲ್ಲ?”

“ಅಷ್ಟೂ ಆಗದೆ?”

“ಹಾಗಾದರೆ ನೀವು ವಾರಕ್ಕೆ ಒಂದೆರಡು ಲೇಖನಗಳನ್ನು ಬರೆದು ಕೊಡಬೇಕು. ಸತ್ಯಾಗ್ರಹಸಮರಕ್ಕೆ ಶಕ್ತಿ ಪುಷ್ಟಿ ದೊರೆಯುವಂತೆ ವಿಷಯವಿರಬೇಕು. ಇಷ್ಟಾದರೆ ನನಗಿಷ್ಟು ಹೊರಗೆ ಅಡ್ಡಾಡಿ ಕೆಲಸ ಮಾಡಲು ಬಿಡುವಾಗುವುದು.”

“ಬರೆಯುವೆ. ಆದರೆ ಹೆಚ್ಚು ಪ್ರತಿಗಳನ್ನು ಮಾಡಲಾಗಲಿಕ್ಕಿಲ್ಲ.”

“ಹೆಚ್ಚು ಪ್ರತಿಯ ಅಗತ್ಯವಿಲ್ಲ. ನಾವು ನೂರಾರು ಪ್ರತಿಗಳನ್ನು ತೆಗೆಯುತ್ತೇವೆ. ಅಚ್ಚಲ್ಲ, ಕೈಯಚ್ಚಿನ ಸೈಕ್ಲೋಸ್ಟೈಲಿನ ಮೇಲೆ.”

“ಆಂ!” ಎಂದರು ಮಾಸ್ತರರು.

“ಬೆರಗಾಗುವ ಕಾರಣವಿಲ್ಲ. ನಮ್ಮ ಕಾರ್ಯಕ್ರಮದಲ್ಲಿ ಅದೊಂದು ಪ್ರಧಾನಾಂಗ. ಕಾಂಗ್ರೆಸ ಸಮಿತಿ ಅದನ್ನು ನನಗೆ ಒಪ್ಪಿಸಿದೆ. ಈ ಸುದ್ದೀ ಪತ್ರವೇ ಮುಖ್ಯ. ಇದರಲ್ಲಿಯೇ ಎಲ್ಲವೂ ಬರುವದು. ಇದು ಸರ್ವಸಂಗ್ರಹ. ಸಂಪಾದಕೀಯ, ರಾಜಕೀಯ ಲೇಖನ, ಸುದ್ದಿ ಅದರ ತುಂಬ ದಿನದಿನವೂ ಬರುತ್ತಿರುವ ಸೆರೆ, ಶಿಕ್ಷೆಗಳ ಸಂತಿಗಳೇ. ಇವಲ್ಲದೆ ಒಂದು ಮಗ್ಗಲಿಗೆ ಸ್ವಯಂಸೇವಕರಿಗೆ ಮಾರ್ಗದರ್ಶನದ ನಿಯಮಗಳು.”

ಮಾತಿನ ಮುಡಿಯೊಡನೆಯೇ ಕೈಯಚ್ಚಿನ ಒಂದು ಸೂಚೀ ಪತ್ರ—ಬುಲೆಟಿನ್—ತಂದು ತೋರಿಸಿದ ಅಜಿತ. ಮಾಸ್ತರರು ಅದನ್ನು ತಕ್ಕೊಂಡು ನೋಡತೊಡಗಿದರು. ಮುಖದ ಮೇಲೆ ಬೆರಗಿನ ಭಾವ

ಒಡಮೂಡಿತು.

"ನಾಳೆ ರಾಷ್ಟ್ರೀಯ ದಿನದ ನಿಮಿತ್ತ ನಿಮ್ಮ ಹಾಯ್‌ಸ್ಕೂಲಿಗೂ ಅಂಟಿಸಲಾಗುತ್ತಿದೆ." ಎಂದು ಒಬ್ಬರು ಹೇಳಿದರು.

"ನಮ್ಮ ಹಾಯ್‌ಸ್ಕೂಲಿಗೆ?"

"ಹೌದು; ನಿಮ್ಮ ಹಾಯ್‌ಸ್ಕೂಲಿಗೆ, ಯಾಕೆ ಹೆದರುವಿರೋ?" ಎಂದ ಅಜಿತ.

"ಇಲ್ಲ; ಬೇಕಾದಷ್ಟು ಹಚ್ಚಿರಲ್ಲ!"

"'ಹಚ್ಚಿರಲ್ಲ' ಅಲ್ಲ, ನೀವೇ ಹಚ್ಚಬೇಕು."

ಜಾಧವ ಮಾಸ್ತರರು ಸುಮ್ಮನಾದರು. ಮುಂದೆ ಮಾತನಾಡಲಿಲ್ಲ. ಸಾಲೆಯಲ್ಲಿ ಕುಳಿತು ವಿದ್ಯಾರ್ಥಿಗಳಲ್ಲಿ ಮಾತಾಡಿ ಸ್ಫೂರ್ತಿಯನ್ನು ಹುಟ್ಟಿಸಬಹುದು. ಪ್ರಾಧ್ಯಾಪಕರ ಮುಂದೆ ಚಾಣಕ್ಯನೀತಿಯನ್ನು ಉಪಯೋಗಿಸಲು ಸಮರ್ಥರು. ಕ್ರಾಂತಿಕಾರಕ ನಾಟಕ ಸಂಭಾಷಣೆಗಳನ್ನು ಬರೆದು ಕೊಡಬಲ್ಲರು. ಆದರೆ ಇಂತಹ ಕೆಲಸ ಮಾಡಿ ಅವರಿಗೆ ಗೊತ್ತಿರಲಿಲ್ಲ. ಇಲ್ಲಿಯ ವರೆಗೆ ಅಜಿತನಿಗೆ ಪ್ರೋತ್ಸಾಹಿಸುತ್ತ ಬಂದಿದ್ದರಾದರೂ ಅವನು ಈ ಮೆಟ್ಟಲಿನವನೆಂದು ಅವರೆಂದೂ ಬಗೆದಿರಲಿಲ್ಲ. ಪೋಲೀಸರಿಗೆ ಕೈಕೊಟ್ಟು ಹೋಗೆಂದಿಷ್ಟೇ ಸೂಚಿಸಿದ್ದರವರು. ಮುಂದಿನ ಈ ಕಾರ್ಯಕ್ರಮದ ಕಲ್ಪನೆಯೇ ಅವರಿಗಿರಲಿಲ್ಲ. ಮಧ್ಯಾಹ್ನದಲ್ಲಿ ಅಜಿತನ ಕಾಗದ ಬಂದಾಗ ಕಕ್ಕನೊಡನೆ ಮಧ್ಯಸ್ತಿಕೆ ಮಾಡಲಿಕ್ಕೆಂದೇ ಕರೆಯಿಸಿರಬೇಕೆಂದು ಅವರ ಕಲ್ಪನೆಯಾಗಿದ್ದಿತು. ಮನಸ್ಸಿನಲ್ಲಿ ಗೌಡರ ರಾಯಭಾರಿಯಾಗಿಯೇ ಇಲ್ಲಿಗೆ ಆಗಮಿಸಿದ್ದರವರು. ಇಲ್ಲಿ ಬಂದ ಮೇಲೆ ಕಾಂಗ್ರೆಸಿನ ಚಟುವಟಿಕೆಗಳನ್ನು ಕಂಡು ಅವರಿಗೂ ಉತ್ಸಾಹ ಬಂತು. ಅದನ್ನು ನೋಡಿ ಅಜಿತ ನುಡಿದ.

"ಆ ಕೆಲಸ ನೀವೇನು ಮಾಡಬೇಕಿಲ್ಲ; ಅದಕ್ಕೆ ನಮ್ಮಲ್ಲಿ ಬೇಕಾದಷ್ಟು ಜನ ಇದೆ ನಡುಹಗಲು ಹಳ್ಳಿಯಲ್ಲಿ ನಿಂತು, ಜನಸಮೂಹದಲ್ಲಿ ಓದಿ ಹೇಳಿಯೂ ಬರುವವರಿದ್ದಾರೆ."

"ನಮ್ಮ ಪತ್ರಿಕೆಗಾಗಿ ಜನ ಆತುರಗೊಂಡಿರುವದು. ನಾವು ಓದಿ

ಹೇಳದಿದ್ದರೆ ಅವರಿಗೆ ಕಳವಳ" ಎಂದು ಇನ್ನೊಬ್ಬ ಕಾರ್ಯಕರ್ತ ತನ್ನ ಅನುಭವ ಹೇಳಿದ.

"ನಮ್ಮ ಚಾವಡಿಗೆ ಬರುವ ಸರಕಾರೀ ಪತ್ರಿಕೆಗಳನ್ನು ಓದಿ ತೋರಿಸಲು ಕರೆಯಿಸಿದರೂ ಜನರು ಬರುವದಿಲ್ಲ." ಅಲ್ಲಿಯ ಗೌಡರು ಹೇಳಿದರು.

"ಬಡಿದು ಭಕ್ತಿ ಕಲಿಸಿದರೆ ಬಂದೀತೆ?" ಜಾಧವ ಮಾಸ್ತರರು ಶಾಸ್ತ್ರ ಸಾರಿದರು.

ಆ ಮಾತು, ಆ ಸ್ಥಳ, ಆ ಸಂದರ್ಭ, ಆ ಉತ್ಸಾಹ! ಯಾರಿಗೂ ಹೊತ್ತೇ ಗೊತ್ತಾಗಲಿಲ್ಲ. ನಡುರಾತ್ರಿ ದಾಟಿ ಹೋಗಿತ್ತಾಗಲೇ. ಎಲ್ಲಿ ನೋಡಿದರೂ ಹೋರಾಟವೆ. ಒಳಗೂ ಹೋರಾಟ, ಹೊರಗೂ ಹೋರಾಟ. ಅನುಕೂಲ ಪ್ರೇರಣೆ, ಪ್ರತಿಕೂಲ ಪ್ರೇರಣೆಗಳು, ಅಂತಃಕರಣವನ್ನೇ ಕಲಮಲಗೊಳಿಸುತ್ತಲಿವೆ, ಜಾಧವ ಮಾಸ್ತರರಲ್ಲಿ.

ಅಷ್ಟರಲ್ಲಿ ಯಾವನೋ ಒಬ್ಬ ಮನುಷ್ಯನ ಹೆಜ್ಜೆಯ ಸಪ್ಪಳ ಕೇಳ ಬರಹತ್ತಿತು. ಎಲ್ಲರೂ ಸ್ವಲ್ಪ ಶಾಂತರಾದರು. ದೀಪವನ್ನೂ ಕೊಂಚ ಕೆಳಗಿಳಿಸಲಾಯಿತು. ಬರುವವನ ಹೆಜ್ಜೆಯ ಸಪ್ಪಳವು ಅವಸರದ ನಡಿಗೆಯ ಪ್ರದರ್ಶಕವಾಗಿದ್ದಿತು. ನೋಡುನೋಡುವಷ್ಟರಲ್ಲಿ ಆ ವ್ಯಕ್ತಿಯು ಕಾರ್ಯಾಲಯದ ಎದುರಿಗೆ ಬಂದ. ಮೈಮೇಲೆ ಹರಕು ಅರಿವೆ. ಹಳ್ಳಿಯ ಸಾಮಾನ್ಯ ಮನುಷ್ಯನಾತ. ತೇಕುತಲಿದ್ದ. ಅವನ ಬಾಯಿಂದ ಕೂಡಲೆ ಮಾತು ಹೊರಡುವಂತಿಲ್ಲವಾಗಿತ್ತಾದರೂ ವಿಲಂಬ ಮಾಡದೆ ನುಡಿದ.

"ಪೋಲೀಸರು!"

"ಎಲ್ಲಿ?" ಎದ್ದು ಹೊರಗೆ ಬರುತ್ತ ಅಜಿತ ಕೇಳಿದ.

"ಹಾದಿಯ ಮೇಲೆ ಮೋಟಾರು ನಿಂತಿದೆ. ದೀಪವಿಲ್ಲ, ಹಾಗೇ ಕತ್ತಲೆಯಲ್ಲಿಯೇ ಬಂತು. ಹತ್ತಾರು ಜನರು ಕೆಳಗಿಳಿದರು?"

"ನೀನು ಇಲ್ಲಿ ಬಂದ ಸುದ್ದಿ ಸಿದ್ದಾಪುರದಲ್ಲಿಯೂ ಗೊತ್ತಾದಂತಿದೆ!" ಆಗ ಜಾಧವ ಮಾಸ್ತರರ ಬಾಯಿಂದ ಹೊರಟ ಮಾತಿದು.

೨೬

"ಅಯ್ಯೋ! ಅಯ್ಯೋ! ತಾಳಲಾರೆನವ್ವ! ಈ ಎದೆ ನೋವು! ಅಯ್ಯೋ!" ಒಂದೇಸವನೆ ಹತ್ತೆಂಟು ಸಲ ಕೆಮ್ಮು ಹತ್ತಲು ಮಾತು ಅಲ್ಲಿಗೇ ನಿಂತಿತು. ಕೆಮ್ಮಿನ ಜೋರು ಕಡಿಮೆಯಾಯಿತು. ಆದರೆ ನರಳುವ ತ್ರಾಣವೂ ಮುರದೇವಿಯ ಮೈಯಲ್ಲಿ ಉಳಿದಿರಲಿಲ್ಲ. ಸುಮ್ಮನೆ ಕಣ್ಣು ಮುಚ್ಚಿ ಮಲಗಿದಳು, ನಿಶ್ಯಕ್ತಳಾಗಿ.

ನಾಲ್ಕು ಹಳ್ಳಿಗಳಿಗೆ ಹೆಸರಾಂತ ಮನೆತನ, ನಾಲ್ಕು ಜನಗಳಿಗೆ ಬುದ್ಧಿ ಹೇಳುವ ಮನೆತನ, ಅದಕ್ಕೆ ಈ ಸ್ಥಿತಿ ಬರಬೇಕಾದರೆ? ಹಿಂದೆ ಸೆರೆಮನೆಗೆ ಹೋಗಿ ಕಲಂಕ ಹತ್ತಿತು. ಈಗ ಮತ್ತೆ ಮನೆ ಮಡದಿಯರನ್ನು ಬಿಟ್ಟು ತಿರಗುವ ಕಾಲ ಬಂತು ಮೊಮ್ಮಗನಿಗೆ. ಅಲ್ಲದೆ ಮೇಲಿಂದ ಮೇಲೆ ಪೋಲೀಸರ ಶೋಧನೆ. ಸರಕಾರದ ಕರಾಳ ಶಾಸನ ಕ್ರಮದಂತೆ ವಾರ ಕ್ಕೊಂದಾವರ್ತಿಯಾದರೂ ಪೋಲೀಸರು ಗೌಡರ ಮನೆಗೆ ಬಂದು ಆಜಿ ತನ ಬಗ್ಗೆ ಕೇಳಿ ಹೋಗಬೇಕಾಗುತ್ತಿದ್ದಿತು. ಖಾಕಿ ಡ್ರೆಸನ್ನು ಕಂಡರೆ ಹುಲಿಯನ್ನು ಕಂಡಂತೆ ಮಾಡುವ ಜನತೆ. ಅದರಲ್ಲೂ ವತನದಾರ ಗೌಡರ ಮನೆ. ಅಂದ ಮೇಲೆ ಗೌಡರ ಅವಸ್ಥೆಯನ್ನು ಹೇಳತೀರದು ಮುರ ದೇವಿಯಂತೂ ಮುದುಕಿ. ಇದನ್ನೇ ಒಂದು ರೋಗವನ್ನಾಗಿಸಿಕೊಂಡು ಹಾಸಿಗೆ ಹಿಡಿದಿದ್ದಳು.

"ಅಯ್ಯೋ! ಅರಹಂತಾ! ಇಂಥಾ ವೇಳೆಯನ್ನು ಏಕೆ ತಂದೆ ಯಪ್ಪ! ಇದನ್ನೆಲ್ಲ ನೋಡೋದು ಇತ್ತೇನು ನನ್ನ ಹಣೆಬರಹದೊಳಗ! ಆಗಲೇ ಕಣ್ಣು ಮುಚ್ಚಬಾರದೇನಪ್ಪ ದೇವಾ! ಏನು ನನ್ನ ಕರ್ಮ ಇದ್ದೀತು?" ಎಂದು ಅರೆಜೀವವಾಗಿ ತಲೆ ಹಾಕುವಳು. ಆ ಚಿಂತೆ ಬಲಿತು ದಿನದಿನಕ್ಕೆ ಹೃದ್ರೋಗವಾಗಿ ಈಗ ಕೊನೆಯ ಅವಸ್ಥೆಗೇಸೇ ಇಳಿದಿದೆ. ಮೇಲಿಂದ ಮೇಲೆ ಡಾಕ್ಟರರ ಉಪಚಾರ ನಡೆಯುತ್ತಿದೆ. ಆದರೆ ಮನೋ ರೋಗಕ್ಕೆ ಮೇಲೋಪಚಾರದ ಉಪಯೋಗವೇನು!

"ಅಯ್ಯೋ! ಸರಸಾ ಒಂದು ತೊಟ್ಟು ನೀರು ಹಾಕವ್ವ, ಬಾಯಿ

ಹಣಗಿದೆ !" ಎಂದು ಹತ್ತಿರ ಕುಳಿತ ಸರಸ್ವತಿಯ ಮೇಲೆ ಕಾಯ್ದ ಕೈ ಯೊಗೆದಳು, ಮುರದೇವಿ.

ಮೊದಲೇ ಮುಪ್ಪಿನವಳು. ಈಗ ಒಂದು ತಿಂಗಳಿಂದ ಯಾವಾಗಾದರೂ ಸ್ವಲ್ಪ ಸ್ವಲ್ಪ ಗಂಜಿ ಕುಡಿಯುವಳು. ಅದೂ ನಾಲಗೆಗೆ ಕಹಿ. ಮೈ ಬರೀ ಎಲುವಿನ ಹಂದರವಾಗಿದೆ. ನೆತ್ತರವೇ ಇಲ್ಲವೇನೊ! ಒಂದು ಮಗ್ಗಲಿನಿಂದ ಇನ್ನೊಂದು ಮಗ್ಗಲಿಗೆ ಹೊರಳಲೂ ಬಲವಿಲ್ಲ. ನಿದ್ರೆಯಂತೂ ಬರುವಂತಿಲ್ಲ. ಹಗಲಿರುಳೂ ನೆರಳುವಿಕೆ; ಸೋತ ಜೀವ; ಯಾವಾಗ ಇಲ್ಲವಾಗುವದೋ ನಿಯಮವಿಲ್ಲ. ಎಲ್ಲ ಆಪ್ತರನ್ನೂ ಕರೆಯಿಸಿಕೊಂಡಿದಾಳೆ. ಮುಂಬಯಿಯಿಂದ ಇಂದಿರೆಯು ಬಂದು ಹದಿನೈದು ದಿನಗಳಿಂದ ಇಲ್ಲೇ ಇದ್ದಾಳೆ. ಅವಳನ್ನು ಕಳಿಸಲಿಕ್ಕೆಂದು ಬಂದು, ಸುಧೀರನೂ ಅಜ್ಜಿಯನ್ನು ನೋಡಿ ಹೋದ. ಈಗ ಅವನಿಗೆ ಕೆಲಸ; ಇಲ್ಲಿ ಹೆಚ್ಚು ದಿನ ನಿಲ್ಲುವಂತಿಲ್ಲ.

ಗುಣವಂತಿಯು ಈಗ ಮೂರು ನಾಲ್ಕು ದಿನಗಳ ಹಿಂದೆ ತವರು ಮನೆಯಿಂದ ಬಂದಿದ್ದಳು. ಬರುವಾಗ ತವರುಮನೆಯ ಸಂಬಂಧವನ್ನೇ ಕಡಿದುಕೊಂಡು ಬಂದಂತಾಗಿದ್ದಿತು. ತಂದೆಯಂತೂ ಈ ಮೊದಲೇ ತೀರಿಹೋಗಿದ್ದ. ಅಣ್ಣನೊಬ್ಬ ಆವಳವನಾದರೆ ಅಣ್ಣನ ಹೆಂಡಿರು ಯಾರವರು? ಅಲ್ಲಿ ಅಜಿತನನ್ನು ಕಾಣಲು ಬಯಸಿದಳು. ಅವಳಿಗೆ ಪತಿಯ ಇಂಥ ಕಾರ್ಯ ಇನ್ನು ಸಾಕಾಗಿತ್ತು. ಮನೆಯವರೆಲ್ಲರ ನಿಂದೆ ಅಪಮಾನಗಳಿಂದ ಅವಳ ತಲೆ ತುಂಬಿ ಹೋಗಿತ್ತು. ಅಜಿತನ ರಾಜಕೀಯ ಜೀವನದ ಕಾವು ಗುಣವಂತಿಯ ದೇಹದ ಮೇಲೂ ಕೆಲಮಟ್ಟಿಗೆ ಪರಿಣಾಮ ಮಾಡದೆ ಬಿಟ್ಟಿರಲಿಲ್ಲ. ಆದ್ದರಿಂದ ಅಜಿತನನ್ನು ಕಾರ್ಯದಿಂದ ಪರಾವೃತ್ತನನ್ನಾಗಿ ಮಾಡಬೇಕೆಂದೇ ನಿಶ್ಚಯಿಸಿ ತವರುಮನೆಗೆ ಹೋಗಿದ್ದಳು.

ಎರಡು ದಿನಗಳಲ್ಲಿ ಅಲ್ಲಿ ಅಜಿತನ ಭೆಟ್ಟಿಯಾಯಿತು. ಅವನನ್ನು ಕಂಡೊಡನೆಯೇ "ನಿನ್ನನ್ನು ಬಿಟ್ಟು ಬದುಕುವದು ಕೂಡ ನನಗೆ ಸಾಧ್ಯವಿಲ್ಲ. ಹಾವಿನ ಹುತ್ತದಲ್ಲಿ ಇಲಿಮರಿ ಬದುಕುವಂತೆ ನನಗೆ ಆ ಮನೆಯಲ್ಲಿ ಜೀವಿಸಲೂ ಶಕ್ಯವಿಲ್ಲ. ನಿನ್ನ ದೇಶಸೇವೆ ನನ್ನನ್ನು ನುಂಗಲು

ಬಂದ ಕ್ರೂರ ರಾಕ್ಷಸನಂತೆ ತೋರುವುದು" ಎಂದಳು

ಸ್ವಾತಂತ್ರ್ಯದ ಇಚ್ಛೆಯಿಂದ ಅಜಿತನ ಮನಸ್ಸು ಬಧಿರವಾಯಿತು. ಅಂತಃಕರಣ ಕಲ್ಲಾಗಿತ್ತು. ಅಂಗೀಕೃತ ಕಾರ್ಯ ನಡೆಯಬೇಕೆಂಬ ದೃಷ್ಟಿಯಿಂದ ಪ್ರಾಣಕ್ಕಿಂತ ಪ್ರಿಯಳಾದ ಗುಣವಂತಿಯ ಪರಿವೆ ಅವನಿಗಿರಲಿಲ್ಲ. ಯಾವುದೋ ಒಂದು ವಿಚಿತ್ರ ಮತ್ತು ಭಯಾನಕ ಕಾಠಿಣ್ಯವು ಅವನ ಮೈಯಲ್ಲಿ ಸೇರಿಕೊಂಡಹಾಗಿತ್ತು. ಪ್ರಾಪಂಚಿಕ ಪ್ರೇಮ ಸೌಂದರ್ಯ ಕೋಮಲತ್ವಗಳನ್ನು ಅವನು ಕಾಲಿನಿಂದ ತುಳಿದು ತಿಕ್ಕಲು ಸಿದ್ಧನಾಗಿ ನಿಂತಿದ್ದ. ಅಂತೇ ಅವನು ಕಠೋರವಾಗಿ ಗುಣವಂತಿಗೆ ಮಾತನಾಡತೊಡಗಿದ. ಕೂಡಲೆ ಅವಳು ಆವೇಶದಿಂದ ಹೇಳಿದಳು:

"ದೇಶದ ಭಾರವನ್ನು ನೀವೊಬ್ಬರೇ ಹೊತ್ತು ನಿಂತಿಲ್ಲ."

ಇಂಥ ವಾದವಿವಾದ ಅಜಿತನಿಗೆ ಬೇಡಾಗಿತ್ತು. ಈಗ ಅವನು ಮಹತ್ವದ ಒಂದು ಕೆಲಸಕ್ಕೆ ಹೋಗಬೇಕಾಗಿದ್ದಿತು. ಆದರಿಂದ ಅವಳ ಮಾತಿನ ಕಡೆಗೆ ಲಕ್ಷ್ಯ ಕೊಡದೆ ಹೊರಡಲು ಸಿದ್ಧನಾಗಿ ನಿಂತ. ಆಗ ಗುಣವಂತಿಯು ಮಾತನಾಡದೆ ಸನಿಯದಲ್ಲಿ ಬಂದು ಕೊರಳಿಗೆ ಕೈಮಾಲೆ ಹಾಕಿದಳು. ಅದನ್ನೆಲ್ಲ ನೋಡಲು ಅಜಿತನ ಮನಸ್ಸೆಲ್ಲಿತ್ತು?

ಅವನೆಂದ: "ಕ್ಷಮಿಸು ಈಗ ನನ್ನನ್ನು ಬಿಡು."

"ಏಕೆ? ಹೀಗೇಕೆ ಹೇಳುವೆ?"

"ನನಗೆ ಗೊತ್ತಿಲ್ಲ, ಸಮಯವೂ ಇಲ್ಲ. ಸುಮ್ಮನೆ ತ್ರಾಸು ಕೊಡಬೇಡ."

ಗುಣವಂತಿಯು ಉಸುರುಗರೆದಳು. ಕೇಳದವನಂತೆ ಅಜಿತ ನಟಿಸಿದ. ಕೊರಳ ಮಾಲೆ ಕಳಚಿತು. ದೊಪ್ಪನೆ ನೆಲಕ್ಕೆ ಬಿದ್ದಳು.

"ಸ್ವಲ್ಪ ಕೇಳಿಕೊಳ್ಳಿರಿ, ನಾನು ನಿಮಗೆ ಬಹಳ ಹೇಳಬೇಕಾಗಿದೆ."

"ಹೇಳು"

"ನೀನೇ ಹೇಳು. ಹೆಂಡತಿಯು ಪಾತಿವ್ರತ್ಯದಿಂದ ಬದುಬೇಕೆಂದು ನೀನು ಬಯಸುವದಿಲ್ಲವೆ?"

ಅಜಿತ ಗೂಟದಿಂದ ಕೈಚೀಲ ತೆಕ್ಕೊಳ್ಳುತ್ತ ನುಡಿದ. "ಹಾಗೆಲ್ಲ ಹೇಳಬೇಡ. ದೇಶಕ್ಕಾಗಿ ನಿನ್ನಲ್ಲಿ ಸಂಯಮ ಬೇಕು."

ಆಕೆ ಒಮ್ಮೆಲೇ ಮುಂಗೋಪದಿಂದ ಉದ್ಗರಿಸಿದಳು. "ಸಂಯಮ! ನಾನು ಅದರ ವಿಷಯಕ್ಕೆ ಹೇಳುತ್ತಿಲ್ಲ."

ಆಕೆಯ ಕಣ್ಣುಗಳು ನೀರಿನಿಂದ ತುಂಬಿದ್ದುವು. ಆದರೆ ಅವು ಹೊರ ಬಿದ್ದು ಪತಿಗೆ ಕಾಣಬೇಕೆಂಬ ಇಚ್ಛೆಯು ಅವಳಿಗಿರಲಿಲ್ಲವೇನೋ! ಕೆಳದುಟಿ ಕಚ್ಚಿ ಅಶ್ರುಗಳನ್ನು ಒಳ ಒತ್ತುತ್ತಿದ್ದಳು.

ಹೊರಡಲು ಸಿದ್ಧನಾದ ಅಜಿತನು ಅಲ್ಲೇ ಗೋಡೆಗೆ ಇಟ್ಟ ಗಾದಿಯ ಸುರಳಿಯ ಮೇಲೆ ಹೋಗಿ ಕುಳಿತ. ಜಲ್ಲಾಪಿಲ್ಲಿಯಾದ ಕ್ರಾಪಿನ ಕೂದಲುಗಳನ್ನು ತೀಡುತ್ತ ಗುಣವಂತಿಯ ಕಡೆಗೆ ಮತ್ತೊಮ್ಮೆ ನೋಡಿದ. ಅವನ ಮನಸ್ಸು ಅತ್ಯಂತ ಕಳವಳಗೊಂಡಿತು. ಕಂಬನಿಯಿಂದ ತುಂಬಿ ಉಬ್ಬಿದ ಅವಳ ಕಣ್ಣು, ಅತ್ತು ಅತ್ತು ಕೆಂಪಾದ ಅವಳ ಮುಖ, ಒತ್ತರಿಸಿ ಬರುವ ದುಃಖವನ್ನು ತಡೆಹಿಡಿದುದರಿಂದ ಉಬ್ಬಿದ ಕಪೋಲಗಳು ಅವನಲ್ಲಿ ಕರುಣೆಯನ್ನು ಹುಟ್ಟಿಸಿದುವು. 'ಏನಿವಳು ಇಷ್ಟು ಶೋಕಿಸುವಳಲ್ಲ!' ಎಂದುಕೊಂಡ. ಅವಳು ಪಡುತ್ತಿರುವ ಕಷ್ಟದ ಅರಿವು ಅವನಿಗೆ ಆದಂತಾಯಿತು. ಅವನ ಮನಸ್ಸು ಚಲಿಸಿತು. ದೊಡ್ಡ ಬಿರುಗಾಳಿಗೆ ಸಿಕ್ಕ ಹುಣಸೆ ಮರದಂತೆ ತೂಗಾಡಿತು.

"ಒಬ್ಬನೇ ಮಗನ ಮೇಲೆ ಕೈಯೂರಿ ತನ್ನ ವೈಧವ್ಯ ದುಃಖವನ್ನೆಲ್ಲ ಮರೆತು ಬಾಳುವೆ ಸಾಗಿಸುತ್ತಿರುವ ತಾಯಿಗೆ ನಾನು ಯಾವ ಸುಖವನ್ನು ಮಾಡಿದೆ? ಕೈ ಹಿಡಿದ ಹೆಂಡತಿ ಇಷ್ಟು ಕಳವಳ ಪಡುತ್ತಿರುವಾಗ ಹೆತ್ತ ತಾಯಿಯ ಕರುಳು ಎಷ್ಟು ಮರುಗಿದ್ದೀತು? ಕೊರಗಿದ್ದೀತು? ಇವರಿಗೆ ಇಷ್ಟು ಕಷ್ಟ ಕೊಟ್ಟು ನಾನು ಸಾಧಿಸಿದ್ದಾದರೂ ಏನು?"

ಈ ಪ್ರಶ್ನೆ ಬಹಳ ವೇಳೆ ಅವನ ಮನಸ್ಸಿನಲ್ಲಿ ನಿಲ್ಲಲಿಲ್ಲ. ಅವನು ಮಾಡಿದ—ಮಾಡಬೇಕಾದ ಕೆಲಸಗಳೆಲ್ಲ ಅವನ ಕಣ್ಣೆದುರಿಗೆ ಬಂದು ನಿಂತುವು. ದೇಶದ ಸ್ವಾತಂತ್ರ್ಯ, ಸುಖಗಳು — ಕೈಮಾಡಿ ಕರೆಯ ತೊಡಗಿದುವು.

"ಮೊಮ್ಮಗ ಮೊಮ್ಮಗ ಎಂದು ಹಲಬುವ ಅಜ್ಜಿಯನ್ನು ಕಾಣುವ ಮನಸ್ಸಾಗದೆ?"

ಗುಣವಂತಿಯ ಈ ಪ್ರಶ್ನೆ ಅವನ ವಿಚಾರಪ್ರವಾಹಕ್ಕೆ ಒಡ್ಡಾಗಿ

ನಿಂತಿತು. ಹೊರಳಿ ಹರಿಯತೊಡಗಿತು. "ಅಜ್ಜಿ! ಮುರದೇವಿ ಅಜ್ಜಿ! ನನ್ನ ಮೇಲೆ ಎಷ್ಟು ಪ್ರೇಮ! ನನಗಾಗಿ ಎಷ್ಟು ಮನಸ್ಸು ಹರಿಯುವುದು ಅವಳದು! ನನ್ನಿಂದಲ್ಲವೇ ಅವಳು ಇಷ್ಟು ಬೇಗ ಹಾಸಿಗೆ ಹಿಡಿದುದು! ಒಂದೇಸವನೆ ಹಾಸಿಗೆಯಲ್ಲಿ 'ಅಜಿತ! ಅಜಿತ! ಅಜಿತಾ!' ಎಂದು ಹಲಬುವಳಂತೆ. ಅವಳನ್ನು ಹೇಗೆ ಸಮಾಧಾನ ಮಾಡಲಿ? ಅವಳು ಬೆಂಕಿಯಲ್ಲಿ ಒಗೆದ ಕೀಡಿಯಂತೆ ತಳಮಳಿಸುತ್ತಿದ್ದರೆ ನನ್ನ ದೇಶಸೇವೆ ಸಾರ್ಥಕವಾದೀತೆ? ಇಲ್ಲ. ಎಂದೂ ಇಲ್ಲ. ಅವಳನ್ನು ಕಂಡು ಸಮಾಧಾನ ಪಡಿಸುವುದು ನನ್ನ ಕರ್ತವ್ಯ. ಆದರೆ ಅದು ಹೇಗೆ ಕಾಣಲಿ?"

ಒಂದು ಕ್ಷಣ ಸುಂಟರಗಾಳಿಯಲ್ಲಿ ಸಿಕ್ಕ ರವದೆಯಂತಾಯಿತು, ಅವನ ಮನಸ್ಸು. ಎಲ್ಲೆಲ್ಲಿಯೋ ಹಾರಾಡಿತು. ನೆಲೆಗಾಣದೆ ತಿರುಗಿತು. ಆಗಲೇ ಅಜ್ಜಿಯನ್ನು ಕಾಣಲೇಬೇಕು ಎಂದು ಹೃದಯ ಹಂಬಲಿಸಿತು.

"ಅಜ್ಜಿಯನ್ನು ಕಾಣಲು ಬರುವೆ!"

"ಆಂ!" ಗುಣವಂತಿಯ ಕಣ್ಣುಗಳು ಅರಳಿದುವು. ಮುಖದಲ್ಲಿ ಒಂದು ಸಂತಸದ ರೇಖೆ ಮೂಡಿತು. ಅಜಿತನ ಹತ್ತಿರ ಬಂದು ಕುಳಿತು, ಅವನ ಕೈಯನ್ನು ಹಿಡಿದು "ಬರುವಿರಾ? ನಿಜವಾಗಿಯೂ ಬರುವಿರಾ! ಆಯಿಯನ್ನು ಕಾಣಲು ಬರುವಿರಾ? ಊರಿಗೆ ಬರುವಿರಾ? ಮನೆಗೆ—ನಮ್ಮ ಮನೆಗೆ—ಬರುವಿರಾ?" ಹರ್ಷದುನ್ಮಾದದಲ್ಲಿ ಹುಚ್ಚಿಯಂತೆ ನುಡಿದಳು ಗುಣವಂತಿ.

"ಬರಬೇಕೆಂದಿರುವೆ."

"ಹೇಗೆ ಬರುವಿರಿ? ಪೋಲೀಸರು ಹಿಡಿಯಲಿಕ್ಕಿಲ್ಲ?"

ಅಜಿತನ ತೂಗಾಟದ ಧ್ವನಿಯನ್ನು ಕಂಡು ಕೇಳಿದಳು. ಅಜಿತ ಏನೂ ಹೇಳದಾದ. ಒಮ್ಮೆಲೇ ಅಜ್ಜಿಯನ್ನು ಕಾಣಬೇಕೆಂಬ ಹಂಬಲ ವೇನೋ ಆಯಿತು. ನುಡಿದುಬಿಟ್ಟ. ಆದರೆ ಈಗ ತಿರುಗಿ ವಿಚಾರಕ್ಕೆ ಬೀಳಬೇಕಾಯಿತು.

ಇದೇ ವಿಚಾರ ಮಾಡುತ್ತ ಕುಳಿತುಕೊಳ್ಳಲು ಅವನಿಗೆ ಸಮಯವೂ ಇರಲಿಲ್ಲ. ಒಂದು ಮುಖ್ಯ ಕೆಲಸಕ್ಕಾಗಿ ಕೂಡಲೇ ಹೊರಡಬೇಕಾಗಿದ್ದಿತು. ಇಂಥ ಸ್ಥಳದಲ್ಲಿ ಹೆಚ್ಚು ವೇಳೆ ನಿಂತರೂ ಘಾತುಕ. ಇಲ್ಲಿಂದ ಹೊರಗೆ ಯಾವಾಗ ಹೊರಟೇನೋ ಎಂದು ಒಂದು ಕ್ಷಣ ಅನಿಸಿತು.

ಆದರೆ ಮಾಡುವನೇನು? ಹೆಂಡತಿಯ ಈ ಸ್ಥಿತಿ ಮನೆಯೊಳಗಿನ ಜನರ ಈ ಅವಸ್ಥೆಗಳೆಲ್ಲ ಅವನನ್ನು ತೂಗಾಟದಲ್ಲಿ ಕೆಡವಿದ್ದುವು. ಮರಣೋನ್ಮುಖಳಾಗಿ ತನ್ನನ್ನು ಕಾಣಬೇಕೆಂದು ಹಂಬಲಿಸುತ್ತಿರುವ ಅಜ್ಜಿಯನ್ನು ಕಾಣಬೇಕೆಂಬ ಹಂಬಲ ಒತ್ತಟ್ಟಿಗೆ ಸೆಳೆಯುವುದು. ಕೆಲಸಗಾರರಿಗೆ ಭೆಟ್ಟಿಯಾಗಲಿಕ್ಕೆ ವೇಳೆ ಸ್ಥಳಗಳನ್ನು ಸೂಚಿಸಿ ಬಂದಿರುವೆನಲ್ಲ, ಎಂಬ ನೆನಪು ಇನ್ನೊಂದೆಡೆಗೆ ಸೆಳೆಯುವದು. ನನಗಾಗಿ ಹೀಗೆ ಶೋಕಿಸಿ ಶೋಕಿಸಿ ಸವೆದು ಸಣ್ಣಾಗುತ್ತಿರುವ, ಸುಟ್ಟು ಸುಣ್ಣಾಗುತ್ತಿರುವ ಹೆಂಡತಿಗೆ ಯಾವ ಸಮಾಧಾನ ಹೇಳುವಿ? ಎಂದು ಇನ್ನೊಂದು ಪ್ರಶ್ನೆ ನಡುವೆ ಬಂದು ತಡೆಯುವುದು. ಆಗ "ಈಗ ಇಲ್ಲಿ ಏತಕ್ಕೆ ಬಂದೆ?" ಎಂದು ತನ್ನ ಮನಸ್ಸಿಗೆ ತಾನೇ ಕೇಳಿಕೊಳ್ಳುವನು.

"ಮನೆಯವರಿಗಾಗಿ ನನ್ನ ಧ್ಯೇಯವನ್ನು ಬಲಿ ಕೊಡಲೇ?"

ಅಜಿತ ಒಂದು ಕ್ಷಣ ಯೋಚಿಸಿದ. ಮನಸ್ಸು ಒಡೆದು ಪುಡಿಪುಡಿಯಾಗುತ್ತಿರುವಾಗ ಇಲ್ಲಿ ಇದ್ದೇನು ಫಲ? ಹೆಂಡತಿಯ ಮೇಲಿನ ಕನಿಕರ ದೇಶಸೇವೆಗಳಲ್ಲಿ, ದೇಶಸೇವೆಯತ್ತ ಮನಸ್ಸು ಹೆಚ್ಚು ಒಲಿಯುವಂತೆ ತೋರಹತ್ತಿತು. ಭಾವ ಬುದ್ಧಿಗಳ ಹೋರಾಟದಲ್ಲಿ ಬುದ್ಧಿಗೇ ವಿಜಯ ಸಿಗುವ ಲಕ್ಷಣ ತೋರತೊಡಗಿತು. ನಿರಾಶೆಯ ಕತ್ತಲೆ ಆವರಿಸಿದ ವಾತಾವರಣದಲ್ಲಿ ಆಶೆಯ ಕಿರಣ ಕಾಣುತ್ತಿತ್ತು, ಮೋಹದ ಮಂಜು ಅಳಿಯುತ್ತಿತ್ತು.

"ನನ್ನಿಂದ ನಿನಗೆ ಇಷ್ಟು ದುಃಖವಾಗುವದು ನೋಡಿ ನನಗೆ ಕೆಡಕೆನಿಸುವದು. ಏನು ಮಾಡಲಿ? ನಿನಗಿಂತ ದೇಶಸೇವೆ ನನಗೆ ಹೆಚ್ಚೆಂಬುದನ್ನು ನೀನು ತಿಳಿಯದಾಗಿರುವೆ."

ಅಜಿತ ಹೋದ ಒಂದೆರಡು ತಾಸಿನಲ್ಲಿಯೇ ಹೊಸ ಹಳ್ಳಿಯನ್ನು ಪೋಲೀಸರು ಮುತ್ತಿದರು. ಗುಣವಂತಿಯ ಸಂಪರ್ಕದಿಂದ ಅವಳ ತವರುಮನೆಯವರಿಗೆಲ್ಲ ಸಂಕಟವೊದಗಿತು. ಅದರಿಂದ ಅವಳಣ್ಣ ಸಿಟ್ಟಿಗೆದ್ದೇ ಅವಳನ್ನು ಸಿದ್ದಾಪುರಕ್ಕೆ ಕಳಿಸಿಬಿಟ್ಟಿದ್ದ. ಮುರದೇವಿಯನ್ನು ನೋಡಿ ಹೋಗಲಿಕ್ಕೂ ಅವನಿಗೆ ಮನಸ್ಸಿರಲಿಲ್ಲ.

ಮುರದೇವಿಯು ಹಾಸಿಗೆ ಹಿಡಿದಾಗಿನಿಂದಲೂ ವಾಡೆಯೊಳಗಿನ

ಜಿನಮಂದಿರದಿಂದ ದೇವರನ್ನು ತಂದು ದಿನಾಲು ಮನೆಯಲ್ಲಿಯೇ ಪೂಜೆ ಮಾಡುತ್ತಿದ್ದರು. ಅದೂ ಅವಳ ಎದುರಿಗೆಯೇನೇ ನಡೆಯಬೇಕು. ಅವಳು ಮಲಗಿದಲ್ಲಿಯೇ ನೋಡುವಳು. ಕೈಮುಗಿಯುವ ತ್ರಾಣ ಇರುವ ವರೆಗೆ ಕೈಮುಗಿಯುತ್ತಿದ್ದಳು. ಈಗ ಮಲಗಿದಲ್ಲಿಯೇ ತಲೆ ಬಾಗಿಸುವಳು. ಪೂಜೆಯ ಕಾಲಕ್ಕೆ ಮನೆಯವರೆಲ್ಲರೂ ಕುಳಿತಿರುತ್ತಿದ್ದರು. ಆಗ ಒಂದು ತರದ ಗಂಭೀರ ವಾತಾವರಣ ಹಬ್ಬುವುದು. ಗೌಡರ ಸಣ್ಣ ಮಗ ಕೈತಾಳ ಬಾರಿಸುವವ. ರಾವಸಾಹೇಬನು ಬಂಗಾರದ ಲಾಕೆಟ್ಟೊಂದನ್ನು ತೂಗಾಡಿಸುತ್ತ ಗೋಣು ಹಾಕಿ ಜಾಗಟೆ ಬಡಿಯುವನು. ವಿಜಯನು ದೇವರಿಗೆ ಕೈಮುಗಿದು, 'ಜಯ ಜಯ' ಎಂದು ಕೇಕೆ ಹಾಕುವನು. ಆಗಿನ ಅವನ ಆ ಆನಂದವು ಜೇವಿನಲ್ಲಿ ಜೆಲ್ಲ ಜೆರಸಿದಂತೆ ಆಗುವದು. ಸರಸ್ವತಿಯು ನಿಂತಲ್ಲಿಯೇ ನಿಂತು ಮೈಮರೆತು ಪೂಜೆ ನೋಡುವಳು. ಒಮ್ಮೆ ಮೊಮ್ಮಗನ ಕಡೆಗೆ ದೃಷ್ಟಿ, ಇನ್ನೊಮ್ಮೆ ಅತ್ತೆಯ ಕಡೆಗೆ ದೃಷ್ಟಿ; ಒಂದು ಬೆಳೆಯುವ ಜೀವ, ಇನ್ನೊಂದು ಅಳಿಯುವ ಜೀವ. ಸಂಸಾರ ನಿರರ್ಥಕವೆನಿಸುವುದವಳಿಗೆ. ಹಾಗೆಯೇ ಅಜಿತನ ನೆನಪೂ ಸುಳಿಯುವದು. ಮಗನಿಲ್ಲ. ಅವನು ಮಾಡಿದ ಕರ್ಮ, ಎಂದುಕೊಳ್ಳುವಳು ಆದರೆ ಸಾಯುವ ಕಾಲಕ್ಕೆ ಅತ್ತೆಯ ಮನಸ್ಸಿಗೆ ನೋವು ಉಂಟಾಯಿತಲ್ಲ! ಸಾವೇನು ಯಾರಿಗೂ ತಪ್ಪಿಲ್ಲ. ಆದರೂ ಊರ ಜನವೆಲ್ಲ ನನ್ನ ಮಗನಿಂದಲೇ ಹೀಗಾಯಿತೆಂದು ಹಳಿಯುವರಲ್ಲ, ಎಂದು ಮರುಗುವಳು. ಹಾಗೆಯೇ ಕಣ್ಣೀರು ದಳದಳ ಇಳಿಯುವವು. ಎಲ್ಲರಿಗೂ ದೇವನ ಕಡೆಗೆ ಲಕ್ಷ್ಯ. ಇವಳ ಕಡೆಗೆ ಯಾರು ನೋಡುವರು ?

ಇಂದೇನೋ ಬೇಗನೆ ಪೂಜೆಗೆ ಆರಂಭಿಸಿದ್ದಾರೆ. ಮುರದೇವಿಗೆ ಬೇನೆ ಹೆಚ್ಚಾಗಿದೆ. ಬಿಸಿಲು ಬೆಳೆದಂತೆ ಆಯಾಸ ಹೆಚ್ಚುವುದು. ಮೈಮೇಲೆ ಎಚ್ಚರುಳಿಯುವದಿಲ್ಲ. ತಿಳಿವಿರುವಾಗಲೇ ಇದೊಂದು ಪೂಜೆಯನ್ನು ನೋಡಲಿ, ಸದ್ಗತಿಗೆ ಹೋಗಲಿ ಎಂದು ಗೌಡರ ಆಶೆ. ಅವರೂ ಚಾವಡಿಯ ಕೆಲಸವನ್ನು ಬಿಟ್ಟು ಮನೆಯಲ್ಲಿಯೇ ಇದ್ದಾರೆ. ಮುಖ ಬಾಡಿದ ಹೀರೇಕಾಯಿಯಂತಾಗಿದೆ. ತಾಯಿಗಿಂತ ಹೆಚ್ಚಿನ ಬಂಧುವಿಲ್ಲ. ಅವಳ ಅಕ್ಕರೆಗೆ ಅಳತೆಯಿಲ್ಲ. ಇಂಥ ಮೂರ್ತಿಯೊಂದು ಇಂದೋ ನಾಳೆಯೋ

ಕಣ್ಮರೆಯಾಗಲಿದೆ. ಏನು ಪ್ರಯತ್ನ ಮಾಡಿದರೂ ಉಳಿಯುವಂತಿಲ್ಲ. ನಾವೂ ಎಂದಾದರೂ ಒಂದು ದಿನ ಅವಳ ಹಾದಿಯನ್ನೇ ಹಿಡಿಯುವುದು. ಆದರೆ ತಾಯಿಗೆ ಶಾಂತತೆಯಿಂದ ಸಾವು ಬರಲಿಲ್ಲ. ಕಿವಿಯಿಂದ ಏನೆಲ್ಲ ವನ್ನು ಕೇಳಬಾರದಿತ್ತೋ—ಕಣ್ಣಿಂದ ಯಾವುದನ್ನು ಕಾಣಬಾರ ದಿತ್ತೋ—ಅದೆಲ್ಲ ನಡೆದುಹೋಯಿತು. ನೆಲ ಒದ್ದು ನೀರು ತೆಗೆಯು ವಂತಹ ಮಗ ನಾನಿದ್ದು ಏನು ಮಾಡಿದಂತಾಯಿತವಳಿಗೆ, ಸಾವಿನ ಸಮಯದಲ್ಲಿ ?

ಮನೆಯಲ್ಲಿ ಮೂಲಾನಕ್ಷತ್ರದ ಮೇಲೆ ಹುಟ್ಟಿ ತಂದೆಯನ್ನು ಕೊಂದಿಟ್ಟು ಅಜಿತ ಈಗ ಮನೆಗೇ ಮೂಲಾಗಿಬಿಟ್ಟಿದಾನೆ. ಅಂದೇ ಹಿಡಿಯಲು ಪ್ರಯತ್ನಿಸಿದಾಗ ಸಿಕ್ಕಿದ್ದರೆ ಫೌಜದಾರನಿಗೆ ಹೇಳಿ ಏನಾದರೂ ಮಾಡಿಸ ಬಹುದಿತ್ತು. ಆಗೂ ಕೈಗೆ ಹತ್ತಲಿಲ್ಲ. ಆ ಹಾಳು ಸೂ— ಮಗ ಭೀಮ್ಯಾ ಹಾಳು ಮಾಡಿದ. ಅಜಿತನಿಗೆ ಮುಂಚಿತ ತಿಳಿಸಿದ. ಇಲ್ಲಾದರೆ ಎಂಥ ಚನ್ನಾಗಿ ಕೈಯಲ್ಲಿ ಸಿಕ್ಕಿದ್ದ, ತೋಟದಲ್ಲಿ ಬಂದಾಗ. ಆಗ ಇನ್ನೂ ಇಷ್ಟು ಬೆಳೆದಿರಲಿಲ್ಲ, ಅವನ ಗುಣ. ಸುಮ್ಮನೆ ಬುತ್ತೀ ಕೊಡಲಿಕ್ಕೆಂದು ಹೋಗಿ, ಊಟಕ್ಕೆ ಕುಳಿತಾಗ ಹಿಡಿದು ಒದರು ಅಂದರೆ ಓಲೇಕಾರ ಅವನಿಗೇ ಸೂಚನೆಕೊಟ್ಟು ಕಳಿಸಬೇಕೆ?

ಎಲ್ಲ ಹದಗೆಟ್ಟಿತು. ಓಡಿ ಹೋಗಿ ಬಿಟ್ಟ. ಆಗ ಅಜಿತ ಸಿಕ್ಕಿದ್ದರೆ! ನನಗೂ ಭೂಷಣ ಸರ್ಟೀಫಿಕೇಟುಗಳು ಸರಕಾರದಲ್ಲಿ. ಅವನೂ ಹಾದಿಗೆ ಹತ್ತುತ್ತಿದ್ದ. ಮನೆಯಲ್ಲಿ ಇನ್ನೊಂದು ನಾಲ್ಕೊಪ್ಪತ್ತು ಮುರದೇವಿ ಬದಕುತ್ತಿದ್ದಳು. ಎಲ್ಲರ ಕಣ್ಣೀರು ನಿಲ್ಲುತ್ತಿದ್ದುವು. ಈ ಪೋಲೀಸರ ಕಾಟವಿರುತಿರಲಿಲ್ಲ. ಒಂದೋ—ಎರಡೋ—ಹಲವು ಕಷ್ಟಗಳು ತಪ್ಪುತ್ತಿ ದ್ದುವು. ಆದರೆ ಅದೆಲ್ಲಿದೆ ನಮ್ಮ ದೈವದಲ್ಲಿ? ನಮ್ಮ ಹಣೆಯಬರಹ ಒಡಕು ಬಿದರಿನಿಂದ ಬರೆಯಲ್ಪಟ್ಟಿದೆ!

ಪೂಜೆ ಹೇಗೋ ಮುಂದುವರಿಯುತ್ತಿತ್ತು. ಗೌಡರು ಹಾಗೆಯೇ ಮಾನಸಪೂಜೆಯಲ್ಲಿಯೇ ಮಗ್ನರಾಗಿಬಿಟ್ಟಿದ್ದರು!

ಮುರದೇವಿಯು ನಿನ್ನಿನಿಂದಲೂ ಅದೇಕೋ ಅಜಿತನನ್ನೇ ನೆನೆಯು ತ್ತಿದ್ದಾಳೆ. ಆದರೆ ಮಾಡುವದೇನು? ಆತ ಮಾಡಬಾರದ ಕೆಲಸ ಮಾಡಿ

ಹೋಗಿದ್ದಾನೆ. ಬರಲಾರದ ಹಾದಿಯಲ್ಲಿದ್ದಾನೆ. ಮುದಕಿಯ ಕರುಣಾ ಕ್ರಂದನವನ್ನು ಕೇಳಿ ಎಲ್ಲರೂ ಮರಗುವರು. ಅಜಿತನ ವರ್ತನದ ಬಗ್ಗೆ ಸಿಟ್ಟಾಗುವರು. ಎಷ್ಟೋ ಜನ ಬಂಧು-ಬಳಗದವರು ಬಂದು ಮುರ ದೇವಿಯನ್ನು ಕಂಡು ಹೋಗುತ್ತಲಿದ್ದಾರೆ. ಬಹುಶಃ ಕೊನೆಯ ದರ್ಶನ ಕ್ಕೆಂದಿರಬಹುದು. ಹಲವರ ಗುರುತೇ ಹಿಡಿಯುವದಿಲ್ಲ ಮುದಿಕೆ. ಒಮ್ಮೊಮ್ಮೆ ಶಾಂತವಾಗಿದ್ದಾಗ್ಗೆ ಒಬ್ಬಿಬ್ಬರ ಗುರುತು ಹಿಡಿಯುವಳು. ಆದರೂ ಮಾತಾಡಲು ಆಗುವದಿಲ್ಲ. ಚಲಚಿತ್ರದ ಬೊಂಬೆಗಳಂತೆ ಜನ ಬಂದು ಹೋಗುತ್ತಾರೆ ಅವಳು ಪ್ರೇಕ್ಷಕಳಾಗಿದ್ದಾಳೆ. ಇಂದ್ರಿಯಗಳ ಶಕ್ತಿಯೆಲ್ಲ ಕುಗ್ಗುತ್ತಲಿದೆ. ಮೈಮೇಲಿನ ವಸ್ತ್ರದ ಅರಿವೂ ಇಲ್ಲ, ಅವಳಿಗೆ.

ಹತ್ತಿರ ಇಂದಿರೆ ಕುಳಿತು ಪೂಜೆ ಮುಗಿಯುವ ವರೆಗೂ ಅರಿವೆ ಸರಿಪಡಿಸಿ ಅಜ್ಜಿಯ ಮಾನ ರಕ್ಷಿಸುತ್ತಿದ್ದಾಳೆ. ನಡುನಡುವೆ ಜಿನನ ಕಡೆಗೆ ನೋಡಿ ಕೈಮುಗಿಯುವಳು. 'ಅಂದು ಅಜಿತನನ್ನು ಒತ್ತಾಯದಿಂದ ಮುಂಬಯಿಯಿಂದ ಕಳಿಸಿದೆನಲ್ಲ, ಆ ಮೇಲೆ ತಿರುಗಿ ಆತನನ್ನು ಕಾಣ ಲಾಗಲಿಲ್ಲ. ಮನಸ್ಸಿನಲ್ಲಿ ಏನೆಂದುಕೊಂಡನೋ. ದೇವಾ! ಬೇಗನೆ ಮನೆಗೆ ತಿರುಗಿ ಬರಲಪ್ಪಾ ಅಜಿತ. ನಿನಗೆ ಪಂಚಾಮೃತ ಪೂಜೆ ಮಾಡಿ ಸುವೆ' ಎಂದು ನೆಟ್ಟದೃಷ್ಟಿಯಿಂದ ಜಿನನನ್ನೇ ದಿಟ್ಟಿಸುವಳು. ಎಡಗಣ್ಣು ಹಾರುವುದು. ತಡೆಹಿಡಿದ ಹೃದಯದ ತಿದಿಯನ್ನು ಒತ್ತಿ ಉಸಿರನ್ನು ಹೊರನೂಕಿ 'ಬಂದಾನು! ಅಜ್ಜಿ ಬದುಕಿರುವಾಗ ಬಂದು ಕಂಡಾನು!' ಎಂದು ತನ್ನಲ್ಲಿಯೇ ಅಂದುಕೊಳ್ಳುವಳು. ಬರಬಹುದೆಂಬ ಕಲ್ಪನೆಯ ಆಕಾಶಕುಸುಮವನ್ನೇ ಕಂಡು ಅವಳ ಮುಖದಲ್ಲಿ ಆನಂದರೇಖೆ ಯೊಂದು ಕ್ಷಣ ಮಿನುಗುವದು. ಮತ್ತೆ ನನ್ನ ಕಡೆಗೆ ನೋಡುತ್ತಿರುವ ಕಕ್ಕ ಏನೆಂದು ತಿಳಿಯುವರೋ ಏನೋ ಎಂದು ಒತ್ತಾಯದಿಂದಲೇ ಮುಖ ಸಪ್ಪಗೆ ಮಾಡಿಕೊಂಡು ಹೊರಳಿ ಅಜ್ಜಿಯ ಮೈಮೇಲಿನ ಅರಿವೆ ಸರಿಪಡಿಸಲು ತೊಡಗುವಳು.

ಪೂಜೆ ಮುಗಿಯಿತು ಪಂಡಿತ ಎಲ್ಲರಿಗೂ ಗಂಧೋದಕ ಹಾಕಿದ. ಮಲಗಿದ ಮುರದೇವಿಗೂ ಹಾಕಿದ. ಎಲ್ಲರೂ ದರ್ಶನ ಮಾಡಿಕೊಂಡರು.

ಉಪಾಧ್ಯಾಯನು ಮೆಲ್ಲನೆ ನುಡಿದ :

" ಅಮ್ಮನಿಗೆ ದೇವರ ಮೇಲೆ ಭಕ್ತಿ ಬಹಳ. ದಿನಾಲು ಮೂರು ಹೊತ್ತು ದರ್ಶನ ಮಾಡದೆ ಇರುತಿರಲಿಲ್ಲ ! "

" ಅಂಥಾ ಪುಣ್ಯದವಳೇ ಇದ್ದಳಾದರೂ ಸಾಯುವ ಕಾಲಕ್ಕೆ ಏನು ನೆಟ್ಟಗಾಗಲಿಲ್ಲಪ್ಪ ! " ಗಂಗವ್ವ ಕೆಣಕಿದಳು.

ಗೌಡನ ಮನಸ್ಸೂ ಅದನ್ನೇ ಹೇಳುತ್ತಿದ್ದಿತಾದರೂ ಮಾತಿನಲ್ಲಿ ಮಾತ್ರ ಹೀಗೆ ಆಡಿ ತೋರಿಸಿದ್ದರು. " ನೆಟ್ಟಗೇಕೆ ಆಗಲಿಲ್ಲ ? ಮಕ್ಕಳ ಮೊಮ್ಮಕ್ಕಳಿಂದ ಮನೆ ತುಂಬಿದೆ. ಮುಂದ ದಿನಾಲು ದೇವರ ಪೂಜೆ ನಡೆದಿದೆ. ಧರ್ಮ ದೇವರ, ಇರುತನಕ ಮಾಡಿದಳು. ಆಕೆಗೇನು? ಯಾರು ಮಾಡಿದವರು ಉಣ್ಣಾತಾರಲ್ಲ ! ಆಕೆಯ ಪೂರ್ತಿ ಆಕಗೆ ಚಲೋ ಆಯ್ತು ! ಆಕೆಯದೇ ನೆಟ್ಟಗಾಯ್ತನ್ನು. ನಾಳೆ ನೋಡಂ ಎಲ್ಲಾ ದೇವರ ಗುಡಿ ಯೊಳಗೂ ಹೊಲೆ-ಮಾದಿಗರೆಲ್ಲ ಬರತಾರಂತ. ಅಂಥಾದೇನ ಆಯ್ತೇನು ಅವ್ವನ ಕಾಲಕ್ಕ ? ಅರಹಂತ ! ಅರಹಂತ !! "

" ಅದೆಲ್ಲ ಆಯ್ತು; ಹತ್ತೆಂಟ ವರ್ಷ ಸುಖಾ ಉಂಡಳು. ಮಗನು ಗೌಡಕಿ ಮಾಡುವದನ್ನು ಕಂಡಳು. ಊರ ಮಂದಿ ಆದರೂ ಆಕಿ ಮಾತ ಎತ್ತಿ ಹಿಡಿದರು. ಎಲ್ಲ ನೆಟ್ಟಗ ಆಯ್ತು. ಸಾಯೂ ಕಾಲಕ್ಕ ಆ ಮೊಮ್ಮ ಗನೂ ಅಷ್ಟ ಇರತಿದ್ದರೆ ಇನ್ನೂ ಒಳ್ಳೇದಾಗತಿತ್ತು. ಅವನ ಮೇಲೆ ಬಹಳ ಜೀವ, ಮುರದೇವಿಯದು, ಪರದೇಶಿ ಹುಡುಗಂತ " ಪೂಜೆ ನೋಡಲು ಬಂದ ನೆರೆಮನೆಯ ಮುದಿಕೆಯೊಬ್ಬಳು ನುಡಿದಳು.

" ಇತ್ತಲ್ಲ, ಆದರೆ ಏನು ಮಾಡುವದು ? ಅದಕ್ಕೊಂದು ಒದಿ ಬೇಕಲ್ಲ ! " ಗಂಗವ್ವ ನುಡಿದಳು.

ಅಲ್ಲೇ ಸಮೀಪದಲ್ಲಿ ನಿಂತ ಸರಸ್ವತಿಯು ನಿಟ್ಟುಸುರೊಂದನ್ನು ಬಿಟ್ಟಳು. ಆದರೂ ವಿಷಯ ಬದಲಿಸಲಿಕ್ಕೆಂದು " ಇಂದು ಅತ್ತೆಯ ಮೈಯೊಳಗ ಏನೂ ಸಕ್ವ ಉಳಿದಿಲ್ಲ ! "

" ಏನು ಉಳಿದೀತು ? ಮೂರು ದಿನ ಆಯ್ತು ಸಿಂಪಿ ಗಂಜಿನೂ ಗಂಟಲೊಳಗೆ ಇಳಿದಿಲ್ಲ ! "

" ಆಗಿಂದೂ ನೋಡಲಿಕ್ಕೆ ಹತ್ತಿರುವೆ, ಸುದ್ದಿಯ ಮೇಲೇ ಇಲ್ಲ-

ಮೈಮೇಲೆ ಎಚ್ಚರವೇ ಉಳಿದಿಲ್ಲ! ಎಂದೂ ನಮ್ಮ ಅತ್ತೆಯ ಹಿಮ್ಮಡ ಕಾಣಸತಿರಲಿಲ್ಲ ತಾಯಿ ಯಾರಿಗೂ" ಎಂದು ಗಂಗವ್ವ ಕಣ್ಣೀರು ತಂದಳು.

"ಹೌದು; ಅಂಥಾ ಗರತೀ ಮಗಳೇ ಇದ್ದಳು!"

"ಸುದ್ದಿ ಇಲ್ಲಾದರೂ ಒಂದೇ ಸವನೆ ದೇವರ ಮೇಲೆ ಎಲ್ಲಾ ಲಕ್ಷ್ಯ ಅದೆ; ನಾ ನೋಡ್ತ ಇದೇನಲ್ಲ ಯಾವಾಗಿನಿಂದೂ" ಎಂದ ಪಂಡಿತ.

"ಅದಕ್ಕಾಗೇ ಬದಕಿದ ಜೀವಪ್ಪ ಅದು" ಎಂದರು ಗೌಡರು. ಕಣ್ಣು ನೀರು ಗೂಡಿದ್ದವು.

"ಹೂಂ! ಹೀಗೇ ಕೂಡಬೇಡಿರಿ, ಹೋಗಿರಿ. ಒಂದೊಂದು ತುತ್ತು ತಿನ್ನೋಗರಿ ಈಗ!" ಎಂದು ನೆರೆಮನೆಯ ಮುದುಕಿ ಎದ್ದಳು ಉಸ್ಸೆಂದು.

ಆದಗೌಡನು ನಿಟ್ಟುಸುರೊಂದನ್ನು ಬಿಟ್ಟು, "ನಮ್ಮ ತಿನ್ನೋದು ಉಣ್ಣೋದು ನಿಲ್ಲೂದುಲ್ಲ ತಾಯೀ! ಆಕೇ ಎಲ್ಲಾ ಬಿಟ್ಟು ಹೊರಟಳು!" ಎಂದನು. ಆಗ ಅವನ ಸ್ಥಿತಿ ಎಳೆ ಮಗುವಿನಂತಾಗಿತ್ತು. ಸ್ವಲ್ಪ ತಡೆದು, ಕಷ್ಟದಿಂದ ದನಿ ಸರಿಪಡಿಸಿಕೊಂಡು ಅಲ್ಲೇ ಕಂಬದ ಹತ್ತರ ಕುಳಿತ ರಾವಸಾಹೇಬನ ಕಡೆಗೆ ನೋಡಿ, "ಹೋಗರಿ ಅಪ್ಪ! ನೀವೆಲ್ಲ ಉಣ್ಣೋಗರಿ!" ಎಂದು ಹೇಳಿದ.

"ನೀವೂ ಏಳರಲ್ಲ?" ಸರಸ್ವತಿ ಭಾವನನ್ನೂ ಎಬ್ಬಿಸಿದಳು ಊಟಕ್ಕೆ.

"ಹುಡುಗರದ್ದು ಆಗಲಿ ಅನಕ. ನಾ ಹಿಂದಿನಿಂದ ಏಳತೇನು. ಎಂದ. ಸ್ವಲ್ಪ ತಡೆದು, "ಒಳಗ ಗುಣವಂತಿ ಇದಾಳು?" ಎಂದು ಕೇಳಿದ.

"ಇದಾಳು, ರೊಟ್ಟಿ ಮಾಡಲಿಕ್ಕೆ ಆಕಿನೇ ಕೂತಿದಾಳ. ಶ್ರೀಯಲೆ ಮಣೆ ಹಾಕಿ ನಿಮ್ಮ ಹಾದೀ ನೋಡ್ತ ಇದ್ದಾಳೆ." ಎಂದು ಗಂಗವ್ವ ಹೇಳಿದಳು.

ನಿಜವಾಗಿಯೂ ಗೌಡರ ಮನೆಯ ಸೊಸೆಯಂದಿರು ಇಂತಹ ಪೂಜೆ ಪುನಸ್ಕಾರಗಳಲ್ಲಿ ಎಲ್ಲರ ಜೊತೆಗೆ ಸೇರಲು ಅರ್ಹರಲ್ಲ. ಮಡಿ

ಯುಟ್ಟುಕೊಂಡು ಒಳಮುಗ್ಗಲಿಗೆ ನಿಂತೇ ದೇವದರ್ಶನ ಮಾಡಿ ತಮ್ಮ ಕೆಲಸಕ್ಕೆ ಹೋಗಬೇಕು. ಆದರಲ್ಲೂ ಗುಣವಂತಿಯು ಅಪರಾಧಿನಿ. ಅವಳ ಮೇಲೆಯೇ ಎಲ್ಲ ಕೆಲಸದ ಹೊರೆಯು. ಈಗ ಅವಳು ಹಗಲಿರುಳು ಗಾಣ ದೆತ್ತಿನಂತೆ ದುಡಿಯಬೇಕಾಗುತ್ತಿದ್ದಿತು. ಗೌಡರ ಮನೆ; ಬರುಹೋಗುವ ಜನ ಹೆಚ್ಚು; ಎಲ್ಲವೂ ಮಡಿಯಲ್ಲಿಯೇ ಆಗಬೇಕು; ಮುಂಜಾನೆ ಒದ್ದೆ ಬಟ್ಟೆ ಉಟ್ಟರೆ ಮಧ್ಯಾಹ್ನದ ವರೆಗೆ ಮೈಮೇಲೆಯೇ ಆರಬೇಕದು; ಅವಳ ಸುಖ-ದುಃಖದ ಕಡೆಗೆ ಗಮನ ಕೊಡುವವರೇ ಇಲ್ಲ. ಸರಸ್ವತಿಯು ಕರುಳೇನೋ ಸೊಸೆಯ ಕಡೆಗೆ ನೋಡಿ ಕಳವಳಗೊಳ್ಳುವುದು. ಆದರೂ ಆಡಲು ಬರುವಂತಿಲ್ಲ. ಅಂದರೂ ಮಾಡುವುದು ತನ್ನ ಕೈಯಲ್ಲಿದೆ ಯೆಂದುಕೊಂಡು ಮುಂದೆ ಹೋಗಿ ಸೊಸೆಗೆ ನೆರವಾಗುವಳು. ಆದರೆ ಮನೆಯಲ್ಲಿ ರಾವಸಾಹೇಬನಿಗೆ ಗುಣವಂತಿಯು ಅಡಿಗೆಯೇ ಬೇಕು. ಅವಳು ಏನನ್ನು ಮಾಡಿದರೂ ನಳಪಾಕ.ಅವನಿಗೆ. ನಿಜವಾಗಿಯೂ ಅವಳ ಅಡಿಗೆಯು ಅವರ ಮನೆಯಲ್ಲಿ ಎಲ್ಲ ಹೆಂಗಸರದಕಿಂತ ಚೆನ್ನು. ಗೌಡರೇ ಕೊಟ್ಟ ಪ್ರಮಾಣಪತ್ರವಿದು. ಶ್ರೀಯಲೆ ದೊಡ್ಡವರ ಮಗಳು ಇಷ್ಟೇ. ಅವಳಿಗೆ ಅಡಿಗೆ ಬಾರದು. ಗಂಗವ್ವ ಸೊಸೆಯಂದಿರು ಬಂದಾಗಿನಿಂದ ಅಡಿಗೆಗೇ ಕುಳಿತಿಲ್ಲ. ಕೈತಪ್ಪುವುದು. ಸರಸ್ವತಿ ಮಾಡುತ್ತಿದ್ದರೂ ರೊಟ್ಟಿ ಅಷ್ಟು ತೆಳ್ಳಗಾಗುತ್ತಿರಲಿಲ್ಲ. ಅದರಿಂದ ಗುಣವಂತಿಯೇ ಎಲ್ಲವನ್ನೂ ಮಾಡಬೇಕು. ಅವಳ ಕಷ್ಟ ದುಡಿಮೆಗಳನ್ನು ಕಂಡು ರಾವಸಾಹೇಬ ಮರಗುವನಾದರೂ ಗಂಗವ್ವ ಮರುಗಳು. ಮನೆತನವನ್ನೇ ಹಾಳಿಗೆ ಹಚ್ಚಿದ—ಕೆಟ್ಟ ಕಾಲಗುಣದ—ಹೆಣ್ಣಿಗೆ ಈ ದುಡಿತ, ಕಷ್ಟ ತಕ್ಕುದೆಂದೇ ಭಾವಿಸುವಳು.

ಹುಡುಗರೆಲ್ಲ ಊಟಕ್ಕೆ ಒಳಗೆ ಹೋದರು. ಗೌಡರು ಎದ್ದು ತಾಯಿಯ ಹಾಸಿಗೆಯ ಹತ್ತಿರ ಬರುತ್ತ "ದೇವರನ್ನು ಕೂಡಿಸಿ ನೀನೂ ಲಗೂನೆ ಊಟಕ್ಕೆ ಬಾರಪ್ಪ, ಹೆಂಗಸರೊಮ್ಮೆ ಅಡಗಿಯ ಮನೆಯೊಳಗಿಂದ ಹೊರಬೀಳಲಿ" ಎಂದರು ಬಿಗಿದ ಕಂಠದಿಂದ.

"ಹೂಂ!" ಎಂದು ಪಂಡಿತ ಲಗುಬಗೆಯಿಂದ ಹೋದ.

"ಈಗ ಒಂದು ತಾಸು ಆಯ್ತು, ಎದಿ ಬಿಗುವು ಆಗಿ. ಕೆಮ್ಮು

ಸರಳ ಹಾಯುವಲ್ದು." ಎಂದು ಅಲ್ಲೇ ಕುಳಿತ ಇಂದಿರೆ ಕಕ್ಕನಿಗೆ ಹೇಳಿದಳು, ಸೆರಗಿನಿಂದ ಕಣ್ಣೀರು ಒರಿಸಿಕೊಳ್ಳುತ್ತ. ಆಗ ಆದಗೌಡನಿಗೆ ಗೊತ್ತಾಯಿತು ಇವಳು ಇನ್ನೂ ಊಟಕ್ಕೆ ಹೋಗಿಲ್ಲವೆಂದು.

'ನೀ ಇನ್ನೂ ಹೋಗಿಲ್ಲ ? ಹೋಗವ್ವ ! ಕೂಸಿನ ತಾಯಿ ಹಾಗೇ ಕೂಡಬೇಡ; ಊಟಾ ಮಾಡಿಬಿಡು " ಎಂದರು.

ಆದರೆ ಇಂದಿರೆ ಏಳಲಿಲ್ಲ; ಮತ್ತೆ ಗೌಡರೂ ಹೇಳಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಗಂಗವ್ವ ಒಳಗಿನಿಂದ ಬಂದಳು "ನಾ ಕೂಡತೇನಿ, ನೀ ಹೋಗು. ಉಂಡು ಬಾ, ನಾಲ್ಕು ತುತ್ತ ನುಂಗಿದಷ್ಟು" ಎಂದು ಎಬ್ಬಿಸಿ ಕಳಿಸಿದಳು.

"ಹೋಗು, ಆಕೆ ಕೂಡತಾಳೆ" ಎಂದು ಗೌಡರೂ ಸೂಚಿಸಿದರು.

ಇಂದಿರೆಯು ಮನಸ್ಸಿಲ್ಲದೆ ಎದ್ದು ಒಳಗೆ ಹೋದಳು.

ಮುರದೇವಿಯು ಮಲಗಿದಲ್ಲಿಯೇ "ಬಾಳಾ, ಅಜಿತಾ, ಬಂದೇನಪ್ಪಾ ?" ಎಂದು ಕನವರಿಸಿದಳು. ಇಂದಿರೆ ತಿರುಗಿ ನಿಂತಳು. ಅವಳ ಹೆಜ್ಜೆ ಕೀಳದಾದುವು ಗೌಡರ ಮುಖ ಕಪ್ಪಿಟ್ಟಂತಾಯಿತು. ಆದರೂ ಆದಷ್ಟು ಶಾಂತತೆಯನ್ನು ತಾಳಲು ಪ್ರಯತ್ನಿಸಿದರು. ಮಾತನ್ನೇನೂ ಆಡಹೋಗಲಿಲ್ಲ. ದನಿ ಮಿದುವಾಗುತ್ತಿರಲಿಲ್ಲವೇನೋ, ಗಂಗವ್ವನೇ ಹೇಳಿದಳು.

"ಇಲ್ಲ ಅತ್ತೀ, ಆತ ಎಲ್ಲಿಂದ ಬಂದಾನು? ಬರುವಂಥವರೆಲ್ಲ ಬಂದಿದಾರಲ್ಲ ! ಅಜ್ಜಿ ಅವ್ವ ಅನ್ನುವ ಪರಿವಿ ಇರತಿದ್ದರ ಅವನೇಕೆ ಇಂಥ ಕೆಲಸ ಮಾಡತಿದ್ದ ? ಏನ ಹುಚ್ಚವ್ವ ನೀ !"

ಎಂದು ಸಮಾಧಾನದಿಂದ ಹೇಳಿದಳಾದರೂ ಮಾತಿನಲ್ಲಿ ವ್ಯಂಗ್ಯವಿತ್ತು. ಆದರ ನೋವು ಇಂದಿರೆಗೆ ಬರೆ ಕೊಟ್ಟಂತೆ ಆಯಿತು. ನಿಂತಲ್ಲಿಯೇ ಕಣ್ಣೀರು ದಳದಳ ಇಳಿಯತೊಡಗಿದವು. ಅದನ್ನು ಕಂಡು ವಿಜಯ ಬಂದು ಕಾಲಿಗೆ ತೆಕ್ಕೆ ಹಾಯ್ದು—

"ಏಕ ಅಳ್ತೀ ಅವ್ವಾ ?" ಎಂದ ಕಣ್ಣೀರು ತಂದು.

ಇಷ್ಟರಲ್ಲಿ ಹೊರಗಿನಿಂದ ಕುಲಕರ್ಣಿ ರಂಗಣ್ಣನವರು ಗೌಡರನ್ನು ಕೂಗುತ್ತ ಬಂದರು. ಗೌಡರು ಎದ್ದು ಹೊರಗೆ ಹೋದರು. ತಿರುಗಿ ಇಂದಿರೆಯು ಅಜ್ಜಿಯ ಹಾಸಿಗೆಯ ಕಡೆಗೆ ಬಂದಳು.

" ಹೇಗದೆ, ಇಂದ ನಿಮ್ಮ ತಾಯಿಗೆ ?" ಎಂದು ಕೇಳಿದ ರಂಗಣ್ಣ- ಕಂಬಳಿಯ ಮೇಲೆ ತೆಕ್ಕೆಗೆ ಕೂಡುತ್ತ.

ಗೌಡರು ಆಕಳಿಸಿ, ತಲೆಯ ಮೇಲೆ ಕೈ ತಿರಿವಿಕೊಳ್ಳುತ್ತ ಪಡಸಾಲೆಗೆ ಬರುತ್ತ, " ಸ್ವಲ್ಪ ಹೆಚ್ಚಿಗೇ ಆದೆ. ಮುಪ್ಪಿನ ವಯಸ್ಸು!" ಎಂದು ಉಸುರುಗರೆದರು.

" ಡಾಕ್ಟರರನ್ನು ಕರಸಲಿಲ್ಲಾ ? "

" ನಿನ್ನೆ ಬಂದಿದ್ದರು. 'ಇದೊಂದು ದಿನ ಬಿಟ್ಟು ನಾಳಿಗೆ ಬರತೇನಿ- ಅಂದಿದ್ದರು. ಆದರೆ ನನ್ನ ಜೀವ ತಾಳಲಿಲ್ಲ. ಮುಂಜಾನೆಯ ಗಾಡಿಗೇ ಮತ್ತೆ ಭರಮನ ಕಳಿಸಿದೆ."

" ಆಯ್ತು; ಬಂದಾರ ಇಳಿಹೊತ್ತಿಗೆ. ಅವರಿಗೇನು, ಸ್ವತಃ ಕಾರ ಅದ. ಹದಿನೈದು ಮೈಲು ಅಂದರ ಹತ್ತ ಮಿನಿಟಿನ ಹಾದಿ."

" ಆದರ ಯಾರ ಬಂದು ಏನು ಮಾಡುವರು ಇನ್ನು?" ಗೌಡರ ಗಂಟಲು ಬಿಗಿದು ಬಂದು, ಮಾತು ಮುಂದೆ ಹೊರಡಲಿಲ್ಲ, ಕಣ್ಣಲ್ಲಿಯೂ ನೀರಾಡಿದುವು.

" ಆಯುಷ್ಯ ಗಟ್ಟಿ ಇತ್ತಂದರೆ ಏನೂ ಆಗುವದಿಲ್ಲ. ಹೋದ ಜೀವ ತಿರುಗಿ ಬರತಿರತಾವೆ" ಎಂದು ರಂಗಣ್ಣ ಸಮಾಧಾನ ಪಡಿಸ ಹೋದ. ಅವನ ಕಂಠದಲ್ಲಿಯೂ ವ್ಯಾಕುಲತೆಯಿತ್ತು.

"ಏನೊ, ಆಕೆಯ ಪುಣ್ಯವೇ ಉಳಿಸಿದರೆ ಉಳಿಸಬೇಕು. ನಮ್ಮ ಪ್ರಯತ್ನ ವೆಲ್ಲ ನಿಂತಿತು. ಇದೊಂದು ಸಲ ಡಾಕ್ಟರರ ದೃಷ್ಟಿಗೆ ಹಾಕೋದು." ಎಲ್ಲಿಯೋ ದೃಷ್ಟಿಯಿಟ್ಟು ನುಡಿದಳು. ದನಿಯಲ್ಲಿ ನಿರಾಶೆ ತುಂಬಿತ್ತು.

ರಂಗಣ್ಣ ತಲೆ ಕೆಳಗೆ ಹಾಕಿ ಸುಮ್ಮನೆ ಕುಳಿತಿದ್ದ. ಕೈಯಿಂದ ಕಂಬಳಿಯ ಕರಿಗಳನ್ನು ತೀಡುತಲಿದ್ದ. ಈ ಸಂದರ್ಭದಲ್ಲಿ ತಾನು ತಂದ ಸಂಗತಿಯನ್ನು ಹೇಳಬೇಕೋ ಬೇಡವೋ ಎಂದು ಯೋಚಿಸುತ್ತಲಿದ್ದ. ಮುಖವು ವಿಚಾರದಲ್ಲಿ ಮಗ್ನವಾಗಿದ್ದಿತು. ಹಣೆಯ ಮೇಲೆ ಶಿರಗಳು ಎದ್ದಿದ್ದುವು. ಮನದಲ್ಲಿ ತೂಗಾಟ. 'ಅವರ ಹುಡುಗನಸಲುವಾಗಿಯೇ ಇದೆಲ್ಲ. ಅವರಿಗೇ ಇದನ್ನು ತಿಳಿಸದಿರುವುದು ಹೇಗೆ? ತಿಳಿಸಲು ಇದು ಸಮಯವೇ!' ಎಂದು ಆ ತುಗುಯ್ಯಾಲೆಯಲ್ಲಿಯೇ ಎದ್ದು ಒಳಗೆ ನಡೆದರು.

"ಮುರದೇವಿಯನ್ನು ನೋಡೋಣ. ನಿನ್ನೆಯೂ ಇತ್ತ ಬರಲಿಕ್ಕೆ ಆಗಲಿಲ್ಲ!" ಎಂದರು.

ಗೌಡರೂ ಉಸುರುಗರೆದು ಎದ್ದು, ರಂಗಣ್ಣನಿಗಿಂತ ಮುಂದಾಗಿ ನಡೆಯುತ್ತ, "ನೋಡ ನಡೆಯಿರಿ. ಇಂದೇನು ಮೈಯೊಳಗ ಸತ್ವ ಉಳಿದಿಲ್ಲ" ಎಂದರು, ಸ್ವಲ್ಪ ಒದರಿ.

ಇವರ ದನಿಯನ್ನು ಕೇಳಿ ಗಂಗವ್ವ ಅತ್ತೆಯ ಮೈಮೇಲೆ ನೀಟಾಗಿ ಹೊಚ್ಚಿ ದೂರ ಸರಿದಳು. ಇಬ್ಬರೂ ಮುರದೇವಿಯ ಹತ್ತರ ಹೋಗಿ ಕುಳಿತರು. ಗುರುತು ಹಿಡಿಯುವಳೇನೋ ನೋಡಿದರು. ಹಿಡಿಯುವಂತಿರಲಿಲ್ಲ, ಅವಳ ಅವಸ್ಥೆ. ಎದೆಯಲ್ಲಿ 'ಸೊಂಯ್ಯ ಸೊಂಯ್ಯ' ಎಂದು ಸಪ್ಪಳವಾಗುತ್ತಿತ್ತು. ಸ್ವಲ್ಪ ಹೊತ್ತು ಕುಳಿತು ಸಪ್ಪಗಿನ ಮುಖದಿಂದ "ಇಳಿದ ವಯಸ್ಸು!" ಎಂದು ಉದ್ಗಾರ ತೆಗೆದು, ಎದ್ದರು. ಹೊರಗೆ ನಡೆದರು. ಗೌಡರೂ ಬಾಗಿಲ ವರೆಗೆ ಕಳಿಸಲು ಬರುತ್ತಿದ್ದರು, ಏನೂ ಮಾತಾಡದೆ. ಕೊನೆಗೆ ರಂಗಣ್ಣನ ಮನಸ್ಸು ಹೊಯ್ದಾಡಿತು. ಗೌಡರಿಗೆ ತಿಳಿಸದೆ ಹೋಗಲು ಆಗದಾಯಿತು. ತಲೆಬಾಗಿಲ ವರೆಗೂ ಹೋದರು. ಗೌಡರೂ ಹಿಂದಿನಿಂದಲೇ ಇದ್ದರು. ಆಗ ಹೊರಳಿ, "ಹೋಗರಿ ನೀವು ಅಲ್ಲೇ" ಎಂದ ರಂಗಣ್ಣ.

"ಹೂಂ!" ಎಂದು ಗೌಡರು ಮರಳಿದರು. ಅವ್ವನ ವಿಚಾರದಲ್ಲಿಯೇ ಇಲ್ಲಿಯ ವರೆಗೆ ಹುಚ್ಚರಂತೆ ಹೊರಗೆ ಬಂದಿದ್ದರವರು. ಯಾರನ್ನು ಕಳಿಸಲೂ ಇಷ್ಟು ಬರುವವರಲ್ಲ ಅವರು. ಅಷ್ಟು ಅಭಿಮಾನಸಿಂಧು! ಆದರೂ ತಾಯಿಯ ಸಾವಿನ ಎದುರಿಗೆ ಅವರ ಕ್ಷುಲ್ಲಕತನದ ಅರಿವು ಅವರಿಗೆ ಆಗಿತ್ತೇನೊ!

ರಂಗಣ್ಣ ಎರಡು ಹೆಜ್ಜೆ ಮುಂದೆ ಹೋಗಿ ಮತ್ತೆ ಹೊರಳಿದ. "ಇಲ್ನೋಡ್ರಿ!" ಎಂದು.

"ಏನು?" ಎನ್ನುವ ಮುಖಮುದ್ರೆಯಿಂದ ಹೊರಳಿ ನಿಂತರು ಗೌಡರು.

ರಂಗಣ್ಣನ ಮನಸ್ಸಿನಲ್ಲಿ ಮತ್ತೇನು ಬಂದಿತೋ ಏನೋ "ಮುಪ್ಪಿನ ಕಾಲ, ವೇಳೆ ಹೇಳಲಿಕ್ಕೆ ಬರುವದಿಲ್ಲ, ಹತ್ತರ ಇರ್ರಿ" ಎಂದು ಹೇಳ

ಬೇಕೆಂಬುದನ್ನು ಹೇಳದೆ ತಡೆದರು. ಅವನ ಮುಖಮುದ್ರೆಯಂತೂ ಏನೋ ಹೇಳಬೇಕಾಗಿದೆಯೆಂಬುದನ್ನು ಸೂಚಿಸುತ್ತಿತ್ತು. ಒಂದೆರಡು ಕ್ಷಣ ತಡೆದು, ಇರಲಿ, ಕಿವಿಯ ಮೇಲೆ ಹಾಕಿ ಬಿಡೋಣ ಎಂದುಕೊಂಡು "ಹನ್ನೊಂದರ ಗಾಡಿಗೆ ಫೌಜದಾರ ಬಂದಿದಾರೆ!" ಸ್ವಲ್ಪ ತಡೆದು, "ಆದರೆ ನೀವೇನು ಅತ್ತ ಮನಸು ಹಾಕುವ ಜರೂರಿ ಇಲ್ಲ ನಾ ಇದೇನಿ, ನೋಡಕೊಳ್ಳತೇನಿ" ಎಂದೂ ಹೇಳಿ ಮುಗಿಸಿದರು.

"ಈಗೇಕೆ ಮತ್ತೆ ಬಂದರು?" ಗೌಡರಿಗೆ ಕೇಳದೆ ಇರಲಾಗಲಿಲ್ಲ.

"ಏನೋ ಮೊನ್ನೆ ಹಾಯ್‌ಸ್ಕೂಲಿಗೆ ಹಚ್ಚಿದ ಬುಲೆಟಿನ್ಸ್‌ದ ಬಗ್ಗೆ ರಿಪೋರ್ಟು ಹೋಗಿತ್ತಲ್ಲ, ಅದಕ್ಕಿರಬೇಕು" ಎಂದು ಏನೋ ಹೇಳಬೇಕೆಂಬುದನ್ನು ಹೇಳದೆ ತಡೆದ ರಂಗಣ್ಣ.

"ಮತ್ತೇನು ತಂದಾರೇನು?" ಗಾಬರಿಯಿಂದ ಗೌಡರು ಕೇಳಿದರು.

"ಮುಳುಗುವವರ ಕಾಲು ಕೆಳಕೆಳಗೇ ಅಂತ.." ಎಂದು ಸ್ಪಷ್ಟಗೊಳಿಸದಾದ.

ಗೌಡನು ಸ್ವಲ್ಪ ಹೊತ್ತು ನಿಶ್ಚಲನಾಗಿ ನಿಂತ. ಅವನಿಗೆ ಹೊಳೆಯಿತು. ರಂಗಣ್ಣ ಇಲ್ಲಿಯವರೆಗೆ ಅನುಮಾನಿಸುತ್ತಿರುವ ಸಂಗತಿಯನ್ನು ಊಹಿಸಿದ. ಫೌಜದಾರನು ಇವರ ಮುಂದೆ ಏನಾದರೂ ಹೇಳಿರಬೇಕು. ಅಜಿತ ಭೂಗತವಾದಂದಿನಿಂದ ಮೇಲಧಿಕಾರಿಗಳ ಮನಸ್ಸು ಗೌಡನ ವಿಷಯಕ್ಕೆ ನೆಟ್ಟಗಿರಲಿಲ್ಲ. ಮೊದಲೇನೋ ಆದಗೌಡನ ಹೊರತು ಊರಲ್ಲಿ ಕಡ್ಡಿಯೂ ಕೂಡ ಕರಗುತಿರಲಿಲ್ಲ. ಎಂದು ವಿಚಾರಿಸುತ್ತಲೇ ಕೊನೆಗೂ ಕೇಳಿದ. "ನನಗೆ ಬರಲಿಕ್ಕೆ ಹೇಳಿರುವರೇ?"

"ಇಲ್ಲ; ಯಾರ ಯಾರನ್ನೋ ಕರೆಯಿಸಿ ವಿಚಾರಣೆ ನಡೆಯಿಸಿದ್ದಾರೆ. ಮೊನ್ನೆ ಹೊಸಹಳ್ಳಿಗೆ ಹೋಗಿದ್ದನಂತಲ್ಲ ಅಜಿತ. ಅದರಿಂದ ನೀವು ಇನ್ನೂ ಸಂಶಯಕ್ಕೆ ಕಾರಣರಾಗಿದ್ದೀರಿ. ಇರಲಿ, ನಾನಂತೂ ಇದ್ದೇನಲ್ಲ."

"ಇರತೀರಿ!" ಧ್ವನಿ ಅಷ್ಟು ಸ್ಪಷ್ಟವಾಗಿರಲಿಲ್ಲ.

ಗೌಡನ ಭಾವವನ್ನರಿತೋ ಏನೋ ರಂಗಣ್ಣ ನುಡಿದ. "ಈ

ಬುಲೆಟಿನ್ ಪ್ರಕರಣಕ್ಕೆ ಊರವರ ನೆರವಿದೆಯೆಂದು ಅವರ ಕಲ್ಪನೆ ಯಾದಂತಿದೆ. ಅಜಿತ ಮನೆಯುವರನ್ನು ಬಿಟ್ಟು ನಿಲ್ಲುವನು ಹೇಗೆ ?"

" ನಿಂತಾನು ಅವನಿಗೇನು ? ತೋಯಿಸಿಕೊಂಡವನಿಗೆ ಮಳೆಯ ಅಂಜಿಕೆಯೇ ?'' ನಡುವೆಯೇ ಗೌಡ ಅಂದ.

" ಅದೆಲ್ಲ ನಮಗಾಯಿತು, ಫೌಜದಾರನಿಗೇನು ? ಅವನು ಅಸ್ಮ್ಮವನೇ ಅಲ್ಲ." ಸ್ವಲ್ಪ ತಡೆದು ಧೈರ್ಯ ಹೇಳುವ ಸ್ವರದಲ್ಲಿ, " ಹೆದರಿದರೆ ಏನಾಗುವುದು ? ಬಂದುದಕ್ಕೆ ತಲೆ ಕೊಡೋಣ. ಊರವರೇ ಒಂದಾದ ಮೇಲೆ ಹೊರಗಿನಿಂದ ಬಂದವರದೇನು ನಡೆಯುವದು ?" ರಂಗಣ್ಣ ಅಂದ.

" ಆದರೆ ದಿವಸ ಕೆಟ್ಟ. . " ಮಾತು ಪೂರ್ಣ ಹೊರಗೆ ಬರಲಿಲ್ಲ. ಗೌಡನ ಬಾಯಿಂದ. ಅದರಲ್ಲೂ ದಾರುಣವಾದ ಚಿಂತೆ ತೋರುತ್ತಿದ್ದಿತು.

" ಇರಲಿ ಹೋಗರಿ, ಏನಾದರೆ ಅದಕ್ಕೆ ಮಾಡಲಿಕ್ಕೆ ಬಂದೀತು. ತಾಯಿಯ ಈ ಸೇವೆ ಸಿಕ್ಕೋದು ಕಷ್ಟ. ಚಾವಡಿಯ ಕಡೆಗೆ ಮನಸ್ಸೇ ಹಾಕಬೇಡಿರಿ ನೀವು. ನಾ ಅವರಿಗೆ ಹೇಳ್ತೇನು ನಿಮ್ಮ ಪರಿಸ್ಥಿತಿ'' ಎಂದು ರಂಗಣ್ಣ ಹೊರಟರು.

ಆದಗೌಡನು ಭೀಕರ ಚಿಂತೆಯೊಂದನ್ನು ಹೊತ್ತುಕೊಂಡು ಒಳಗೆ ಬಂದ. ಹತ್ತಂಕಣದ ಆ ಚೌಕು ಹತ್ತು ಹರದಾರಿಯೆಂತೆನಿಸಿತವನಿಗೆ. ದನಕರುಗಳು ಕೊಟ್ಟಿಗೆಯಲ್ಲಿ ಬೇಸತ್ತಿದ್ದಂತೆ ಅವನಿಗೆ ಭಾಸವಾಯಿತು. ಕೊರಳ ಬೆವರನ್ನು ಒರಸಿಕೊಳ್ಳುತ್ತ ಪಡಸಾಲೆಯ ಕಟ್ಟೆ ಹತ್ತಿದ, ತೂಗಾಡುತ್ತ.

ಮೇ ತಿಂಗಳ ಉರಿಬಿಸಿಲು ಬೆಂಕಿಯನ್ನು ಕಾರುತ್ತಲಿದೆ ಹೊರಗೆ. ಎಲ್ಲಿಯೂ ಸದ್ದಿಲ್ಲ. ಗಡಿಯಾಳದಲ್ಲಿ ಮೂರು ಗಂಟೆ ಹೊಡೆಯಿತು. ಮನೆಯವರ ದುಃಖವನ್ನು ಅರಿತಿತ್ತೇನೋ ಅದೂ. ದಿನದಕಿಂತ ಸಾವಕಾಶವಾಗಿ ತಡೆದು ತಡೆದು ಹೊಡೆಯಿತು. ಅಲ್ಲೇ ನೀರವವಾಗಿ ಕುಳಿತ ರಾವಸಾಹೇಬನ ಮನದಲ್ಲಿ ಗಡಿಯಾಳದ ಕೀಲಿ ನಿನ್ನೆಯೇ ಮುಗಿದಿದೆಯೆಂಬುದು ಹೊಳೆಯಿತಾದರೂ ಎದ್ದು ಹೋಗಿ ಕೀಲಿ ಕೊಡುವದಾಗ

ಲಿಲ್ಲ. ಅಷ್ಟು ದುಃಖದಲ್ಲಿ ಮುಳುಗಿರುವನೆಂದೇನೂ ಅಲ್ಲ. ಆದರೂ ಮನದಲ್ಲಿ ಒಂದು ತರದ ವಿಮನಸ್ಕತೆ. ಉಳಿದವರು ಮುರದೇವಿಯರ ಹಾಸಿಗೆಯ ಸುತ್ತಲೂ ಕುಳಿತಿದ್ದಾರೆ. ಬಿಸಿಲ ಬೇಗೆಗೆ ಅವಳು ಹಾಸಿಗೆಯಲ್ಲಿ ಚಡಪಡಿಸುತ್ತಿದ್ದಾಳೆ. ಸುತ್ತಲೂ ನೀರವವಾಗಿದೆ. ಒಬ್ಬರ ಮುಖವನ್ನೊಬ್ಬರು ನೋಡುತ್ತ ಸುಮ್ಮನೆ ಕುಳಿತಿದ್ದಾರೆ. ಯಾರಿಗೂ ಮಾತಾಡಲು ಇಚ್ಛೆಯಿಲ್ಲವೇನೋ.

ಗುಣವಂತಿಯು ಆಗಾಗ ಹೊರಗೆ ದಾರಿಯ ಕಡೆಗೆ ನಿಟ್ಟಿಸುತ್ತಿದ್ದಾಳೆ. ಅವಳ ದೃಷ್ಟಿಯಲ್ಲಿ ಆತುರತೆಯು ತೋರುತ್ತಿದ್ದಿತು. ಮುಖವು ನಿರೀಕ್ಷಣೆಯ ಭಾವವನ್ನು ಒಡಮೂಡಿಸುತಲಿತ್ತು. ಮರಣೋನ್ಮುಖ ಅಜ್ಜಿಯ ಕಡೆಗೊಮ್ಮೆ ನೋಡುವಳು; ಬಾಗಿಲ ಕಡೆಗೊಮ್ಮೆ ನೋಡುವಳು. ಉರಿಬಿಸಿಲನ್ನು ಕಂಡು ನಿಟ್ಟುಸಿರಿಡುವಳು. ಸೊಸೆಯ ಮನೋಭಾವ ಗೊತ್ತಾದಂತೆ ಗೌಡರು ಮೆಲ್ಲನೆ ಮಾತನಾಡಿದರು :

" ಡಾಕ್ಟರು ಊರೊಳಗ ಇರಲಿಕ್ಕಿಲ್ಲ ! "

" ಅವರು ಇರದಿದ್ದರೆ ಇನ್ನೊಬ್ಬರನ್ನಾದರೂ ಕರೆದುಕೊಂಡು ಬರಬೇಕಲ್ಲ ! "

" ಅದನ್ನೇನು ನಾ ನೆಟ್ಟಗೆ ಅವನಿಗೆ ಹೇಳಲಿಲ್ಲ ! " ನಿಟ್ಟುಸಿರಿನ ಕೊನೆಯಲ್ಲಿ ಮಾತು ಗೌಡರ ಮುಖದಿಂದ ಹೊರಟಿತು.

"ಇಷ್ಟು ತಡ ಹಿಡಿದಿದಾನ ಅಂದ ಮೇಲೆ ಕರಕೊಂಡೇ ಬಂದಾನು!" ಸರಸ್ವತಿಯು ತನ್ನ ಅನುಮಾನ ಸೂಚಿಸಿದಳು.

" ಲಗೂನೆ ಬಂದಷ್ಟು ನೆಟ್ಟಗಿತ್ತು. "

ಇಷ್ಟರಲ್ಲಿ ಹೊರಗೆ ಯಾರೋ ಬಂದ ಸದ್ದಾಯಿತು. ರಾವಸಾಹೇಬ ಚಟ್ಟನೆ ಎದ್ದು ಪಡಸಾಲೆಗೆ ಬಂದ. ಗೌಡರ ದೃಷ್ಟಿಗೂ ಆಶೆಗೂಡಿತು. ಹೊರಳಿ ನೋಡಿದರು. ಬಂದಾತ ಊರೊಳಗಿನವನೊಬ್ಬ ರೈತ. ಅವನೇ ಮೆಲ್ಲಗೆ ಕೇಳಿದ, ರಾವಸಾಹೇಬನಿಗೆ.

" ಗೌಡರಿಲ್ಲಾ ? "

" ಇದಾರೆ; ಏಕೆ ? "

" ಚಾವಡಿಯೊಳಗ ಫೌಜದಾರ ಸಾಹೇಬರು ಕರೆಯುವರು. "

ಗೌಡರು ಉಸ್ಸೆಂದು ಎದ್ದು ಹೊರಗೆ ಬಂದರು. ನಡಿಗೆಯಲ್ಲಿ ಜೀಸರವಿತ್ತು. ಕಟ್ಟೆಯ ತುದಿಗೆ ನಿಂತು, "ನೀ ಏಕೋ?" ಎಂದರು.

"ಓಲೇಕಾರರು ಯಾರೂ ಇರಲಿಲ್ಲ. ನಾ ಪೇಟೆಯ ಕಡೆಗೆ ಹೊರಟಿದ್ದೆ. ಕರೆದು ಸಿಪಾಯಿ ಹೇಳಿದ" ಎಂದು ಅನುಮಾನಿಸುತ್ತ ನುಡಿದನು ಆತ.

ಗೌಡರಿಗೆ ಸಂಗತಿಯು ವಿಚಿತ್ರವೆನಿಸಿದಷ್ಟು ಗಾಬರಿಯನ್ನುಂಟು ಮಾಡಿತು. ಒಳಗೆ ಹೋಗಿ ತಾಯಿಯನ್ನೊಮ್ಮೆ ನೋಡಿ ಬಂದರು. ಕೊಂಚ ಸಮಾಧಾನದಿಂದ ಇದ್ದಂತೆ ಕಂಡಿತ್ತೇನೋ ಅವರಿಗೆ. ಉಗುಬಗೆಯಿಂದ ಕೋಟು ತೊಟ್ಟುಕೊಳ್ಳುತ್ತ, "ಚಾವಡಿಯ ತನಕ ಹೋಗಿ ಬರುವೆ ನಾ" ಎಂದು ಮಗನ ಕಡೆಗೆ ಹೊರಳಿ ಹೇಳಿದರು.

"ಅಜ್ಜಿ ಅಜಾರಿ ಇದ್ದದ್ದು ಅವನಿಗೆ ಗೊತ್ತಿಲ್ಲ?"

"ನಾನೇನು ಹೇಳಿ ಕಳಿಸಿಲ್ಲ. ಗೊತ್ತಾಗೇದೋ ಇಲ್ಲೋ ಏನೊ!" ಎಂದರು ಮೆಟ್ಟುಗಲ್ಲನ್ನಿಳಿಯುತ್ತ.

"ಅಂದ ಮೇಲೆ ಅವರಿಗೆ ಗೊತ್ತಾಗಲಿಕ್ಕೆ ಫೌಜದಾರೇನು ದೇವರೇ?" ರಾವಸಾಹೇಬ ತ್ರಸ್ತ ಸ್ವರದಲ್ಲಿ ತಂದೆಗೆ ಕೇಳಿದ.

"ಅವರು ಇನ್ನೂ ದೇವರ ಆಗಿಲ್ಲಂತೇ ನಾವೆಲ್ಲ ಉಳಿದಿದೇವೆ." ರಾಜನಿಷ್ಠ ಗೌಡರ ಬಾಯಿಂದೂ ಈ ಮಾತು ಹೊರಟಿತು. ಸ್ವಲ್ಪ ಮುಂದೆ ಹೋಗಿ, "ಡಾಕ್ಟರರು ಬಂದರೆ ಕರೆಯಿಸು" ಎಂದು ಹೇಳಿ ಹೋದರು, ದ್ವಿಧಾಚಿತ್ತದಿಂದ.

ಗೌಡರು ಈಗ ಮರೆಯಾಗಿರಬೇಕು. ಅವರ ಹಿಂದಿನಿಂದಲೇ ಸದ್ದಿಲ್ಲದೆ ಕಾರು ಬಂದು ಅವರ ಬಾಗಿಲಲ್ಲಿ ನಿಂತಿತು. ಕೂಡಲೆ ರಾವಸಾಹೇಬನು ಕೊಟ್ಟಿಗೆಯೊಳಗಿನ ಆಳನ್ನು ಕೂಗಿ ತಂದೆಯನ್ನು ಕರೆಯಲು ಓಡಿಸಿದ. ತಾನೂ ಡಾಕ್ಟರರ ಸ್ವಾಗತಕ್ಕೆಂದು ಬಾಗಿಲ ವರೆಗೆ ಬಂದ. ಡಾಕ್ಟರರು ದಿನದಂತೆ ಬ್ಯಾಗು ಒಯ್ಯುವವರ ದಾರೀ ಕಾಯದೆ ಒಳಗೆ ಬಂದರು. ಬರುವಾಗ ಓಡುತ್ತಿದ್ದ ಆಳಿಗೆ ಏನು ಸೂಚಿಸಿದರೋ ಏನೋ ಅವನೂ ಹಿಂದುರಿಗಿದ. ಡಾಕ್ಟರರ ಹಿಂದಿನಿಂದಲೇ ಒಬ್ಬ ಕಂಪೌಂಡರ ಇಳಿದು ಬ್ಯಾಗ ತಕ್ಕೊಂಡು ಮುಂದಾದ. ಡಾಕ್ಟರ ದಿನದವನಲ್ಲ. ಹೊಸಬ. ಕಂಪೌಂಡರನೇ ಚಿರಪರಿಚಿತನಂತೆ ಒಳಗೆ ಕರೆದು ತಂದ. ಅವನ

ಮುಖವನ್ನು ಎಲ್ಲಿಯೋ ನೋಡಿದಂತೆ ರಾವಸಾಹೇಬನಿಗೆ ಭಾಸವಾಯಿತು. ಆದರೂ ನೆನಪಾಗದಾಯಿತು. ಗಡ್ಡ ಬೆಳೆದ ಅವನ ಮುಖವನ್ನು ತಿರುತಿರುಗಿ ನಿರೀಕ್ಷಿಸಿದ, ಒಂದು ಕ್ಷಣ. ಸಂಗಡ ಕರೆಯಲು ಹೋದ ಆಳೂ ಇಲ್ಲ, ತಂದೆಯೂ ಬರಲಿಲ್ಲ, ಎಂಬೆಲ್ಲ ಗೊಂದಲದಲ್ಲಿ ಅವನಿಗೆ ಏನೂ ಹೊಳೆಯಲಿಲ್ಲ. ದಿಗಿಲುಗೊಂಡು ಹೊರಳಿ ಒಳಗೆ ನಡೆದ, ಅವರಿಗಿಂತ ಮುಂದಾಗಿ.

" ಗೌಡರು ಇಲ್ಲ? " ಕಂಪಾವುಂಡರ ಕೇಳಿದ.

ಚಿರಪರಿಚಿತ ಸ್ವರ. ' ಯಾರು? ' ಎನ್ನುವ ಯೋಚನೆಯಲ್ಲಿಯೇ ರಾವಸಾಹೇಬ ಉತ್ತರ ಕೊಟ್ಟ : " ಇಲ್ಲ; ಈಗ ಚಾವಡಿಯ ಕಡೆಗೆ ಹೋದರು ! "

" ಹೇಗದೆ ಅಜ್ಜಿಗೆ? " ಡಾಕ್ಟರರಂದರು

" ನಿನ್ನಿನಕಿಂತ ಹೆಚ್ಚಾಗಿಯೇ ಇದೆ. "

" ಹೀಗೋ ! " ಎಂದವರೇ ನೆಟ್ಟಗೆ ಒಳಗೆ ನಡೆದರು.

ರಾವಸಾಹೇಬ ಬೆಪ್ಪಾಗಿ ನಿಂತ. ದಿನಾಲು ಡಾಕ್ಟರರು ಬಂದು ಪಡಸಾಲೆಯಲ್ಲಿ ಕಂಬಳಿಯ ಮೇಲೆ ಕೂಡುತ್ತಿದ್ದರು. ಆಮೇಲೆ ಒಳಗೆ ಮುರದೇವಿಯ ಹಾಸಿಗೆ ಸಿಸ್ತುಗೊಳಿಸಿ ಕರೆದೊಯ್ಯಲು ಹೋಗತಕ್ಕವರು. ಇವರು ನೆಟ್ಟಗೆ ಒಳಗೇ ಹೊರಟರಲ್ಲ ಎಂದುಕೊಂಡು ತಬ್ಬಿಬ್ಬಾಗಿ ಒಳಗೆ ನಡೆದ.

ಡಾಕ್ಟರರು ಕೂಡಲೆ ರೋಗಿಯನ್ನು ತಪಾಸಿಸತೊಡಗಿದರು. ರೋಗಿಯ ನಾಡಿಯನ್ನು ನೋಡಲು ಇದ್ದಕ್ಕಿದ್ದಂತೆಯೇ ಅವರ ಮುಖದಲ್ಲಿ ನಿರಾಶೆಯು ಒಡಮೂಡಿತು. ಕಂಪಾವುಂಡರ ಅವರ ಮುಖವನ್ನೇ ನಿಟ್ಟಿಸುತ್ತಿದ್ದ. ಹೊರಳಿ ಮುರದೇವಿಯ ಕಡೆಗೆ ನೋಡಿದ. ಹೆಂಗಸರೆಲ್ಲ ದೂರ ಸರಿದಿದ್ದರು. ಸಮೀಪದಲ್ಲಿದ್ದವಳೆಂದರೆ ಗುಣವಂತಿಯೇ. ಅವಳ ಮೊಗವು ರಹಸ್ಯದಿಂದ ಇಡುಗಿತ್ತಾದರೂ ಅದೆಲ್ಲದರ ಮೇಲೂ ಮ್ಲಾನತೆಯ ತೆರೆಯೊಂದು ಇಳಿಬಿದ್ದಿದ್ದಿತು. ಡಾಕ್ಟರರು ನಿರುತ್ಸಾಹದ ಗೋಣು ಹಾಕಿದರು. ಆಗ ಕಂಪಾವುಂಡರನಿಗೆ ಎಲ್ಲಿಂದಲೋ ದುಃಖ ಆವರಿಸಿಬಂತು. ಬಿಗಿದ ಕಂಠದಿಂದಲೇ—

" ಆಯೀ!" ಎಂದು ಉಚ್ಚರಿಸಿದ.

" ಯಾರು! ಅಜಿತ!" ಎಂದು ಮುರದೇವಿ ಕಣ್ದೆರೆದಳು.

ಎಲ್ಲರ ಮುಖದಲ್ಲಿಯೂ ಗಾಬರಿ ಬೆರಗುಗಳೆರಡೂ ತುಂಬಿದ್ದುವು. ಶಾವಸಾಹೇಬನ ಮುಖ ಮಾತ್ರ ಒಂದು ಒಗಟ ಬಿಡಿಸಿದವನಂತಿತ್ತು.

ಅಜಿತ " ಆಯೀ!" ಎಂದು ಮುರದೇವಿಯ ಮೇಲೆ ಬಿದ್ದು ಗೋಳೋ ಎಂದು ಅಳತೊಡಗಿದ.

ಸರಸ್ವತಿಯು ಬಂದು ಮಗನನ್ನು ಎತ್ತಿದಳು. ಎಲ್ಲರೂ ಸಮಾಧಾನ ಪಡಿಸತೊಡಗಿದರು. ಕಣ್ಣೀರು ಒರಿಸಿಕೊಳ್ಳುತ್ತ, ಅಳುವ ದನಿ ಕೇಳಿ ಮುರದೇವಿಯು ಕಣ್ದೆರೆದು ಸುತ್ತೆಲ್ಲ ನಿರುಕಿಸಿದಳು. ಮತ್ತೆ ಸ್ಮೃತಿ ತಪ್ಪಿತು. ಮುದಕಿಯ ದೃಷ್ಟಿಯು ಅಜಿತನ ಮೇಲೆಯೇ ನೆಲೆಗೊಂಡಂತಿತ್ತು. ಅದರಲ್ಲಿ ತುಂಬ ಶಾಂತಿ ಸೇರಿದಂತಿತ್ತು. ಕೂಡಲೆ ಬಿಕ್ಕು ಹತ್ತಿದುವು. ಕೊನೆಗಾಲದ ಬಿಕ್ಕುಗಳೆಂದು ಅಜಿತನಿಗೆ ತೋಚಲಿಲ್ಲ. ಡಾಕ್ಟರರಿಗೆ ಹೊಳೆಯಿತು. ಬಾಯಲ್ಲಿ ನೀರು ಬಿಡಲು ಹೇಳಿ ಹೊರಗೆ ಬಂದರು.

ಗೌಡರನ್ನು ಕರೆಯಲು ಆಳಿಗೆ ಹೇಳಿದರು. ಆತ ಹೋಗಿ ಗೌಡರನ್ನು ಕೂಗಿದ. ಡಾಕ್ಟರರು ಪಡಸಾಲೆಯಲ್ಲಿಯೇ ನಿಂತಿದ್ದರು. ಒಳಗೆ ಗಡಬಿಡಿ. ಅಸ್ಪಷ್ಟ ರೋದನ ಸ್ವರ. ತಡೆಹಿಡಿದ ಅಳುವದು. ಆತುರದಿಂದ ಗೌಡರು ಒಳಹೊಕ್ಕರು. ಮನೆಯವರೆಲ್ಲರೂ ತಾಯಿಯ ಸುತ್ತುವರಿದಿದ್ದರು. ಮುಸುಮುಸುಕಾದ ಕತ್ತಲೆಯ ನಡುಮನೆ. ಆದಗೌಡನೂ ಹೋಗಿ ಅವ್ವನ ಬಾಯಿಗೆ ನೀರು ಬಿಟ್ಟ. ಕೊನೆಯ ಸೇವೆ ಸಲ್ಲಿಸಿದ. ಮುರದೇವಿಯ ಕೊನೆಯ ಉಸಿರು ಹೋಯಿತು. ಆಗ ಅಜಿತನ ತೊಡೆಯ ಮೇಲೆ ಅವಳ ತಲೆಯಿತ್ತು.

ಡಾಕ್ಟರರು ಪಡಸಾಲೆಯಲ್ಲಿ ನಿಂತು, ಅಜಿತ ಒಳಗಿನಿಂದ ಬರುವದನ್ನೇ ಆತುರದಿಂದ ನೋಡುತ್ತಿದ್ದರು. ಡ್ರಾಯ್ವರನಿಗೆ ಹೊರಗೆ ಕಾರನ್ನು ತಿರುಗಿಸಲೂ ಹೇಳಿದ್ದರು.

ಅಷ್ಟರಲ್ಲಿ ಇನ್ನೊಂದು ಕಾರು ಬಂದು ಬಾಗಿಲಲ್ಲಿ ನಿಂತಿತು!

## ೨೭

ಇಂದು ಕುತುಬಾ ಹಬ್ಬ. ಕಚೇರಿಗಳಲ್ಲಿಯ ಮುಸಲ್ಮಾನ ನೌಕರ ದಾರರಿಗೆ ಬಿಡುವು. ಆದರೂ ಕಾಜಿ ಮಾಮಲೇದಾರರು ಮುಂಜಾನೆಯೇ ಕಚೇರಿಗೆ ಬಂದಿದ್ದರು, ಅಗತ್ಯವಿದ್ದ ಕೆಲಸಗಳನ್ನು ನೋಡಿಕೊಂಡು ಹೋಗಬೇಕೆಂದು. ಕೆಲಸದಲ್ಲಿ ಇನ್ನೂ ಅವರಿಗೆ ಬಡತಿ ಸಿಕ್ಕಬೇಕಾಗಿದೆ. ಮೇಲಾಗಿ ತನ್ನ ಭಾಗಕ್ಕೆ ವರ್ಗವಾಗಬೇಕು. ಅದರಿಂದ ಆಫೀಸಿನ ಕಾಗದ ಪತ್ರಗಳಲ್ಲಿ ತುಂಬಾ ಮನಸ್ಸು ಹಾಕಿ ದುಡಿಯುತ್ತಿದ್ದರು. ಕಾರಕೂನ ರನ್ನು ದುಡಿಸುತ್ತಿದ್ದರು. ಸ್ವಾರ್ಥಸಾಧನೆಗಾಗಿ ಜನತೆಯನ್ನೆಲ್ಲ ಪಾರ ತಂತ್ರ್ಯದಲ್ಲಿಡುವ ಇಂತಹ ಭಾರತೀಯ ಅಧಿಕಾರಿಗಳೇ ಇರುವಲ್ಲಿ ಹಿಂದುಸ್ತಾನಕ್ಕೆ ಸ್ವಾತಂತ್ರ್ಯವೆಲ್ಲಿ?

ಹನ್ನೊಂದು ಗಂಟೆಯ ಸುಮಾರಕ್ಕೆ ನಮಾಜಿಗೆ ಹೋಗಬೇಕು. ಅಷ್ಟರೊಳಗೆ ತಾಲೂಕಿನೊಳಗಿನ ಕೆಲವು ಗೌಡರಿಗೆ ಅಗತ್ಯದ ಆರ್ಡರು ಕೊಡಬೇಕಾಗಿದೆ. ಅವುಗಳನ್ನಷ್ಟು ತೀವ್ರ ಬರೆಯಿಸಿ ಸಹಿ ಹಾಕಬೇಕೆಂದು ಆತುರದಲಿದ್ದಾರೆ. ಈ ರಾಷ್ಟ್ರೀಯ ಚಳವಳಿ ನಡೆದಾಗಿನಿಂದಲೂ ಮೇಲಧಿ ಕಾರಿಗಳಿಂದ ದಿನಾಲು ಹನ್ನೆರಡು ಹುಕುಂಗಳು. ಅವಕ್ಕೆಲ್ಲ ಉತ್ತರ ಬರೆದು ಬರೆದು ಬೇಸರ ಬಂದುಹೋಗಿದೆ. ಏನಾದರೂ ಮಾಡಿ ತಾಲೂ ಕನ್ನು ಶಾಂತವಾಗಿ ಕಾಯ್ದುಕೊಳ್ಳಬೇಕಲ್ಲ. ಈ ಚಳವಳಿಯು ಎಂದು ಹಾಳಾಗಿ ಹೋಗುವುದೋ!

ಕಚೇರಿಯ ಮುಂದೆ ಏನೋ ಗೊಂದಲ ಕೇಳಿಸಿತು. ಮಾಮಲೇ ದಾರರು ಕಿಡಕಿಯೊಳಗಿಂದ ಹೊರಗೆ ದೃಷ್ಟಿ ಬೀರಿದರು. ಹೊರಗೆ ನೆರೆದ ಆ ದೊಡ್ಡ ಗುಂಪನ್ನು ಕಂಡು ಅವರಿಗೆ ಗಾಬರಿಯೇ ಆಯಿತು. ಗುಂಪು ಶಾಂತವಾಗಿಯೇ ಇದ್ದಿತು. ಅವಶ್ಯವಿದ್ದ ಗೌಡರಷ್ಟೇ ಒಳಗೆ ಬರುತ್ತಿ ದ್ದಾರೆ. ಅವರು ಕಚೇರಿಯ ಒಳಹೊಗ್ಗಲು ಬಂದೊಡನೆಯೇ ಮಾಮಲೇ ದಾರರು ಕನ್ನಡಕವನ್ನು ಹಣೆಯ ಮೇಲೆ ಏರಿಸಿ ತಂಡದ ಕಡೆಗೆ ಪರೀಕ್ಷಾ ದೃಷ್ಟಿಯನ್ನು ಪಸರಿಸಿದರು.

ಗೌಡರು ತಮ್ಮ ರಾಜೀನಾಮೆಯ ಕಾಗದಗಳನ್ನು ವಿನಯದಿಂದ

ಮಾಮಲೇದಾರನ ಕೈಗೆ ಕೊಟ್ಟರು. ಅವರು ಒಂದೆರಡನ್ನು ಓದಿ ನೋಡಿ ಈ ಕಾಗದಗಳ ಮಹತ್ವವನ್ನು ಅರಿತುಕೊಂಡರು. ಅವುಗಳ ಬರಹದ ಶೈಲಿಗೂ ಭಾವನೆಗೂ ಕೊಂಚ ಬೆರಗುವಟ್ಟರು. ಈ ಬಗ್ಗೆ ಎಳೆದಾಡಿ ಪ್ರಯೋಜನವಿಲ್ಲೆಂದು ಅವರಿಗೆ ಅನಿಸಿತಾದರೂ ಅಧಿಕಾರಿಯಾದವರು ತನ್ನ ಕರ್ತವ್ಯವನ್ನು ತಾನು ಮಾಡಬೇಕಷ್ಟೇ ?

ಎಲ್ಲರನ್ನೂ ಕೇಳಿದರು : "ಈ ನಿರ್ಣಯ ಕೊನೆಯದೆ ?"

"ಅಹುದು" ಎಂದರು ಎಲ್ಲರು.

"ಹಾಗಾದರೆ ಬೇರೆ ಯಾರನ್ನಾದರೂ ನಿಮ್ಮ ಸ್ಥಳಗಳಲ್ಲಿ ತಂದಿಡಿರಿ. ನಿಮಗೆ ಅಪ್ಪಣೆ ಕೊಡುವೆ."

"ಅದು ನಮ್ಮ ಕೆಲಸವಲ್ಲ. ನೀವು ಬೇಕಾದವರನ್ನು ತಂದಿಡ ಬಹುದು."

"ನಾವೇ ನೇಮಿಸೋಣವೇ ?"

"ಹೌದು, ಅದಕ್ಕೆ ನಮ್ಮ ಅಡ್ಡಿಯಿಲ್ಲ."

ಮಾಮಲೇದಾರರಿಗೆ ಗೊತ್ತು, ಇನ್ನಾರೂ ಆ ಕೆಲಸಕ್ಕೆ ಮುಂದೆ ಬರುವದಿಲ್ಲವೆಂಬುದು. ಅದರಿಂದ ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು. ಗಡಿಯಾರದ ಮುಳ್ಳುಗಳು ಮುಂದೆ ಮುಂದೆ ಸಾಗುತ್ತಲಿದ್ದುವು. ನಮಾಜಕ್ಕೆ ಹೋಗುವ ಅವಸರ ಬೇರೆ. ಅದರಲ್ಲೂ ಇಂಥ ಮಹತ್ವದ ಕೆಲಸ. ಮನದಲ್ಲಿ ಸಿಡಿಮಿಡಿಗೊಂಡ. ಧಾರ್ಮಿಕ ಕೆಲಸಗಳಿಗೂ ತೊಂದರೆಯಲ್ಲ, ಎಂದು. ಮತ್ತು ತಾನೇ ನೆನೆದುಕೊಂಡ: 'ಇಂದು ನಮಗೆ ಬಿಡುವು, ನಾನಾಗಿಯೇ ಹೇರಿಕೊಂಡ ಕೆಲಸವಿದು' ಎಂದು. ಹಾಗೆಯೇ ವಿಚಾರವೊಂದು ಹೊಳೆಯಿತು. ಸ್ವಲ್ಪ ನಿದಾನಿಸಿ ನುಡಿದ :

"ಈ ಹೊತ್ತು ಕುತುಬೆ, ನನಗೆ ಬಿಡುವು. ಈ ಯಾವ ಕೆಲಸವನ್ನೂ ಮಾಡಲು ಬರುವಂತಿಲ್ಲವಲ್ಲ !"

"ಇಂದೇ ಮಾಡಬೇಕೆಂಬ ಹಟವೇನಿಲ್ಲವಲ್ಲ. ಬೇಕಾದಾಗ ಮಾಡಿಕೊಳ್ಳಿರಿ. ನಾವು ಹೋಗುತ್ತೇವೆ. ಅರ್ಜಿಗಳನ್ನಂತೂ ನಿಮಗೆ ತಲುಪಿಸಿಯಾಗಿದೆ." ಎಂದು ಹೊರಟರು ಗೌಡರು.

ಮಾಮಲೇದಾರ ಇನ್ನೂ ಗೊಂದಲದಲ್ಲಿ ಬಿದ್ದ. ಕಾಗದವನ್ನಂತೂ

ತಕ್ಕೊಂಡು ಆಗಿತ್ತು. ಗೌಡರಂತೂ ಹೊರಗೆ ಹೊರಟೇಬಿಟ್ಟರು. ಹಳ್ಳಿಯ ಜನ, ಒಮ್ಮೆ ಮನಸ್ಸಿನಲ್ಲಿ ಹಿಡಿದ ಕಾರ್ಯವನ್ನು ಮಾಡದೆ ಬಿಡರು, ನಿಶ್ಚಯದಿಂದ ಕದಲರು, ಎಂಬುದು ಅವರಿಗೆ ಅನುಭವ. ಆದರೂ ಪ್ರಯತ್ನಿಸೋಣ ಎಂದುಕೊಂಡು ತಿರುಗಿ ಅವರನ್ನೆಲ್ಲ ಒಳಗೆ ಕರೆದರು.

"ನೋಡಿರಿ, ಪೂರ್ಣ ವಿಚಾರ ಮಾಡಿರಿ; ನಿಮ್ಮ ಕೆಲಸ ಕಳೆದುಕೊಂಡಿರೆಂದರೆ ಊರ ಜನರಲ್ಲಿ ನಿಮಗೆ ಬೆಲೆಯೇ ಇಲ್ಲ. ಯಾರೂ ಮಾತು ಕೇಳರು. ಮರ್ಯಾದೆ ಮಾಡರು. ಕೈಯಲ್ಲಿ ಅಧಿಕಾರವಿಲ್ಲ. ಹೊಸದಾಗಿ ಬಂದ ಗೌಡರು ಕಾಡುವವರು. ಸರಕಾರಕ್ಕಂತೂ ಮೊದಲೇ ಬೇಡವಾಗಿರುತ್ತೀರಿ. ಆಗ ನಿಮಗೆ ಯಾರು ಆಶ್ರಯ ಕೊಟ್ಟಾರು? ನಿಮ ಸ್ಥಿತಿಯು ಬಹಳ ಕೆಡಕಿನದಾಗುವುದು" ಎಂದು ಹಲವು ವಿಧ ಬೋಧಿಸತೊಡಗಿದರು.

ಕೇವಲ ಅನ್ಯರ ಹುರುಪಿನ ಮಾತುಗಳನ್ನೇ ಕೇಳಿ ಗೌಡರು ಈ ಕಾರ್ಯಪ್ರವೃತ್ತರಾಗಿರಲಿಲ್ಲ. ಅವರೆಲ್ಲ ತುಂಬ ವಿಚಾರಿಸಿಯೇ ಇದಕ್ಕೆ ಕೈಹಾಕಿದ್ದರು. ಕಾರ್ಯಕರ್ತರ ವಿಚಾರ ಅವರಿಗೆ ಬೆಂಗಾವಲಿಗಿತ್ತು. ಕೇವಲ ಅದೊಂದು ಹುರುಪಾಗಿರಲಿಲ್ಲ, ಭಾವನೆಯ ಉಕ್ಕು ಬಂದುದಲ್ಲ. ಕೆಲ ದಿನ ವಿಚಾರ ವಿನಿಮಯದಿಂದ ನಿರ್ಣಯಗೊಂಡ ಮನಸ್ಸಿನ ತಳಹದಿಯ ಮೇಲೆ ಸ್ಥಿರವಾಗಿ ನಿಂತಿದ್ದಿತು, ರಾಜೀನಾಮೆ. ಆದುದರಿಂದ ಮಾಮಲೇದಾರರ ಮಾತಿಗೆ ಯಾರೂ ಹೆದರಲಿಲ್ಲ. ಕೊನೆಗೆ ಮಾಮಲೇದಾರರು ಒಬ್ಬೊಬ್ಬರನ್ನೇ ಬೇರೆ ಕೋಣೆಯಲ್ಲಿ ಕರೆದೊಯ್ದು ಬೆದರಿಕೆ ಹಾಕಿಯೂ ನೋಡಿದರು; ಹುದ್ದೆ ಸರಟೀಫಿಕೇಟುಗಳ ಆಶೆ ಹಚ್ಚಿಯೂ ಬಿಟ್ಟರು. ಆದರೂ ಅವರ ಬಯಕೆ ಈಡೇರುವ ಲಕ್ಷಣ ತೋರದಾಯಿತು. ಕೊನೆಗೆ ಗಾಳಿಯೊಡನೆ ಗುದ್ದಾಡುವುದು ಕೈನೋವಿಗೇ ಕಾರಣ ಹೊರತಾಗಿ ಫಲವಿಲ್ಲ, ಎಂದುಕೊಂಡು ರಾಜೀನಾಮೆ ಸ್ವೀಕರಿಸಿದರು.

ಕೃತಕಾರ್ಯರಾಗಿ, ಗೌಡರು ಜಯಘೋಷ ಮಾಡಿ ಕಚೇರಿಯಿಂದ ಹೊರಬಿದ್ದರು. ಅಲ್ಲಿಯ ವರೆಗೂ ಕರೆತಂದು ಒಳಗೆ ಕಳಿಸಿದ ಅಜಿತ ಇನ್ನೂ ಹೊರಗೇ ಇದ್ದ, ಕಾರ್ಯ ಹೇಗೆ ಫಲಿಸುವುದು ಏನಾಗುವುದು ಎಂಬುದನ್ನು ನೋಡುತ್ತ. ಕೆಲಸ ಫಲಪ್ರದವಾಯಿತೆಂದೊಡನೆಯೇ

—ಬಯಸಿದಕ್ಕಿಂತ ಹೆಚ್ಚಾಗಿಯೇ ಪರಿಣಮಿಸಿದೊಡನೆ—ಅವರನ್ನೆಲ್ಲ ಬೀಳ್ಕೊಟ್ಟು ತಾನು ಬೇರೆಯಾದ. ಅವರ ಗೂಡ ಈಗ ತಾನಿರುವಂತಿರಲ್ಲಿಲ್ಲ. ಆಗ ಅಜಿತನಿಗಾಗಿ ಕಲ್ಲು, ಕಂಬ, ಗೋಡೆಗಳೂ ಸಿ ಆಯ್. ಡಿ.ಗಳಾಗಿ ಕಣ್ತೆರೆದು ಕೆಲಸ ಮಾಡುತ್ತಿದ್ದುವು. ಸರಕಾರದ ದೃಷ್ಟಿಯಿಂದ ಅವನ ಹೆಸರು ಬಹಳ ಕೆಡಕಿನದಾಗಿತ್ತು. ಅವನ ಹಿಂದಿನ ನಡತೆಯೂ—ಪೋಲೀಸ ಡಿಪಾರ್ಟಮೆಂಟಿನ ವರದಿಗಳೂ—ಅದಕ್ಕೆ ಪುಷ್ಟಿದಾಯಕವಾಗಿದ್ದುವು ಈಗ ಪ್ರತಿಯೊಬ್ಬ ಪೋಲೀಸ ಅಧಿಕಾರಿಯ ಹತ್ತಿರ ಅವನ ಭಾವಚಿತ್ರ; ಎಲ್ಲ ಕಡೆಗೂ ನಿರೀಕ್ಷಣೆ. ಅದರಿಂದ ಆತ ಬಹಳ ಎಚ್ಚರದಿಂದ ಇರಬೇಕಾಗಿತ್ತು.

ಗೌಡರೆಲ್ಲರನ್ನೂ ಬೀಳ್ಕೊಟ್ಟು ಇಷ್ಟರಲ್ಲಿ ದೂರನಾಗಿದ್ದ. ಇನ್ನೂ ಅವನ ಮನಸ್ಸಿನಲ್ಲಿ ನಾಳೆ ಗೌಡರನ್ನೂ ಕೂಡಿಸಿ ಹಳ್ಳಿಗರ ಎದುರಿನಲ್ಲಿ ಹೇಗೆ ಸನ್ಮಾನಿಸಬೇಕು, ಏನು ಮಾಡಬೇಕು, ಎಂಬ ವಿಚಾರಗಳೇ ಸುತ್ತುತ್ತಿದ್ದುವು. ಅಷ್ಟರಲ್ಲಿಯೇ ಸಮೀಪದಲ್ಲಿ ಮೋಟಾರಿನ ಹಾರ್ನ ಕೇಳಿಸಿತು. ಹೊರಳಿ ನೋಡುತ್ತಾನೆ, ಮಿಲಟರಿ ಮೋಟಾರು!

ಅಜಿತನ ಮೈಮೇಲೆ ಮುಳ್ಳೆದ್ದುವು. ನಡುಗಿದ. ಅವನಿಗೆ ಗೊತ್ತಿತ್ತು; ತನ್ನನ್ನು ಹಿಡಿಯಲಿಕ್ಕೂ, ಕಾಂಗ್ರೆಸಿನ ಚಳವಳಿಯನ್ನು ಅಡಗಿಸಲಿಕ್ಕೂ ಈ ಭಾಗಕ್ಕೆ ಮಿಲಟರಿ ಬಂದಿದೆ ಎಂದು. ತಾನು ಅಜ್ಜಿಯನ್ನು ಕಂಡು ಬಂದಾಗಿನಿಂದಲೂ ಮನೆಯವರಿಗೆಲ್ಲ ತ್ರಾಸು ಕೊಡುತ್ತಿದ್ದಾರೆಂಬುದನ್ನೂ ಕೇಳಿದ್ದ. ಸಿದ್ದಾಪುರದಲ್ಲೊಂದು ಪೋಲೀಸ ಪಡೆಯನ್ನೇ ಇಟ್ಟಿದ್ದರು. ಅದರ ವೆಚ್ಚವೆಲ್ಲ ಊರ ಜನರ ಮೇಲೆಯೇ. ಆದಗೌಡನಿಗೆ ಅನೇಕ ವಿಧ ಕಷ್ಟ ಕೊಡುತ್ತಿದ್ದಾರೆ. ಆ ದಿನವೇನೋ ಕೊಳ್ಳಪ್ರದೇಶ, ನದೀ ತೀರ ಎಂದು ಸಿಕ್ಕದೆ ಹೋದೆವು. ಅಲ್ಲಿ ಸಿಕ್ಕ ಕೆಲವು ಕಾಗದ ಪತ್ರಗಳ ಮೇಲಿಂದಲೂ ನಮ್ಮೆಲ್ಲರ ಮೇಲೆಯೇ ಪೂರ್ಣ ಕಣ್ಣವರದು. ಈ ಎಲ್ಲ ವಿಚಾರಗಳೂ ಗಾಳಿಗಿಂತಲೂ ವೇಗವಾಗಿ ಅವನ ತಲೆಯಲ್ಲಿ ಸುಳಿದು ಹೋದುವು.

ಮೋಟಾರು ತಾಲೂಕ ಕಚೇರಿಯ ಮುಂದೆಯೇ ನಿಂತಿತು. ಒಳಗಿನಿಂದ ಪೋಲೀಸ ಅಧಿಕಾರಿಯೊಬ್ಬ ಇಳಿದು ಸಿಪಾಯಿಗೆ ಕೇಳಿದ:

"ಈಗ ಕೆಲ ಗೌಡರು ಬಂದಿದ್ದರೇ?" ಧ್ವನಿಯಲ್ಲಿ ಆತುರ ವಿತ್ತು.

"ಬಂದು ರಾಜೀನಾಮೆ ಕೊಟ್ಟು ಹೋದರು."

"ಮಾಮಲೇದಾರರೆಲ್ಲಿ?"

"ಇಂದು ಕುತುಬೆ, ಅದಕ್ಕವರು ಈಗ ಮನೆಗೆ ಹೋದರು."

"ಆ ಗೌಡರ ಜೊತೆಗೆ ಮತ್ತಾರಿದ್ದರು?"

"ಯಾರೋ ಒಬ್ಬರು ಬಂದಿದ್ದರು. ಚಳವಳಿಯವರೇನೋ!"

ಇಷ್ಟಾಗುವುದರೊಳಗೆ ಮೋಟಾರಿನಿಂದ ಇನ್ನಿಬ್ಬರು ಇಳಿದು ಒಳಗೆ ಹೋದರು. ಇನ್ನೂ ಕೆಲವರು ಇಳಿದು ಅಲ್ಲೇ ನಿಂತರು. ಅಜಿತ ಬೆದರು ಗಣ್ಣುಗಳಿಂದ ಅವರನ್ನೆಲ್ಲ ನೋಡುತ್ತಿದ್ದಾನೆ. ಅಲ್ಲೇ ನೆರೆಯಲ್ಲಿ ರುವ ಚಿಕ್ಕ ಅಂಗಡಿಯೊಂದರಲ್ಲಿ ಅಡಿಕೆ ಊದಬತ್ತಿಗಳನ್ನು ಏಕೋ ಕೊಳ್ಳುತ್ತಿದ್ದಾನೆ. ಅವನ ಲಕ್ಷ್ಯವೆಲ್ಲ ಇವರ ನಡೆನುಡಿಗಳ ಕಡೆಗೆಯೇ ಇತ್ತು. ಜೇಬಿನಲ್ಲಿ ಕೈಹಾಕಿ ಕೈಗೆ ಬಂದ ನಾಣ್ಯವನಿತ್ತ ಅಂಗಡಿಕಾರನಿಗೆ.

"ಎಂಟಾಣೆ ಕೊಟ್ಟಿರಿ ಸಾಹೇಬರೇ!" ಎಂದು ಅಂಡಿಕಾರ ಕೇಳಿದ. ಅಜಿತನ ಬೆಳೆದ ಗಡ್ಡ, ತೊಟ್ಟ ಜಾಕೀಟುಗಳ ಮೇಲಿಂದ ಅವನನ್ನು ಮುಸಲ್ಮಾನನೆಂದೇ ಭಾವಿಸಿದ್ದನೇನೋ ಆತ. ಅಂಗಡಿ ಕಾರನ ಮಾತಿನಿಂದಲೇ ಅಜಿತನ ವಿಚಾರ ಗಟ್ಟಿಯಾಯಿತು.

"ಹೌದು, ಚಿಲ್ಲರೆ ಬೇಕು. ಬಿಡಿಕಾಸುಗಳಿದ್ದರೆ ಕೊಡಿ. ಫಕೀರ ರಿಗೆ ಕೊಬೇಕು" ಎಂದ ಮುಸಲ್ಮಾನಿಯಲ್ಲಿ. ದನಿ ನಡುಗದಿರಲಿಲ್ಲ.

"ಎಲ್ಲಿ, ನಮಾಜಿಗೆ ನಡೆದಿರುವಿರೋ?" ಎಂದು ಆತ ಚಿಕ್ಕ ಪೆಟ್ಟಿಗೆಯೊಂದನ್ನು ಮುಂದಿಟ್ಟುಕೊಂಡು ಸವಕಲು ದುಡ್ಡುಗಳನ್ನು ಆರಿಸಿ ಆರಿಸಿ ಕೊಟ್ಟ. ಇಂಥ ಸಂದರ್ಭದಲ್ಲಿಯೇ ಅವುಗಳ ಬೆಲೆ ಬಾಳಬೇಕಲ್ಲ!

ಅಜಿತ ಅವುಗಳ ಕಡೆಗೆ ಲಕ್ಷ್ಯವನ್ನೂ ಕೊಡಲಿಲ್ಲ. ಎಣಿಸಲೂ ಇಲ್ಲ. ಎಣಿಸುವ ಅವಸ್ಥೆಯಲ್ಲಿಯೂ ಇರಲಿಲ್ಲ. ಹಾಗೆಯೇ ಜೇಬಿಗೆ ಹಾಕಿದ.

ಅಷ್ಟರಲ್ಲಿ ಕಚೇರಿಯ ಆವಾರದೊಳಗಿಂದ ಒಂದಿಬ್ಬರು ಪೋಲೀಸು

ಅಧಿಕಾರಿಗಳೂ ಹೆಡ್‌ಕ್ಲಾರ್ಕನೂ ಹೊರಗೆ ಬಂದರು. ಮೋಟಾರಿನಲ್ಲಿ ಕುಳಿತ ಮೇಲಧಿಕಾರಿಗೆ ಕೈಯೊಳಗಿನ ಅರ್ಜಿಗಳನ್ನು ತೋರಿಸಿ, "ಬರಹವೆಲ್ಲ ಒಂದೇ" ಎಂದರು.

ಅವುಗಳನ್ನು ನಿರೀಕ್ಷಿಸಿ, "ಎಲ್ಲ ಕಾಗದಗಳ ಒಕ್ಕಣಿಕೆ ಒಂದೇ; ಅವನದೇ ಭಾಷೆ; ಹಸ್ತಾಕ್ಷರಗಳಷ್ಟು ಬೇರೆ ಬೇರೆ; ಆ ಬುಲೆಟಿನ್ನುಗಳ ಶೈಲಿಯೂ ಇದೇ." ಆತ ನುಡಿದ.

"ಅದೇ, ಅವನೊಬ್ಬ ಸಿಕ್ಕರೆ ಎಲ್ಲ ಚಳವಳಿಯೂ ನಿಲ್ಲುವುದು" ಎಂದು ಫೌಜದಾರ ಸೂಚಿಸಿದರು.

"ಕಾಜಿ ಮಾಮಲೇದಾರರು ಎಲ್ಲಿ ಹೋದರು?"

"ಕುತುಬಿ, ನವಾಜ, ಅಂತ ಏನಾದರೆ ಒಂದ ಇರತದಲ್ಲ!"

"ಗೌಡರ ಸಂಗಡ ಅಜಿತ ಬಂದುದು ನಿಜವೇ?"

"ನಿಜ. ನಂಬುಗೆ ಇಡುವಂತೆ ಸುದ್ದಿ ಇದೆಯಲ್ಲ?"

"ಹಾಗಾದರೆ ಇಲ್ಲೇ ಸಮೀಪದಲ್ಲಿಯೇ ಇರಬೇಕು ಅಜಿತ!"

ಅಜಿತ ಎಲ್ಲವನ್ನೂ ಕಿವಿಯಿಂದ ಕೇಳಿದ. ಕಾಲಿನೊಳಗಿನ ಶಕ್ತಿಯು ಉಡುಗಿ ಹೋದಂತಾಯಿತು. ಹೆಜ್ಜೆ ಎತ್ತದಾದುವು. ಮುಖದ ಮೇಲಿರುವ ಹೆದರಿಕೆಯನ್ನು ಮುಚ್ಚಲು ಮನಃಪೂರ್ವಕವಾಗಿ ಯತ್ನಿಸತೊಡಗಿದ. ಮುಖದಿರುವಿ ನಿಂತ. ಇಲ್ಲಿಂದ ವಿಲಟರಿಯವರಿಗೆ ಕಾಣದಂತೆ ಕದಲುವದಾದರೂ ಹೇಗೆ? ಅವರು ತನ್ನನ್ನು ಕಂಡರೆ? ಒಮ್ಮೆಲೆ ಗುರತು ಸಿಕ್ಕುವಂತಿಲ್ಲವಾದರೂ ಸ್ವಲ್ಪ ನಿರೀಕ್ಷಿಸಿದರೆ ಫೌಜದಾರನು ಗುರುತಿಸದೆ ಇರಲಾರ. ಅಜಿತನಿಗೆ ಏನೂ ತೋಚದಾಯಿತು.

"ಹೀಗೇಕೆ ನಿಂತೆಯಪ್ಪ ಗಿರಾಕಿಗೆ ಅಡ್ಡವಾಗಿ?" ಎಂದ ಅಂಗಡಿಕಾರ.

"ಇಲ್ಲಪ್ಪ, ಹೋಗ್ತೇನಿ. ಒಂದು ಬಿಲ್ಲಿಯ ನಶ್ಯ ಕೊಡು." ಎಂದ ಅಜಿತ. ಬಾಯಿಂಗಳದಲ್ಲಿ ನಾದವೇ ಏಳಲಿಲ್ಲ.

"ಏನು?" ಪುನಃ ಕೇಳಿದ.

"ನಶ್ಯ, ಬಿಲ್ಲೀದು." ಎಂದ ಶಕ್ತಿ ಇದ್ದಷ್ಟೂ ಒದರಿ. ಎದುರಿನವನಿಗೆ ಕೇಳಿಸಿದುದು ಅಸ್ಪಷ್ಟವೇ. ಅಂಗಡಿಕಾರ ಪುಡಿಕೆ ಕಟ್ಟಿ ಕೊಟ್ಟ. ನಡುಗುವ ಕೈಗಳನ್ನು ಆದಷ್ಟು ಬಿಗಿಹಿಡಿದು ಅಜಿತ ತಕ್ಕೊಂಡ. ಅಷ್ಟರಲ್ಲಿ

ಮುಹಮ್ಮದೀಯರ ಗುಂಪೊಂದು—ನವಾಜಕ್ಕೆ ಹೊರಟದ್ದು—ಅಲ್ಲಿಂ ಚಲೇ ನಡೆದಿತ್ತು. ನೂರಾರು ಜನ. ನಡುವೆ ನಾಲ್ಕು ಕೋಲಿಗೆ ಒಂದು ಅರಿವೆ ಕಟ್ಟಿ ನೆರಳು ಹಿಡಿದಿದಾರೆ ಕೊಡೆಯಂತೆ. ಅದರ ನೆರಳಿನಲ್ಲಿ ಒಬ್ಬ ಪರಾತ ತಲೆಯ ಮೇಲೆ ಇಟ್ಟುಕೊಂಡು ನಡೆದಿದ್ದಾನೆ. ಅದರ ಮೇಲೆ ಸುಂದರ ವಸ್ತ್ರದಲ್ಲಿ ಮುಚ್ಚಿದ್ದು ಏನೋ ಅದೆ. ಅದರ ಮುಂದೆ ಉಸ್ತಾ ದನ್ನು ಮುಲ್ಲಾ ಹಿಡಿದಿದಾನೆ. ಜನ ನಡೆದಿದೆ ನಿದಾನವಾಗಿ. ಎಲ್ಲರೂ ಮಡಿಯ ಬಟ್ಟೆ ತೊಟ್ಟಿದ್ದಾರೆ. ಎಂಥ ಬಡವರಿದ್ದರೂ ಕೂಡ ಈ ಹಬ್ಬ ದಲ್ಲಿ ಹೊಸವಲ್ಲದಿದ್ದರೂ— ಒಗೆದು ಸ್ವಚ್ಛಗೊಳಿಸಿದ ಅರಿವೆಗಳನ್ನು ತೊಟ್ಟುಕೊಂಡಿರುವರು. ಆ ಗುಂಪಿನಲ್ಲಿ ಸೇರಿ ಮುಂದೆ ಸಾಗುವುದು ಸುರಕ್ಷಿತವೆನಿಸಿತು ಅಜಿತನಿಗೆ. ಹೋಗಿ ಸೇರಿದ. ಹೋಗುವಾಗ ಗಡಬಡಿ ಯಲ್ಲಿ ಜೇಬಿನೊಳಗಿನ ಚವಲಿಯೊಂದನ್ನು ತೆಗೆದು ಅಂಗಡಿಯವನ ಕೈ ಯಲ್ಲಿಟ್ಟ. ಅವನದನ್ನು ತಕ್ಕೊಂಡು ತಿರುಗಿ ಏಳು ಬಿಲ್ಲಿಗಳನ್ನು ಕೊಡ ಲಿಕ್ಕೆ ಖೊಟ್ಟಿ ನಾಣ್ಯಗಳ ಪೆಟ್ಟಿಗೆ ಮುಂದೆ ತಕ್ಕೊಂಡು ಹುಡುಕ ಹತ್ತಿದ. ಆದರೆ ಅವುಗಳನ್ನು ಸ್ವೀಕರಿಸಲು ಅಜಿತ ಅಲ್ಲಿರಲಿಲ್ಲ. ದೂರ ದಲ್ಲಿ ಆ ಗುಂಪಿನ ಹತ್ತರ ಕಾಣಿಸುತ್ತಿದ್ದನಾದರೂ ಕರೆದು ಕೊಡುವ ಮನಸ್ಸು ಆಗಲಿಲ್ಲ, ಅಂಗಡಿಕಾರನಿಗೆ. ಕುತುಬೆಯ ದಿನವೆಂದು ಕೊಟ್ಟಿರ ಬೇಕು. ಇರಲಿ; ಎಂದುಕೊಂಡು ಸುಮ್ಮನಾದ. ಮುಸಲ್ಮಾನರೇನು ವರ್ಷವೆಲ್ಲ ಗಳಿಸಿದ್ದನ್ನು ಹೀಗೆ ಒಂದೇ ದಿನ ಹಬ್ಬದಲ್ಲಿ ಹಣವನ್ನೆಲ್ಲ ತೂರಿಬಿಡುವರು, ಎಂದು ಭಾವಿಸಿದ. ಏಳು ಬಿಲ್ಲಿ ದಕ್ಕಿದುದಕ್ಕೆ ಮುಖದಲ್ಲಿ ಆನಂದ ಒಡಮೂಡದೆ ಇರಲಿಲ್ಲ. ಬ್ರಿಟಿಷ ಭಾರತದಲ್ಲಿ ಅನ್ಯಾಯದಿಂದ ಹಣ ಗಳಿಸುವುದೂ ಒಂದು ಸೌಜನ್ಯವೇ ಅಲ್ಲವೇ!

ನಗರದ ಹೊರಗೆ ಸ್ವಲ್ಪ ದೂರದಲ್ಲಿ ಪ್ರಶಸ್ತವಾದ ಒಂದು ದಿನ್ನೆಯ ಮೇಲೆ ಇದಗಾ. ಪೂರ್ವಿಕರು ಬಹಳ ಮುಂದಾಲೋಚನೆಯುಳ್ಳವರು. ಅದರ ಬಳಿಯಲ್ಲಿ ಒಂದು ಚಿಕ್ಕ ಕೆರೆಯನ್ನು ಕಟ್ಟಿದ್ದಾರೆ. ಪ್ರಶಾಂತ ವಾದ ಸ್ಥಳ. ಇತ್ತೀಚಿನ ಮುಸಲ್ಮಾನರು ಅತ್ತ ಲಕ್ಷ್ಯ ಹಾಕದುದಕ್ಕೆ ಎಲ್ಲವೂ ಹಾಳು ಸುರಿಯುತ್ತಿದ್ದಿತು. ಆದರೆ ಈ ತಾಲೂಕಿಗೆ ಕಾಜಿ ಮಾಮಲೇದಾರರು ಬಂದಾಗಿನಿಂದ ಮಾತ್ರ ಸ್ವಲ್ಪ ಸುಧಾರಣೆ ಹೊಂದಿದೆ.

ಅವರು ಬಂದ ತಿಂಗಳಲ್ಲಿಯೇ ಮುನಸಿಪಾಲ್ಟಿಯ ಅಧ್ಯಕ್ಷನನ್ನು ಕರೆಯಿಸಿ ಸೂಚನೆಯಿತ್ತರು. ಎಂಟು ದಿನಗಳಲ್ಲಿ ಇದಗಾದ ಸುತ್ತಲಿನ ಸ್ಥಳವೆಲ್ಲ ಸ್ವಚ್ಛವಾಯಿತು. ಕೆರೆಯ ಮಣ್ಣನ್ನೂ ತೋಡಲಾಯಿತು. ಕಟ್ಟೆಯ ನೆರೆಯಲ್ಲಿ ಹೂವಿನ ಗಿಡಗಳನ್ನೂ ನೆಟ್ಟೂ ಆಯಿತು. ಈಗ ಆ ನಮಾಜ ಕಟ್ಟೆಯು ಪೂರ್ವ ಕಾಲದ ಬಾದಶಾಹಿ ವೈಭವವನ್ನಲ್ಲದಿದ್ದರೂ ಮಾಮಲತಿಯ ವೈಭವವನ್ನಾದರೂ ಪಡೆದಿದೆ. ಸ್ವತಃ ಮಾಮಲೇದಾರರೇ ಪ್ರತಿ ಶುಕ್ರವಾರ ಅಲ್ಲಿ ನಮಾಜಕ್ಕೆ ಹೋಗುವರು. ಅವರಿಗೆ ಇಸ್ಲಾಂ ಧರ್ಮದ ಮೇಲೆ ತುಂಬ ಅಭಿಮಾನ. ಆದರಂತೆಯೇ ತಮ್ಮ ಧರ್ಮ ಬಾಂಧವರ ಮೇಲೆಯೂ ಕೂಡ. ಅಂತೇ ಅವರು ಈ ತಾಲೂಕಿಗೆ ಬಂದಾಗಿನಿಂದ ನಿಯಮಿಸಿಕೊಂಡ ಸಿಪಾಯಿಗಳೆಲ್ಲ ಮುಸಲ್ಮಾನರೇ. ಅದರಂತೆ ಪೈಗಂಬರರ ವಚನದ ಮೇಲೆಯೂ ಅಚಲ ಶ್ರದ್ಧೆ. ನಿತ್ಯ ಕುರಾಣ ಪಠಿಸುತ್ತಾರೆ—ಆದರಲ್ಲಿ ಹೇಳಿದಂತೆ ನಡೆಯಲಿ ನಡೆಯದಿರಲಿ. ಆದರೆ ಅದರ ಮೇಲೆ ಅವರಿಗೆ ತುಂಬ ಭಕ್ತಿ, ಗೌರವ. ತಾನು ಸ್ವತಃ ಕಾಜಿಗಳ ಕುಲದಲ್ಲಿ ಜನಿಸಿದವನು. ಆದರೂ ಆ ಸ್ಥಾನ ತನಗೆ ದೊರೆಯಲಿಲ್ಲವೆಂದು ಮರುಗಿ ಕಾಜಿಗಳನ್ನೂ ಮೌಲವಿಗಳನ್ನೂ ಕಂಡರೆ ತಲೆಬಾಗಿಸುವರು. ಮಾನ-ಮರ್ಯಾದೆ ಮಾಡುತ್ತಾರೆ

ಇಂದು ಸುಣ್ಣ ಬಳಿದು ಧವಳವಾಗಿದೆ ಇದಗಾ. ಅದರಂತೆಯೇ ಮುಸಲ್ಮಾನರ ಹೃದಯವೆಲ್ಲ ನಿರ್ಮಲವೆಂದು ತೋರಿಸುವಂತಿದೆ ನಿತ್ಯ ಸಂಗತಿ ಹೇಗಿದ್ದರೂ ಈ ಹೊತ್ತು ನಿರ್ಮಲರಾಗಿ ಐಕ್ಯರಾಗಿ ನೂರಾರು ಜನ ಒತ್ತಟ್ಟಿಗೆ ನಮಾಜ ಮಾಡುತ್ತಲಿದ್ದಾರೆ. ಮಾಮಲೇದಾರರು ತಮ್ಮ ಐದು ವರ್ಷದ ಮಗನನ್ನು ಮೊದಲುಗೊಂಡು ಮನೆಯ ಗಂಡಸರೆಲ್ಲರೂ ಅಲ್ಲಿಗೆ ಬಂದಿದ್ದಾರೆ, ಒಂದು ಕಾರು ತಕ್ಕೊಂಡು. ಊರಲ್ಲಿ ಎಷ್ಟು ಸಪ್ಪಳ ಮಾಡಿದರೂ ಕೇಳ ಹೋಗದಂತಹ ಗಂಭೀರ ಸ್ಥಾನ. ಅದೇಕೆ? ಆ ಕಟ್ಟೆಯ ಸಮೀಪಕ್ಕೆ ಬಂದು ನಗಾರಿ ಬಡಿದರೂ ಕೇಳಿಸದಂತೆ. ಅಷ್ಟು ಪವಿತ್ರ ಸ್ಥಳವೆಂದು ಕಟ್ಟುಕಥೆಯೂ ಜನಜನಿತವಾಗಿದೆ.

ಸಾಲಾಗಿ ನಿಂತು ನಮಾಜ ಮಾಡುತಲಿದ್ದಾರೆ. ಎಲ್ಲಕ್ಕೂ ಮುಂದೆ ಮೌಲವಿ ಸಾಹೇಬರಿದ್ದಾರೆ. ಅವರು ಬಾಗಿದಂತೆ ಎಲ್ಲರೂ ಮಣಿಯು